ಶ್ರೀಮನ್ಮಧ್ವಾಚಾರ್ಯರ ಮೂಲಗ್ರಂಥಗಳ ಮಾಲಿಕೆಯಲ್ಲಿ

# ಸಂಕೀರ್ಣ ಗ್ರಂಥಗಳು

(ಅಣುಭಾಷ್ಯ, ದ್ವಾದಶಸ್ತೋತ್ರ, ಜಯಂತೀನಿರ್ಣಯ, ಶ್ರೀಕಂದುಕಸ್ತುತಿ, ಶ್ರೀಕೃಷ್ಣಾಮೃತಮಹಾರ್ಣವ, ನಖಸ್ತುತಿ, ತಂತ್ರಸಾರ, ಯಮಕಭಾರತ, ಕರ್ಮನಿರ್ಣಯ, ಸದಾಚಾರಸ್ಮೃತಿ)



ಕನ್ನಡ ಟೀಕಾ ಭಾಷಾಂತರ

ವೇದಮೂರ್ತಿ ದ್ವೈತವೇದಾಂತವಾಚಸ್ಪತಿ

**ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು**

॥ ಶ್ರೀ ಮಧ್ವನಾಥೋ ವಿಜಯತೇ ॥

ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯಲ್ಲಿ

# ಸಂಕೀರ್ಣ ಗ್ರಂಥಗಳು

(ಅಣುಭಾಷ್ಯ, ದ್ವಾದಶಸ್ತೋತ್ರ, ಜಯಂತೀನಿರ್ಣಯ, ಶ್ರೀಕಂದುಕಸ್ತುತಿ,
ಶ್ರೀಕೃಷ್ಣಾಮೃತಮಹಾರ್ಣವ, ನಖಸ್ತುತಿ, ಯಮಕಭಾರತ,
ಕರ್ಮನಿರ್ಣಯ, ಸದಾಚಾರಸ್ಮೃತಿ)

ದ್ವೈತವೇದಾಂತವಿದ್ವಾನ್, ದ್ವೈತವೇದಾಂತಶಿರೋಮಣಿ, ವೇದಾಂತವಾಚಸ್ಪತಿ,
ಉಡುಪಿ ಸಂಸ್ಕೃತಮಹಾಪಾಠಶಾಲ ನಿವೃತ್ತ ವೇದಾಂತಪ್ರಾಚಾರ್ಯ

**ದಿ॥ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ**

ರಚಿತವಾದ ಕನ್ನಡ ಟೀಕಾ ಭಾಷಾಂತರ ಸಹಿತ

ಶ್ರೀ ಶ್ರೀಪಾದರಾಜ ಮಠ
(ಮುಳಬಾಗಿಲು ಮಠ)
ನಂ. 58, ರಾಘವೇಂದ್ರ ಕಾಲೋನಿ
ಚಾಮರಾಜಪೇಟೆ
ಬೆಂಗಳೂರು–560018

ಗ್ರಂಥದ ಹೆಸರು : **ಸಂಕೀರ್ಣ ಗ್ರಂಥಗಳು**

**ಪ್ರತಿಪದಾರ್ಥ, ಮೂಲಾರ್ಥ, ವಿಶೇಷಾಂಶ,**
**ಭಾವಾನುವಾದ, ತಾತ್ಪರ್ಯ ಸಹಿತ**
**ಕನ್ನಡ ಟೀಕಾ ಭಾಷಾಂತರ**

**ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು**

ಪ್ರಕಾಶಕರು :

ಶ್ರೀ ಶ್ರೀಪಾದರಾಜ ಮಠ
(ಮುಳಬಾಗಿಲು ಮಠ)
ನಂ. 58, ರಾಘವೇಂದ್ರ ಕಾಲೋನಿ
ಚಾಮರಾಜಪೇಟೆ
ಬೆಂಗಳೂರು–560018

ಪ್ರತಿಗಳು : 1000

ಪುಟಗಳು : 444

ಬೆಲೆ : 500–00

ಪ್ರಥಮ ಮುದ್ರಣ : 2014

ಬಳಸಿದ ಕಾಗದ : ಮ್ಯಾಪ್‌ಲಿಥೋ 70 ಜಿ.ಎಸ್.ಎಂ.



ಮುಖಪುಟ ವಿನ್ಯಾಸ : ಶ್ರೀ ಸುಬ್ರಹ್ಮಣ್ಯ, ಬೆಂಗಳೂರು.

**ಮುದ್ರಕರು : ಲಾವಣ್ಯ ಮುದ್ರಣ, ಬೆಂಗಳೂರು.**

# ಶ್ರೀಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
# ಶ್ರೀಶ್ರೀಪಾದರಾಜಮಠ ಮುಳಬಾಗಿಲು

## ಮುನ್ನುಡಿ

'ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ ಮಾನನಿೀ ಮಧ್ವಾಖ್ಯನೆಂದೆನಿಸಿದ' ಎಂಬುದಾಗಿ ಶ್ರೀಪಾದರಾಜರು ಮಧ್ವಾವತಾರದ ಉದ್ದೇಶವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಮಾನವನು ಭಾಗವತಾದಿಪುರಾಣ ಮತ್ತು ಶಾಸ್ತ್ರಗಳನ್ನು ಅಭ್ಯಾಸ ಮಾಡುವುದನ್ನು ಕಂಡು ದೈತ್ಯರಿಗೆ ಸಹಿಸಲಾಗಲಿಲ್ಲ. ರುದ್ರದೇವರನ್ನು ಕುರಿತು ತಪಸ್ಸನ್ನು ಮಾಡಿ ಮೋಹಗೊಳಿಸುವ ಶಕ್ತಿಯನ್ನು ಸಂಪಾದಿಸಿ ಜೀವ-ಈಶ್ವರ ಅಭೇದವನ್ನು ಸಾರುವ ಇವರನ್ನು ಖಂಡಿಸಲು ಪರಮಾತ್ಮನು ವಾಯುದೇವರನ್ನು ಆಜ್ಞಾಪಿಸಿ ಮಧ್ವರಾಗಿ ಅವತರಿಸಲು ತಿಳಿಸಿದನು. ಶ್ರೀಹರಿಯ ಆಜ್ಞೆಯನ್ನು ಶಿರಸಾವಹಿಸಿ ಉಡುಪಿಯ ಸಮೀಪದ ಪಾಜಕ ಕ್ಷೇತ್ರದಲ್ಲಿ ಅವತರಿಸಿ ದ್ವೈತಸಿದ್ಧಾಂತವನ್ನು ವೇದ, ಭಾರತಾದಿ ಅನೇಕ ಪ್ರಮಾಣಗಳಿಂದ ಸ್ಥಾಪಿಸಿದರು.

ಶ್ರೀಮಧ್ವಾಚಾರ್ಯರು 37 ಗ್ರಂಥಗಳನ್ನು ರಚಿಸಿದರು. ಅವುಗಳನ್ನು ಸರ್ವಮೂಲವೆಂದು ಕರೆಯುತ್ತಾರೆ. ನಮ್ಮ ಗುರುಗಳು ಸಂಖ್ಯಾಶಾಸ್ತ್ರರೀತ್ಯ 37ನ್ನು ಈ ರೀತಿ ವಿವರಿಸುತ್ತಿದ್ದರು.

3X7=21. ಇದನ್ನು ಏಕಸಂಖ್ಯೆಯಾಗಿಸಿದರೆ ಮೂರಾಗುತ್ತದೆ. (2+1=3) ಜಗತ್ತು ತ್ರಿಗುಣಗಳಿಂದ ಕೂಡಿದ್ದು 3X7 ಎಂಬುದು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸೂಚಿಸುತ್ತದೆ. 3+7=10, 10 ಎಂದು ಪೂರ್ಣಸಂಖ್ಯೆ ಅಂದರೆ ಪೂರ್ಣಪ್ರಜ್ಞರನ್ನು ಪ್ರತಿಪಾದಿಸುತ್ತದೆ ಎಂಬುದಾಗಿ ತಿಳಿಸುತ್ತಿದ್ದರು.

ಆನಂದತೀರ್ಥರ 37 ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನವನ್ನು ಪ್ರಪ್ರಥಮವಾಗಿ ನೀಡಿದವರೆಂದರೆ ಉಡುಪಿಯ ಅಗ್ರಹಾರನಾರಾಯಣತಂತ್ರಿಗಳು. ಆಚಾರ್ಯರ ತತ್ವಶಾಸ್ತ್ರದ ತಿಳುವಳಿಕೆಯು ಸಂಸ್ಕೃತ ಭಾಷೆ ಅರಿಯದವರಿಗೂ ಸೇರಲೆಂದು ನಾರಾಯಣ ತಂತ್ರಿಗಳು ಅನುವಾದಿಸಿ ಪ್ರಕಟಪಡಿಸಿದ್ದರು. ಈ ಗ್ರಂಥಗಳು ಸಾಕಷ್ಟು ಪ್ರಚಾರ ದಲ್ಲಿದ್ದವು. ಈಗಾಗಲೇ ಎರಡು ಬಾರಿ ಮುದ್ರಣಗಳನ್ನು ಕಂಡಿವೆ. ಪ್ರಸ್ತುತ ನಾರಾಯಣ ತಂತ್ರಿಗಳ ಮಕ್ಕಳಾದ ಶ್ರೀರಘುಪತಿ ತಂತ್ರಿಗಳು ಶ್ರೀಮಠದಲ್ಲಿ ಆಗಿಂದಾಗ್ಗೆ ತಂದೆಯವರು ಅನುವಾದಿಸಿದ ಪುಸ್ತಕಗಳನ್ನು ನಮ್ಮ ಗುರುಗಳ ಸನ್ನಿಧಿಗೆ ಸಲ್ಲಿಸುತ್ತಿದ್ದರು. ನಮ್ಮ ಗುರುಗಳು ಋಗ್ಭಾಷ್ಯ, ತಂತ್ರಸಾರ ಮತ್ತು ಯತಿಪ್ರಣವಕಲ್ಪಗಳನ್ನು ಪುನರಾವರ್ತಿ ಮಾಡುತ್ತಲೇ ಇರುತ್ತಿದ್ದರು. ಕೆಲವೊಮ್ಮೆ ತಂತ್ರಿಗಳಿಗೆ ಮುದ್ರಣ ಕಾರ್ಯಕ್ಕಾಗಿ ಅಲ್ಪ-ಸ್ವಲ್ಪ ಸಹಾಯವನ್ನು ನೀಡುತ್ತಲಿದ್ದರು.

ರಘುಪತಿ ತಂತ್ರಿಗಳು ನಮ್ಮಲ್ಲಿ ಬಂದು ಆಚಾರ್ಯರ 10 ಗ್ರಂಥಗಳ ಅನುವಾದ ಪುಸ್ತಕಗಳ ಮರುಮುದ್ರಣ ಮಾಡಬೇಕೆಂದು ತಿಳಿಸಿದಾಗ ಅವುಗಳನ್ನು ಶ್ರೀಮಠದಿಂದ ಪ್ರಕಾಶನಗೊಳಿಸಲು ನಾವು ಇಚ್ಛಿಸಿದ್ದೇವೆ. ಆ ವಿಷಯವನ್ನು ಕೇಳಿ ರಘುಪತಿ ತಂತ್ರಿಗಳು ಹರ್ಷಚಿತ್ತರಾಗಿ ಮುದ್ರಣಕಾರ್ಯವು ಆಗಬಹುದೆಂದು ಹೇಳಿದರು. ಈ ಪುಸ್ತಕವನ್ನು ನಮ್ಮ ಗುರುಗಳ ಪ್ರಥಮ ಮಹಾಸಮಾರಾಧನೆಯಂದೆ ಬಿಡುಗಡೆ ಮಾಡಬೇಕೆಂದು ತಿಳಿಸಿದೆವು. ಅದರಂತೆಯೇ ರಘುಪತಿ ತಂತ್ರಿಗಳು ಶ್ರಮವಹಿಸಿ 720 ಪುಟಗಳ 11 ಗ್ರಂಥಗಳನ್ನು ಒಳಗೊಂಡ ಗ್ರಂಥವನ್ನು ದೋಷರಹಿತವಾಗಿ ಮುದ್ರಣಕ್ಕಾಗಿ ಅಣಿಮಾಡಿಕೊಟ್ಟಿರುತ್ತಾರೆ.

ನಮ್ಮ ಉಪಾಸ್ಯ ಮೂರ್ತಿ ಶ್ರೀಹಯವದನ ರಂಗವಿಟ್ಠಲ ಗೋಪೀನಾಥ ದೇವರು ರಘುಪತಿ ತಂತ್ರಿ ಹಾಗೂ ಅವರ ಸಹೋದರರಿಗೆ ನಿರಂತರ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಕೊಟ್ಟು ಅವರಿಂದ ಇಂತಹ ಸೇವೆಯು ಸದಾ ನಡೆಯುವಂತೆ ಮಾಡಲಿ ಎಂದು ಪ್ರಾರ್ಥಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

**ಶ್ರೀಶ್ರೀಕೇಶವನಿಧಿತೀರ್ಥ ಶ್ರೀಪಾದಂಗಳವರು**

ಶ್ರೀ ಶ್ರೀಪಾದರಾಜಮಠ, ಮುಳಬಾಗಿಲು

# ಪ್ರಕಾಶಕರ ನುಡಿ

ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಪಡೆದರೆ ಮೋಕ್ಷ ಪ್ರಾಪ್ತಿಯೆಂಬುದು ಸರ್ವವಿದಿತ. ಇಂತಹ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಪಡೆಯಲು ಒಬ್ಬ ಮಾರ್ಗದರ್ಶಕನು ಅತ್ಯವಶ್ಯಕ. ಆ ಮಾರ್ಗದರ್ಶಕರನ್ನೇ ಗುರುವೆಂದು ಕರೆಯಲಾಗುತ್ತದೆ. ಗುರುವಿನಲ್ಲಿ ಭಕ್ತಿಯನ್ನು ತೋರಿ ಅವರ ನಡೆ-ನುಡಿಗಳನ್ನು ಪಾಲಿಸಿ ಅವರ ವಚನವನ್ನು ತಪ್ಪದೆ ಅನುಸರಿಸಿದರೆ ಜ್ಞಾನ-ಭಕ್ತಿ-ವೈರಾಗ್ಯಾದಿ ಗಳು ಮೈಗೂಡುತ್ತವೆ. ಈ ವಿಷಯವನ್ನು ಪುರಂದರದಾಸರು ''ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ'' ಎಂದು ತಿಳಿಸಿದ್ದಾರೆ.

ಗುರುವನ್ನು ಪಾಲಿಸುವುದು ಮುಖ್ಯ ಆದರೆ, ಗುರುವಾದವನು ಯಥಾರ್ಥಜ್ಞಾನವನ್ನು ಬೋಧಿಸಿ ಭಗವದಾರಾಧನೆಯನ್ನು ಮಾಡುವಂತಾಗಬೇಕು. ಇಲ್ಲವಾದಲ್ಲಿ ಅಂತಹ ಗುರುವು ಅನುಪಯುಕ್ತವಾಗುತ್ತಾನೆ. ಪ್ರಸ್ತುತ ಭಗವದಾರಾಧನೆಯನ್ನು ಮಾಡಲು, ಅವನ ತತ್ವರಹಸ್ಯವನ್ನು ತಿಳಿಯಲು ವೇದ -ಪುರಾಣಾದಿಗಳೆ ನಮಗೆ ಆಧಾರ. ಆದರೆ ವೇದದ ಅರ್ಥವನ್ನು ಸರಿಯಾದ ರೀತಿಯಲ್ಲಿ ಬೋಧಿಸದೇ ಇದ್ದಾಗ ಅವುಗಳಿಂದ ಅನ್ಯಥಾಜ್ಞಾನವು ಬರುತ್ತದೆ. ಇಂತಹ ಅನ್ಯಥಾ ಜ್ಞಾನವನ್ನು 21 ಮತಾಚಾರ್ಯರು ಭೂಮಿಯಲ್ಲಿ ಬಿತ್ತಿ ಎಲ್ಲೆಡೆಯೂ ಹರಡುವಂತೆ ಮಾಡಿದ್ದರು. ಇವುಗಳನ್ನು ಅರಿತು ಬ್ರಹ್ಮಾದಿದೇವತೆಗಳು ಪರಮಾತ್ಮನಲ್ಲಿ ಮೊರೆಹೋದರು. ಪರಮಾತ್ಮನ ಅವತಾರವು ಕಲಿಕಾಲದಲ್ಲಿ ಇಲ್ಲದೆ ಇರುವುದರಿಂದ, ವಾಯುದೇವರಿಗೆ ಆಜ್ಞಾಪಿಸಿ ವೇದಾರ್ಥವನ್ನು ಸರಿಯಾದ ರೀತಿಯಲ್ಲಿ ನೀಡುವಂತೆ ತಿಳಿಸುತ್ತಾರೆ. ವಾಯುದೇವರು ಪರಮಾತ್ಮನ ಆಜ್ಞೆಯನ್ನು ಶಿರಸಾವಹಿಸಿ, ಆನಂದತೀರ್ಥರೆಂಬ ನಾಮದಿಂದ ಭೂಮಿಯಲ್ಲಿ ಬಂದು, ತತ್ವಜ್ಞಾನವನ್ನು ಉಳಿಸಿ ಬೆಳೆಸಿದ್ದಾರೆ.

ಸಮಸ್ತ ತತ್ವರಹಸ್ಯಗಳನ್ನು 37 ಗ್ರಂಥಗಳಲ್ಲಿ ಅಡಗಿಸಿ ಸರ್ವಮೂಲವೆಂದು ಪ್ರಚಾರ ಪಡುವಂತೆ ಮಾಡಿದ್ದಾರೆ. 37 ಗ್ರಂಥಗಳೆಂದರೆ ದಶಪ್ರಕರಣಗಳು, ದಶೋಪನಿಷದ್ಭಾಷ್ಯಗಳು, ತಾತ್ಪರ್ಯ ನಿರ್ಣಯಗಳು, ಯಮಕಭಾರತ, ತಂತ್ರಸಾರ, ಋಗ್ಭಾಷ್ಯ, ದ್ವಾದಶಸ್ತೋತ್ರ, ಕಂದುಕಸ್ತುತಿ, ನಖಸ್ತುತಿ, ಸದಾಚಾರಸ್ಮೃತಿ, ಅಣುಭಾಷ್ಯ, ನ್ಯಾಯವಿವರಣ, ಕೃಷ್ಣಾಮೃತಮಹಾರ್ಣವ,

ಯತಿಪ್ರಣವಕಲ್ಪ, ಗೀತಾಭಾಷ್ಯ, ಬ್ರಹ್ಮಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನ ಹೀಗೆ 37 ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿದ್ದುದರಿಂದ ಇವುಗಳು ಸಂಸ್ಕೃತಬಲ್ಲವರಿಗೆ ಮಾತ್ರ ಸೀಮಿತವಾಯಿತು. ಇದನ್ನು ಅರಿತ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು ಸಾರಸ್ವತ ಲೋಕಕ್ಕೆ ಉಪಕಾರ ಮಾಡಲು ಎಲ್ಲಾ ಗ್ರಂಥಗಳನ್ನು ಕನ್ನಡಕ್ಕೆ ಅನುವಾದ ಮಾಡಿ ಸುಲಲಿತವಾದ ರೀತಿಯಲ್ಲಿ ನೀಡಿದ್ದಾರೆ. ಇವರ ಕನ್ನಡ ಅನುವಾದವು ಮೂರು ಬಾರಿ ಮುದ್ರಣವನ್ನು ಕಂಡಿದೆ. ನಾರಾಯಣ ತಂತ್ರಿಗಳವರ ಮಕ್ಕಳಾದ ರಘುಪತಿ ತಂತ್ರಿಗಳು ಶ್ರೀಮಠಕ್ಕೆ ಚಿರಪರಿಚಿತರು. ಆಗಿಂದಾಗ್ಗೆ ಪರಮಪೂಜ್ಯ ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರ ಸಂದರ್ಶನವನ್ನು ಮಾಡುತ್ತಲಿದ್ದರು. ಶ್ರೀಮಠಕ್ಕೆ ಪ್ರಕಾಶನದ ಪುಸ್ತಕಗಳೆಲ್ಲವನ್ನು ನೀಡುತ್ತಲಿದ್ದರು. ಒಂದೊಮ್ಮೆ ಶ್ರೀಶ್ರೀಪಾದರಾಜ ಮಠಾಧೀಶರಾದ ಶ್ರೀಕೇಶವನಿಧಿತೀರ್ಥರನ್ನು ಸಂಪರ್ಕಿಸಿದಾಗ, ಅವರ ಮರು ಮುದ್ರಣಕಾರ್ಯದ ಬಗ್ಗೆ ತಿಳಿಸಿದಾಗ, ಅವರ ಮುದ್ರಣಕಾರ್ಯದ ಆಸಕ್ತಿಯನ್ನು ನೋಡಿ ಶ್ರೀಮಠದಿಂದ ಒಂದು ಪುಸ್ತಕವು ಪ್ರಕಟವಾಗಬೇಕೆಂದು ತಿಳಿಸಿದರು. ಆಗ ರಘುಪತಿ ತಂತ್ರಿಗಳು ಪ್ರಕೃತ ಎರಡು ಸಂಪುಟಗಳಾಗಿ ಪುಸ್ತಕವನ್ನು ಮುದ್ರಿಸುವ ಯೋಜನೆಯಿದೆ ಎಂದು ತಿಳಿಸಿದರು. ಎರಡು ಸಂಪುಟಗಳೆಂದರೆ ಸಂಪುಟ-1 ಮಹಾಭಾರತತಾತ್ಪರ್ಯನಿರ್ಣಯ, ಸಂಪುಟ-2 ಯಮಕಭಾರತ, ತಂತ್ರಸಾರ, ದ್ವಾದಶಸ್ತೋತ್ರ, ಕಂದುಕಸ್ತುತಿ, ನಖಸ್ತುತಿ, ಸದಾಚಾರಸ್ಮೃತಿ, ಶ್ರೀಕೃಷ್ಣಾಮೃತಮಹಾರ್ಣವ ಎಂಬ ಎರಡು ಸಂಪುಟಗಳ ಪ್ರಕಾಶನವನ್ನು ರಘುಪತಿ ತಂತ್ರಿಗಳು ತಮ್ಮ ಸಹೋದರರೊಡನೆ ಚರ್ಚಿಸಿ ಶ್ರೀಮಠದ ಪ್ರಕಾಶನಕ್ಕಾಗಿ ತಯಾರಿಯನ್ನು ನಡೆಸಿದರು. ಶ್ರೀಗಳವರ ಆದೇಶದಂತೆ ಎರಡು ಸಂಪುಟಗಳಲ್ಲಿ ಒಂದನ್ನು ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರ ಪ್ರಥಮ ಮಹಾಸಮಾರಾಧನೆಯಂದು ಬಿಡುಗಡೆ ಮಾಡಲು ಸಹಕಾರ ನೀಡಿದ ಶ್ರೀ ದಿ। ಅಗ್ರಹಾರ ನಾರಾಯಣ ತಂತ್ರಿಗಳ ಮಕ್ಕಳಾದ ಶ್ರೀ ಕೆ.ಕೆ.ತಂತ್ರಿ, ಶ್ರೀ ಕೆ.ಮಾಧವ ತಂತ್ರಿ, ಶ್ರೀ ಎ.ರಘುಪತಿ ತಂತ್ರಿ, ಶ್ರೀ ಶ್ರೀಪತಿ ತಂತ್ರಿಯವರಿಗೂ ಮತ್ತು ಕರಡು ಪ್ರತಿಯನ್ನು ತಿದ್ದಿ ಸಹಕರಿಸಿದ ವಿದ್ವಾನ್ ಪಿ. ಗುರುರಾಜ ಉಪಾಧ್ಯಾಯ ಇವರಿಗೂ ಅಕ್ಷರ ಜೋಡಣೆ ಮಾಡಿದ ಶ್ರೀ ಆರ್.ವಿ. ರಂಗನಾಥ ಇವರಿಗೂ ನಮ್ಮ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತಾ ವಿರಮಿಸುತ್ತೇವೆ.

**ಶ್ರೀಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ**
**ಶ್ರೀಶ್ರೀಪಾದರಾಜಮಠ, ಮುಳಬಾಗಿಲು**

# ಮೊದಲ ಮಾತು

ಶ್ರೀಮಧ್ವಾಚಾರ್ಯರು ರಚಿಸಿರುವ ಗ್ರಂಥಗಳು ಸರ್ವಮೂಲವೆಂದು ಮಾನ್ಯವಾಗಿವೆ. ಸರ್ವಶಬ್ದವಾಚ್ಯನಾದ ಶ್ರೀಹರಿಯನ್ನು ತಿಳಿಯಲು ಈ ಗ್ರಂಥಗಳೇ ಮೂಲ ಆದ್ದರಿಂದ 'ಸರ್ವಮೂಲ' ಎನಿಸಿವೆ. ಆ ಗ್ರಂಥಗಳ ಅಧ್ಯಯನದಿಂದ ಸರ್ವಕ್ಕೂ ಮೂಲನಾದ ಶ್ರೀಹರಿಯನ್ನು ಹೊಂದಲು ಸಾಧ್ಯ. ಆದ್ದರಿಂದ ಆ ಗ್ರಂಥಗಳ ಅಧ್ಯಯನ ಅತ್ಯವಶ್ಯ ಕರ್ತವ್ಯವಾಗಿದೆ.

**ಸರ್ವಶಾಸ್ತ್ರಾರ್ಥಸಂಗ್ರಹ :** ಹೆಸರೇ ತಿಳಿಸುವಂತೆ ಸಮಸ್ತಶಾಸ್ತ್ರದ ಸಾರವೂ ಇದರಲ್ಲಿ ಅಡಗಿದೆ. ಇದೊಂದರ ಅಧ್ಯಯನ ಪಾರಾಯಣವು ಸಮಸ್ತ ಶಾಸ್ತ್ರಗಳ ಪಾರಾಯಣದ ಫಲವನ್ನು ನೀಡುತ್ತದೆ. ಆಚಾರ್ಯರು ರಚಿಸಿರುವ ಬ್ರಹ್ಮಸೂತ್ರಭಾಷ್ಯದ ಪಾರಾಯಣವಿಲ್ಲದೆ ಊಟವಿಲ್ಲ ಎಂಬ ನಿಯಮ ಪ್ರಾಚೀನಕಾಲದಲ್ಲಿತ್ತು. ಆದರೆ ದ್ವಾದಶೀ ಮುಂತಾದ ದಿನಗಳಲ್ಲಿ ಅದರ ಪಾರಾಯಣಕ್ಕೆ ಸಮಯ ಸಾಧ್ಯವಾಗದಿದ್ದಾಗ ಶಿಷ್ಯರು ಆಚಾರ್ಯರಲ್ಲಿ ಪ್ರಾರ್ಥಿಸಿದರು. ಆಗ ಆಚಾರ್ಯರು ಇದನ್ನು ರಚಿಸಿ ಕೊಟ್ಟರೆಂದು ಪರಂಪರೆ ಹೇಳುತ್ತದೆ.

ಅನಂತೋಽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ ।
ಅಹೋ ಆತ್ಮಪರಿಜ್ಞಪ್ತ್ಯೈ ಕೃಷ್ಣೇನೈವಾನನಾಂತರೇ ॥ (ಶ್ರೀಮಧ್ವವಿಜಯ 15.82)

ಶ್ರೀಕೃಷ್ಣ ತನ್ನ ಕಿರಿದಾದ ಬಾಯಲ್ಲಿ ತಾಯಿಗೆ ಬ್ರಹ್ಮಾಂಡವನ್ನೇ ತೋರಿಸಿದಂತೆ ಶ್ರೀಹರಿಯ ಜ್ಞಾನಕ್ಕಾಗಿ ಈ ಚಿಕ್ಕದಾದ ಗ್ರಂಥದಲ್ಲಿ ಅನಂತ ಅರ್ಥಗಳನ್ನು ಪ್ರಕಟಿಸಿದ್ದಾರೆ. ಹತ್ತಾರು ಅಧಿಕರಣಗಳ ಅಭಿಪ್ರಾಯವನ್ನು ಚಿಕ್ಕದಾದ ಒಂದೇ ಪದದಿಂದ ಸಂಗ್ರಹಿಸಿದ್ದಾರೆ.

**ದ್ವಾದಶಸ್ತೋತ್ರ :** ಹರಿಯ ಪಾರಮ್ಯವನ್ನು ಪ್ರತಿಪಾದಿಸುವ ವಿಶಿಷ್ಟವಾದ ಕೃತಿ ಇದು. ಆಚಾರ್ಯರು ಶ್ರೀಕೃಷ್ಣಪ್ರತಿಮೆಯನ್ನು ಉಡುಪಿಗೆ ಹೊತ್ತು ತರುವಾಗ ಭಕ್ತಿಯ ಪರಾಕಾಷ್ಠತೆಯಿಂದ ಹೊರಹೊಮ್ಮಿದ ಕೃತಿ ಇದು. ಆಚಾರ್ಯರ ಸಂಗೀತಶಾಸ್ತ್ರದ ಪ್ರಾವೀಣ್ಯಕ್ಕೆ ಸಾಕ್ಷಿಯಾದ ಕೃತಿ ಇದು. ವಿಷಹರವೂ ಹೌದು. ಆದ್ದರಿಂದ ನೈವೇದ್ಯಕಾಲದಲ್ಲಿ ಇದನ್ನು ಪಠಿಸುವ ಸಂಪ್ರದಾಯವಿದೆ. ಒಂದೊಂದು ಪದ್ಯದಲ್ಲಿಯೂ ಭಗವಂತನ ಅನಂತಗುಣಗಳನ್ನು, ಅವನ ಸರ್ವೋತ್ತಮತ್ವವನ್ನು ತಿಳಿಸುವ ಮೂಲಕ ಪಠಿಸುವವನ ಹೃದಯದಲ್ಲಿ ಭಕ್ತಿಯು ಅತಿಶಯವಾಗಿ ಮೂಡುವಂತೆ ಪದಗಳನ್ನು ಪ್ರಯೋಗಿಸಿದ್ದಾರೆ.

'ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನ ಭವೇತ್ 'ಇವೇ ಮುಂತಾದ ಸ್ತುತಿಗಳ ಮೂಲಕ ಅವನ ಸರ್ವೋತ್ತಮತ್ವವನ್ನು ಯುಕ್ತಿಬದ್ಧವಾಗಿ ಪ್ರತಿಪಾದಿಸಿ ಓದುಗನ ಮನದಲ್ಲಿ ಭಕ್ತಿ ದೃಢವಾಗಿ ಮೂಡುವಂತೆ ಮಾಡಿದ್ದಾರೆ.

**ಜಯಂತೀನಿರ್ಣಯ :**

ಶ್ರೀಕೃಷ್ಣನ ಜಯಂತಿಯನ್ನು ವೈಷ್ಣವನು ಅವಶ್ಯವಾಗಿ ಆಚರಿಸಬೇಕು. ಅದನ್ನು ಹೇಗೆ ಆಚರಿಸಬೇಕೆಂದು ದಿಕ್‌ಪ್ರದರ್ಶನವನ್ನು ಮಾಡಿ ಆ ವ್ರತಕ್ಕೊಂದು ಶಾಸ್ತ್ರೀಯ ಚೌಕಟ್ಟನ್ನು ಹಾಕಿಕೊಟ್ಟಿದ್ದಾರೆ.

**ಕೃಷ್ಣಾಮೃತಮಹಾರ್ಣವ :**

ಅರ್ಚನೆ, ಸ್ಮರಣೆ, ಧ್ಯಾನ, ನಾಮಸಂಕೀರ್ತನೆ ಇವುಗಳ ಮಹತ್ವವನ್ನು ಸಾರುವ ಕೃತಿ ಇದು.

ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।
ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥

ಎಲ್ಲ ಜೀವರಾಶಿಗಳೂ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಮೂರುವಿಧ ತಾಪತ್ರಯಗಳಿಂದ ಬೆಂದು ಬಳಲುತ್ತಿರುವರು. ಅವರ ಆ ಎಲ್ಲ ವಿಧದ ತಾಪದ ಪರಿಹಾರಕ್ಕಾಗಿ ಈ ಕೃತಿಯ ರಚನೆ ಎಂದು ಇದರ ಉದ್ದೇಶವನ್ನು ಆಚಾರ್ಯರು ಆರಂಭದಲ್ಲಿಯೇ ತಿಳಿಸಿರುವರು. ಶ್ರೀಕೃಷ್ಣನೇ ಅಮೃತದ ಸಮುದ್ರ. ಅವನ ಅರ್ಚನೆ, ಧ್ಯಾನ, ಸ್ಮರಣೆ, ನಾಮಸಂಕೀರ್ತನೆಗಳಿಂದ ನಮ್ಮ ಎಲ್ಲ ತಾಪಗಳೂ ಪರಿಹಾರವಾಗುತ್ತವೆ. ಊರ್ಧ್ವಪುಂಡ್ರಧಾರಣೆ, ಶಾಲಗ್ರಾಮದ ಪೂಜೆ, ಪ್ರದಕ್ಷಿಣ-ನಮಸ್ಕಾರ, ಏಕಾದಶೀ ಉಪವಾಸ ಮುಂತಾದ ವಿಷಯಗಳ ಬಗ್ಗೆ ಬೆಳಕು ಹರಿಸುವ ಕೃತಿ ಇದು. ಸ್ಮೃತಿ-ಪುರಾಣವಚನಗಳ ಸಂಗ್ರಹಾತ್ಮಕ ಕೃತಿ ಇದು.

ಕ್ಷೇತ್ರಾಗ್ರ್ಯಂ ತ್ರಿಭುವನವೈದ್ಯನಾಥನಾಥಂ ಪ್ರಸ್ಥಾಯ ಪ್ರಚುರತರಾಂತರಃ ಪ್ರಭಾವೀ ।
ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಾಂ ಚಕ್ರೇ ಸದ್ವಚನತತಿಂ ಸ್ವಭಕ್ತಭೂತ್ಯೈ ॥
(ಶ್ರೀಮಧ್ವವಿಜಯ 16.40)

ಧರ್ಮಸ್ಥಳದ ಸಮೀಪವಿರುವ ಕೊಕ್ಕಡ ಕ್ಷೇತ್ರದಲ್ಲಿರುವ ವೈದ್ಯನಾಥಧನ್ವಂತರಿಯ ದರ್ಶನಕ್ಕೆ ಬಂದಾಗ ಭಕ್ತರ ಸಂಪತ್ತಿನ ಪ್ರಾಪ್ತಿಗಾಗಿ ಈ ಕೃತಿಯನ್ನು ರಚಿಸಿರುವರು.

**ತಂತ್ರಸಾರಸಂಗ್ರಹ :**

ಶ್ರೀಹರಿಯು ತನ್ನ ಪುತ್ರ ಚತುರ್ಮುಖ ಬ್ರಹ್ಮದೇವರಿಗೆ ತಂತ್ರಸಾರವನ್ನು ಉಪದೇಶಿಸಿದ. ಅದರ ಸಂಗ್ರಹಾತ್ಮಕ ಕೃತಿ ಇದಾಗಿದೆ. ನಾಲ್ಕು ಅಧ್ಯಾಯಗಳ ಗ್ರಂಥವಿದು. ಸರ್ವಾಭೀಷ್ಟಗಳನ್ನು ಪೂರೈಸುವ ಕೃತಿ ಇದು. ಪೂಜಾಕ್ರಮ, ಪ್ರತಿಮಾಲಕ್ಷಣ, ದೇವಾಲಯನಿರ್ಮಾಣ, ಹೋಮಪದ್ಧತಿ, ಪ್ರತಿಷ್ಠಾಕ್ರಮ, ಶಿಲಾವೈವಿಧ್ಯ, ಅನೇಕವಿಧ ಮಂತ್ರಗಳು ಮುಂತಾದ ವಿಷಯಗಳ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡುವ ಗ್ರಂಥರತ್ನವಿದು.

ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ ಪರ್ಯಾಪ್ತವಾಂಛಿತಃ ।
ಅಮರೈರಾಶ್ರಿತಚ್ಛಾಯಂ ಕಲ್ಪದ್ರುಮಮಿವೋತ್ತಮಮ್ ॥ (ಶ್ರೀಮಧ್ವವಿಜಯ 15.78)

ಕಲ್ಪವೃಕ್ಷದ ನೆರಳನ್ನು ದೇವತೆಗಳೂ ಆಶ್ರಯಿಸಿರುವರು. ಕಲ್ಪವೃಕ್ಷವು ಎಲ್ಲವನ್ನೂ ನೀಡುವ ಮರ. ಹಾಗೆಯೇ ಈ ತಂತ್ರಸಾರಸಂಗ್ರಹ ನಮ್ಮ ಎಲ್ಲ ಅಭಿಲಾಷೆಗಳನ್ನೂ ಈಡೇರಿಸುವ ಗ್ರಂಥ.

**ಯಮಕಭಾರತ :**

ಭಗವನ್ ಚಿತ್ರಕವಿತಾಂ ಲೌಕಿಕೀಂ ದರ್ಶಯನ್ ಕಿಲ ।
ಗೋಪ್ಯಂ ಭಾರತಸಂಕ್ಷೇಪಮಕೃಥಾ ವಿಶ್ವವಿಸ್ಮಯಮ್ ॥

ವಿದ್ವತ್‌ಸಮಾಜ ಮೂಗಿನ ಮೇಲೆ ಬೆರಳಿಡುವ ಕೃತಿ ಇದು. ಚಿತ್ರವಿಚಿತ್ರವಾದ, ಪ್ರಾಸಬದ್ಧವಾದ ಶ್ಲೋಕಗಳು. ಅರ್ಥವನ್ನರಿಯಲು ಬಹು ಬುದ್ಧಿಶುದ್ಧತೆ ಬೇಕು. ಕೃಷ್ಣನ ಕಥೆ, ಭಾರತದ ಸಂಗ್ರಹವೇ ಇಲ್ಲಿದೆ. 1 ಲಕ್ಷಶ್ಲೋಕಾತ್ಮಕವಾದ ಮಹಾಭಾರತದ ಪಾರಾಯಣದ ಫಲ ಯಮಕಭಾರತದ ಪಾರಾಯಣದಿಂದ ಲಭಿಸುವುದು.

**ಕರ್ಮನಿರ್ಣಯ :**

ಯಜ್ಞಪ್ರಕ್ರಿಯೆಯ ಪರಿಚಯ ಆಚಾರ್ಯರಿಗಿರಲು ಸಾಧ್ಯವಿಲ್ಲ. ಈ ಭಾಗದಲ್ಲಿ ಆಚಾರ್ಯರನ್ನು ಸೋಲಿಸಹುದೆಂದು ಭಾವಿಸಿದ ಮೀಮಾಂಸಾಕೋವಿದರ ಆಶಂಕೆಗೆ ಪರಿಹಾರವಾಗಿ ರಚಿಸಿದ ಗ್ರಂಥವಿದು. ಕರ್ಮಸ್ವರೂಪ, ಅದರ ಆಚರಣೆ, ಮಂತ್ರಗಳಿಗೆ ಭಗವತ್ಪರತೆ ಇವುಗಳನ್ನು ನಿರೂಪಿಸುವ ಗ್ರಂಥವಿದು.

**ಸದಾಚಾರಸ್ಮೃತಿ :**

ಬೆಳಿಗ್ಗೆಯಿಂದ ರಾತ್ರಿ ಮಲಗುವ ತನಕ ನಮ್ಮ ಜೀವನದಲ್ಲಿ ನಾವು ಆಚರಿಸಬೇಕಾದ ಕರ್ಮಗಳನ್ನು ನಿರೂಪಿಸುವ ಗ್ರಂಥವಿದು. ವೇದವ್ಯಾಸದೇವರ ವಚನಗಳನ್ನು ಸಂಗ್ರಹಿಸಿರುವ ಕೃತಿ. ಭಕ್ತಿಪೂರ್ವಕವಾಗಿ ಎಲ್ಲ ಕರ್ಮಗಳನ್ನು ಆಚರಿಸಬೇಕು ಎಂದು ಇಲ್ಲಿ ಘೋಷಿಸಿದ್ದಾರೆ.

ಆಚಾರ್ಯರ ತತ್ತ್ವ ಪ್ರತಿಪಾದನೆಯನ್ನು ತಿಳಿದುಕೊಳ್ಳಲು ಅನುಕೂಲವಾಗುವಂತೆ 4.6.1897ರಲ್ಲಿ ಜನ್ಮತಾಳಿದ ನಮ್ಮ ತೀರ್ಥರೂಪರಾದ ವೇದಮೂರ್ತಿ 'ವೇದಾಂತವಾಚಸ್ಪತಿ', 'ಪೂರ್ಣಪ್ರಜ್ಞ' ಮತ್ತು 'ವಿದ್ಯಾಮಾನ್ಯ' ಬಿರುದಾಂಕಿತರಾದ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು ಶ್ರೀಮನ್ ಮಧ್ವಾಚಾರ್ಯರ ಸರ್ವಮೂಲವೆಂಬ 37 ಗ್ರಂಥಗಳ ಅನುವಾದ ಕಾರ್ಯಕ್ರಮವನ್ನು ಪ್ರತಿಪದಾರ್ಥದೊಂದಿಗೆ ಮೂಲಾರ್ಥಕ್ಕೆ ಸ್ವಲ್ಪವು ಚ್ಯುತಿಬಾರದ ರೀತಿಯಲ್ಲಿ ಕನ್ನಡದಲ್ಲಿ ಅನುವಾದಿಸಿದರು. ಕನ್ನಡನಾಡಿನಲ್ಲಿ ಸರ್ವಮೂಲ ಗ್ರಂಥಗಳಿಗೂ ಪ್ರಪ್ರಥಮವಾಗಿ ಸಂಸ್ಕೃತವನ್ನು ಅರಿಯದ ಜನಸಾಮಾನ್ಯರಿಗೆ ಮಾಧ್ವಪಂಥದ ತತ್ವಗಳನ್ನು ಕನ್ನಡಕ್ಕೆ ಅನುವಾದಿಸಿ ಅತ್ಯಮೂಲ್ಯ ಕೊಡುಗೆಯನ್ನು ಕೊಟ್ಟು, ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದಲೂ, ಅಷ್ಟಮಠಯತಿ ಗಳಿಂದಲೂ ಉತ್ತರಾದಿಮಠ, ರಾಘವೇಂದ್ರಮಠ, ವ್ಯಾಸರಾಯ ಮಠ, ಶೃಂಗೇರಿಮಠ, ಚಿತ್ರಾಪುರಮಠ, ಗೋಕರ್ಣಮಠಗಳಲ್ಲೂ ಪುರಸ್ಕಾರವನ್ನು ಪಡೆದು ಕೀರ್ತಿಶೇಷರಾದರು. ಮೂರು ದಶಕಗಳಿಗೂ ಮಿಕ್ಕಿ ಉಡುಪಿ ಸಂಸ್ಕೃತ ಮಹಾಪಾಠಶಾಲೆಯಲ್ಲಿ ವೇದಾಂತ ಪ್ರಾಧ್ಯಾಪಕರಾಗಿದ್ದರು. ಶ್ರೀವಾದಿರಾಜರು ತಾಳೆಪತ್ರದಲ್ಲಿ ಬರೆದ ತುಳು ಲಿಪಿಯ ಗ್ರಂಥಗಳನ್ನು ದೇವನಾಗರಿ ಭಾಷೆಯಲ್ಲಿ ಪ್ರಕಟಿಸುವ ಸಾಹಸ ಕಾರ್ಯವನ್ನು ಮಾಡಿ ಮಧ್ವ ಮತಕ್ಕೆ ಅನುಪಮ ಸೇವೆಯನ್ನು ಸಲ್ಲಿಸಿದ್ದಾರೆ.

ಈ ಪುಸ್ತಕ ಪ್ರಯೋಜನವನ್ನು ಸಾಮಾನ್ಯ ಜನರು ಪಡೆಯುವಂತೆ ಲಾಭದ ದೃಷ್ಟಿಕೋನ ಇಲ್ಲದೆ ಮುದ್ರಣ ವೆಚ್ಚಕ್ಕೆ ಸರಿಯಾಗಿ ಇಟ್ಟಿರುವೆವು. ಅಂತೂ ಈ ಗ್ರಂಥವನ್ನು ಸಕಲ ಸಜ್ಜನರು ಭಕ್ತಿಪೂರ್ವಕವಾಗಿ ಪಠಣಮಾಡಿ, ವಿಷ್ಣುಸರ್ವೋತ್ತಮತ್ವಾದಿ ತತ್ವಜ್ಞಾನವನ್ನು ಪಡೆದು ಐಹಿಕ ನಿಖಿಲಾಭೀಷ್ಟವನ್ನು ಮತ್ತು ಜಿಜ್ಞಾಸಾ ನಿದಿಧ್ಯಾಸನ, ಪರಮೇಶ್ವರನ ಅನುಗ್ರಹ, ಶ್ರೀ ಹರಿದರ್ಶನ ಪರಮಭಕ್ತಿ ಪರಮಾನುಗ್ರಹದ್ವಾರಾ ಆಮುಷ್ಮಿಕವಾದ ಮೋಕ್ಷರೂಪ ಪುರುಷಾರ್ಥವನ್ನು ಹೊಂದುವರು ಎನ್ನುವುದರಲ್ಲಿ ಸಂದೇಹವಿಲ್ಲ.

ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು ಹಾಗೂ ಪೂಜ್ಯ ಮಾತೃಶ್ರೀ ಶ್ರೀಮತಿ ರಾಜಮ್ಮ ನಾರಾಯಣತಂತ್ರಿ ಯವರ ಚರಣ ಕಮಲಗಳಿಗೆ ಈ ಗ್ರಂಥವನ್ನು ತುಂಬು ಹೃದಯದಿಂದ ಅರ್ಪಿಸುವೆವು.

ಇತಿ ನಿಮ್ಮವರೇ ಆದ

**ಅಗ್ರಹಾರ ರಘುಪತಿ ತಂತ್ರಿ**

॥ ಶ್ರೀಃ ॥

# ಅಣುಭಾಷ್ಯ

ಸಮಸ್ತಗುಣಸಂಪೂರ್ಣಂ ಸರ್ವದೋಷವಿವರ್ಜಿತಂ ।
ಲಕ್ಷ್ಮೀನಾರಾಯಣಂ ವಂದೇ ಭಕ್ತಾಭೀಷ್ಟಫಲಪ್ರದಂ ॥
ಹರಿಂ ಗುರೂನ್ ಪ್ರಣಮ್ಯಾದಾವಣುಭಾಷ್ಯಸ್ಯ ಸನ್ಮುದೇ ।
ತಂತ್ರಿನಾರಾಯಣಾಭಿಖ್ಯೋ ಭಾಷಾಟೀಕಾಂ ಕರಿಷ್ಯತಿ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**ಮೂಲ ॥★ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಂ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥ ೧ ॥**

**ಅರ್ಥ ॥** ಸರ್ವೈಃ ಗುಣೈಃ ಉದೀರ್ಣಂ=ಸರ್ವಗುಣಪರಿಪೂರ್ಣನಾಗಿ ಎಲ್ಲೆಡೆಯಲ್ಲಿಯೂ ಆವಾಸಮಾಡುತ್ತಾ ಜ್ಞಾನಾನಂದಾದ್ಯಪರಿಮಿತಗುಣಗಳಿದ್ದು ಸರ್ವೋತ್ತಮನಾದುದರಿಂದ ವಾಸುದೇವ ನೆನಿಸಿದವನೂ, ದೋಷವರ್ಜಿತಂ=ತಾನು ದೋಷಲೇಶವಿರಹಿತನಾಗಿ ಭಕ್ತರ ದೋಷಗಳನ್ನು ಚೆನ್ನಾಗಿ ಸೆಳೆಯುವವನಾದುದರಿಂದ ಸಂಕರ್ಷಣನೆನಿಸಿದವನೂ, ಜ್ಞೇಯಂ=ಪ್ರಕೃಷ್ಟ ಪ್ರಕಾಶವಂತನಾಗಿ ತಿಳಿಯಲರ್ಹನಾದುದರಿಂದ ಪ್ರದ್ಯುಮ್ನನೆನಿಸಿದವನೂ, ಗಮ್ಯಂ=ಜ್ಞಾನಿಗಳು ತನ್ನನ್ನು ಹೊಂದಲಿಕ್ಕೆ ಪ್ರತಿಬಂಧಕವಿಲ್ಲದವನಾದುದರಿಂದ ಅನಿರುದ್ಧನೆನಿಸಿದವನೂ, ಇಂತಹ, ನಾರಾಯಣಂ=ಸಮುದ್ರ ಶಾಯಿಯಾದ ನಾರಾಯಣನನ್ನು, (ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ (5) ಭಗವನ್ಮೂರ್ತಿಗಳನ್ನು) ಗುರೂಂಶ್ಚಾಪಿ=ಜ್ಞಾನೋಪದೇಶಕರಾದ ವೇದವ್ಯಾಸ ರನ್ನೂ, ನತ್ವಾ=ಭಕ್ತಿಪೂರ್ವಕವಾಗಿ ನಮಸ್ಕರಿಸಿ, ಸೂತ್ರಾರ್ಥಃ=ಬ್ರಹ್ಮಸೂತ್ರಗಳ ಅರ್ಥವು, ಉಚ್ಯತೇ=ಹೇಳಲ್ಪಡುತ್ತದೆ.

**ತಾತ್ಪರ್ಯ ॥** (1) ಆನಂದ, ಜ್ಞಾನ, ದ್ಯುತಿ, ಬಲ, ಔದಾರ್ಯ, ವೀರ್ಯ ಮೊದಲಾದ ಎಲ್ಲಾ ಗುಣಗಳಿಂದ ಪರಿಪೂರ್ಣನೂ, ಚಿಂತಾ, ಸಂತಾಪ, ಪುಣ್ಯಾಪಾಪಗಳ ಸಂಬಂಧ, ಜನನ, ಮರಣ, ಮೊದಲಾದ ದೋಷಗಳಿಂದ ವಿರಹಿತನೂ ಜ್ಞೇಯನೂ (ತಿಳಿಯಲ್ಪಡತಕ್ಕವನೂ) ಅಂದರೆ ಸಜ್ಜನರಿಂದ ವಿರಕ್ತಿ, ಭಕ್ತಿ, ಮನನ, ಸ್ವಯೋಗ್ಯಧ್ಯಾನಗಳಿಂದುಂಟಾದ ಅಪರೋಕ್ಷಜ್ಞಾನದಿಂದ ತಿಳಿಯಲಿಕ್ಕೆ ಯೋಗ್ಯನೂ, ಗಮ್ಯನೂ, ಅಂದರೆ ಅಪರೋಕ್ಷಜ್ಞಾನಿಗಳಾದ ಸಜ್ಜನರಿಂದ

---

★ ಈ ಚಿಹ್ನೆಗಳಿರುವ ಪಾಠವು ಶ್ರೀಫಲಿಮಾರು ಮಠದ ಪ್ರಾಚೀನ ತೌಳವ ಲಿಪಿಯ ಪುಸ್ತಕವಲ್ಲೂ ಶ್ರೀಸೋದೇಮಠದ ಅತಿಪ್ರಾಚೀನ ತೌಳವ ಲಿಪಿಯ ಪುಸ್ತಕದಲ್ಲೂ ಇರುವುದಿಲ್ಲ

ಹೊಂದಲರ್ಹನೂ ಆದ, ನಾರಾಯಣನನ್ನೂ; ಜ್ಞಾನೋಪದೇಶಕರಾದ ವೇದವ್ಯಾಸರನ್ನೂ ನಮಸ್ಕರಿಸಿ ಬ್ರಹ್ಮಸೂತ್ರಾರ್ಥವನ್ನು ನಾನು ಹೇಳುವೆನು. (2) ಅಧಿಕಾರಿಗಳು ''ಸಂಪೂರ್ತಿ ದುಃಖನಿವೃತ್ತಿಯನ್ನು ಹೊಂದಿ ತಮ್ಮ ತಮ್ಮ ಸ್ವರೂಪಾನಂದವನ್ನನುಭವಿಸುವಿಕೆ'' ಎಂಬ ಮುಕ್ತಿಯನ್ನು ಪಡೆಯಲು ಕಾರಣವಾದ ಶ್ರೀಪರಮಾತ್ಮನ ಜ್ಞಾನಕ್ಕಾಗಿ, ಅನಂತಾನಂತ ವೇದಗಳು ಹೊರಟಿವೆ. ಅವುಗಳಿಗೆ ಇದೇ ತಾತ್ಪರ್ಯವೆಂದು ತಿಳಿಸುವುದಕ್ಕಾಗಿ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ಮಾಡಿರುವರು. ಅವುಗಳಿಗೆ ಇತರರು (21 ವಾದಿಗಳು) ಭಾಷ್ಯಗಳನ್ನು ಮಾಡಿದ್ದರೂ ಅವು ಅಯುಕ್ತವಾಗಿ ಕಂಡ ಪ್ರಯುಕ್ತ, ಶ್ರೀಮಧ್ವಾಚಾರ್ಯರು ಯೋಗ್ಯರೀತಿಯಿಂದ ವ್ಯಾಖ್ಯಾನಮಾಡಲಿಕ್ಕೆ ಇಚ್ಛಿಸುತ್ತಾ ಬ್ರಹ್ಮಸೂತ್ರಭಾಷ್ಯ ಮೊದಲಾದವುಗಳನ್ನು ಮಾಡಿ, ಅತಿಸಂಕ್ಷೇಪದಿಂದಲೂ ಭಾಷ್ಯವನ್ನು ಮಾಡಲಿಚ್ಛಿಸಿದವರಾಗಿ, 4 ಅಧ್ಯಾಯಗಳಲ್ಲಿ ಹೇಳಿದ ಗುಣಗಳಿಂದ ಕೂಡಿದ ಶ್ರೀಹರಿಗೆ ನಮಸ್ಕರಿಸಿ, ಸೂತ್ರಾರ್ಥವನ್ನು ಹೇಳುತ್ತೇನೆಂದು ಪ್ರತಿಜ್ಞಾ ಮಾಡಿದರು. (3) ಶ್ರೀಮದಾಚಾರ್ಯರೇ ಬ್ರಹ್ಮಸೂತ್ರಭಾಷ್ಯವನ್ನು ಮಾಡಿ ಬ್ರಹ್ಮಸೂತ್ರಗಳ ಅರ್ಥಗಳನ್ನು ವಿಸ್ತರವಾಗಿ ನಿರೂಪಿಸಿರುವುದರಿಂದ, ಪುನಃ ಅಪೂರ್ವವಾದ ಈ ಗ್ರಂಥವನ್ನು ಏತಕ್ಕೆ ಮಾಡಿರುವರು? ಎಂದರೆ- ಶ್ರೀಮದಾಚಾರ್ಯರ ಕೆಲವು ಶಿಷ್ಯರು ಪ್ರತಿದಿನವೂ ಬ್ರಹ್ಮಸೂತ್ರಭಾಷ್ಯವನ್ನು ಸಂಪೂರ್ತಿ ಪಠನ ಮಾಡದೆ ಭೋಜನಾದಿಗಳನ್ನು ಮಾಡುತ್ತಿರಲಿಲ್ಲ. ಹೀಗಿರಲು ಒಂದು ಸಲ ಸಾಧನದ್ವಾದಶಿಯು ಪ್ರಾಪ್ತವಾಯಿತು. ಆಗ ಶಿಷ್ಯರು ಅತ್ಯಲ್ಪಕಾಲದಲ್ಲಿ ಪಠನಮಾಡುತ್ತಿದ್ದರೆ ಅತ್ಯಲ್ಪದ್ವಾದಶಿಯು ಅತಿಕ್ರಾಂತವಾಗುವುದು, ಏನು ಮಾಡಲಿ ಎಂದು ಯೋಚಿಸಿಕೊಂಡಿರುತ್ತಿದ್ದರು. ಅವರನ್ನನುಗ್ರಹಿಸುವುದಕ್ಕಾಗಿ ಬ್ರಹ್ಮಸೂತ್ರ ಭಾಷ್ಯದ ಅರ್ಥವನ್ನು ಸಂಗ್ರಹಿಸಿ ಈ ಸಂಕ್ಷೇಪ ಭಾಷ್ಯವನ್ನು ಓದಿದರೂ, ಮಹಾಭಾಷ್ಯ ಪಾರಾಯಣದ ಫಲವನ್ನು ಕೊಡುವ ಅಣುಭಾಷ್ಯವನ್ನು ರಚಿಸಿರುತ್ತಾರೆ ॥1॥

**ಮೂಲ ॥ ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾಗಮೋದಿತಃ।**
**ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋಽಂತರಃ ಖವತ್ ॥ ೨ ॥**

**ಪ್ರಣೇತಾ ಜ್ಯೋತಿರಿತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು ।**
**ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ॥ ೩ ॥**

**ಅರ್ಥ ॥** ವಿಷ್ಣುರೇವ=ಶ್ರೀಹರಿಯೇ, ವಿಜಿಜ್ಞಾಸ್ಯಃ=ವಿಶೇಷಾಕಾರವಾಗಿ ಶ್ರವಣಾದಿಗಳಿಂದ ವಿಚಾರ್ಯನು, ಸರ್ವಕರ್ತಾ=ರಮಾಬ್ರಹ್ಮಾದಿ ಜಗತ್ತಿಗೆ ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳನ್ನು ಯಥಾಯೋಗ್ಯವಾಗಿ ಕೊಡುವವನು, ಆಗಮೋದಿತಃ=ಎಲ್ಲಾ ಸದಾಗಮಗಳಿಂದ ಪ್ರತಿಪಾದಿಸಲ್ಪಟ್ಟವನು, ಸಮನ್ವಯಾತ್=ಉಪಕ್ರಮಾದಿ ಲಿಂಗಗಳ ಸಮುದಾಯ ದಿಂದ, ಮುಖ್ಯವೃತ್ತಿಯಿಂದ ಸರ್ವಶಾಸ್ತ್ರಗಳಿಗೆ ತಾತ್ಪರ್ಯವಿಷಯನು ಶ್ರೀವಿಷ್ಣುವೇ, ಈಕ್ಷತೇಶ್ಚ= ಈಕ್ಷಣೀಯನಾದುದರಿಂದ (ಅವಾಚ್ಯನಲ್ಲ), ಪೂರ್ಣಾನಂದಃ=ಸಂಪೂರ್ಣ ಆನಂದವುಳ್ಳವನು, ಅಂತರಃ=ಶರೀರದ ಒಳಗೆ ಕ್ರೀಡಿಸಿಕೊಂಡಿರುವವನು, ಖವತ್=ಆಕಾಶಪದದಿಂದ ಹೇಗೆ ವಾಚ್ಯ ನಾಗುತ್ತಾನೋ ಹಾಗೆಯೇ, ಪ್ರಣೇತಾ=ಪ್ರಾಣಪದದಿಂದಲೂ ವಾಚ್ಯನಾಗುತ್ತಾನೆ. ಅಂದರೆ- ಸರ್ವೇಂದ್ರಿಯಗಳಿಗೂ ಪ್ರೇರಕನು, ಜ್ಯೋತಿಃ=ಹುಟ್ಟಿದ್ದಕ್ಕೆಲ್ಲಾ ಆಶ್ರಯನು, ಅಥವಾ ಪ್ರಕಾಶರೂಪನು, ಇತ್ಯಾದ್ಯೈಃ=ಇದೇ ಮೊದಲಾಗಿ ಉಳ್ಳ, ಅನ್ಯವಸ್ತುಷು ಪ್ರಸಿದ್ಧೈಃ=ವಿಷ್ಣುವಿನಿಂದ ಇತರಗಳಾದ

ವಸ್ತುಗಳಲ್ಲಿ ವಾಚಕಗಳೆಂದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧಗಳಾದ, ಸರ್ವೈಃ=ಸರ್ವಶಬ್ದಗಳಿಂದಲೂ, ವಿಷ್ಣುರೇವ ಏಕಃ=ಶ್ರೀಹರಿಯೊಬ್ಬನೇ, ಉಚ್ಯತೇ=ಹೇಳಲ್ಪಡುತ್ತಾನೆ. (ಬೇರೆ ಯಾರೂ ಅಲ್ಲ) ಏಕೆಂದರೆ- ಸರ್ವಗುಣತ್ವತಃ=ಆಯಾಯ ಪ್ರಕರಣಗಳಲ್ಲಿರುವ ಶ್ರುತಿಲಿಂಗರೂಪಧರ್ಮಗಳಿದ್ದ ಪ್ರಯುಕ್ತವೂ, ಆಯಾಯ ಪದಗಳ ಪ್ರವೃತ್ತಿರೂಪ ಧರ್ಮಗಳಿದ್ದ ಪ್ರಯುಕ್ತವೂ, ಸ್ವಾತಂತ್ರ್ಯಾದಿಗುಣಗಳಿದ್ದ ಪ್ರಯುಕ್ತವೂ.

**ತಾತ್ಪರ್ಯ ॥** ವ್ಯಾಪ್ತನಾದ ಶ್ರೀಹರಿಯೇ ''ಅಥಾತೋ ಬ್ರಹ್ಮಜಿಜ್ಞಾಸಾ'' ಎನ್ನುವಲ್ಲಿ 'ಅಥ' 'ಅತಃ' ಎಂಬ ಪದಗಳಿಂದ ಹೇಳಲ್ಪಟ್ಟ ಅಧಿಕಾರಿ ಫಲಗಳಿಂದೊಡಗೂಡಿದ ಶ್ರವಣ, ಮನನ, ಧ್ಯಾನರೂಪ ವಿಚಾರದಿಂದ ತಿಳಿಯಲು ಯೋಗ್ಯನು. ಅಂದರೆ- ಸರ್ವದಾ ಬ್ರಹ್ಮನ ವಿಚಾರವನ್ನು ಮಾಡುತ್ತಿರಬೇಕು. **'ವಿಷ್ಣುರೇವ ವಿಜಿಜ್ಞಾಸ್ಯಃ'** ಎನ್ನುವುದರಿಂದ ಜಿಜ್ಞಾಸಾಧಿಕರಣಾರ್ಥವು ಉಕ್ತವಾಯಿತು. **''ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ''** ಅಥ=ಅಧ್ಯಯನಾನಂತರ ಶಮ (ಶ್ರೀಹರಿಯಲ್ಲಿ ಆಸಕ್ತನಾದ ಬುದ್ಧಿ) ದಮ (ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳೋಣ) ಮೊದಲಾದ ಅಧಿಕಾರವನ್ನು ಹೊಂದಿದ ಬಳಿಕ, ಅತಃ=ಅಕಾರದಿಂದ ವಾಚ್ಯನಾದ ಪ್ರಸನ್ನನಾದ ಬ್ರಹ್ಮನಿಂದಲೂ, ಜ್ಞಾನಜನ್ಯವಾದ ಪ್ರಸಾದದಿಂದ ಹುಟ್ಟಿದ ಮೋಕ್ಷರೂಪ ಫಲವಿದ್ದುದರಿಂದಲೂ, ಬಂಧವು ಸತ್ಯವಾದ ಪ್ರಯುಕ್ತವೂ, ಆಗಮವು ಪ್ರಮಾಣವಾದ ಪ್ರಯುಕ್ತವೂ, ಸಿದ್ಧಾರ್ಥವನ್ನು ತಿಳಿಸಿಕೊಡುವದರಿಂದಲೂ, ಓಂಬ್ರಹ್ಮಣಃ=ಗುಣಪೂರ್ಣನಾದ ಶ್ರೀವಿಷ್ಣುವಿನ, ಜಿಜ್ಞಾಸಾ= ಶ್ರವಣಾದಿರೂಪವಾದ ವಿಚಾರವು, ಕರ್ತವ್ಯಾ=ಮಾಡತಕ್ಕುದು. ಹೀಗೆಯೇ ಮೇಲೆಯೂ ತಿಳಿಯತಕ್ಕುದು. ಅಂದರೆ- ಬ್ರಹ್ಮಜ್ಞಾನಕ್ಕಾಗಿ ಸರ್ವವೇದವಿಷಯಕವಾದ ಶ್ರವಣ, ಮನನ, ನಿದಿಧ್ಯಾಸನರೂಪವಾದ ಅಥವಾ ಮನನರೂಪವಾದ ವಿಚಾರವನ್ನು ಮಾಡಬೇಕು. ॥ ಅಧ್ಯಾಯ 1 ॥ ಪಾ ॥ಅಧಿ ॥ 1 ॥

**ಸರ್ವಕರ್ತಾ-** ಸರ್ವಕರ್ತನು. ಶ್ರೀವಿಷ್ಣುವೇ ಜೀವನಲ್ಲ. ಇದರಿಂದ ಜನ್ಮಾಧಿಕರಣಾರ್ಥವು ಉಕ್ತವಾಯಿತು. **''ಓಂ ಜನ್ಮಾದ್ಯಸ್ಯ ಯತಃ ಓಂ''** ಈ ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಉತ್ಪತ್ತ್ಯಾದಿಗಳು ಯಾರಿಂದ ಯಥಾಯೋಗ್ಯವಾಗಿ ಆಗುತ್ತವೋ! ಅಂತಹ ಜನ್ಮಾದಿಗಳಿಗೆ ಕಾರಣಾನಾದವನು ಬ್ರಹ್ಮನು ॥ ಅಧಿ. ॥ 2 ॥

**ಆಗಮೋದಿತಃ-** ವೇದ ಮೊದಲಾದ ಸಚ್ಛಾಸ್ತ್ರಗಳಿಂದ ಪ್ರತಿಪಾದಿಸಲ್ಪಟ್ಟವನು, ಅಂದರೆ ಸಚ್ಛಾಸ್ತ್ರಗಳು ಮಾತ್ರವೇ ಪರಮಾತ್ಮನನ್ನು ತಿಳಿಸುವುದಲ್ಲದೆ ಅನುಮಾನಗಳು ತಿಳಿಸುವುದಿಲ್ಲ. ಪಾಶುಪತಾದ್ಯಾಗಮಗಳಿಂದ ಹೇಳಲ್ಪಟ್ಟ ರುದ್ರಾದಿಗಳು ಸರ್ವಕರ್ತರಲ್ಲ. ರುದ್ರಾದಿಗಳು ಸರ್ವಕರ್ತರೆಂದೂ, ಸರ್ವೋತ್ತಮರೆಂದೂ ಯಾವ ಸಚ್ಛಾಸ್ತ್ರದಲ್ಲಿಯೂ ಹೇಳುವುದಿಲ್ಲ. **'ಆಗಮೋದಿತಃ'** ಎನ್ನುವುದರಿಂದ ಶಾಸ್ತ್ರಯೋನಿತ್ವಾಧಿಕರಣಾರ್ಥವು ಉಕ್ತವಾಯಿತು. **''ಓಂ ಶಾಸ್ತ್ರಯೋನಿತ್ವಾತ್ ಓಂ''** ಜನ್ಮಾದಿ ಕಾರಣನಾದವನಿಗೆ ವೇದ, ವೇದಾನುಸಾರಿ ಪೌರುಷೇಯ ಗ್ರಂಥಗಳು ಪ್ರಮಾಣವಾಗಿರುವುದರಿಂದ ಅನುಮಾನದಿಂದಾಗಲೀ, ಪಾಶುಪತಾದ್ಯಾಗಮದಿಂದಾಗಲೀ, ಜನ್ಮಾದಿಗಳಿಗೆ ಕಾರಣನಾದವನನ್ನು ತಿಳಿಯಕೂಡದು ॥ ಅಧಿ. ॥ 3॥

**ಸಮನ್ವಯಾತ್:-** ಉಪಕ್ರಮಾದಿ ಲಿಂಗಗಳ ಸಮುದಾಯದಿಂದ, ಅಥವಾ ಉಪಕ್ರಮಾದಿ

ಗಳಿಂದ ನಿರ್ಣಯಿಸಲ್ಪಟ್ಟ ವಾಕ್ಯಗಳಿಗೆ ಬ್ರಹ್ಮಪರತ್ವರೂಪ ಸಂಬಂಧದಿಂದಾಗಲೀ, ಅಂದರೆ- ಉಪಕ್ರಮಾದಿಗಳು ''ವೇದವಾಕ್ಯಗಳೆಲ್ಲಾ ಪರಬ್ರಹ್ಮನನ್ನೇ ಬೋಧಿಸುತ್ತವೆ'' ಎಂದು ನಿರ್ಣಯಿಸುತ್ತವೆ. ಶ್ರೀಹರಿಯೇ ಮುಖ್ಯವೃತ್ತಿಯಿಂದ, ಆಗಮಗಳ ತಾತ್ಪರ್ಯಕ್ಕೆ ವಿಷಯನು. (ರುದ್ರಾದಿಗಳಲ್ಲ) ಇದರಿಂದ ಸಮನ್ವಯಾಧಿಕರಣಾರ್ಥವು ಉಕ್ತವಾಯಿತು. **''ಓಂ ತತ್ತು ಸಮನ್ವಯಾತ್ ಓಂ''** ಉಪಕ್ರಮಾದಿ ಲಿಂಗಗಳಿಂದ ಮುಖ್ಯ ವೃತ್ತಿಯಿಂದ ಸರ್ವಶಾಸ್ತ್ರಗಳಿಗೆ ತಾತ್ಪರ್ಯವಿಷಯನಾದವನು ಬ್ರಹ್ಮನೇ. ।। ಅಧಿ. ।। 4 ।।

**ಈಕ್ಷತೇಶ್ಚ :-** ಈಕ್ಷಣೀಯ (ಜ್ಞಾನಕ್ಕೆ ವಿಷಯ) ನಾದುದರಿಂದಲೂ, (ತಿಳಿಯಲ್ಪಡುವುದರಿಂದ) (ಸಮ್ ಏವ) ಮುಖ್ಯವೃತ್ತಿಯಿಂದಲೇ, ಶ್ರೀಹರಿಯು ವೇದಪ್ರತಿಪಾದ್ಯನು, (ಲಕ್ಷಣಾ ಮೊದಲಾದ ಅಮುಖ್ಯವೃತ್ತಿಯಿಂದಲ್ಲ.) ಇದರಿಂದ ಈಕ್ಷತ್ಯಧಿಕರಣಾರ್ಥವು ಉಕ್ತವಾಯಿತು. **''ಓಂ ಈಕ್ಷತೇರ್ನಾಶಬ್ದಂ ಓಂ''** ಈಕ್ಷಣೀಯನಾದುದರಿಂದ ಬ್ರಹ್ಮನು ಅವಾಚ್ಯನಲ್ಲ; ವಾಚ್ಯನೇ. ಮೇಲೆಯೂ ಹೀಗೆಯೇ ತಿಳಿಯತಕ್ಕುದು. ।। ಅಧಿ. ।। 5 ।।

**ಪೂರ್ಣಾನಂದಃ :-** ಇತರ ವಸ್ತುಗಳಲ್ಲಿ ಪ್ರಸಿದ್ಧಗಳಾದ, ಅಂದರೆ ವಿಷ್ಣುವಿನಿಂದ ಇತರಗಳಾದ ವಸ್ತುಗಳನ್ನೇ ಹೇಳತಕ್ಕವೆಂದು ಪ್ರಸಿದ್ಧಗೊಂಡ 1 ಅನ್ಯತ್ರ ಪ್ರಸಿದ್ಧಗಳು, (ಶ್ರುತ್ಯಾದಿಗಳಿಂದಾಗಲೀ, ಲೋಕವ್ಯವಹಾರದಿಂದಾಗಲೀ, ಪರಮಾತ್ಮನಿಂದ ಬೇರೆಯವರನ್ನು ಹೇಳುವವುಗಳು) 2 ಉಭಯತ್ರ ಪ್ರಸಿದ್ಧಗಳು (ಶ್ರುತ್ಯಾದಿಗಳಿಂದ ಪರಮಾತ್ಮನನ್ನೂ ಬೇರೆಯವರನ್ನೂ ಹೇಳುವವುಗಳು) 3 ಅನ್ಯತ್ರೈವ ಪ್ರಸಿದ್ಧಗಳು (ಪ್ರಬಲಗಳಾದ ಶ್ರುತಿಲಿಂಗಾದಿಗಳಿಂದ ಬೇರೆಯವರನ್ನೇ ಹೇಳುವವುಗಳು) ಎಂಬ ಭೇದದಿಂದ ಮೂರು ವಿಧವಾದ ನಾಮಾತ್ಮಕ ಲಿಂಗಾತ್ಮಕ ಶಬ್ದಗಳಿಂದ (ಸಾಕ್ಷಾತ್ ಧರ್ಮಿಯನ್ನು ಹೇಳುವವುಗಳು ನಾಮಾತ್ಮಕಗಳು, ಧರ್ಮದ್ವಾರಾ ಧರ್ಮಿಯನ್ನು ತಿಳಿಸಕೊಡುವವುಗಳು ಲಿಂಗಾತ್ಮಕಗಳು) ಅಂದರೆ ಆಯಾಯ ಪ್ರಕರಣದಲ್ಲಿರುವ ಎಲ್ಲಾ ಶಬ್ದಗಳಿಂದಲೂ ಶ್ರೀಹರಿಯೊಬ್ಬನೇ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಗುಣಪರಿಪೂರ್ಣತೆಗೋಸ್ಕರ ಹೇಳಲ್ಪಡುತ್ತಾನೆ. ಇದರಿಂದ ಸಾಮಾನ್ಯವಾಗಿ 1ನೇ ಅಧ್ಯಾಯಾರ್ಥವು ಸಂಗ್ರಹಿಸಲ್ಪಟ್ಟಿತು. (2) ನಾಮಾತ್ಮಕಗಳಾದ ಪ್ರಾಣ ಆಕಾಶ ಮೊದಲಾದ ಶಬ್ದಗಳಿಂದ ಶ್ರೀಹರಿಯೇ ಹೇಳಲ್ಪಡುತ್ತಾನೆ. ಇದರಿಂದ 1ನೇ ಪಾದದ ಅರ್ಥವು ಹೇಳಲ್ಪಟ್ಟಿತು. (3) ಬೇರೆ ವಸ್ತುಗಳಲ್ಲಿ ಪ್ರಸಿದ್ಧಗಳಾದ ಆನಂದಮಯ ಪ್ರಕರಣದಲ್ಲಿರುವ ಆನಂದಮಯ ಮತ್ತು ಆನಂದಮಯವಿಶೇಷಣಗಳಾದ, ಎಲ್ಲಾ ಶಬ್ದಗಳಿಂದಲೂ, ಪರಿಪೂರ್ಣ ಆನಂದಸ್ವರೂಪನಾದ, (ಏಕಃ) ತನ್ನ ಅವಯವಾದಿಗಳಿಂದ ಭೇದವಿಲ್ಲದಿರುವ ಶ್ರೀಹರಿಯೇ, ಹೇಳಲ್ಪಡುತ್ತಾನೆ. ವಿಕಾರವುಳ್ಳ ಪ್ರಕೃತ್ಯಾದಿಗಳು ಹೇಳಲ್ಪಡುವುದಿಲ್ಲ. (4) ಅಥವಾ ಕೋಶಾದಿಗಳಲ್ಲಿ ಪ್ರಸಿದ್ಧಗಳಾದ, ಗುಣಸಾಮಾನ್ಯ ವಾಚಕಗಳಾದ ಅನ್ನಮಯಾದಿ ಶಬ್ದಗಳಿಂದ, ಶ್ರೀಹರಿಯೊಬ್ಬನೇ, ಪೂರ್ಣಾನಂದರೂಪ ಗುಣಗಳಿರುವುದರಿಂದ, ಹೇಳಲ್ಪಡುತ್ತಾನೆ. (5) ಅಥವಾ ಎಲ್ಲವೂ ಅವನ ಅಧೀನವಾದುದರಿಂದ ಒಬ್ಬನೇ ಅನೇಕ ಶಬ್ದಗಳಿಂದ ಹೇಳಲ್ಪಡುತ್ತಾನೆ. (6) ಅಥವಾ ಮುಕ್ತಿಗೆ ಕಾರಣವಾದುದನ್ನು ತಿಳುಹಿಸಿಕೊಡುವಿಕೆ, ಮುಕ್ತರಿಂದ ಹೊಂದಲ್ಪಡುವಿಕೆ, ಜ್ಯೇಷ್ಠತ್ವ, ದೇವತೆಗಳಿಂದ ಸೇವಿಸಲ್ಪಡುವಿಕೆ, ಜಗತ್ತನ್ನು ಪ್ರೇರಿಸುವಿಕೆ ಮೊದಲಾದ ಆಯಾಯ ಪ್ರಕರಣಗಳಲ್ಲಿರುವ ಎಲ್ಲಾ ಗುಣಗಳಿದ್ದುದರಿಂದಲೂ ಶ್ರೀಹರಿಯೇ ಹೇಳಲ್ಪಡುತ್ತಾನೆ. **''ಓಂ ಆನಂದಮಯೋಽಭ್ಯಾಸಾತ್ ಓಂ ''** ಎಲ್ಲಾ ಪ್ರಕರಣಗಳಲ್ಲಿಯೂ 'ಯೇಽನ್ನಂ ಬ್ರಹ್ಮೋಪಾಸತೇ' ಇತ್ಯಾದಿ ರೂಪದಿಂದ ಬ್ರಹ್ಮಶಬ್ದವು

ಶ್ರುತವಾದುದರಿಂದ, ಆನಂದಮಯ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನೇ. **ಆನಂದಮಯಾಧಿಕರಣವು.** ॥ 6 ॥

**ಅಂತರಃ:-** ಅಂತರ್ಗತನು, ಅಂದರೆ- ''**ಅಂತಃ ಪ್ರವಿಷ್ಟಂ ಕರ್ತಾರಮೇತಂ**'' ಇತ್ಯಾದಿ ವೇದ ಗಳಿಂದ ಸರ್ವಾಂತರ್ಯಾಮಿಯೆಂದು ಶಾಸ್ತ್ರಪ್ರಸಿದ್ಧನಾದ ಒಬ್ಬ ವಿಷ್ಣುವೇ ಲೋಕವ್ಯವಹಾರದಿಂದ ಇಂದ್ರಾದಿ ದೇವತಗಳಲ್ಲಿ ಪ್ರಸಿದ್ಧಗಳಾದ 'ಇಂದ್ರ' ಮೊದಲಾದ ನಾಮಗಳಿಂದ ಹೇಳಲ್ಪಡುತ್ತಾನೆ. ''**ಸಮುದ್ರೇऽಂತಃ**'' ಸಮುದ್ರದೊಳಗೆ ಇರುವವನನ್ನು ಜ್ಞಾನಿಗಳು ತಿಳಿಯುತ್ತಾರೆ. ''**ಯಸ್ಯಾಂಡಕೋಶಂ ಶುಷ್ಮಮಾಹುಃ**'' ಬ್ರಹ್ಮಾಂಡಕೋಶವನ್ನು ಯಾರ ವೀರ್ಯವನ್ನಾಗಿ ಜ್ಞಾನಿಗಳು ಹೇಳುತ್ತಾರೋ, ಇದು ಮೊದಲಾದ ಪ್ರಕರಣಗಳಲ್ಲಿರುವ ಸಮುದ್ರಾಂತಸ್ಥತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ಎಲ್ಲಾ ಗುಣಗಳು ಇದ್ದುದರಿಂದ, ಅಥವಾ (ಸರ್ವಗುಣತ್ವತಃ) ಇಂದ್ರಾದಿಗಳಿಗೂ ಸ್ವಾಮಿಯಾದುದರಿಂದ, (ಅಂತರಃ) ಅವರಿಂದ ಭಿನ್ನನೆಂದೇ ''**ಇಂದ್ರಸ್ಯಾತ್ಮಾ ನಿಹಿತಃ**'' ಇಂದ್ರನ ಅಂತರ್ಯಾಮಿಯು ಸರ್ವರ ಹೃದಯಗಳಲ್ಲಿ ನಿಹಿತನಾದನು. ''**ವಾಯೋರಾತ್ಮಾನಂ**'' ವಾಯುವಿನ ಅಂತರ್ಯಾಮಿಯನ್ನು ಜ್ಞಾನಿಗಳು ತಿಳಿಯುತ್ತಾರೆ, ಇತ್ಯಾದಿಗಳಲ್ಲಿ ಹೇಳಲ್ಪಡುತ್ತಾನೆ. ಅಥವಾ ಇಂದ್ರ ಮೊದಲಾದ ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತಗಳಾದ (ಅಂದರೆ- ಆಯಾಯ ಶಬ್ದಗಳಿಂದ ಹೇಳಲ್ಪಡುವ) ಎಲ್ಲಾ ಗುಣಗಳಿದ್ದುದರಿಂದಲೂ, ಸರ್ವಸ್ವತಂತ್ರನಾದುದರಿಂದ ಶ್ರೀಹರಿಯೇ ಹೇಳಲ್ಪಡುತ್ತಾನೆ. ''**ಓಂ ಅಂತಸ್ತದ್ಧರ್ಮೋಪದೇಶಾತ್ ಓಂ**'' ಸಮುದ್ರಸ್ಥತ್ವ ಮೊದಲಾದ ಬ್ರಹ್ಮಧರ್ಮಗಳನ್ನು ಹೇಳಿರುವುದ ರಿಂದ, ''**ಅಂತಃಪ್ರವಿಷ್ಟಂ ಕರ್ತಾರಂ**'' ''**ಅಂತಶ್ಚಂದ್ರಮಸಿ ಮನಸಾ ಚರಂತಂ**'' ಇತ್ಯಾದಿ ಶ್ರುತಿಗಳಲ್ಲಿ ಹೃದಯದಲ್ಲಿಯೂ ಚಂದ್ರಾದಿಗಳಲ್ಲಿಯೂ ಅಂತರ್ಗತನೆಂದು ಹೇಳಲ್ಪಟ್ಟವನು ಬ್ರಹ್ಮನೇ. ಇಂದ್ರಾದಿ ಗಳಲ್ಲ. **ಅಂತಸ್ಥತ್ವಾಧಿಕರಣವು** ॥ 7 ॥

ಖವತ್=ಆಕಾಶಪದವಾಚ್ಯತ್ವ(ಆಕಾಶಪದದಿಂದ ಹೇಳಲ್ಪಡುವಿಕೆ)ವಿದ್ದಂತೆಯೇ (ಪ್ರಣೇತಾ=) ಪ್ರಾಣಪದವಾಚ್ಯನು. (ಪ್ರಾಣನೆನಿಸುವನು) ಅಂದರೆ, ಸರ್ವೇಂದ್ರಿಯಪ್ರೇರಕನೆಂದರ್ಥ. (ಅಧಿ.8.9.) ಅಥವಾ ಆಕಾಶದಂತೆಯೇ, ಶ್ರೀಹರಿಯು, (ಅಂತರಃ) ಅವಕಾಶವುಳ್ಳವನು. (ಅಂದರೆ- ಹೇಗೆ ಆಕಾಶವು ಪ್ರಾಣಿಗಳ ಸಂಚಾರಾದಿಗಳಿಗೆ ಅನುಕೂಲವಾದ ಅವಕಾಶವುಳ್ಳದ್ದೋ, ಹಾಗೆಯೇ ವಿಷ್ಣ್ವಾಖ್ಯ ಆಕಾಶನೂ ಪ್ರಾಣಿಗಳ ಸಂಚಾರಾದಿಗಳಿಗೆ ಅನುಕೂಲವಾದ ಅವಕಾಶವನ್ನು ಕೊಡುವವನು. ಬೇರೆ ವಸ್ತುಗಳಲ್ಲಿ ಪ್ರಸಿದ್ಧಗಳಾದ ಆಕಾಶ ಮೊದಲಾದ ಅಧಿಭೂತಗಳಲ್ಲಿರುವ ಎಲ್ಲಾ ಶಬ್ದಗಳಿಂದಲೂ ಶ್ರೀವಿಷ್ಣುವೇ ಹೇಳಲ್ಪಡುತ್ತಾನೆ. ಭೂತಾಕಾಶಾದಿಗಳು ಹೇಳಲ್ಪಡುವುದಿಲ್ಲ. ಏಕೆಂದರೆ- ''**ಸ ಏಷಃ ಪರೋವರೀಯಾನ್ ಉದ್ಗೀಥಃ ಸ ಏಷಃ ಅನಂತಃ ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್**'' ಆ ಈ ಪರಮಾತ್ಮನು ಸರ್ವೋತ್ತಮನು, ಸರ್ವೋಚ್ಚನೆಂದು ಗಾನಮಾಡಲ್ಪಟ್ಟವನು, ನಾಶರಹಿತನು, ಶ್ರೀಹರಿಯು ಆನಂದರೂಪನಾಗದಿದ್ದರೆ ಯಾರು ತಾನೇ ಚೇಷ್ಟೆಯನ್ನು ಮಾಡಿಯಾರು, ಚೆನ್ನಾಗಿ ಚೇಷ್ಟೆಯನ್ನು ಮಾಡಿಯಾರು. ಇವೇ ಮೊದಲಾದ ಎಲ್ಲಾ ಗುಣಗಳಿದ್ದುದರಿಂದ, ಭೂತಾಕಾಶದಲ್ಲಿ ಆ ಗುಣಗಳು ಕೂಡದಿರುವುದರಿಂದ, ಅಥವಾ ಆಕಾಶಾದಿ ಶಬ್ದಗಳ ಧರ್ಮವಾದ ಅವಕಾಶದಾತೃತ್ವ ಮೊದಲಾದ ಎಲ್ಲಾ ಗುಣಗಳಿದ್ದುದರಿಂದ, ''**ಓಂ ಆಕಾಶಸ್ತಲ್ಲಿಂಗಾತ್ ಓಂ**'' ಪರೋವರೀಯತಸ್ತ್ವ ಮೊದಲಾದ ವಿಷ್ಣುಲಿಂಗಗಳಿದ್ದುದರಿಂದ, ''ಆಕಾಶ ಇತಿ ಹೋವಾಚ'' ಎಂದು ಛಾಂದೋಗ್ಯದಲ್ಲಿರುವ ಆಕಾಶನು ಶ್ರೀಹರಿಯೇ. **ಆಕಾಶಾಧಿಕರಣವು** ॥ 8 ॥

**ಪ್ರಣೇತಾ:-** ಸರ್ವರ ಜೀವನಕ್ಕೂ ಕಾರಣನಾದ ಮುಖ್ಯನಾದ ವಿಷ್ಣುವೇ, ಪ್ರಾಣ ಮೊದಲಾದ ಆಧ್ಯಾತ್ಮದಲ್ಲಿರುವ, ಇತರ ವಸ್ತುಗಳಲ್ಲಿ ಪ್ರಸಿದ್ಧಗಳಾದ ಎಲ್ಲಾ ಶಬ್ದಗಳಿಂದಲೂ ಹೇಳಲ್ಪಡುತ್ತಾನೆ. ಮುಖ್ಯಪ್ರಾಣಾದಿಗಳು ಹೇಳಲ್ಪಡುವುದಿಲ್ಲ, ಏಕೆಂದರೆ- **'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ'** ''**ಭರ್ತಾ ಸನ್ ಭ್ರಿಯಮಾಣಃ**'' ಹೀಗೆ ಶ್ರೀಶಬ್ದದಿಂದ ಹೇಳಲ್ಪಡುವ ಶ್ರೀಪತಿತ್ವವು, ಲಕ್ಷ್ಮೀಪತಿತ್ವವು, ಜಗತ್ಪೋಷಕತ್ವ ಇವು ಮೊದಲಾದ ಈ ಪ್ರಕರಣದಲ್ಲಿ ಹೇಳಿರುವ ಎಲ್ಲಾ ಗುಣಗಳಿದ್ದುದರಿಂದ, ಮತ್ತು ''**ಯದ್ದೇವಾನ್ ಪ್ರಾಣಯೋ ನವ**'' ಯಾವ ಕಾರಣದಿಂದ ಇಂದ್ರಿಯಗಳಿಗೆ ಅಭಿಮಾನಿಗಳಾದ ಸೋಮಾದಿದೇವತೆಗಳನ್ನು ಚೇಷ್ಟಾಯುಕ್ತರನ್ನಾಗಿ ಮಾಡುತ್ತಿರುವಿ ಎಂಬ ವಾಕ್ಯಖಂಡದಲ್ಲಿ ಹೇಳಲ್ಪಟ್ಟ ಎಲ್ಲಾ ಪ್ರಾಣಿಗಳ ಜೀವನಕ್ಕೆ ಕಾರಣತ್ವಾದಿರೂಪವಾದ ಗುಣವಿದ್ದುದರಿಂದ, ಇತರರಲ್ಲಿರತಕ್ಕ ಗುಣವನ್ನು ಕುರಿತು ಸ್ವಾತಂತ್ರ್ಯವಿದ್ದುದರಿಂದಲೂ, ''**ಓಂ ಅತ ಏವ ಪ್ರಾಣಃ ಓಂ**'' ಶ್ರೀಲಕ್ಷ್ಮೀಪತಿತ್ವ ಲಿಂಗವಿದ್ದುದರಿಂದ, ''**ತದ್ವೈ ತ್ವಂ ಪ್ರಾಣೋ ಅಭವಃ**'' ಎಂದು ಹೇಳಲ್ಪಟ್ಟ ಪ್ರಾಣನು ಬ್ರಹ್ಮನೇ. **ಪ್ರಾಣಾಧಿಕರಣವು** ॥ 9 ॥

**ಜ್ಯೋತಿಃ ಇತ್ಯಾದ್ಯೈಃ : 'ಜ್ಯೋತಿಃ'** ಎನ್ನುವುದೇ ಮೊದಲಾದ, ಸೂಕ್ತಗಳಲ್ಲಿ ಹೇಳಿರುವ ಬೇರೆ ವಸ್ತುಗಳಲ್ಲಿ ಪ್ರಸಿದ್ಧಗಳಾದ, ಎಲ್ಲಾ ಶಬ್ದಗಳಿಂದಲೂ, ಜ್ಯೋತಿಃ=ಹುಟ್ಟಿದ್ದಕ್ಕೆಲ್ಲಾ ಆಶ್ರಯನು ಅಥವಾ ಪ್ರಕಾಶರೂಪನು. ಆದುದರಿಂದ ಜ್ಯೋತಿರ್ನಾಮಕವಾದ ಒಬ್ಬ ಶ್ರೀಹರಿಯೇ ಹೇಳಲ್ಪಡುತ್ತಾನೆ. ಅಗ್ನ್ಯಾದಿಗಳು ಹೇಳಲ್ಪಡುವುದಿಲ್ಲ, ಏಕೆಂದರೆ- (ಸರ್ವಗುಣತ್ವತಃ) ಕಿವಿ, ಕಣ್ಣು ಮನಸ್ಸುಗಳಿಗೆ ವಿದೂರತ್ವರೂಪವಾದ (ಅಂದರೆ, ಅಪರಿಚ್ಛಿನ್ನವೈಭವರೂಪವಾದ) ಎಲ್ಲಾ ಗುಣಗಳಿದ್ದುದರಿಂದಲೂ, ಮತ್ತು ಪ್ರಕಾಶರೂಪತ್ವಾದಿರೂಪವಾದ ಜ್ಯೋತಿರಾದಿಶಬ್ದಗಳ ಪ್ರವೃತ್ತಿಗೆ ನಿಮಿತ್ತ (ಧರ್ಮ) ವಾದ ಎಲ್ಲಾ ಗುಣಗಳಿದ್ದುದರಿಂದಲೂ, ಇತರರಲ್ಲಿರತಕ್ಕುದನ್ನು ಕುರಿತು ಸ್ವಾತಂತ್ರ್ಯವಿದ್ದುದರಿಂದಲೂ, ''**ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ**'' ಕರ್ಣಾದಿ ಸರ್ವೇಂದ್ರಿಯಗಳಿಗೆ ವಿದೂರನಾಗಿದ್ದಾನೆ ಎಂಬ ಲಿಂಗದಿಂದ ''**ಜ್ಯೋತಿರ್ಹೃದಯ ಆಹಿತಂ**'' ಎಂದು ಹೇಳಲ್ಪಟ್ಟ ಜ್ಯೋತಿಸ್ಸು ಬ್ರಹ್ಮನೇ. **ಜ್ಯೋತಿರಧಿಕರಣ** ॥10॥

ಅಗ್ನ್ಯಾದಿಸೂಕ್ತ ಉಪನಿಷತ್ತುಗಳಲ್ಲಿರುವ ಜ್ಯೋತಿಃಶಬ್ದ ಗಾಯತ್ರೀ ಮೊದಲಾದ ಅಧಿವೇದಗಳಲ್ಲಿರುವ ಇತರ ವಸ್ತುಗಳಲ್ಲಿ ಪ್ರಸಿದ್ಧಗಳಾದ ಎಲ್ಲಾ ಶಬ್ದಗಳಿಂದಲೂ ಒಬ್ಬ ವಿಷ್ಣುವೇ ಹೇಳಲ್ಪಡುತ್ತಾನೆ. ಗಾಯತ್ರೀ ಶಬ್ದದಿಂದ ಹೇಳಲ್ಪಡುವುದು ಆರು ಅಕ್ಷರಗಳುಳ್ಳ ಛಂದಸ್ಸಲ್ಲ, ಏಕೆಂದರೆ- ''**ಗಾಯತಿ ಚ ತ್ರಾಯತಿ ಚ**'' ಎಲ್ಲಾ ವೇದಗಳನ್ನು ಪ್ರಥಮದಲ್ಲಿ ಉಚ್ಚರಿಸುವವನು ಸರ್ವರನ್ನು ರಕ್ಷಿಸುವವನು ಇತ್ಯಾದಿಗಳಿಂದ ಹೇಳಲ್ಪಟ್ಟ ಈ ಪ್ರಕರಣಗಳಲ್ಲಿರುವ ಸರ್ವವೇದಗಳ ಉಚ್ಚಾರಣ, ಸರ್ವರಕ್ಷಣರೂಪವಾದ ಗಾನ ತ್ರಾಣ ಕರ್ತೃತ್ವ ಸರ್ವೋತ್ತಮತ್ವಾದಿ ರೂಪವಾದ ಎಲ್ಲಾ ಗುಣಗಳಿದ್ದುದರಿಂದಲೂ, ಗಾಯತ್ರೀ ಮೊದಲಾದ ಅಧಿದೈವಗಳಲ್ಲಿರುವ ಆಯಾಯ ಶಬ್ದಗಳ ಪ್ರವೃತ್ತಿಗೆ ಕಾರಣವಿದ್ದುದರಿಂದಲೂ, ಇತರರಲ್ಲಿರತಕ್ಕುದನ್ನು ಕುರಿತು ಸ್ವಾತಂತ್ರ್ಯವಿದ್ದುದರಿಂದಲೂ, ಶ್ರೀಹರಿಯೊಬ್ಬನಿಗೇನೇ ಕರ್ಣಾದಿವಿದೂರತ್ವ (ಕಿವಿ ಮೊದಲಾದ ಇಂದ್ರಿಯಗಳಿಗೆ ಗೋಚರಿಸದಿರುವುದು) ದ್ರಷ್ಟೃತ್ವ (ಸರ್ವವಸ್ತುಗಳನ್ನು ನೋಡುವಿಕೆ) ಮೊದಲಾದ ಸರ್ವಗುಣಗಳಿದ್ದುದರಿಂದಲೂ, ''**ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಂ ಓಂ**'' ಗಾಯತ್ರೀಶಬ್ದವು ಛಂದಸ್ಸಿನಲ್ಲಿ ರೂಢವಾಗಿರುವುದರಿಂದ, ''**ಗಾಯತ್ರೀವಾ ಇದಂ ಸರ್ವಂ**'' ಎಂದು ಹೇಳಲ್ಪಟ್ಟದ್ದು ಗಾಯತ್ರೀ ಛಂದಸ್ಸು ಆಗಬೇಕು. ಬ್ರಹ್ಮನಲ್ಲ ಎಂದರೆ, ಹಾಗೆ ಹೇಳಕೂಡದು. ''**ಗಾಯತಿ ಚ ತ್ರಾಯತಿ ಚ**'' ಎಂದು ಗಾನ ತ್ರಾಣಗಳನ್ನು ಮಾಡುವಿಕೆ ಇವು ಮೊದಲಾದ ಲಿಂಗಗಳನ್ನು

ಬೋಧಿಸಿ ಕೊಡತಕ್ಕ ಶ್ರುತಿಯು ಇದೆ. ಹಾಗೆ ಉಪಾಸನಾ ಮಾಡುವುದಕ್ಕೋಸ್ಕರ ''**ಗಾಯತ್ರೀ ವಾ ಇದಂ ಸರ್ವಂ**'' ಎಂದು ಹೇಳಿರುವುದರಿಂದ. **ಗಾಯತ್ರ್ಯಧಿಕರಣವು.** ॥ 11 ॥

ಮುಖ್ಯಪ್ರಾಣ ಮೊದಲಾದ ಅರ್ಥವಿರುವ ಪ್ರಾಣ ಮೊದಲಾದ, ಇತರ ವಸ್ತುಗಳಲ್ಲಿ ಪ್ರಸಿದ್ಧಗಳಾದ ಎಲ್ಲಾ ಶಬ್ದಗಳಿಂದಲೂ ವಿಷ್ಣು ಒಬ್ಬನೇ ಹೇಳಲ್ಪಡುತ್ತಾನೆ. ಮುಖ್ಯಪ್ರಾಣ ಮೊದಲಾದ ಅನೇಕರು ಹೇಳಲ್ಪಡುವುದಿಲ್ಲ, ಏಕೆಂದರೆ- ''**ತಂ ದೇವಾಃ ಪ್ರಾಣಯಂತ**'' ಆ ಪ್ರಾಣನನ್ನು ದೇವತೆಗಳು ಶಿಷ್ಯಾದಿಗಳಿಗೆ ಚೆನ್ನಾಗಿ ಉಪದೇಶಿಸಿದರು. ''**ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ**'' ದೇವತೆಗಳು ಆತನನ್ನು ಭೂತಿಯೆಂದು ಉಪಾಸನಾ ಮಾಡಿದರು. ಇತ್ಯಾದಿಗಳಿಂದ ಹೇಳಲ್ಪಟ್ಟ ಈ ಪ್ರಕರಣದಲ್ಲಿರುವ ದೇವೋಪಾಸ್ಯತ್ವ (ದೇವತೆಗಳಿಂದ ಸೇವಿಸಲ್ಪಡುವಿಕೆ) ಮೊದಲಾದ ಸರ್ವಗುಣಗಳಿದ್ದುದರಿಂದಲೂ, ಸರ್ವಜೀವನ ಹೇತುತ್ವಾದಿರೂಪವಾದ ಪ್ರಾಣ ಮೊದಲಾದ ಆಯಾಯ ಶಬ್ದಗಳ ಪ್ರವೃತ್ತಿಗೆ ಕಾರಣವಾದ ಗುಣವಿದ್ದುದರಿಂದಲೂ, ಇತರರಲ್ಲಿರತಕ್ಕುದನ್ನು ಕುರಿತು ಸ್ವಾತಂತ್ರ್ಯವಿದ್ದುದರಿಂದಲೂ, ''**ಬ್ರಹ್ಮ ತತಮಂ**'' ನಾರಾಯಣನು ವಾಸುದೇವರೂಪನಾದ ತನ್ನನ್ನು ವ್ಯಾಪ್ತನನ್ನಾಗಿ ತಿಳಿದನು, ''**ಏತಯಾ ದ್ವಾರಾ ಪ್ರಾಪದ್ಯತ**'' ಶ್ರೀಹರಿಯು ಸುಷುಮ್ನಾ ನಾಡಿಯಿಂದ ಹೃದಯವನ್ನು ಪ್ರಾಪಿಸಿದನು, ಎಂದು ವ್ಯಾಪ್ತಿ (ಸರ್ವತ್ರ ವ್ಯಾಪಿಸಿಕೊಂಡಿರುವಿಕೆ) ಅಂತಸ್ಥತ್ವಗುಣಗಳನ್ನು ಹೇಳಿದರಿಂದಲೂ, ಸರ್ವಶಬ್ದವಾಚ್ಯನು ಶ್ರೀಹರಿಯೇ ''**ಓಂ ಪ್ರಾಣಸ್ತಥಾನುಗಮಾತ್ ಓ**'' ಬ್ರಹ್ಮ ಶಬ್ದ, ದೇವೋಪಾಸ್ಯತ್ವ ಮೊದಲಾದ ಶ್ರುತಿಲಿಂಗಗಳು ಈ ಪ್ರಕರಣದಲ್ಲಿ ಅನೇಕಾವರ್ತಿ ಇದ್ದುದರಿಂದ, ''**ತಾ ವಾ ಏತಾ ಋಚಃ**'' ಎಂಬ ಶ್ರುತಿಯಲ್ಲಿರುವ ಪ್ರಾಣನೂ ಬ್ರಹ್ಮನೇ. ಇಂದ್ರ, ಜೀವ, ಮುಖ್ಯಪ್ರಾಣರಲ್ಲ, **ಅಂತಿಮಪ್ರಾಣಾಧಿಕರಣವು** ॥ 12 ॥

**ಪ್ರಥಮಾಧ್ಯಾಯದ ಪ್ರಥಮಪಾದಾರ್ಥವು ಸಮಾಪ್ತವಾಯಿತು.**

## ಅಧ್ಯಾಯ ॥ ೧ ॥ ಪಾದ ॥ ೧ ॥ ಶ್ಲೋಕ ॥ ೩ ॥

ಹೀಗೆ ಸರ್ವಶಾಖೆಗಳ ಅನೇಕ ವಾಕ್ಯಗಳಲ್ಲಿರುವ ಬೇರೆ ವಸ್ತುಗಳಲ್ಲಿ ಪ್ರಸಿದ್ಧಗಳಾದ ಎಲ್ಲಾ ನಾಮಗಳಿಂದಲೂ ಒಬ್ಬ ವಿಷ್ಣುವೇ ಆಯಾಯ ಪ್ರಕರಣಗಳಲ್ಲಿರುವ ಅನೇಕ ಲಿಂಗಗಳಿಂದ ಹೇಳಲ್ಪಡುತ್ತಾನೆ ಎಂದು 1ನೇ ಪಾದದಲ್ಲಿ ಹೇಳಲ್ಪಟ್ಟಿತು. ಈಗ ಆ ಲಿಂಗಗಳಲ್ಲಿ ಕೆಲವು ಲಿಂಗಗಳಿಗೆ ಈಶ್ವರನಲ್ಲಿ ಪ್ರಸಿದ್ಧಿಯಿದ್ದರೂ ಎಲ್ಲಾ ಲಿಂಗಗಳಿಗೆ ಪ್ರಸಿದ್ಧಿಯಿಲ್ಲವೆಂದರೆ, ಅದಕ್ಕಾಗಿ ಈ ಲಿಂಗ (2ನೇ)ಪಾದವು ಪ್ರವೃತ್ತವಾಗಿದೆ-

**ಮೂಲ ॥ ಸರ್ವಗೋಽತ್ತಾ ನಿಯಂತಾ ಚ ದೃಶ್ಯತ್ವಾದ್ಯುಜ್ಝಿತಃ ಸದಾ ।**
**ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ ಸರ್ವೈರ್ಯುತಃ ಸ ಹಿ ॥ ೪ ॥**

**ಅರ್ಥ ॥ ಸರ್ವಗಃ**=ಸರ್ವತ್ರವ್ಯಾಪ್ತನು, **ಅತ್ತಾ**=ಚರಾಚರಗಳೆಲ್ಲವನ್ನೂ ಸಂಹರಿಸುವವನು. ಮತ್ತು ಶುಭಕರ್ಮ ಫಲವನ್ನು ಭೋಗಿಸುವವನು. **ನಿಯಂತಾ ಚ**=ಪೃಥಿವ್ಯಾದಿ ದೇವತೆಗಳಿಗೆ ನಿಯಾಮಕನು. **ದೃಶ್ಯತ್ವಾದ್ಯುಜ್ಝಿತಃ**=ಯಾವಾಗಲೂ ದೃಶ್ಯತ್ವಾದಿಗಳಿಂದ ವಿರಹಿತನು, ಅಂದರೆ- ಅದೃಶ್ಯತ್ವಾದಿ ಗುಣಗಳುಳ್ಳವನು. **ವಿಶ್ವಜೀವಾಂತರತ್ವಾದ್ಯೈಃ**=(ಸರ್ವಜೀವರೊಳಗೆ ನಿಯಮಿಸಿ ಕೊಂಡಿರುವಿಕೆ) ಮೊದಲಾದ, **ಸರ್ವೈಃ ಲಿಂಗೈಃ**=ಸರ್ವಲಿಂಗಗಳಿಂದಲೂ, ನಾಮಗಳಿಂದಲೂ,

**ಯುತಃ**=ಯುಕ್ತನು, **ಸಃ**=ಒಬ್ಬ ವಿಷ್ಣುವೇ, **ಹಿ**=ಏತಕ್ಕೆಂದರೆ ಜ್ಞಾಪಕಪ್ರಮಾಣಗಳಿಂದ ಕೂಡಿರುವವನು, ಆ ಕಾರಣ ಸರ್ವಲಿಂಗಾತ್ಮಕ ಶಬ್ದ (ಸಮನ್ವೇತವ್ಯ ಶಬ್ದಗಳ ಅವಯವಾರ್ಥಗಳೇ, ಪ್ರವೃತ್ತಿ ನಿಮಿತ್ತವಾಗಿ ಉಳ್ಳವುಗಳು, ಅಂದರೆ- ಯೌಗಿಕಗಳು,) ಗಳಿಂದ ಹೇಳಲ್ಪಡುವವನು ಒಬ್ಬ ವಿಷ್ಣುವೇ.

**ತಾತ್ಪರ್ಯ ॥** (1) ಯಾರು ಪೂರ್ವಪಾದದಲ್ಲಿ ಎಲ್ಲಾ ನಾಮಗಳಿಂದ ಹೇಳಲ್ಪಟ್ಟಿದ್ದಾನೋ ಆ ಒಬ್ಬ ವಿಷ್ಣುವೇ, ಬೇರೆ ವಸ್ತುಗಳಲ್ಲಿ ಪ್ರಸಿದ್ಧಗಳೂ, ಭಗವಂತನಲ್ಲಿ ಅಪ್ರಸಿದ್ಧಗಳೂ (ವಿಪ್ರತಿಪನ್ನಗಳೂ) ವಿಷ್ಣುವಿನ ಧರ್ಮಗಳೆಂದು ಪ್ರಮಾಣಗಳಿಂದ ಪ್ರಸಿದ್ಧಗಳೂ, ಆಯಾಯ ಪ್ರಕರಣದಲ್ಲಿರುವ ನಿರವಕಾಶಗಳೂ. ನಿಶ್ಚಿತಗಳೂ ಆದ ಲಿಂಗಗಳಿಂದ, (ನಿರವಕಾಶ ಶ್ರುತ್ಯಾದಿಗಳಿಂದಲೂ) ಯುಕ್ತನೆಂದು, ಈ ಪಾದದಲ್ಲಿ ಸೂತ್ರಕಾರರಿಂದ ಪ್ರತಿಪಾದಿಸಲ್ಪಡುತ್ತಾನೆ. ಪ್ರಮಾಣಪ್ರಸಿದ್ಧವು. ಅಂದರೆ- ಈ ಪಾದದಲ್ಲಿ ವಿಪ್ರತಿಪನ್ನಗಳಾದ ಎಲ್ಲಾ ಲಿಂಗಗಳಿಗೆ ಸಮನ್ವಯವನ್ನು ಹೇಳುತ್ತಾರೆ-

**ಸರ್ವಗಃ**- ಯಾವ ಕಾರಣದಿಂದ ಎಲ್ಲಾ ಲಿಂಗಗಳಿಂದಲೂ (ಅಂದರೆ- ''**ಏತಮೇವ ಬ್ರಹ್ಮ**'' ''**ಅಶರೀರಃ ಪ್ರಜ್ಞಾತ್ಮಾ**'' ''**ಸ ಯೋಽತೋಽಶ್ರುತೋಽಗತೋಽಮತಃ**'' ''**ಆತ್ಮಾನಂ ಪರಸ್ಮೈ ಶಂಸತಿ**'' ಇವನನ್ನೇ ಬ್ರಹ್ಮನೆಂದು ಹೇಳುತ್ತಾರೆ. ಭೌತಿಕ ಶರೀರವಿಲ್ಲದವನು, ಜ್ಞಾನಸ್ವರೂಪನು, ಯಾವ ಶ್ರೀಹರಿಯು ವ್ಯಾಪ್ತನು, ಬೇರೆಯವರಿಂದ ಸಂಪೂರ್ಣವಾಗಿ ಕೇಳಲ್ಪಡದಿದ್ದವನು, ಹೊಂದಲ್ಪಡದಿರುವವನು, ವಿಚಾರಿಸಲ್ಪಡದಿರುವವನು, ಯಾವ ಪುರುಷನು ವ್ಯಾಪ್ತನಾದ ಶ್ರೀಹರಿಯಲ್ಲಿ ಆಚಾರ್ಯ ಪಿತೃಗಳಿಂದ ಬೇರೆಯವರು ಮಾಡತಕ್ಕ ಮಹಾವ್ರತಾಖ್ಯ ಯಜ್ಞದಲ್ಲಿ ಬೃಹತೀಸಹಸ್ರದಿಂದ ಸ್ತುತಿಸುವನೋ, ಆತನ ವಚನಗಳು ನಿರರ್ಥಕಗಳಾಗುತ್ತವೆ.' ಇತ್ಯಾದಿಗಳಿಂದ ಹೇಳಲ್ಪಟ್ಟ ಸಾವಧಾರಣವಾದ ಬ್ರಹ್ಮಶಬ್ದಾರ್ಥತ್ವವು, ಅಶರೀರತ್ವವು, ಅಶ್ರುತತ್ವಾದಿಯು, ಜೀವಕರ್ತೃಕಸ್ತುತಿಯು ಇವೇ ಮೊದಲಾದ ಈ ಪ್ರಕರಣದಲ್ಲಿರುವ ಲಿಂಗಗಳಿಂದ ಕೂಡಿದವನೋ, ಆದಕಾರಣ ''**ಏತಮಸ್ಯಾಂ**'' ಇತ್ಯಾದಿಗಳಿಂದ ಹೇಳಲ್ಪಟ್ಟ (ಸರ್ವಗಃ=) ಎಲ್ಲಾ ಪ್ರಾಣಿಗಳ ಹೃದಯಗುಹೆಗಳಲ್ಲಿರುವ, (ಸಃ=)ವ್ಯಾಪ್ತನೆಂದು ಹೇಳಲ್ಪಟ್ಟವನು, ಒಬ್ಬ ವಿಷ್ಣುವೇ. ಆದಿತ್ಯನಾಗಲೀ, ಎಲ್ಲಾ ಜೀವರಾಗಲೀ ಆಗಲಾರರು. ''**ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ**'' ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾದ ಬ್ರಹ್ಮಶಬ್ದಕ್ಕೇನೇ ''**ಏತಮೇವ ಬ್ರಹ್ಮೇತ್ಯಾಚಕ್ಷತೇ**'' ಎಂದು ಉಪದೇಶಿಸಿರುವುದರಿಂದ ''**ಏತಮಸ್ಯಾಮೇತಂ ದಿವಿ**'' ಇತ್ಯಾದಿಗಳಿಂದ ಪೃಥಿವ್ಯಾದಿಗಳಲ್ಲಿ ಹೇಳಲ್ಪಟ್ಟವನು ಬ್ರಹ್ಮನೇ. ಅಧ್ಯಾ.1.ಪಾ.2. **ಸರ್ವಗತತ್ವಾಧಿಕರಣವು** ॥ 1 ॥

**ಅತ್ತಾ**- ಶುಭಕರ್ಮಫಲಗಳನ್ನು ಭೋಗಿಸುವವನು, ಅಥವಾ ''**ಸರ್ವಂ ವಾ ಅತ್ತಿ**'' ಎನ್ನುವಲ್ಲಿ ಹೇಳಲ್ಪಟ್ಟ ಅತ್ತೃಶಬ್ದದಿಂದ ವಾಚ್ಯನಾದವನು, ಮೊದಲು ಸರ್ವಸಂಹಾರಕನೆಂದು ಹೇಳಲ್ಪಟ್ಟವನು, ಒಬ್ಬ ವಿಷ್ಣುವೇ. (ಅದಿತಿಯಲ್ಲವು) ಏಕೆಂದರೆ- ಆ ಹರಿಯೇ, '**ಸರ್ವಂ ವಾ ಅತ್ತಿ**' ಎನ್ನುವಲ್ಲಿ ಹೇಳಲ್ಪಟ್ಟ ಸರ್ವಾತ್ತೃತ್ವವು, (ಸರ್ವ ವಸ್ತುಗಳನ್ನೂ ಸಂಹರಿಸುವಿಕೆಯು) ''**ನೈವೇಹ ಕಿಂಚನಾಗ್ರ ಆಸೀತ್ ಮೃತ್ಯುನೈವೇದಮಾವೃತಮಾಸೀತ್**'' ಪ್ರಲಯಕಾಲದಲ್ಲಿ ಯಾವುದೂ ಇರಲಿಲ್ಲ, ಮೃತ್ಯುವಿನಿಂದಲೇ ಆವೃತವಾಗಿ ಇರುತ್ತಿತ್ತು. ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಲಯಕಾಲದಲ್ಲಿರುವಿಕೆ, ಅಪ್ಸಂವತ್ಸರ ಸ್ರಷ್ಟೃತ್ವ ಅಂದರೆ- ''**ತಸ್ಯಾರ್ಚತ ಆಪೋಜಾಯಂತ**'' ಎಂದು ಜಲಗಳಿಗೆ ಸೃಷ್ಟಿಯು, ''**ಸ ಸಂವತ್ಸರೋಽಭವತ್**'' ಸಂವತ್ಸರನೆನ್ನುವ ಬ್ರಹ್ಮನ ಸೃಷ್ಟಿಯು, ಚತುರ್ಮುಖನನ್ನು ಸಂಹರಿಸಲಿಕ್ಕೆ ಉದ್ಯೋಗಮಾಡುವುದು ಇವು ಮೊದಲಾದ ಆ ಪ್ರಕರಣದಲ್ಲಿರುವ ಎಲ್ಲಾ ಲಿಂಗಗಳಿಂದೊಡ

ಗೂಡಿದವನು. ಆದಪ್ರಯುಕ್ತ ಹರಿಯೇ ಅತ್ತೃಶಬ್ದದಿಂದ ಹೇಳಲ್ಪಡುತ್ತಾನೆ. **''ಓಂ ಅತ್ತಾ ಚರಾಚರಗ್ರಹಣಾತ್ ಓಂ''** ಚೇತನಾಚೇತನಾತ್ಮಕ ಸರ್ವಪ್ರಪಂಚವನ್ನು ಭಕ್ಷಿಸುವುದಕ್ಕಾಗಿ ಗ್ರಹಣ ಮಾಡಿರುವುದರಿಂದ **'ಸರ್ವಂ ವಾ ಅತ್ತಿ'** ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವ ಸಂಹಾರಕನು ಶ್ರೀವಿಷ್ಣುವೇ. ಅದಿತಿಯಲ್ಲ. **ಅತ್ತೃತ್ವಾಧಿಕರಣವು** ॥ 2 ॥

**ಸರ್ವಗಃ ಅತ್ತಾ- ''ಋತಂ ಪಿಬಂತೌ ಸುಕೃತಸ್ಯ''** ಇತ್ಯಾದಿಗಳಲ್ಲಿ ಹೇಳಲ್ಪಟ್ಟವನು ಎಲ್ಲಾ ಪ್ರಾಣಿಗಳ ಶರೀರ ಗುಹೆಗಳಲ್ಲಿದ್ದು ಕರ್ಮಫಲಗಳನ್ನುಣ್ಣುವ ಸರ್ವಾತ್ತನೆಂದು ಹೇಳಲ್ಪಟ್ಟವನು ಒಬ್ಬ ವಿಷ್ಣುವೇ. ಜೀವನಲ್ಲ. ಏಕೆಂದರೆ- ಆ ಹರಿಯೇ, **''ಗುಹಾಂ ಪ್ರವಿಷ್ಟೌ'' ''ಯಃ ಸೇತುರೀಜಾನಾನಾಂ'' ''ಅಕ್ಷರಂ ಬ್ರಹ್ಮ ತತ್ಪರಂ''** ಎಂದು ಹೃದಯಗುಹಾಪ್ರವಿಷ್ಟತ್ವ, ಸೇತುತ್ವ, ಅಕ್ಷರತ್ವ ಮೊದಲಾದ ಲಿಂಗಗಳಿಂದೊಡಗೂಡಿದವನು **''ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ''** ಸುಕೃತ ಫಲವನ್ನುಣ್ಣುವವುಗಳು ಆತ್ಮಾ, ಅಂತರಾತ್ಮಾ ಎಂಬ ಬ್ರಹ್ಮರೂಪವಿಶೇಷಗಳೇ, ಜೀವೇಶ್ವರರಲ್ಲ, ಹೃದಯಗುಹೆಯನ್ನು ಪ್ರವೇಶಿಸುವಿಕೆ ಎಂಬ ಲಿಂಗದಿಂದ, ಎರಡು ಭಗವದ್ರೂಪಗಳು ಹೃದಯಗುಹೆಯಲ್ಲಿರುತ್ತವೆಂದು **''ಘರ್ಮಾ ಸಮಂತಾತ್ತ್ರಿವೃತಂ ವ್ಯಾಪತುಃ''** ಎಂಬ ಶ್ರುತಿಯಲ್ಲಿ ಹೇಳಿರುತ್ತದೆ. **ಗುಹಾಧಿಕರಣವು** ॥ 3 ॥

**ನಿಯಂತಾಚ-** ಪೃಥಿವ್ಯಾದಿ ದೇವತೆಗಳಿಗೆ ನಿಯಾಮಕನು, ಅಥವಾ ಎಲ್ಲಾ ಪ್ರಾಣಿಗಳ ಹೃದಯಗುಹೆಗಳಲ್ಲಿದ್ದು 'ಅಂತರಕ್ಷಿಣಿ' ಎಲ್ಲಾ ಪ್ರಾಣಿಗಳ ಕಣ್ಣಿನ ಒಳಗೆ ಇರುವವನಾಗಿ **''ಏಷ ವಾಮನಿಃ ಭಾಮನಿಃ''** ವಾಮಭಾಮಶಬ್ದಗಳಿಂದ ಹೇಳಲ್ಪಟ್ಟ ಸೌಂದರ್ಯ ತೇಜಸ್ಸುಗಳೇ ಪ್ರಧಾನವಾಗಿವುಳ್ಳ ಎಲ್ಲಾ ಸ್ತ್ರೀಪುರುಷರನ್ನೂ ನಿಯಮಿಸುವವನೂ, (ಸಃ=) ಸಂಪೂರ್ಣ ಆನಂದವುಳ್ಳವನೆಂದು ಹೇಳಲ್ಪಟ್ಟ ಆದಿತ್ಯನಲ್ಲಿರತಕ್ಕವನೂ, ಒಬ್ಬ ಸ್ವತಂತ್ರನಾದ ವಿಷ್ಣುವೇ. ಅಗ್ನಿಯಲ್ಲ. ಏಕೆಂದರೆ- **''ಏತದಮೃತಮಭಯಮೇತದ್ಬ್ರಹ್ಮ'' ''ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ ಏವಮೇವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ''** ಹೇಗೆ ಕಮಲಪತ್ರದಲ್ಲಿ ನೀರು ಸಂಬದ್ಧವಾಗುವುದಿಲ್ಲವೋ ಹೀಗೆಯೇ ಅಪರೋಕ್ಷಜ್ಞಾನಿಯಲ್ಲಿ ಪಾಪಕರ್ಮವು ಸಂಬದ್ಧವಾಗುವುದಿಲ್ಲ. **''ಸ ಏನಾನ್ ಬ್ರಹ್ಮ ಗಮಯತಿ''** ಮುಖ್ಯಪ್ರಾಣನು ಜ್ಞಾನಿಗಳನ್ನು ಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ, ಇತ್ಯಾದಿಗಳಿಂದ ಹೇಳಲ್ಪಟ್ಟ ಅಮೃತತ್ವ, ಅಭಯತ್ವ, ಪಾಪಕರ್ಮದ ಸಂಬಂಧವಿಲ್ಲದಿರುವಿಕೆ, ಇದು ಮೊದಲಾದ ಈ ಪ್ರಕರಣದಲ್ಲಿರುವ ಎಲ್ಲಾ ಲಿಂಗಗಳಿಂದಲೂ ಯುಕ್ತನು. **''ಓಂ ಅಂತರ ಉಪಪತ್ತೇಃ ಓಂ'' ''ಏತದಭಯಮೇತದ್ಬ್ರಹ್ಮ'** ಎಂದು ಹೇಳಲ್ಪಟ್ಟ ಅಮೃತತ್ವ, ಅಭಯತ್ವಲಿಂಗ, ಬ್ರಹ್ಮಶಬ್ದಗಳು ಶ್ರೀಹರಿಯಲ್ಲಿಯೇ ಉಪಪನ್ನವಾಗುವುದರಿಂದ, **''ಯ ಏಷೋಽಂತರಕ್ಷಿಣಿ ಪುರುಷಃ''** ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ, ಒಳಗೆ ಇದ್ದು ಕ್ರೀಡಿಸಿಕೊಂಡಿರುವನು ಬ್ರಹ್ಮನೇ, ಅಗ್ನಿಯಲ್ಲ. **ಅಂತರಾಧಿಕರಣವು** ॥ 4 ॥

**ನಿಯಂತಾ** - ಚಕ್ಷುರಾದಿಗಳಲ್ಲಿ ಅಮೃತನೆಂದು ಹೇಳಲ್ಪಟ್ಟ ಆ ವಿಷ್ಣುವೇ **''ಏಷ ತ ಆತ್ಮಾ ಅಂತರ್ಯಾಮ್ಯಮೃತಃ''** ಎನ್ನುವಲ್ಲಿ ಅಂತರ್ಯಾಮಿ ಶಬ್ದದಿಂದ ಹೇಳಲ್ಪಡುತ್ತಾ ಎಲ್ಲಾ ಪ್ರಾಣಿಗಳಲ್ಲಿ ಅಂತರ್ಗತನಾಗಿ ನಿಯಮಿಸುವವನು. ಅಭಿಮಾನಿಯಾದ ಜೀವನಲ್ಲ, ಪೃಥಿವಿಗೆ ಉಪಾದಾನ ಕಾರಣವಾದ ಪ್ರಕೃತಿಯೂ ಅಲ್ಲ. ಏಕೆಂದರೆ- **''ಯಂ ಪೃಥಿವೀ ನ ವೇದ ಪೃಥಿವೀಮಂತರಃ''** ಯಾವ ಅಂತರ್ಯಾಮಿಯನ್ನು ಪೃಥಿವೀದೇವತೆಯು ತಿಳಿಯವುದಿಲ್ಲ, ಸ್ವತಃ ನಿತ್ಯತೃಪ್ತನಾಗಿ ಪೃಥಿವಿಯನ್ನು

ನಿಯಮಿಸುತ್ತಾನೆ, ಇತ್ಯಾದಿಗಳಿಂದ ಹೇಳಲ್ಪಟ್ಟ ಪೃಥಿವ್ಯಾದ್ಯಭಿಮಾನಿದೇವತೆಗಳಿಂದ ತಿಳಿಯಲ್ಪಡದಿರುವಿಕೆ, ಅನ್ಯರನ್ನಪೇಕ್ಷಿಸದೇನೇ ಕ್ರೀಡಿಸಿಕೊಂಡಿದ್ದು ನಿಯಮಿಸುವುದು ಅಮೃತತ್ವವು ಇದು ಮೊದಲಾದ ಈ ಪ್ರಕರಣದಲ್ಲಿರುವ ಲಿಂಗಗಳಿಂದೊಡಗೂಡಿದವನು. ''**ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮ ವ್ಯಪದೇಶಾತ್ ಓಂ**'' ಅಧಿದೈವಾದಿ ಪ್ರಕರಣಗಳಲ್ಲಿ ಅಂತರ್ಯಾಮಿಸಂಬಂಧಿಯಾಗಿ ಬ್ರಹ್ಮನ ಧರ್ಮವಾದ ಪೃಥಿವ್ಯಾದಿಗಳಿಂದ ತಿಳಿಯಲ್ಪಡದಿರುವಿಕೆ ಇತ್ಯಾದಿಗಳನ್ನು ಹೇಳಿರುವುದರಿಂದ, ''**ಏಷ ತ ಆತ್ಮಾ ಅಂತರ್ಯಾಮ್ಯಮೃತಃ**'' ಎಂದು ಶ್ರುತನಾದ ಅಂತರ್ಯಾಮಿಯು ಬ್ರಹ್ಮನೇ, ಪ್ರಕೃತಿಯೂ ಅಲ್ಲ, ಜೀವರೂ ಅಲ್ಲ, **ಅಂತರ್ಯಾಮ್ಯಧಿಕರಣವು** ॥ 5 ॥

**ದೃಶ್ಯತ್ವಾದ್ಯುಜ್ಝಿತಃ**- ''**ಅದೃಶ್ಯೇ ಅನಾತ್ಮ್ಯೇ**'' ಇತ್ಯಾದಿಗಳಿಂದ ಹೇಳಲ್ಪಟ್ಟ, ಒಬ್ಬ ವಿಷ್ಣುವೇ ಯಾವಾಗಲೂ ದೃಶ್ಯತ್ವ ಮೊದಲಾದ ಧರ್ಮಗಳಿಂದ ವಿರಹಿತನು. ಅಂದರೆ, ಅದೃಶ್ಯತ್ವಾದಿ ಗುಣಗಳುಳ್ಳವನು, ಚಿತ್ಪ್ರಕೃತಿ ಮೊದಲಾದವರಲ್ಲ, ಏಕೆಂದರೆ- ''**ಅಥ ಪರಾ ಯಯಾ ತದಕ್ಷರಮಧಿಗಮ್ಯತೇ**'' ''**ಯಃ ಸರ್ವಜ್ಞಃ**'' ''**ಕರ್ತಾರಮೀಶಂ**'' ಯಾವ ಪರವಿದ್ಯೆಯಿಂದ ಅಕ್ಷರನೆನಿಸುವ ಶ್ರೀಹರಿಯು ತಿಳಿಯಲ್ಪಡುತ್ತಾನೋ, ಯಾವನು ಸಾಮಾನ್ಯವಾಗಿಯೂ ವಿಶೇಷವಾಗಿಯೂ ಸರ್ವವನ್ನೂ ತಿಳಿದವನು, ಸರ್ವಜಗತ್ಕರ್ತನು, ಸರ್ವಸ್ವಾಮಿಯು, ಎಂದು ಪರವಿದ್ಯಾವಿಷಯತ್ವ ಸರ್ವಜ್ಞತ್ವ, ಸರ್ವಸ್ವಾಮಿತ್ವ ಮೊದಲಾದ ಈ ಪ್ರಕರಣದಲ್ಲಿರುವ ಎಲ್ಲಾ ಲಿಂಗಗಳಿಂದೊಡಗೂಡಿದವನು. ದೃಶ್ಯತ್ವಾದಿಗಳಿಂದುಜ್ಝಿತನೆಂದರೆ ಸಂಪೂರ್ಣವಾಗಿ ಚಕ್ಷುಸ್ಸು, ಮನಸ್ಸು ಮೊದಲಾದವುಗಳಿಗೆ ಅವಿಷಯನು. ''**ಓಂ ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ ಓಂ**'' ''**ಯಯಾ ತದಕ್ಷರಮಧಿಗಮ್ಯತೇ**'' ಎಂದು ಋಗಾದಿ ಪರವಿದ್ಯಾವಿಷಯತ್ವರೂಪವಾದ ಧರ್ಮವನ್ನು ಹೇಳಿರುವುದರಿಂದ, ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನು ಬ್ರಹ್ಮನೇ. ಪ್ರಕೃತಿ, ಚತುರ್ಮುಖ, ರುದ್ರರಲ್ಲ, **ಅದೃಶ್ಯತ್ವಾಧಿಕರಣವು** ॥ 6 ॥

**ವಿಶ್ವಜೀವಾಂತರತ್ವಾದ್ಯೈಃ**- ಮೊದಲು ಸರ್ವಗತತ್ವಾದಿಗಳಿಂದ ಹೇಳಲ್ಪಟ್ಟ ಒಬ್ಬ ವಿಷ್ಣುವೇ, ಯೌಗಿಕ ವೈಶ್ವಾನರ ಶಬ್ದದಿಂದ ಹೇಳಲ್ಪಟ್ಟ ವಿಶ್ವಜೀವಾಂತರತ್ವ ಮೊದಲಾದ, (ಸರ್ವೈಃ ಲಿಂಗೈಃ) ಹೋಮಾಧಾರತ್ವಾದಿ ಎಲ್ಲಾ ಲಿಂಗಗಳಿಂದೊಡಗೂಡಿದವನು. ಅಂದರೆ, ವೈಶ್ವಾನರ ಅಗ್ನ್ಯಾದಿ ಶಬ್ದಗಳಿಂದಲೂ, ಆ ಸೂಕ್ತಗಳಿಂದಲೂ ಆ ವಿದ್ಯೆಗಳಿಂದಲೂ ಶ್ರೀಹರಿಯೇ ಪ್ರತಿಪಾದ್ಯನು. ಅಗ್ನ್ಯಾದಿ ದೇವತೆಗಳಾಗಲೀ, ತೇಜೋರೂಪಭೂತವಾಗಲೀ ಅಲ್ಲ, ಏಕೆಂದರೆ-''**ವೈಶ್ವಾನರಮಾತ್ಮಾನಂ**'' ಎಂದು ಆತ್ಮಶ್ರುತಿಯಿದೆ. ''**ಕೋ ನ ಆತ್ಮಾ ಕಿಂ ಬ್ರಹ್ಮ**'' ಎಂದು ಆದಿಯಲ್ಲಿದ್ದುದರಿಂದ ಇದು ಪರಬ್ರಹ್ಮಪ್ರಕರಣವಾಗಿದೆ. ''**ಅಹಂ ವೈಶ್ವಾನರೋ ಭೂತ್ವಾ**'' ಎಂದು ಗೀತಾಸಮಾಖ್ಯೆಯಿದೆ, ಇತ್ಯಾದಿಲಿಂಗಗಳಿಂದ ಯುಕ್ತನು. ''**ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ**'' ಅಗ್ನಿವಿಷ್ಣುಗಳಲ್ಲಿ ಸಾಧಾರಣವಾದ ವೈಶ್ವಾನರಶಬ್ದಕ್ಕೆ ಆತ್ಮಪದದಿಂದ ವಿಶೇಷಣವಿದ್ದುದರಿಂದ, ''**ಅಯಮಗ್ನಿರ್ವೈಶ್ವಾನರಃ**'' ಇತ್ಯಾದಿಗಳಲ್ಲಿ ಶ್ರುತನಾದ ವೈಶ್ವಾನರನು ಬ್ರಹ್ಮನೇ, ಅಗ್ನಿಯಲ್ಲ, **ವೈಶ್ವಾನರಾಧಿಕರಣವು** ॥ 7 ॥

**ಪ್ರಥಮಾಧ್ಯಾಯದ ದ್ವಿತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೧ ॥ ಪಾದ ॥ ೨ ॥ ಶ್ಲೋಕ ॥ ೪ ॥**

ಈ ಪ್ರಕಾರ ಅನ್ಯತ್ರ ಪ್ರಸಿದ್ಧಗಳಾದ ನಾಮಲಿಂಗಾತ್ಮಕಗಳಾದ ಎಲ್ಲಾ ಶಬ್ದಗಳು ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆ ಎಂದು ಸಿದ್ಧವಾದರೂ ಇತರರನ್ನೂ ಪ್ರತಿಪಾದಿಸಬಹುದಷ್ಟೆ! ''**ಏಕಃ ವಿಷ್ಣುರೇವ**'' ಒಬ್ಬ ವಿಷ್ಣುವೇ ಪ್ರತಿಪಾದಿಸಲ್ಪಡುತ್ತಾನೆ, ಎಂದು ಅವಧಾರಣವು ಕೂಡಲಾರದು ಎಂಬುವುದನ್ನು ಸಮಾಧಾನಗೊಳಿಸುವುದಕ್ಕಾಗಿ 3ನೇ ಪಾದವು ಹೊರಟಿದೆ.

**ಮೂಲ ॥ ಸರ್ವಾಶ್ರಯಃ ಪೂರ್ಣಗುಣಃ ಸೋऽಕ್ಷರಃ ಸನ್ ಹೃದಬ್ಜಗಃ ।**
**ಸೂರ್ಯಾದಿಭಾಸಕಃ ಪ್ರಾಣಪ್ರೇರಕೋ ದೈವತೈರಪಿ ॥ ೫ ॥**

**ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ ಕಂಪಕೋऽನ್ಯಶ್ಚ ಜೀವತಃ ।**
**ಪತಿತ್ವಾದಿಗುಣೈರ್ಯುಕ್ತಸ್ತದನ್ಯತ್ರ ಚ ವಾಚಕೈಃ ॥ ೬ ॥**
**ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ ॥ ೭ ॥**

**ಅರ್ಥ ॥ ಸರ್ವಾಶ್ರಯಃ**=ದ್ಯುಭ್ವಾದ್ಯಾಯತನನು, ಅಂದರೆ ಸ್ವರ್ಗ ಭೂಮ್ಯಾದಿಗಳಿಗೆ ಆಶ್ರಯನು, **ಪೂರ್ಣಗುಣಃ**=ಪರಿಪೂರ್ಣಗುಣಗಳುಳ್ಳವನು, **ಸಃ ಅಕ್ಷರಃ**=ಆ ಹರಿಯು ಅಕ್ಷರ ನೆನಿಸುವನು, ಸನ್=''**ಸದೇವ ಸೋಮ್ಯೇದಮಗ್ರ ಆಸೀತ್**'' ಎನ್ನುವ ಸೃಷ್ಟಿಸ್ಥಾನದಲ್ಲಿರುವ ಸತ್ ಶಬ್ದದ ಅರ್ಥಭೂತನು, **ಹೃದಬ್ಜಗಃ**=ಹೃದಯಕಮಲದಲ್ಲಿರುವವನು, **ಸೂರ್ಯಾದಿಭಾಸಕಃ**=ಸೂರ್ಯಾದಿ ಗಳಿಗೂ ಪ್ರಕಾಶಕೊಡುವವನು, **ಪ್ರಾಣಪ್ರೇರಕಃ**=ಪ್ರಾಣಾದಿಗಳಿಗೆ ಪ್ರೇರಕನು, **ದೈವತೈರಪಿ**=ದೇವತೆ ಗಳಿಂದಲೂ, **ವೇದ್ಯೈಃ**=ವೇದಗಳಿಂದ, **ಜ್ಞೇಯಃ**=ತಿಳಿಯಲ್ಪಡುವವನು, **ಶೂದ್ರಾದ್ಯೈಃ**=ಶೂದ್ರ ಮೊದಲಾದ ಅವರ ಜಾತಿಯವರಿಂದ, **ವೇದ್ಯೈಃ**=ವೇದಗಳಿಂದ, **ನ ಜ್ಞೇಯಃ**=ತಿಳಿಯಲ್ಪಡ ದಿರುವವನು, **ಜೀವತಃ**=ಜೀವನಿಗೆ, **ಕಂಪಕಃ**=ಚೇಷ್ಟೆಯನ್ನು ಕೊಡುವವನು, **ಅನ್ಯಃ**=ವಿಲಕ್ಷಣನು, ನಾಮಾದಿಗಳಿಲ್ಲದವನು, ಜೀವನದ್ದೆಶೆಯಿಂದ ಭಿನ್ನನು, **ಪತಿತ್ವಾದಿಗುಣೈಃ ಯುಕ್ತಃ**=ಪತಿತ್ವ ಮೊದಲಾದ ಗುಣಗಳಿಂದೊಡಗೂಡಿದವನು, **ತದನ್ಯತ್ರ ಚ ವಾಚಕೈಃ**=ಪರಮಾತ್ಮನಲ್ಲಿಯೂ, ಬೇರೆಯವ ರಲ್ಲಿಯೂ, (ಉಭಯತ್ರ) ಪ್ರಸಿದ್ಧಗಳಾದ ಅಂದರೆ ಪರಮಾತ್ಮನನ್ನೂ, ಇತರರನ್ನೂ ಪ್ರತಿಪಾದಿಸುವ, **ಸರ್ವಶಬ್ದೈಶ್ಚ**=ಲಿಂಗನಾಮಾತ್ಮಕ ಎಲ್ಲಾ ಶಬ್ದಗಳಿಂದಲೂ, **ಮುಖ್ಯತಃ**=ಮುಖ್ಯವಾಗಿ, **ಜನಾರ್ದನಃ ಏಕಃ**=ಜನಾರ್ದನನೊಬ್ಬನೇ, **ವಾಚ್ಯಃ**=ಹೇಳಲ್ಪಡುತ್ತಾನೆ. (ಇತರರು ಹೇಳಲ್ಪಡುವುದಿಲ್ಲ.)

**ತಾತ್ಪರ್ಯ ॥** (1) ವಿಷ್ಣುವಿನಲ್ಲಿಯೂ, ಇತರರಲ್ಲಿಯೂ ಪ್ರತಿಪಾದಕಗಳಾದ ಅಂದರೆ, ಉಭಯವಾಚಕಗಳಾದ ಅಥವಾ ಉಭಯತ್ರ ಪ್ರಸಿದ್ಧಿಯುಳ್ಳ, ನಾಮಲಿಂಗ ಉಭಯಾತ್ಮಕ ಶಬ್ದಗಳಿಂದ ಮುಖ್ಯವೃತ್ತಿಯಿಂದ ಜನಾರ್ದನನೊಬ್ಬನೇ ಹೇಳಲ್ಪಡುತ್ತಾನೆ. ಅಂದರೆ, ಶ್ರೀಹರಿಯಲ್ಲಿಯೂ, ಇತರರ ಲ್ಲಿಯೂ, ಪ್ರಸಿದ್ಧಗಳಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿಯೇ ಸೂತ್ರಕಾರರು ನಿರೂಪಿಸುತ್ತಾರೆ–

**ಸರ್ವಾಶ್ರಯಃ**– ''**ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ**'' ಯಾವ ಪರಮಾತ್ಮನಲ್ಲಿ ಸ್ವರ್ಗವೂ, ಪೃಥಿವಿಯೂ, ಅಂತರಿಕ್ಷವೂ, ಮನೋऽಭಿಮಾನಿಯೂ, ಇಂದ್ರಿಯಾಭಿಮಾನಿಗಳಿಂದ ಕೂಡಿಕೊಂಡು ಪ್ರವಿಷ್ಟವಾಗಿದೆಯೋ, ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಸ್ವರ್ಗ, ಭೂಮಿ ಮೊದಲಾದವುಗಳಿಗೂ ಆಶ್ರಯನಾದವನು ಒಬ್ಬ ಜನಾರ್ದನನೇ. ಆದಕಾರಣ,

(ಅನ್ಯತ್ರ ಚ ವಾಚಕೈಃ=) **''ತಮೇವೈಕಂ ಜಾನಥ''** ಇತ್ಯಾದಿಗಳಿಂದ ಇತರರನ್ನು ಹೇಳುವವುಗಳೆಂದು ತೋರಿದಾಗ್ಯೂ, ಎಲ್ಲಾ ಶಬ್ದಗಳಿಂದಲೂ, ಮುಖ್ಯವೃತ್ತಿಯಿಂದ ಒಬ್ಬ ಜನಾರ್ದನನೇ ಹೇಳಲ್ಪಡುತ್ತಾನೆ. ಪ್ರಕೃತಿ ಮೊದಲಾದವರು ಹೇಳಲ್ಪಡುವುದಿಲ್ಲವು. (ಏಕೆಂದರೆ-) ಸರ್ವಾಶ್ರಯನಾದ ವಿಷ್ಣುವೇ ಎಲ್ಲಾ ಹೇತುಗಳಿಂದ ಯುಕ್ತನು, ಅಂದರೆ– **''ಜಾನಥ ಆತ್ಮಾನಂ''** ಇತ್ಯಾದಿಗಳಿಂದ ಹೇಳಲ್ಪಟ್ಟ ಆತ್ಮಶ್ರುತಿ, ಮುಕ್ತಪ್ರಾಪ್ಯತ್ವ ಮೊದಲಾದ ಈ ಪ್ರಕರಣಗಳಲ್ಲಿರತಕ್ಕ ಲಿಂಗಗಳಿಂದ ಯುಕ್ತನಾಗಿರುವನು, **''ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ''** ಸ್ವಶಬ್ದಪರ್ಯಾಯವಾದ ಆತ್ಮಶಬ್ದವಿದ್ದುದರಿಂದ, ಸ್ವರ್ಗ ಭೂಮ್ಯಾದಿಗಳಿಗೆ ಆಶ್ರಯನಾದವನು ಬ್ರಹ್ಮನೇ. ಪ್ರಧಾನವಾಯು, ರುದ್ರ, ಜೀವರಲ್ಲ **ದ್ಯುಭ್ವಾದ್ಯಾಯತನತ್ವಾಧಿಕರಣವು.** ॥ 1 ॥

**ಪೂರ್ಣಗುಣಃ=''ಯೋ ವೈ ಭೂಮಾಃ''** ಎಂಬ ಭೂಮಶಬ್ದದಿಂದ ಹೇಳಲ್ಪಟ್ಟ ಪರಿಪೂರ್ಣ ಗುಣಗಳುಳ್ಳವನು, (ಮುಂಚಿನ ಶಬ್ದಗಳನ್ನು ಇಲ್ಲಿಯೂ, ಮೇಲೆಯೂ ಇಟ್ಟುಕೊಳ್ಳಬೇಕು) ಮೊದಲು ಪೂರ್ಣಾನಂದನೆಂದು ಹೇಳಲ್ಪಟ್ಟವನೂ ಶ್ರೀಹರಿಯೊಬ್ಬನೇ, ಆದಕಾರಣ **''ಪ್ರಾಣೋ ವಾ ಆಶಾಯಾ ಭೂಯಾನ್''** ಪ್ರಾಣನು ಭಾರತಿಯಿಂದ ಶ್ರೇಷ್ಠನು ಎಂದುಪಕ್ರಮದಲ್ಲಿದೆ. **''ವಿಷ್ಣುರ್ವೈ ದೇವೇಭ್ಯೋ ಭೂಯಾನ್''** ಶ್ರೀಹರಿಯೇ ದೇವತೆಗಳಿಂದ ಶ್ರೇಷ್ಠನು ಎಂದು ಶ್ರುತಿಯು, ಹೀಗೆ ಪ್ರಾಣ ವಿಷ್ಣು ಇಬ್ಬರಲ್ಲಿ ಪ್ರಸಿದ್ಧಗಳಾದ ಭೂಮ, ಸುಖ, ಪ್ರಾಣ, ಆತ್ಮ ಮೊದಲಾದ ಎಲ್ಲಾ ಶಬ್ದಗಳಿಂದ ಮುಖ್ಯವಾಗಿ ಜನಾರ್ದನನೇ ಹೇಳಲ್ಪಡುತ್ತಾನೆ. ಮುಖ್ಯಪ್ರಾಣನಲ್ಲವು. ಏಕೆಂದರೆ– **''ತತ್ಸುಖಂ''** ಎಂಬ ಶ್ರುತಿಯಲ್ಲಿ ಹೇಳಿದ ಪೂರ್ಣಸುಖತ್ವ ಸರ್ವೋತ್ತಮತ್ವ **''ಸ ಏವಾಧಸ್ತಾತ್''** ಇತ್ಯಾದಿಗಳಲ್ಲಿ ಹೇಳಿದ ಸರ್ವಗತತ್ವ ಮೊದಲಾದ ಲಿಂಗಗಳಿಂದ ಶ್ರೀಹರಿಯೇ ಕೂಡಿದವನು. **''ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ''** ಪೂರ್ಣಸುಖವಿದೆಯೆಂದು ಹೇಳಿರುವುದರಿಂದಲೂ, ಸರ್ವೋತ್ತಮನೆಂದು ಹೇಳಿರುವುದರಿಂದಲೂ **''ಯೋ ವೈ ಭೂಮಾ ತತ್ಸುಖಂ''** ಎಂದು ಹೇಳಲ್ಪಟ್ಟ ಭೂಮನು ಬ್ರಹ್ಮನೇ, ಪ್ರಾಣನಲ್ಲ **ಭೂಮಾಧಿಕರಣವು** ॥ 2 ॥

**ಅಕ್ಷರಃ=''ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ''** ಸ್ವರ್ಗಾದಿಗಳಿಗೆ ಆಶ್ರಯನಾದ, ಅಕ್ಷರಶಬ್ದವಾಚ್ಯನಾದ ಬ್ರಹ್ಮನಲ್ಲಿ ಶ್ರೀತತ್ವವು ಸರ್ವಥಾ ಆಶ್ರಿತವೇ ಆಗಿದೆ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಎಲ್ಲ ವಸ್ತುಗಳಿಗೂ ಆಶ್ರಯನಾದವನೂ, ಅವಿನಾಶಿಯಾದವನೂ, ದೃಶ್ಯತ್ವ ಮೊದಲಾದ ಧರ್ಮಗಳಿಂದ ವಿರಹಿತನೆಂದು ಹೇಳಲ್ಪಟ್ಟವನೂ ಒಬ್ಬ ಜನಾರ್ದನನೇ. ಅಂತೂ ಮುಖ್ಯವಾಗಿ 4 ವಿಧ ನಾಶವಿಲ್ಲದಿರುವುದೆಂದರ್ಥವುಳ್ಳ ಅಕ್ಷರಶಬ್ದದಿಂದ ಹೇಳಲ್ಪಟ್ಟವನು ಶ್ರೀಹರಿಯೇ. ಶ್ರೀತತ್ವವಲ್ಲವು. ಏಕೆಂದರೆ– ಅಕ್ಷರನಾದ ವಿಷ್ಣುವೇ ಸರ್ವಲಿಂಗಗಳಿಂದ ಯುಕ್ತನು (ಅಂದರೆ– **''ಆಕಾಶ ಏವ ತದೋತಂ ಚ ಪ್ರೋತಂ ಚ''** ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಾಧಾರತ್ವವು **''ಅಸ್ಥೂಲಮನಣು''** ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಪ್ರಾಕೃತ ಸ್ಥೌಲ್ಯಾದಿಗಳ ರಾಹಿತ್ಯವು, ಅಪ್ರಾಕೃತ, ಅಣುತ್ವ ಮಹತ್ವಗಳು ಇವು ಮೊದಲಾದ ಈ ಪ್ರಕರಣದಲ್ಲಿರುವ ಹೇತುಗಳಿಂದ ಯುಕ್ತನು **''ಓಂ ಅಕ್ಷರಮಂಬ-ರಾಂತಧೃತೇಃ ಓಂ''** ಆಕಾಶಾಂತವಾದ ಸರ್ವವಸ್ತುಗಳನ್ನು ಧರಿಸುವುದರಿಂದ **''ಏತದ್ವೈತದಕ್ಷರಂ ಗಾರ್ಗಿ''** ಎಂದು ಹೇಳಲ್ಪಟ್ಟ ಅಕ್ಷರನು ಬ್ರಹ್ಮನೇ, ಶ್ರೀತತ್ವವಲ್ಲ **ಅಕ್ಷರಾಧಿಕರಣವು** ॥ 3 ॥

**ಸನ್=''ಸದೇವ ಸೋಮ್ಯೇದಮಗ್ರ ಆಸೀತ್''** ಇವು ಮೊದಲಾದ ಸೃಷ್ಟಿಸ್ಥಾನದಲ್ಲಿ ಸತ್

ಶಬ್ದದಿಂದ ಹೇಳಲ್ಪಟ್ಟ ನಿರ್ದೋಷತ್ವಾದಿಗಳಿಂದ ಕೂಡಿದವನು ಅಥವಾ ಸ್ವತಂತ್ರನು, (ಸಃ=) ಮೊದಲು ಸರ್ವಕರ್ತನೆಂದು ಹೇಳಲ್ಪಟ್ಟವನೂ ಒಬ್ಬ ಜನಾರ್ದನನೇ. (ಅಂದರೆ, **''ಸದೇವ ಸೋಮ್ಯ''** **''ಸನ್ಮೂಲಾಃ ಸೋಮ್ಯ''** ಇದು ಮೊದಲಾದ ಪ್ರಕರಣಗಳಲ್ಲಿರುವ ಎಲ್ಲಾ ಸಚ್ಛಬ್ದ ಗಳಿಂದಲೂ ಜನಾರ್ದನನೇ ಮುಖ್ಯತಃ ವಾಚ್ಯನಾಗುತ್ತಾನೆ, ಪ್ರಕೃತಿಯಲ್ಲವು. ಏಕೆಂದರೆ- ಈಕ್ಷಿತೃತ್ವ ಸ್ರಷ್ಟೃತ್ವ ಅದ್ವಿತೀಯತ್ವ ಮೊದಲಾದ ಲಿಂಗಗಳಿಂದ ಯುಕ್ತನು. **''ಓಂ ಈಕ್ಷತಿ ಕರ್ಮವ್ಯಪದೇಶಾತ್ಸಃ ಓಂ''** **''ತದೈಕ್ಷತ''** ಎಂದು ಈಕ್ಷಣ ರೂಪವಾದ ವ್ಯಾಪಾರವನ್ನು ಹೇಳಿರುವುದರಿಂದ **''ಸದೇವ''** ಇತ್ಯಾದಿಗಳಲ್ಲಿ ಶ್ರುತನಾದವನು ವಿಷ್ಣುವೇ. ಪ್ರಧಾನವಲ್ಲ, **ಸದಧಿಕರಣವು** ॥ 4 ॥

**ಹೃದಬ್ಜಗಃ-''ತಸ್ಮಿನ್ ಯದಂತಃ''** ಇತ್ಯಾದಿಗಳಲ್ಲಿ ಹೃದಯಾಕಾಶದಲ್ಲಿರುವವನೆಂದು ಹೇಳಲ್ಪಟ್ಟ ವವನೂ, ಅಥವಾ ಪೃಥಿವಿ ಮೊದಲಾದ ಸರ್ವವಸ್ತುಗಳಿಗೂ ಆಶ್ರಯನಾಗಿ ಹೃದಯಪದ್ಮ ದಲ್ಲಿರುವವನೂ, (ಸಃ=) **''ಸೋऽಕ್ಷರಃ''** ಎನ್ನುವಲ್ಲಿ ಸರ್ವಾಧಾರನಾಗಿ ಹೇಳಲ್ಪಟ್ಟವನೂ, ಒಬ್ಬ ಜನಾರ್ದನನೇ. **'' ಯೋ ವೇದ ನಿಹಿತಂ ಗುಹಾಯಾಂ''** **''ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ''** **''ಹೃದಿ ಹ್ಯೇಷ ಆತ್ಮಾ''** ಯಾರು ಹೃದಯದಲ್ಲಿರತಕ್ಕವನನ್ನು ತಿಳಿಯುತ್ತಾನೋ, ಹೃತ್ಪದ್ಮಕೋಶದ ಮಧ್ಯದಲ್ಲಿ ಸೂಕ್ಷ್ಮವಾದ ಛಿದ್ರವಿದೆ. ಛಿದ್ರದಲ್ಲಿರುವ ಪರಮಾತ್ಮನಲ್ಲಿ ಸರ್ವ ಜಗತ್ತೂ ಆಶ್ರಿತವಾಗಿದೆ. ಹೃದಯದಲ್ಲಿ ಈ ಪರಮಾತ್ಮನು ಇದ್ದಾನೆ, ಎಂಬ ಶ್ರುತಿಗಳು ಇತರರನ್ನು ಪ್ರತಿಪಾದಿಸುತ್ತವೆಂದು ತೋರಿದರೂ **''ಯದಂತಸ್ತದನ್ವೇಷಿತವ್ಯಂ''** **''ತದ್ವಾವ ವಿಜಿಜ್ಞಾಸಿತವ್ಯಂ''** **'' ಕಿಂ ತದತ್ರ ವಿದ್ಯತೇ''** **''ಯದ್ವಾವ ವಿಜಿಜ್ಞಾಸಿತವ್ಯಂ''** ಯಾವುದು ಹೃತ್ಕಮಲದಲ್ಲಿರುವುದೋ ಅದು ವಿಶೇಷತಃ ವಿಚಾರ್ಯವು, ಇದು ಮೊದಲಾದ ಹೃತ್ಪದ್ಮಸ್ಥನನ್ನು ಪ್ರತಿಪಾದಿಸುವ ಎಲ್ಲಾ ಶಬ್ದಗಳಿಂದಲೂ ಜನಾರ್ದನನೊಬ್ಬನೇ ಹೇಳಲ್ಪಡುತ್ತಾನೆ. ಜೀವಾದಿಗಳು ಹೇಳಲ್ಪಡುವುದಿಲ್ಲ, ಏಕೆಂದರೆ- ಹೃದಯಾಕಾಶದಲ್ಲಿರುವವನೇ ಆತ್ಮ ಬ್ರಹ್ಮ ಶ್ರುತಿ, ಪಾಪಗಳ ಸಂಬಂಧವಿಲ್ಲದಿರುವಿಕೆ, ಸತ್ಯಕಾಮತ್ವ ಸುಪ್ತರಾದ ಪ್ರಜೆಗಳಿಂದ ಹೊಂದಲ್ಪಡುವಿಕೆ, ಅರಣ್ಯ ಎಂಬ ಅಮೃತ ಸಮುದ್ರಗಳಿಗೆ ಆಶ್ರಯವಾದ ಲೋಕವಿರುವಿಕೆ, ಸರ್ವಲೋಕಾಧಾರತ್ವ ಮೊದಲಾದ ಲಿಂಗಗಳಿಂದ ಯುಕ್ತನು. **''ಓಂ ದಹರ ಉತ್ತರೇಭ್ಯಃ ಓಂ''** **''ಯ ಆತ್ಮಾ ಅಪಹತ ಪಾಪ್ಮಾ''** ಇದು ಮೊದಲಾದ ಉತ್ತರ ವಾಕ್ಯದಲ್ಲಿರುವ ಅಪಹತ ಪಾಪತ್ವ ಮೊದಲಾದ ಧರ್ಮಗಳಿಂದ ಸ್ವರ್ಗ ಭೂಮ್ಯಾದಿಗಳಿಗೆ ಆಶ್ರಯನಾದವನೂ ದಹರವಾದ ಹೃತ್ಕಮಲದಲ್ಲಿರುವವನೂ ಬ್ರಹ್ಮನೇ. ಜೀವಾದಿಗಳಲ್ಲ, **ದಹರಾಧಿಕರಣವು** ॥ 5 ॥

**ಸೂರ್ಯಾದಿ ಭಾಸಕಃ-** ಸೂರ್ಯ ಮೊದಲಾದ ಜಗತ್ತನ್ನು ಪ್ರಕಾಶಪಡಿಸುವವನು. ಅಂದರೆ, **''ನ ತತ್ರ ಸೂರ್ಯೋ ಭಾತಿ''** ಸೂರ್ಯಾದಿಗಳಿಂದ ಪ್ರಕಾಶವನ್ನು ಹೊಂದದಿರುವವನು, **''ತಮೇವ ಭಾಂತಮನುಭಾತಿಸರ್ವಂ''** ಸೂರ್ಯಾದಿಗಳೂ ಪ್ರಕಾಶಿಸುತ್ತಿರುವ ಪರಬ್ರಹ್ಮನನ್ನೇ ಅನುಸರಿಸಿ ಪ್ರಕಾಶಿಸುತ್ತಾರೆ; ಇತ್ಯಾದಿ ಶ್ರುತಿಗಳಿಂದ ಸೂರ್ಯಾದಿಗಳನ್ನು ಪ್ರಕಾಶಪಡಿಸುವವನೂ, ದೃಶ್ಯತ್ವಾದಿ ಧರ್ಮಗಳಿಲ್ಲದವನು ಎಂದು ಹೇಳಲ್ಪಟ್ಟವನೂ ಒಬ್ಬ ಹರಿಯೇ. ಜ್ಞಾನಿಗಳ ಸುಖವಲ್ಲ, ಆದಕಾರಣ **''ತದೇತದಿತಿ ಮನ್ಯಂತೇऽನಿರ್ದೇಶ್ಯಂ ಪರಮಂ ಸುಖಂ''** **''ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ''** ಜ್ಞಾನಿಗಳ ಸುಖವನ್ನು ಅನಿರ್ದೇಶ್ಯವೆಂದೂ, ಪರಮವೆಂದೂ ಜ್ಞಾನಿಗಳು ಹೇಳುತ್ತಾರೆ. ಅಂತಹ ಸುಖವನ್ನು ಹೇಗೆ ತಿಳಿದೇನು? ಎಂದು ಅತ್ಯಂತ ಇಷ್ಟವಾಗಿ ಗ್ರಹಿಸಲ್ಪಡುವಿಕೆ ಅಥವಾ ಜ್ಞಾನಕ್ಕಾಗಿ ಪ್ರಾರ್ಥಿಸಲ್ಪಡುವಿಕೆ, ಹೀಗೆ ಆನುಕೂಲ್ಯದಿಂದ ಗ್ರಹಿಸಲ್ಪಡತಕ್ಕ ವಸ್ತುವಿನಲ್ಲಿರುವ ಎಲ್ಲಾ

ಶಬ್ದಗಳಿಂದಲೂ ಜನಾರ್ದನನೇ ವಾಚ್ಯನಾಗುತ್ತಾನೆ. ಆ ಹರಿಯೇ ಸೂರ್ಯಾದಿಗಳನ್ನು ಪ್ರಕಾಶಪಡಿಸುವಿಕೆ, ಸೂರ್ಯಾದಿಗಳಿಂದ ಪ್ರಕಾಶವನ್ನು ಹೊಂದದಿರುವಿಕೆ, ಸರ್ವಜಗತ್ತನ್ನು ಪ್ರಕಾಶಪಡಿಸುವಿಕೆ, ಈ ಲಿಂಗಗಳಿಂದೊಡಗೂಡಿದವನು. **''ಓಂ ಅನುಕೃತೇಸ್ತಸ್ಯ ಚ ಓಂ'' ''ತದೇವ ಭಾಂತಮನುಭಾತಿ ಸರ್ವಂ''** ಎಂಬ ಶ್ರುತಿಯಲ್ಲಿ ಪ್ರಕಾಶಾಶ್ರಯರಾದ ಸೂರ್ಯಾದಿಗಳ ಪ್ರಕಾಶಕ್ಕೆ ಪ್ರಯೋಜಕವಾದ ಪ್ರಕಾಶವಿದೆ ಎಂದು ಶ್ರುತವಾದುದರಿಂದ 'ಕಥಂ ನು ತದ್ವಿಜಾನೀಯಾಂ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಸ್ತುವು ಶ್ರೀವಿಷ್ಣುವೇ. **ಅನುಕೃತ್ಯಧಿಕರಣವು ॥ 6 ॥**

**ಪ್ರಾಣಪ್ರೇರಕಃ- ''ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ''** ಯಾರು ಪ್ರಾಣನನ್ನು ಊರ್ಧ್ವಭಾಗಕ್ಕೆ ಹೊಂದಿಸುವನೋ, ಅಪಾನನನ್ನು ಕೆಳಗೆ ಮಾಡುವನೋ ಅಂತಹ ಹೃದಯ ಮಧ್ಯದಲ್ಲಿರುವ ವಾಮನನನ್ನು ಸರ್ವದೇವತೆಗಳೂ ಉಪಾಸನೆ ಮಾಡುತ್ತಾರೆ; ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಪ್ರಾಣಾದಿಗಳಿಗೆ ವ್ಯವಸ್ಥೆಯನ್ನು ಮಾಡುವವನೂ, ಮೊದಲು ಪ್ರೇರಿಸುವಿಕೆಯು ಸಮಾನ ವಾದುದರಿಂದ ಬ್ರಹ್ಮನಿಂದಿತರರನ್ನು ಪ್ರತಿಪಾದಿಸುವುದೆಂದು ತೋರುವ 'ಈಶಾನ' ಮೊದಲಾದ ಎಲ್ಲಾ ಶಬ್ದಗಳಿಂದಲೂ ಮುಖ್ಯವಾಗಿ ಶ್ರೀಹರಿಯೇ ಹೇಳಲ್ಪಡುತ್ತಾನೆ. ಏಕೆಂದರೆ, ಪ್ರಾಣಪ್ರೇರಕನಾದ ವಿಷ್ಣುವಿನಲ್ಲಿಯೇ ಅಲ್ಲಿ ಹೇಳಿದ ಲಿಂಗಗಳಿರುವುವು. ಅಂದರೆ, **''ಮಧ್ಯೇ ವಾಮನಮಾಸೀನಂ''** ಎಂದು ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ವಾಮನ ಶ್ರುತಿಯಿಂದಲೂ **''ಈಶಾನೋ ಭೂತಭವ್ಯಸ್ಯ''** ಹೃದಯ ಗುಹೆಯಲ್ಲಿ ಅಂಗುಷ್ಠಪರಿಮಿತನಾದ ಸರ್ವವಸ್ತುಗಳಿಗೂ ಪ್ರೇರಕನಾದ ಪುರುಷನು ಇರುತ್ತಾನೆ. ಆತನ ಪ್ರಸಾದದಿಂದ ಮುಕ್ತನಾಗುತ್ತಾನೆ. ಎಂಬ ಶ್ರುತಿಯಲ್ಲಿ ಹೇಳಿದ ಭೂತ ಭವಿಷ್ಯತ್ ಸರ್ವವಸ್ತುಗಳ ನಿಯಾಮಕತ್ವವೂ, ಸರ್ವದೇವತೆಗಳಿಂದ ಉಪಾಸನಾ ಮಾಡಲ್ಪಡುವಿಕೆ **''ವಿಮುಚ್ಯತೇ''** ಎಂಬ ಶ್ರುತಿಯಲ್ಲಿ ಹೇಳಿದ ಮೋಚಕತ್ವವೂ, **''ಇತರೇಣ ತು ಜೀವಂತಿ''** ಎಂಬ ಶ್ರುತಿಯಲ್ಲಿ ಹೇಳಿದ ಮುಖ್ಯಪ್ರಾಣ ಮೊದಲಾದವರಿಗೆಲ್ಲಾ ಜೀವನವನ್ನು ಕೊಡುವಿಕೆ ಇದು ಮೊದಲಾದ ಲಿಂಗಗಳಿಂದಲೂ ಯುಕ್ತನು. **''ಓಂ ಶಬ್ದಾದೇವ ಪ್ರಮಿತಃ ಓಂ'' ''ಮಧ್ಯೇ ವಾಮನಮಾಸಿನಂ''** ಎಂಬ ವಾಮನ ಶಬ್ದದಿಂದಲೇ **''ಈಶಾನೋ ಭೂತಭವ್ಯಸ್ಯ''** ಎಂದು ಹೇಳಲ್ಪಟ್ಟ ಈಶಾನನು ಬ್ರಹ್ಮನೇ ಪ್ರಮಿತನಾಗಿರುತ್ತಾನೆ. **ವಾಮನಾಧಿಕರಣವು ॥ 7 ॥**

**ದೈವತೈರಪಿ ಜ್ಞೇಯಃ-** ಒಬ್ಬ ಜನಾರ್ದನನೇ ಬ್ರಹ್ಮಾದಿದೇವತೆಗಳಿಂದಲೂ, ವೇದ ಮೊದಲಾದ ಕರಣಗಳಿಂದ ಜ್ಞೇಯನು. ಮನುಷ್ಯರಿಂದ ಮಾತ್ರವಲ್ಲ. **''ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ''** ದೇವತೆಗಳಿಗೂ ವಿಶಿಷ್ಟಬುದ್ಧ್ಯಾದಿಗಳು ಇರುವುದರಿಂದ ದೇವತ್ವವು ಪ್ರಾಪ್ತಿಯಾದ ಮೇಲೆಯೂ ಅಧಿಕಾರವಿದೆ ಎಂದು ಬಾದರಾಯಣಾಚಾರ್ಯರು ಹೇಳುತ್ತಾರೆ. **ದೇವತಾಧಿಕರಣವು ॥ 8 ॥**

**ನ ವೇದ್ಯೈಶ್ಶೂದ್ರಾದ್ಯೈಃ-** ಶೂದ್ರ ಮೊದಲಾದವರು ಋಗಾದ್ಯಾಗಮಗಳಿಂದ ಜನಾರ್ದನನನ್ನು ತಿಳಿಯಕೂಡದು. ಶೂದ್ರರಿಗೆ ವೇದದಲ್ಲಿ ಅಧಿಕಾರವೇ ಇಲ್ಲವು. **''ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ''** ಎಂಬ ಶ್ರುತಿಯಲ್ಲಿ ಉಪನಯನವೇ ಇಲ್ಲವೆಂದುಕ್ತವಾಗಿದೆ. ಮತ್ತು (ನ ವೇದ್ಯೈಃ=) ವೇದೇತರಗಳಾದ ಇತಿಹಾಸ ಪುರಾಣಾದಿಗಳಿಂದ, ಶೂದ್ರ ಮೊದಲಾದವರಿಂದ ಸಂಸಾರವನ್ನು ನಾಶಗೊಳಿಸುವ ಶ್ರೀಹರಿಯು ಮುಖ್ಯಜ್ಞೇಯನು. **''ಸ್ತ್ರೀ ಶೂದ್ರ ಬ್ರಹ್ಮ ಬಂಧೂನಾಂ ತಂತ್ರ ಜ್ಞಾನೇಽಧಿ ಕಾರಿತಾ''** ಇತ್ಯಾದಿ ಪ್ರಮಾಣಗಳಿಂದ ಶೂದ್ರಾದಿಗಳಿಗೂ ಮುಕ್ತಿಕಾರಣವಾದ ಜ್ಞಾನವನ್ನು ಹುಟ್ಟಿಸುವ

ಪುರಾಣಾದಿಗಳಲ್ಲಿ ಅಧಿಕಾರವಿದೆ ಎಂದು ಸಿದ್ಧವಾಗಿದೆ.) **''ಓಂ ಶುಗಸ್ಯ ತದನಾದರ ಶ್ರವಣಾತ್ತದಾದ್ರವಣಾತ್ಸೂಚ್ಯತೇ ಹಿ ಓಂ''** ದುಃಖದಿಂದೊಡಗೂಡಿರುವುದರಿಂದ ಪೌತ್ರಾಯಣನು ಶೂದ್ರನೆಂದು ಹೇಳಲ್ಪಟ್ಟಿದ್ದಾನೆ. ಆದಕಾರಣ ಶೂದ್ರನಿಗೆ ಅಧಿಕಾರವಿಲ್ಲ, **''ಕಮ್ವರ ಏನಂ''** ಇತ್ಯಾದಿಗಳಿಂದ ಹಂಸಕೃತವಾದ ಅನಾದರವು ಶ್ರುತವಾಗಿ ಇರುವುದರಿಂದ ಪೌತ್ರಾಯಣನಿಗೆ ಶೋಕವು. **''ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ''** ಎಂಬ ವಚನದಿಂದ ಶೋಕವು ತಿಳಿಯಲ್ಪಡುತ್ತದೆ. **ಅಪಶೂದ್ರಾಧಿಕರಣವು** ।। 9 ।।

**ಕಂಪಕಃ- ''ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಂ''** ಸರ್ವ ಜಗತ್ತೂ ಪ್ರಾಣನಲ್ಲಿಯೇ ಇರುವುದು; ಪ್ರಾಣನಿಂದಲೇ ಹೊರಟಿದೆ. ಯಾರ ಪ್ರೇರಣೆಯಿಂದ ಚೇಷ್ಟೆಯನ್ನು ಮಾಡುತ್ತದೋ, ಅಂತಹ ಮಹಾ ಭಯಂಕರವಾದ ವಜ್ರವನ್ನು ಯಾರು ತಿಳಿಯುತ್ತಾರೋ, ಅವರು ಮುಕ್ತರಾಗುತ್ತಾರೆ; ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಜಗಚ್ಚೇಷ್ಟೆ ಮೊದಲಾದುದನ್ನು ಮಾಡುವವನು ಶ್ರೀಹರಿಯೇ. ಆದಕಾರಣ ಲೋಕ ಪ್ರಸಿದ್ಧಿಯಿಂದಲೂ, ಉದ್ಯಮಿತತ್ವ ಲಿಂಗದಿಂದಲೂ ಇತರರನ್ನು ಪ್ರತಿಪಾದಿಸುವುದೆಂದು ತೋರುವ ವಜ್ರ, ಉದ್ಯತ, ಮಹದ್ಭಯ,ಪ್ರಾಣ ಮೊದಲಾದ ಎಲ್ಲಾ ಶಬ್ದಗಳಿಂದಲೂ ಒಬ್ಬ ಜನಾರ್ದನನೇ ಮುಖ್ಯವಾಗಿ **''ವರ್ಜನಾತ್ ವಜ್ರಮುಚ್ಯತೇ''** ದೋಷಗಳನ್ನು ದೂರಕ್ಕೆ ನಿರಸನಮಾಡಿರುವುದರಿಂದ ವಜ್ರನೆನಿಸುತ್ತಾನೆ. ಇತ್ಯಾದಿ ಯೋಗರೂಢಿಗಳಿಂದ ವಜ್ರಶಬ್ದದಿಂದ ವಾಚ್ಯನಾಗುತ್ತಾನೆ. ಇಂದ್ರಾಯುಧವಲ್ಲ, ಏಕೆಂದರೆ- ಜಗಚ್ಚೇಷ್ಟಕನಾದ ಶ್ರೀವಿಷ್ಣುವೇ ಕಂಪಕತ್ವ ಮುಕ್ತಿಕಾರಣವನ್ನು ತಿಳಿಸಿಕೊಡುವಿಕೆ, **''ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಂ''** ಆ ಬ್ರಹ್ಮನೇ ಶೋಕರಹಿತನು, ಗುಣಪೂರ್ಣನು, ನಿತ್ಯಾಮೃತನು ಎನ್ನುವಲ್ಲಿ ಹೇಳಲ್ಪಟ್ಟ ಅಮೃತತ್ವ ಮೊದಲಾದುದು **''ಭಯಾದಸ್ಯಾಗ್ನಿಸ್ತಪತಿ''** ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಅಗ್ನ್ಯಾದಿಗಳಿಗೆ ಭಯವನ್ನುಂಟುಮಾಡುವಿಕೆ ಇದು ಮೊದಲಾದ ಲಿಂಗಗಳಿಂದ ಯುಕ್ತನು. **''ಓಂ ಕಂಪನಾತ್ ಓಂ ''** ಜಗಚ್ಚೇಷ್ಟಕತ್ವರೂಪ ಲಿಂಗದಿಂದ **''ಮಹದ್ಭಯಂ ವಜ್ರಮುದ್ಯತಂ''** ಎಂದು ಹೇಳಲ್ಪಟ್ಟ ವಜ್ರನು ಬ್ರಹ್ಮನೇ. ಇಂದ್ರಾಯುಧವಲ್ಲ, **ಕಂಪನಾಧಿಕರಣವು** ।। 10 ।।

**ಜೀವತಃ ಕಂಪಕಃ** - ಸ್ವತಂತ್ರನಾದ ವಿಷ್ಣುವೇ, ಜೀವರನ್ನು ಹಿಡಿದುಕೊಂಡು, (ಜೀವತಃ=) ಜೀವರಿಗೆ ಚೇಷ್ಟಕನು, ಅಂದರೆ ಉಭಯ ಲೋಕಸಂಚಾರವನ್ನು ಮಾಡುವವನು, ಅಸ್ವತಂತ್ರನಾದ ಜೀವನಲ್ಲ, ಆದಕಾರಣ ಈ ಪ್ರಕರಣದಲ್ಲಿರುವ ಜ್ಯೋತಿಃ ಶಬ್ದ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಜನಾರ್ದನನೇ ವಾಚ್ಯನಾಗುತ್ತಾನೆ. ಏಕೆಂದರೆ- **''ತದ್ದೇವಾ ಜ್ಯೋತಿಷಾಂ ಜ್ಯೋತಿಃ''** ಇತ್ಯಾದಿ ಶ್ರುತಿಗಳಲ್ಲಿ 'ಜ್ಯೋತಿಃ' ಶಬ್ದವು ವಿಷ್ಣುವಾಚಕವೆಂದೇ ಸಿದ್ಧವಾಗಿದೆ. **''ಓಂ ಜ್ಯೋತಿರ್ದರ್ಶನಾತ್ ಓಂ''** **''ವಿಷ್ಣುರೇವ ಜ್ಯೋತಿಃ''** ಎಂದು ಶ್ರುತಿಯಿದ್ದುದರಿಂದ **''ಪ್ರಾಣೇಷು ಹೃದ್ಯಂತರ್ಜ್ಯೋತಿಃ''** ಎಂದು ಹೇಳಲ್ಪಟ್ಟ ಜ್ಯೋತಿಸ್ಸು ಬ್ರಹ್ಮನೇ. ಜೀವನಲ್ಲ, ಜ್ಯೋತಿರಧಿಕರಣವು ।। 11 ।।

**ಅನ್ಯಶ್ಚ- ''ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ । ತೇ ಯದಂತರಾ ತದ್ಬ್ರಹ್ಮ ತದಮೃತಂ ।।''** ಪರಮಾತ್ಮನು ನಾಮ ಅರ್ಥಗಳಿಗೆ ಆಶ್ರಯನು, ಯಾರು ನಾಮರೂಪಗಳಿಲ್ಲದಿರುವವನೋ, ಅವನೇ ಬ್ರಹ್ಮನು, ಎನ್ನುವಲ್ಲಿ ನಾಮರೂಪರಹಿತನೆಂದು ಹೇಳಲ್ಪಟ್ಟವನು ವಿಲಕ್ಷಣನೂ (ನಾಮಾದಿರಹಿತನು) ಒಬ್ಬ ಜನಾರ್ದನನೆ. ಆದಕಾರಣ **''ಆಕಾಶಃ ನಿರ್ವಹಿತಾ''** ಇವು

ಮೊದಲಾದ ಸರ್ವಶಬ್ದಗಳಿಂದಲೂ ಒಬ್ಬ ಜನಾರ್ದನನೇ ವಾಚ್ಯನು. ಆಕಾಶವಲ್ಲವು. ಏಕೆಂದರೆ- ವಿಲಕ್ಷಣನಾದ ವಿಷ್ಣುವೇ ಅನಾಮತ್ವ, ಅರೂಪತ್ವ, ಬ್ರಹ್ಮತ್ವ, ಅಮೃತತ್ವ, ನಾಮರೂಪನಿರ್ವಹಿತೃತ್ವ ಲಿಂಗಗಳಿಂದೊಡಗೂಡಿದವನು. **''ಓಂ ಆಕಾಶೋऽರ್ಥಾಂತರತ್ವಾದಿವ್ಯಪದೇಶಾತ್ ಓಂ''** ನಾಮ ರೂಪ ರಾಹಿತ್ಯ ರೂಪವಾದ ವಿಲಕ್ಷಣವಾದ ಅರ್ಥವನ್ನು ಹೇಳಿರುವುದರಿಂದ **''ಆಕಾಶೋ ವೈ ನಾಮ ನಾಮರೂಪ ಯೋರ್ನಿರ್ವಹಿತಾ''** ಎಂದು ಹೇಳಲ್ಪಟ್ಟ ಆಕಾಶನು ಬ್ರಹ್ಮನೇ, ಅವ್ಯಾಕೃತಾಕಾಶವಲ್ಲ **ಆಕಾಶಾಧಿಕರಣವು** ।। 12 ।।

**ಜೀವತಃ ಅನ್ಯಶ್ಚ-''ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ'' ''ಪ್ರಾಜ್ಞೇನಾತ್ಮನಾऽನ್ವಾರೂಢಃ''** ಸರ್ವಜ್ಞನಾದ ಪರಮಾತ್ಮನಿಂದ ಆಲಿಂಗಿತನಾದ ಸುಪ್ತನೂ, ಮುಕ್ತನೂ ಯಾವ ವಿಷಯಾದಿಗಳನ್ನೂ ತಿಳಿಯುವುದಿಲ್ಲ, ಸರ್ವಜ್ಞನಾದ ಪರಮಾತ್ಮನಿಂದ ಅಧಿಷ್ಠಿತನಾದವನು, ಎಂಬ ಸುಷುಪ್ತಿ ಉತ್ಕ್ರಾಂತಿ ಪ್ರಕರಣಗಳಲ್ಲಿರುವ ಜೀವರಿಂದ ವಿಲಕ್ಷಣನಾದವನೂ ಒಬ್ಬ ಜನಾರ್ದನನೇ. ಆದಕಾರಣ ಅಸಂಗತ್ವ ಲೋಕಪ್ರಸಿದ್ಧಿಗಳಿಂದ ಭಗವದಿತರವಾಚಕಗಳೆಂದೂ ಪ್ರತೀತಗಳಾದ **''ಅಸಂಗೋ ಹ್ಯಯಂ ಪುರುಷಃ''** ಈ ಪರಮಾತ್ಮನು ಪಾಪಫಲದ ಸಂಬಂಧವಿಲ್ಲದಿರುವವನು; ಇವು ಮೊದಲಾದ ಸರ್ವಶಬ್ದಗಳಿಂದಲೂ ಮುಖ್ಯವೃತ್ತಿಯಿಂದ ಒಬ್ಬ ಜನಾರ್ದನನೇ ವಾಚ್ಯನು. ಜೀವನಲ್ಲ, ಏಕೆಂದರೆ, ವಿಲಕ್ಷಣನಾದ ವಿಷ್ಣುವೇ **'ಅನನ್ವಾಗತಸ್ತೇನ'** ಎನ್ನುವುದರಿಂದ ಹೇಳಲ್ಪಟ್ಟ ಅಸಂಗತ್ವವು, **''ಅನನ್ವಾಗತಂ ಪುಣ್ಯೇನ''** ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಪುಣ್ಯಪಾಪಗಳ ಸಂಬಂಧವಿಲ್ಲದಿರುವಿಕೆ ಇದು ಮೊದಲಾದ ಈ ಪ್ರಕರಣದಲ್ಲಿರುವ ಲಿಂಗಗಳಿಂದ ಯುಕ್ತನು. **''ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ'' 'ಅನನ್ವಾಗತಸ್ತೇನ ಭವತಿ'** ಎಂಬ ಅಸಂಗತ್ವಲಿಂಗದಿಂದ ಸ್ವಪ್ನಾದಿಗಳನ್ನು ನೋಡುವವನು ಬ್ರಹ್ಮನೇ, ಜೀವನಲ್ಲ, ಸುಷುಪ್ತ್ಯುತ್ಕ್ರಾಂತಿಗಳಲ್ಲಿ ಜೀವೇಶ್ವರರಿಗೆ ಭೇದವನ್ನು ಹೇಳಿರುವುದರಿಂದ ಅಭೇದವೆಂದೆನ್ನಕೂಡದು. **ಸುಷುಪ್ತ್ಯಧಿಕರಣವು** ।। 13 ।।

**ಪತಿತ್ವಾದಿಗುಣೈರ್ಯುಕ್ತಃ - ''ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಏಷ ಸರ್ವೇಶ್ವರಃ''** ಸರ್ವವನ್ನೂ ವಶೀಕರಿಸಿದವನು, ಸರ್ವನಿಯಾಮಕರಾದ ಬ್ರಹ್ಮಾದಿಗಳಿಗೆ ಪ್ರೇರಕನು, ಬ್ರಹ್ಮರುದ್ರಾದಿ ಗಳಿಗಿಂತ ಗುಣಗಳಿಂದ ಅಧಿಕನು, ಸರ್ವಸ್ವಾಮಿಯು, ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಾಧಿಪತಿತ್ವ ಮೊದಲಾದ ಗುಣಗಳಿಂದ ಕೂಡಿದವನು ಜನಾರ್ದನನೇ. ಆದಕಾರಣ ನಿತ್ಯಮಹಿಮತ್ವರೂಪವಾದ ವಿಷ್ಣುವಿನ ಲಿಂಗದಿಂದಲೂ ಉಭಯವಾಚಕಗಳಾಗಿ ತೋರುವ ಬ್ರಾಹ್ಮಣ ಅಜ ಮಹತ್ ಆತ್ಮಾ ಮೊದಲಾದ ಎಲ್ಲಾ ಶಬ್ದಗಳಿಂದಲೂ, ಜನಾರ್ದನನೇ ಮುಖ್ಯವೃತ್ತಿಯಿಂದ ಅಂದರೆ- **'ಬ್ರಹ್ಮಣಾ ಅಣ್ಯತೇ'** ವೇದದಿಂದ ತಿಳಿಯಲ್ಪಡುತ್ತಾನೆ, ಇದು ಮೊದಲಾದ ಯೋಗವೃತ್ತಿಯಿಂದ ವಾಚ್ಯನಾಗುತ್ತಾನೆ. ಚತುರ್ಮುಖನು ವಾಚ್ಯನಾಗುವುದಿಲ್ಲ, ಏಕೆಂದರೆ- ಸರ್ವಾಧಿ ಪತಿತ್ವ ಮೊದಲಾದ ಗುಣಗಳಿಂದೊಡ ಗೂಡಿದ ವಿಷ್ಣುವೇ ಎಲ್ಲಾ ಲಿಂಗಗಳಿಂದ ಯುಕ್ತನು. ಸರ್ವವಶಿತ್ವ ಸರ್ವೇಶಾನತ್ವ ಮೊದಲಾದ ಲಿಂಗಗಳು **'ಸರ್ವಸ್ಯೇಶಾನಃ'** ಇತ್ಯಾದಿ ಶ್ರುತಿಗಳಿಂದ ವಿಷ್ಣುವಿನಲ್ಲಿಯೇ ಪ್ರಸಿದ್ಧಗಳು. ಯಾವ ಕಾರಣದಿಂದ ಸರ್ವಾಧಿಪತಿತ್ವ ಸರ್ವಾಶ್ರಯತ್ವ ಪೂರ್ಣ ಗುಣತ್ವ ಮೊದಲಾದ ಗುಣಗಳಿಂದೊಡಗೂಡಿದವನೋ, ಆದಕಾರಣ ಉಭಯವಾಚಕಗಳಾದ, ಅಂದರೆ, ಹರಿಯನ್ನೂ ಇತರರನ್ನೂ ಪ್ರತಿಪಾದಿಸುವ ನಾಮಲಿಂಗ ಉಭಯಾತ್ಮಕಗಳೂ ಆದ

ಅನ್ಯತ್ರಪ್ರಸಿದ್ಧಗಳಾದ ಎಲ್ಲಾ ಶಬ್ದಗಳಿಂದಲೂ, ಮುಖ್ಯವೃತ್ತಿಯಿಂದ ಒಬ್ಬ ಜನಾರ್ದನನೇ ಹೇಳಲ್ಪಡುತ್ತಾನೆ. ಇತರರು ವಾಚ್ಯರಾಗುವುದಿಲ್ಲ ''ಓಂ **ಪತ್ಯಾದಿ ಶಬ್ದೇಭ್ಯಃ ಓಂ**'' ಸರ್ವಾಧಿ ಪತ್ಯಾದಿಗಳನ್ನು ಹೇಳತಕ್ಕ ಶಬ್ದಗಳಿಂದ ''**ಏಷ ನಿತ್ಯೋಮಹಿಮಾ ಬ್ರಾಹ್ಮಣಸ್ಯ**'' ಎಂದು ಹೇಳಲ್ಪಟ್ಟ ಬ್ರಾಹ್ಮಣನು ಬ್ರಹ್ಮನೇ, ವಿರಿಂಚನಲ್ಲ, ಬ್ರಾಹ್ಮಣಾಧಿಕರಣವು. ॥ 14 ॥

**ಪ್ರಥಮಾಧ್ಯಾಯದ ತೃತೀಯಪಾದಾರ್ಥವು ಸಮಾಪ್ತವಾಯಿತು.**

## ಅಧ್ಯಾಯ ॥ ೧ ॥ ಪಾದ ॥ ೩ ॥ ಶ್ಲೋಕ ॥ ೭ ॥

ಹೀಗೆ ವಿಷ್ಣುವಿನಲ್ಲಿ ಕೆಲವು ಗುಣಗಳು ಸಿದ್ಧಗಳಾದಾಗ್ಯೂ ಅನಂತಗುಣಗಳು ಸಿದ್ಧಗಳಾಗಲಿಲ್ಲ, ದೇವತಾತಾರತಮ್ಯ ಕರ್ಮಕ್ರಮ ಕಾಲಾದಿಗಳನ್ನು ಬೋಧಿಸಿಕೊಡತಕ್ಕ ವಾಕ್ಯದಲ್ಲಿರುವ ಸರ್ವಶಬ್ದ ಗಳಿಂದ ವಾಚ್ಯನಾಗುತ್ತಾನೆಂದು ಹೇಳದಿರುವುದರಿಂದ ಸಮನ್ವಯಸೂತ್ರದಲ್ಲಿ ಹೇಳಿದ ಸರ್ವಶಬ್ದ ಗಳಿಗೂ ಸಮನ್ವಯವನ್ನು ಪ್ರತಿಪಾದಿಸಿದ ಹಾಗೆ ಆಗಲಿಲ್ಲವೆಂದರೆ ಆದಕ್ಕಾಗಿ 4ನೇ ಪಾದವು ಪ್ರವೃತ್ತವಾಗಿದೆ ಎಂದು ನಿರೂಪಿಸುತ್ತಾರೆ-

**ಮೂಲ ॥ ಅವ್ಯಕ್ತಃ ಕರ್ಮವಾಕ್ಯೈ (ಚ್ಯೈ)ಶ್ಚ ವಾಚ್ಯ ಏಕೋಽಮಿತಾತ್ಮಕಃ।**
**ಅವಾಂತರಂ ಕಾರಣಂ ಚ ಪ್ರಕೃತಿಃ ಶೂನ್ಯಮೇವ ಚ ॥ ೮ ॥**

**ಇತ್ಯಾದ್ಯನ್ಯತ್ರ ನಿಯತೈರಪಿ ಮುಖ್ಯತಯೋದಿತಃ ।**
**ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ॥ ೯ ॥**

**ಅರ್ಥ ॥ ಅವ್ಯಕ್ತಃ**=ಅವ್ಯಕ್ತನು. **ಕರ್ಮವಾಕ್ಯೈಶ್ಚ ವಾಚ್ಯಃ**='**ಜ್ಯೋತಿಷಾ ಯಜೇತ**' ಇವು ಮೊದಲಾದ ಕರ್ಮಪ್ರತಿಪಾದಕಗಳಾದ ವಾಕ್ಯಗಳಿಂದ ಹೇಳಲ್ಪಡುತ್ತಾನೆ. ಏಕಃ=ಅಭಿನ್ನನು, **ಅಮಿತಾತ್ಮಕಃ**=ಅನೇಕರೂಪಗಳುಳ್ಳವನು. **ಅವಾಂತರಂ ಕಾರಣಂ ಚ**=ಕಾರ್ಯನೂ,ಕಾರಣನೂ ಆಗಿರು ವವನು. **ಪ್ರಕೃತಿಃ**=ಪ್ರಕೃತಿ ಮೊದಲಾದ ಸ್ತ್ರೀವಾಚಕಗಳಾದ ಶಬ್ದಗಳಿಂದ ಹೇಳಲ್ಪಡುತ್ತಾನೆ. ಶೂನ್ಯಮೇವ **ಚ**=ನಿಷೇಧಾರ್ಥಕಗಳಾದ ಎಲ್ಲಾ ಶಬ್ದಗಳಿಂದ ಹೇಳಲ್ಪಡುತ್ತಾನೆ. **ಇತ್ಯಾದಿ ಅನ್ಯತ್ರ ನಿಯತೈಃ**=ಅವ್ಯಕ್ತ ಮೊದಲಾದ ಆಯಾಯ ಪ್ರಕರಣಗಳಲ್ಲಿರುವ ಶ್ರುತಿಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧಗಳಾದ, ಶಬ್ದೈಃ=ನಾಮಾತ್ಮಕ, ಲಿಂಗಾತ್ಮಕ ಶಬ್ದಗಳಿಂದಲೂ, **ಮುಖ್ಯತಯಾ**=ಪರಮ ಮುಖ್ಯವೃತ್ತಿಯಿಂದ, (ಜನಾರ್ದನನೊಬ್ಬನೇ) **ಉದಿತಃ**=ಪ್ರತಿಪಾದಿಸಲ್ಪಡುತ್ತಾನೆ. **ಯತ್**=ಯಾವ ಕಾರಣದಿಂದ, ಶಬ್ದಾಃ=ಶಬ್ದಗಳು, **ಯೋಗವೃತ್ತಯಃ**=ಮಹಾಯೋಗವಿರುವವುಗಳೋ, **ಅತಃ**=ಆದಕಾರಣ ಮಹಾಯೋಗವೃತ್ತಿಯಿಂದ ಎಲ್ಲಾ ಶಬ್ದಗಳಿಂದಲೂ, ಶ್ರೀಹರಿಯೇ ಹೇಳಲ್ಪಡುವುದರಿಂದ, ಆತನೇ **ಅನಂತಗುಣಃ**=ಅನಂತಾನಂತ ಗುಣಗಳುಳ್ಳವನು.

**ತಾತ್ಪರ್ಯ ॥ ಅವ್ಯಕ್ತಃ ಇತ್ಯಾದಿ-** ಅವ್ಯಕ್ತ , ದುಃಖ, ಬದ್ಧ , ಅವರ, ವಸಂತ, ಜ್ಯೋತಿಃ, ಆಕಾಶ ಮೊದಲಾದ ದೇವತಾ ತಾರತಮ್ಯ, ಕರ್ಮಕ್ರಮ ಮೊದಲಾದವುಗಳನ್ನು ಬೋಧಿಸಿ ಕೊಡುವ ವಾಕ್ಯ ದಲ್ಲಿರುವ ಶ್ರುತಿಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧಗಳಾದಾಗ್ಯೂ (ಅನ್ಯತ್ರ ಉಭಯತ್ರ ಮಾತ್ರ ಪ್ರಸಿದ್ಧಗಳಲ್ಲ) ನಾಮಾತ್ಮಕ, ಲಿಂಗಾತ್ಮಕ ಶಬ್ದಗಳಿಂದಲೂ ಪರಮ ಮುಖ್ಯವೃತ್ತಿಯಿಂದ ಶ್ರೀಹರಿ

ಯೊಬ್ಬನೇ, ಸೂತ್ರಕಾರರಿಂದ ಈ ಪಾದದಲ್ಲಿ ಪ್ರತಿಪಾದ್ಯನು. ಅಥವಾ ಸ್ವಾತಂತ್ರ್ಯಾದಿ ಹೇತುಗಳಿಂದ ವಾಚ್ಯನೆಂದು ಪ್ರತಿಪಾದಿತನಾಗಿರುತ್ತಾನೆ. ಮಹಾಯೋಗ ವೃತ್ತಿಯಿಂದ ಸರ್ವಶಬ್ದವಾಚ್ಯನಾದುದರಿಂದ (ಶ್ರೀಹರಿಯು) ಅಪರಿಮಿತಗುಣಗಳುಳ್ಳವನು. ಯಾವ ಕಾರಣದಿಂದ ಶಬ್ದಗಳು, (ಯೋಗವೃತ್ತಯಃ=) ಮಹಾಯೋಗದಿಂದ ಇರುತ್ತವೋ ನಿಗಮ, ನಿಘಂಟು ಮೊದಲಾದ ಲೋಕಪ್ರಸಿದ್ಧವಾದ ಯೋಗ ರೂಢಿರೂಪವಾದ ಮುಖ್ಯವೃತ್ತಿಯಿಂದ ಇತರ ವಾಚಕಗಳಾದ ಶಬ್ದಗಳಿಂದಲೂ ಅದನ್ನು ಬಾಧಿಸದೆ ಮಹಾಯೋಗ ವಿದ್ವದ್ರೂಢಿರೂಪವಾದ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸಲ್ಪಟ್ಟಿದ್ದಾನೆ. **''ಅವ್ಯಕ್ತಾತ್ಪುರುಷಃ ಪರಃ''** ಇತ್ಯಾದಿಗಳಲ್ಲಿ ಅವ್ಯಕ್ತ ಜೀವ ಮೊದಲಾದ ಪದಗಳ ಪ್ರವೃತ್ತಿನಿಮಿತ್ತದಿಂದೊಡಗೂಡಿದ ಅವ್ಯಕ್ತನೂ, ಪ್ರಾಣಧಾರಕನೂ, ಮುಖ್ಯವಾಗಿ ಜನಾರ್ದನನೇ, ಅಂತೂ ಅವರತ್ವ ದುಃಖಿತ್ವ ಮೊದಲಾದ ಲಿಂಗ (ಧರ್ಮ) ಗಳಿಂದ ಬೇರೆ ಕಡೆ ಇರುವ ಅವ್ಯಕ್ತ ಜೀವ ಬದ್ಧ ಮೊದಲಾದ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದ ಒಬ್ಬ ಜನಾರ್ದನನೇ ಹೇಳಲ್ಪಡುತ್ತಾನೆ. ಪ್ರಧಾನಾದಿಗಳು ಹೇಳಲ್ಪಡುವುದಿಲ್ಲ. **''ಯತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ'' ''ಏಷೋಽಣುರಾತ್ಮಾ'' ''ಸ ಜೀವನಾಮಾ ಭಗವಾನ್ ಪ್ರಾಣಧಾರಣಹೇತುತಃ''** ಲೋಕಶ್ರೇಷ್ಠವಾದ ವಿಷ್ಣುಸ್ವರೂಪವನ್ನು ಮುಖ್ಯ ಸೂಕ್ಷ್ಮವನ್ನಾಗಿ ತಿಳಿಯಬೇಕೆಂದು ಜ್ಞಾನಿಗಳು ಹೇಳುತ್ತಾರೆ. ಪರಮಸೂಕ್ಷ್ಮನಾದ ಶ್ರೀಹರಿಯು ಮನಸ್ಸಿನಿಂದ ತಿಳಿಯಲ್ಪಡಬೇಕು. ಸರ್ವ ಪ್ರಾಣಗಳನ್ನು ಧರಿಸುವ ಪ್ರಯುಕ್ತ ಶ್ರೀಹರಿಯು ಜೀವನೆನಿಸುವನು. ಇವು ಮೊದಲಾದ ಶಬ್ದಗಳಿಂದ ಅವ್ಯಕ್ತತ್ವಾದಿಗಳು ಶ್ರೀಹರಿಗೇನೇ ಯುಕ್ತಗಳಾಗುತ್ತವೆ. **''ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ಓಂ''** ಪ್ರಧಾನಾದಿಗಳೇ ಕೆಲವರ ಶಾಖೆಗಳಲ್ಲಿ ಹೇಳಲ್ಪಡುತ್ತವೆ ಎಂದೆನ್ನಕೂಡದು. ಅವ್ಯಕ್ತ ಮೊದಲಾದುದು ಪರಮ ಮುಖ್ಯವೃತ್ತಿಯಿಂದ ಬ್ರಹ್ಮನೇ, ಪ್ರಧಾನಾದಿಗಳಲ್ಲ. ಶ್ರುತಿಯು ಹಾಗೆಯೇ ತೋರಿಸುತ್ತದೆ. ಪ್ರಧಾನಾದಿಗಳಲ್ಲಿರತಕ್ಕ ಶ್ರೀಹರಿಯೇ ಅವ್ಯಕ್ತಾದಿಪದಗಳಿಂದ ಸ್ವೀಕರಿಸಿರುವುದರಿಂದ ಬೇರೆ ಕಡೆ ವ್ಯವಹಾರವು ಕೂಡುತ್ತದೆ. **ಆನುಮಾನಿಕಾಧಿಕರಣವು** ॥ 1 ॥

**ಕರ್ಮವಾಕ್ಯೈಶ್ಚ ವಾಚ್ಯಃ-** ಕರ್ಮ, ಅವುಗಳ ಅಂಗಗಳು, ಅವುಗಳ ಕ್ರಮ ದೇಶ, ಕಾಲ, ಅಧಿಕಾರ್ಯಾದಿಗಳನ್ನು ಪ್ರತಿಪಾದಿಸುವ ಶ್ರುತಿಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದಲೇ ಒಬ್ಬ ಜನಾರ್ದನನು ವಾಚ್ಯನಾಗುತ್ತಾನೆ. ಕರ್ಮಾದಿಗಳು ಹೇಳಲ್ಪಡುವುದಿಲ್ಲ. **''ತಾ ವಾ ಏತಾಃ ಋಚಃ ಸರ್ವೇ ವೇದಾಃ'' ''ನಾಮಾನಿ ಸರ್ವಾಣಿ ಯಮಾವಿಶಂತಿ'' ''ತಮೇವೈಕಂ ಜಾನಥ'' ''ಸರ್ವೇ ವೇದಾ ಯತ್ಪದಮಾಮನಂತಿ''** ಸರ್ವ ಋಕ್ಕುಗಳೂ, ಎಲ್ಲಾ ವೇದಗಳೂ ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ. ಸರ್ವನಾಮಗಳೂ ಶ್ರೀಹರಿಯನ್ನೇ ಪ್ರವೇಶಿಸುತ್ತವೆ. ಪರಬ್ರಹ್ಮನೊಬ್ಬನನ್ನೇ ತಿಳಿಯಿರಿ. ಸರ್ವ ವೇದಗಳೂ ಯಾವನ ಸ್ವರೂಪವನ್ನು ತಿಳಿಸುತ್ತವೋ, ಎಂದು ಶ್ರುತ್ಯಾದಿಗಳಿಂದ ಶ್ರೀಹರಿಯು ಸರ್ವಶಬ್ದವಾಚ್ಯನೆಂದು ತಿಳಿಯಲ್ಪಡುತ್ತಾನೆ. **''ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ'' ''ಜ್ಯೋತಿಷಾ ಯಜೇತ''** ಎಂದು ಹೇಳಲ್ಪಟ್ಟ ಜ್ಯೋತಿಸ್ಸು ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ. ಕರ್ಮಾದಿಗಳಲ್ಲ. ಏಕೆಂದರೆ- ಕೆಲವು ಶಾಖಿಗಳು ಆ ಬ್ರಹ್ಮನನ್ನು ಸರ್ವಶಬ್ದವಾಚ್ಯನನ್ನಾಗಿ **''ಇಮಂ**

**ಲೋಕಮಭ್ಯಾರ್ಚತ್**'' ಎಂದು ಉಪಕ್ರಮಿಸಿ ''**ತಾ ವಾ ಏತಾಸ್ಸರ್ವಾ ಋಚಃ**'' ಇತ್ಯಾದಿಗಳಿಂದ ಅಧ್ಯಯನ ಮಾಡುವರು. **ಜ್ಯೋತಿರುಪಕ್ರಮಾಧಿಕರಣವು ॥ 2 ॥**

**ಏಕಃ ಅಮಿತಾತ್ಮಕಃ**- ''**ಯಸ್ಮಿನ್ ಪಂಚ ಪಂಚಜನಾಃ ಆಕಾಶಶ್ಚ ಪ್ರತಿಷ್ಠಿತಃ**'' ಸರ್ವ ಶರೀರದಲ್ಲಿರತಕ್ಕ ಯಾವ ಪರಮಾತ್ಮನಲ್ಲಿ ಪ್ರಾಣಾದಿ ಐವರು (ಅಂದರೆ ಸರ್ವೋತ್ಪಾದಕರಾದುದ ರಿಂದ ಜನಶಬ್ದವಾಚ್ಯಗಳಾದ ಭಗವದ್ರೂಪ ವಿಶೇಷಗಳು) ಆಶ್ರಿತರಾಗಿರುವರೋ, ಆಕಾಶನೆನ್ನುವ ಪರಮಾತ್ಮನೂ, ಪ್ರಕೃತಿಯೂ ಆಶ್ರಿತವಾಗಿಯದೋ, ಅಂತಹ ಪರಮಾತ್ಮನನ್ನು ತಿಳಿಯುವೆನು ಎಂದು ಏಕವಚನಾಂತವಾದ 'ಯತ್' 'ತತ್' ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟವನೂ, ಪಂಚಜನ ಮೊದಲಾದ ಶಬ್ದಗಳ ಅರ್ಥಭೂತನಾದ ಅಮಿತ (ಬಹಳ) ಸ್ವರೂಪಗಳುಳ್ಳವನೂ, ಜನಾರ್ದನನೊಬ್ಬನೇ. ಅಂತೂ ಆಧಾರ ಆಧೇಯತ್ವಾದಿಗಳಿಂದ ಇತರರನ್ನು ಪ್ರತಿಪಾದಿಸುವ ಪಂಚಜನ ಮೊದಲಾದ ಶಬ್ದಗಳಿಂದಲೂ ಪರಮ ಮುಖ್ಯವೃತ್ತಿಯಿಂದ ಶ್ರೀಹರಿಯೇ ಹೇಳಲ್ಪಡುತ್ತಾನೆ. ಈ ಹರಿಯೇ ಶರೀರ ತದಂತರ್ಗತಗಳಾದ ಆಕಾಶ, ಪ್ರಾಣ ಮೊದಲಾದ ಐವರಿಗೂ ನಿಯಾಮಕನು ''**ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ**'' ''**ಯಸ್ಮಿನ್ ಪಂಚ ಪಂಚಜನಾಃ**'' ಎಂದು ಹೇಳಲ್ಪಟ್ಟ ವಿಶೇಷಣಯುಕ್ತರಾದ ಜನರು ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ. ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸುಗಳಲ್ಲ, ಬಹುತ್ವವ್ಯಾಪ್ಯವಾದ ಪಂಚತ್ವ ಸಂಖ್ಯಾವಿಶಿಷ್ಟವಾದ ವಸ್ತುವನ್ನೂ ಪ್ರತಿಪಾದಿಸುವುದರಿಂದಲೂ 'ಯಸ್ಮಿನ್' ಎಂದು ಆಧಾರಾಧೇಯಭಾವವಿದ್ದ ಪ್ರಯುಕ್ತವೂ ಬಹುತ್ವ ಸಂಖ್ಯಾದಿ ವಿರೋಧವಿಲ್ಲ, ಏಕೆಂದರೆ- ಅನೇಕ ರೂಪಗಳು ಇವೆ. ಮತ್ತು ಶರೀರ ನಿಯಾಮಕವಾದ ರೂಪದ್ದೇಶೆಯಿಂದ ಆಕಾಶಾದಿ ನಿಯಾಮಕರೂಪಗಳಿಗೆ ಭೇದವಿದೆ. ನ **ಸಂಖ್ಯೋಪಸಂಗ್ರಹಾಧಿ ಕರಣವು** ॥ 3 ॥

**ಅವಾಂತರಂ ಕಾರಣಂ ಚ**=''**ಆತ್ಮನ ಆಕಾಶಃ ಸಂಭೂತಃ**'' ಈ ವಾಕ್ಯದಲ್ಲಿ ಶ್ರುತವಾದ ಕಾರ್ಯತ್ವ ಕಾರಣತ್ವರೂಪವಾದ ಅವಾಂತರಕಾರಣನು ಯಾರೋ, ಆ ಅವಾಂತರಕಾರಣನೂ ಒಬ್ಬ ಜನಾರ್ದನನು. ಅಂತೂ ಉತ್ಪತ್ತಿಮತ್ವ ಮೊದಲಾದ ಲಿಂಗಗಳಿಂದ ಅನ್ಯತ್ರೈವ ನಿಯತಗಳಾದ (ಇತರ ರನ್ನೇ ಪ್ರತಿಪಾದಿಸುವ) ಆಕಾಶ, ವಾಯು, ಅಗ್ನಿ ಮೊದಲಾದ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದ ಒಬ್ಬ ಜನಾರ್ದನನೇ ಹೇಳಲ್ಪಡುತ್ತಾನೆ. ಆಕಾಶ ಮೊದಲಾದ ಭೂತವು ಹೇಳಲ್ಪಡುವುದಿಲ್ಲ, ಏಕೆಂದರೆ- ಹಿಂದೆ ಹೇಳಿದ ಸರ್ವಶಬ್ದವಾಚ್ಯತ್ವವನ್ನು ಬೋಧಿಸಿಕೊಡುವ ''**ನಾಮಾನಿ ಸರ್ವಾಣಿ**'' ''**ತಾ ವಾ ಏತಾಃ**'' ''**ತಮೇವೈಕಂ ಜಾನಥ**'' ಇವು ಮೊದಲಾದ ಶಬ್ದಗಳಿಂದ ಶ್ರೀಹರಿಯೇ ಹೇಳಲ್ಪಡುತ್ತಾನೆ. ''**ಓಂ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ಓಂ**'' ''**ಸ ಯೋಽತೋಽಶ್ರುತಃ**'' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಹಾಗೆ ''**ಯ ಆಕಾಶೇ ತಿಷ್ಠನ್**'' ಎಂದು ಆಕಾಶಾದಿಗಳಲ್ಲಿದ್ದಾನೆಂದು ಹೇಳಿರುವುದರಿಂದ, ''**ಆತ್ಮನ ಆಕಾಶಃ ಸಂಭೂತಃ**'' ಇತ್ಯಾದಿಗಳಲ್ಲಿ ಕಾರಣನೂ ಕಾರ್ಯನೂ ಎಂದು ಹೇಳಲ್ಪಟ್ಟ ಆಕಾಶಾದಿಯು ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ. **ಕಾರಣತ್ವೇನ ಚಾಕಾಶಾಧಿಕರಣವು** ॥ 4 ॥

**ವಾಚ್ಯಃ**- ಮುಖ್ಯವಾಗಿ ಇತರ ಕಡೆಗಳಲ್ಲಿಯೇ ಪ್ರಸಿದ್ಧಗಳಾದ ಎಲ್ಲಾ ಶಬ್ದಗಳಿಂದಲೂ ಒಬ್ಬ ಜನಾರ್ದನನೇ ಪರಮಮುಖ್ಯವೃತ್ತಿಯಿಂದ ವಾಚ್ಯನಾಗುತ್ತಾನೆ. ''**ಓಂ ಸಮಾಕರ್ಷಾತ್ ಓಂ**'' ಲೌಕಿಕ

ವೈದಿಕ ಎಲ್ಲಾ ಶಬ್ದಗಳಿಂದಲೂ ಹೇಳಲ್ಪಡತಕ್ಕವನು ಬ್ರಹ್ಮನೇ. ಬ್ರಹ್ಮನ ಸಕಾಶದಿಂದ ಸೆಳೆದು ಲೋಕದಲ್ಲಿ ವ್ಯವಹಾರವು. **ಸಮಾಕರ್ಷಾಧಿಕರಣವು.** ।। 5 ।।

**ಪ್ರಕೃತಿಃ**=ಪ್ರಕೃತಿಶಬ್ದದಿಂದ ಹೇಳಲ್ಪಟ್ಟ ಉತ್ಕೃಷ್ಟಕರ್ಮವುಳ್ಳವನು ಒಬ್ಬ ಜನಾರ್ದನನೇ. ಹಾಗೆಯೇ ಸ್ತ್ರೀಲಿಂಗದಿಂದ ಅನ್ಯತ್ರೈವ ಪ್ರಸಿದ್ಧಗಳಾದ ''**ಸೈಷಾ ಪ್ರಕೃತಿಃ**'' ಇತ್ಯಾದಿಗಳಲ್ಲಿರುವ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳಿಂದ ಒಬ್ಬ ಜನಾರ್ದನನೇ ಪರಮಮುಖ್ಯವೃತ್ತಿಯಿಂದ ಹೇಳಲ್ಪಡುತ್ತಾನೆ. ಲಕ್ಷ್ಮ್ಯಾದಿಗಳು ಹೇಳಲ್ಪಡುವುದಿಲ್ಲ, ಏಕೆಂದರೆ- ''**ಹಂತೈತಮೇವ ಸರ್ವಾಣಿ ನಾಮಾನ್ಯಭಿವದಂತಿ**'' ಇದು ಮೊದಲಾದ ಪ್ರತಿಜ್ಞಾ ದೃಷ್ಟಾಂತಗಳಿಂದ ಸರ್ವಶಬ್ದವಾಚ್ಯತ್ವವನ್ನುಪ ಪಾದಿಸುವುದೇ ಮೊದಲಾದ ''**ನಾಮಾನಿ ಸರ್ವಾಣಿ**'' ಇವು ಮೊದಲಾದ ಶಬ್ದಗಳಿಂದಲೂ, ''**ಏಷಸ್ತ್ರೈಷ ಪುರುಷಃ**'' ಇದು ಮೊದಲಾದ ಶಬ್ದಗಳಿಂದಲೂ, ಶ್ರೀಹರಿಯೇ ಮುಖ್ಯವಾಗಿ ಹೇಳಲ್ಪಡುತ್ತಾನೆ. ''**ಓಂ ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್ ಓಂ**'' ''**ಹಂತೈತಮೇವ ಪುರುಷಂ**'' ಎಂಬ ಪ್ರತಿಜ್ಞೆಯೂ ''**ಯಥಾ ನದ್ಯಃ**'' ಎಂಬ ದೃಷ್ಟಾಂತವೂ ಇವುಗಳನ್ನನುಸರಿಸಿರುವು ದರಿಂದ ''**ಸೈಷಾ ಪ್ರಕೃತಿಃ**'' ಎಂದು ಹೇಳಲ್ಪಟ್ಟ ಪ್ರಕೃತಿ ಮೊದಲಾದುದು ಮುಖ್ಯವಾಗಿ ಬ್ರಹ್ಮನೇ. ಶ್ರೀತತ್ವವಲ್ಲವು. **ಪ್ರಕೃತ್ಯಧಿಕರಣವು** ।। 6 ।।

**ಶೂನ್ಯಂ ಚ ಇತ್ಯಾದಿ ಅನ್ಯತ್ರೈವ ನಿಯತೈಃ ಶಬ್ದೈಃ**- ನಿಸ್ಸ್ವರೂಪವಾದುದರಿಂದ ಅನ್ಯತ್ರೈವ ಪ್ರಸಿದ್ಧಗಳಾದ ''**ಶೂನ್ಯಂ ಅಸತ್ ಅಭಾವಃ ತುಚ್ಛಂ**'' ಇದು ಮೊದಲಾದ ನಿಷೇಧಾರ್ಥಕ ಸರ್ವಶಬ್ದಗಳಿಂದಲೂ, ಒಬ್ಬ ಹರಿಯೇ, ಪರಮಮುಖ್ಯವೃತ್ತಿಯಿಂದ ಹೇಳಲ್ಪಡುತ್ತಾನೆ. ಶೂನ್ಯಾದಿಗಳು ಹೇಳಲ್ಪಡುವುದಿಲ್ಲ, ಏಕೆಂದರೆ- ''**ನಾಮಾನಿ ಸರ್ವಾಣಿ**'' ''**ತಮೇವೈಕಂ ಜಾನಥ**'' ''**ತಾ ವಾ ಏತಾಃ ಸರ್ವಾ ಋಚಃ**'' ''**ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ**'' ಇದು ಮೊದಲಾದ ಸರ್ವಶಬ್ದವಾಚ್ಯತ್ವವನ್ನು ತಿಳಿಸಿಕೊಡುವ ಶಬ್ದಗಳಿಂದಲೂ ಶ್ರೀಹರಿಯೇ ಹೇಳಲ್ಪಡುತ್ತಾನೆ. ''**ಓಂ ಏತೇನ ಸರ್ವೇ ವ್ಯಾಖ್ಯಾತಾಃ ವ್ಯಾಖ್ಯಾತಾಃ ಓಂ**'' ಶ್ರೀಹರಿಯ ಅಧಿ ೀನದಲ್ಲಿರುವಿಕೆ ಇದು ಮೊದಲಾದ ಹೇತು ಗಳಿಂದ ಶೂನ್ಯ ಅಸತ್ ಮೊದಲಾದ ಶಬ್ದಗಳು ಮುಖ್ಯವೃತ್ತಿಯಿಂದ ಬ್ರಹ್ಮನೆಂದೇ ಪ್ರತಿಪಾದಿಸಲ್ಪಟ್ಟವು. **ಏತೇನ ಸರ್ವೇ ವ್ಯಾಖ್ಯಾತಾಧಿಕರಣವು** ।। 7 ।।

ಅವ್ಯಕ್ತ ಶಬ್ದವೇ ಮೊದಲಾದ ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳಿಂದ ಶ್ರೀಹರಿಯೇ ಪರಮಮುಖ್ಯವೃತ್ತಿಯಿಂದ ಹೇಳಲ್ಪಡುತ್ತಾನೆ.

ಯಾವ ಕಾರಣದಿಂದ, ಶಬ್ದಗಳು ಅವಯವಾರ್ಥ ಸಂಬಂಧದಿಂದ ಪ್ರವೃತ್ತಿಯುಳ್ಳವುಗಳೋ, ಆದಕಾರಣ, ಅನ್ಯತ್ರ, ಉಭಯತ್ರ, ಅನ್ಯತ್ರೈವ ಚ (ಬೇರೆ ಕಡೆಗಳಲ್ಲಿ, ಎರಡು ಕಡೆಗಳಲ್ಲಿ, ಬೇರೆ ಕಡೆಗಳಲ್ಲಿಯೇ) ಪ್ರಸಿದ್ಧಗಳಾದ ಎಲ್ಲಾ ಶಬ್ದಗಳಿಂದಲೂ ವಾಚ್ಯನಾದುದರಿಂದ ಜನಾರ್ದನನೇ ಅನಂತಾನಂತಗುಣಗಳುಳ್ಳವನು. ಹೀಗೆ 1ನೇ ಅಧ್ಯಾಯಾರ್ಥವು ಹೇಳಲ್ಪಟ್ಟಿತು.

**ಪ್ರಥಮಾಧ್ಯಾಯದ ಚತುರ್ಥ ಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ।। ೧ ।। ಪಾದ ।। ೪ ।। ಶ್ಲೋಕ ।। ೬ ।।**

ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತ ಬ್ರಹ್ಮಸೂತ್ರಾಣುಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಪ್ರಥಮೋಽಧ್ಯಾಯಃ ॥ ೧ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ
ಶ್ರೀವೇದವ್ಯಾಸಕೃತ ಬ್ರಹ್ಮಸೂತ್ರಾಣುಭಾಷ್ಯದಲ್ಲಿ
೧ನೇ ಅಧ್ಯಾಯವು ಸಮಾಪ್ತವಾಯಿತು. ॥ ೧ ॥

## ಎರಡನೇ ಅಧ್ಯಾಯವು

ಒಂದನೇ ಅಧ್ಯಾಯದಲ್ಲಿ ಶ್ರೀಹರಿಗೆ ಅನಂತಗುಣಗಳಿವೆ ಎಂದು ಹೇಳಿದ್ದು ಅಯುಕ್ತವು. ಯುಕ್ತ್ಯಾದಿಗಳಿಂದ ವಿರೋಧವು ಪ್ರಾಪ್ತವಾಗುವುದು. ಆದುದರಿಂದಲೇ ಶ್ರೀಹರಿಗೆ ದೋಷಗಳೂ ಸಂಭವಿಸಬಹುದು ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 2ನೇ ಅಧ್ಯಾಯವು ಪ್ರವೃತ್ತವಾಗಿದೆ.

**ಮೂಲ ॥ ಓಂ ಶ್ರೌತಸ್ಮೃತಿವಿರುದ್ಧತ್ವಾತ್ಸ್ಮೃತಯೋ ನ ಗುಣಾನ್ಹರೇಃ ।**
**ನಿಷೇದ್ಧುಂ ಶಕ್ನುಯುರ್ವೇದಾ ನಿತ್ಯತ್ವಾನ್ಮಾನಮುತ್ತಮಂ ॥ ೧ ॥**

**ದೇವತಾವಚನಾದಾ(ನ್ನಾ)ಪೋ ವದಂತೀತ್ಯಾದಿಕಂ (ನಾ)ವಚಃ ।**
**ನಾಯುಕ್ತವಾದ್ಯಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ॥ ೨ ॥**

**ಅಸಜ್ಜೀವಪ್ರಧಾನಾದಿಶಬ್ದಾ ಬ್ರಹ್ಮೈವ ನಾಪರಂ।**
**ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ॥ ೩ ॥**

**ಸ್ವಾತಂತ್ರ್ಯಾತ್ಸರ್ವಕರ್ತೃತ್ವಾನ್ನಾಯುಕ್ತಂ ತದ್ವದೇಚ್ಛ್ರುತಿಃ ॥ ೪ ॥**

**ಅರ್ಥ ॥ ಶ್ರೌತಸ್ಮೃತಿವಿರುದ್ಧತ್ವಾತ್**=ಶ್ರುತಿಸಂವಾದವುಳ್ಳ ಪಂಚರಾತ್ರ ಮೊದಲಾದ ಸ್ಮೃತಿಗಳಿಂದ ವಿಶೇಷಾಕಾರವಾಗಿ ಬಾಧಿಸಿಕೊಳ್ಳಲ್ಪಟ್ಟಪ್ರಯುಕ್ತ, **ಸ್ಮೃತಯಃ**=ಶೈವಾದಿಸ್ಮೃತಿಗಳು, **ಹರೇಃ**=ಶ್ರೀ ಹರಿಗೆ, **ಗುಣಾನ್**=ಶ್ರುತ್ಯುಕ್ತಗಳಾದ ಜ್ಞಾನಾನಂದಾದಿಗುಣಗಳನ್ನು, **ನಿಷೇದ್ಧುಂ**=ನಿಷೇಧಿಸಲಿಕ್ಕೆ, **ನ ಶಕ್ನುಯುಃ**= ಸಮರ್ಥಗಳಾಗಲಾರವು. (ಅಂದರೆ ಗುಣಗಳು ಇಲ್ಲವೆಂದು ಬೋಧಿಸಲು ಅಸಮರ್ಥಗಳು, ವೈಷ್ಣವಸ್ಮೃತಿಗಳಿಗೆ ಮುಖ್ಯಸರ್ವಜ್ಞನಾದ ವಿಷ್ಣುವಿನ ಪ್ರತ್ಯಕ್ಷಮೂಲಕತ್ವವಿದ್ದುದರಿಂದಲೂ ಶ್ರುತಿಸಂವಾದವಿದ್ದುದರಿಂದಲೂ ಪ್ರಾಬಲ್ಯವು. ''**ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶ ದೋಷಪ್ರಸಂಗಾತ್ ಓಂ**'' ಶೈವ ಸಾಂಖ್ಯಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯಾಖ್ಯ ದೋಷವು ಪ್ರಸಕ್ತವಾಗುವುದು, ಎಂದನ್ನಕೂಡದು. ಏಕೆಂದರೆ-ಶ್ರೌತಸ್ಮೃತಿಗಳಿಗೆ ಶ್ರುತಿಸಂವಾದದಿಂದ ಪ್ರಾಬಲ್ಯವಿದ್ದ ಪ್ರಯುಕ್ತ ನಿರವಕಾಶವಿದೆ, ಆದಪ್ರಯುಕ್ತ ಶೈವಾದಿಸ್ಮೃತಿಗಳಿಗೇನೇ ಅಪ್ರಾಮಾಣ್ಯಾಖ್ಯದೋಷವು ಚೆನ್ನಾಗಿ ಸಂಬಂಧಿಸುತ್ತದೆ.) **ಸ್ಮೃತ್ಯಧಿಕರಣವು** ॥ 1 ॥

**ವೇದಾಃ** - ಋಗಾದಿವೇದಗಳು, ಶ್ರುತಿಸಂವಾದವುಳ್ಳ ಸ್ಮೃತಿಗಳೂ, **ನಿತ್ಯತ್ವಾತ್**=ವೇದಗಳಿಗೆ

ಅಪೌರುಷೇಯತ್ವವಿದ್ದುದರಿಂದಲೂ, **''ವಾಚಾ ವಿರೂಪ ನಿತ್ಯಯಾ'' ''ನಿತ್ಯಾ ವೇದಾಃ ಸಮಸ್ತಾಶ್ಚ''** ಇದು ಮೊದಲಾದ ಶ್ರುತಿ ಸ್ಮೃತಿಗಳಿಂದ ವೇದಗಳಿಗೆ ನಿತ್ಯತ್ವವು ಸಿದ್ಧವಾದ ಪ್ರಯುಕ್ತವೂ, **ಉತ್ತಮಂ ಮಾನಂ**=ಅತ್ಯುತ್ತಮ ಪ್ರಮಾಣವು. (ಅಂದರೆ, ಸಂವಾದಾಪೇಕ್ಷೆಯಿಲ್ಲದೇನೇ ಪ್ರಮಾಣವು. ಮತ್ತು ಪುರುಷದೋಷನಿಬಂಧನವಾದ ದೋಷವಿಲ್ಲದಿರುವುದರಿಂದ ವೇದಾನುಸಾರಿಗಳಾದ ಸ್ಮೃತಿಗಳೂ ಉತ್ತಮ ಪ್ರಮಾಣವು. ಅಂತೂ ಅಪ್ರಾಮಾಣ್ಯಕ್ಕೆ ದೋಷವೇ ಕಾರಣವಾದುದರಿಂದ ವಾಕ್ಯದಲ್ಲಿರುವ ದೋಷಗಳಿಗೆ ಸ್ವತಂತ್ರಪುರುಷನ ದೋಷವು ಕಾರಣವಾದುದರಿಂದ ವೇದವನ್ನು ನಿರ್ಮಿಸಿದ ಪುರುಷನೇ ಇಲ್ಲದಿರುವುದರಿಂದ ದೋಷಗಳೂ ಇಲ್ಲವು. ವೇದಗಳಿಗೆ ಯಥಾರ್ಥಜ್ಞಾನವನ್ನು ಹುಟ್ಟಿಸುವ ಶಕ್ತಿಯು ಸ್ವಾಭಾವಿಕವೇ. ಅಂದರೆ ವೇದಗಳ ಯಥಾರ್ಥಜ್ಞಾನವನ್ನು ಹುಟ್ಟಿಸುವ ಸಾಮರ್ಥ್ಯಕ್ಕೆ ಗುಣಾಪೇಕ್ಷೆಯಿಲ್ಲವು. **''ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ''** ಶ್ರುತಿ ಆದನ್ನನುಸರಿಸಿರುವ ಸ್ಮೃತಿರೂಪವಾದ ಶಾಸ್ತ್ರಕ್ಕೆ ಶೈವಾದಿ ಸ್ಮೃತಿಗಳಂತೆಯೇ ಅಪ್ರಾಮಾಣ್ಯವಿಲ್ಲ, ಶ್ರುತಿಯು ಅಪೌರುಷೇಯವಾದ ಪ್ರಯುಕ್ತವೂ ಶ್ರೌತಸ್ಮೃತಿಯು ಶ್ರುತಿಯನ್ನನುಸರಿಸಿರುವ ಪ್ರಯುಕ್ತವೂ ಸ್ವತಃ ಪ್ರಾಮಾಣ್ಯರೂಪ ವೈಲಕ್ಷಣ್ಯವಿದೆ. ಅದಾದರೂ **''ವಾಚಾ ವಿರೂಪ ನಿತ್ಯಯಾ'' ''ಭಾರತಂ ಪಂಚರಾತ್ರಂ ಚ ವೇದಾಃ''** ಇತ್ಯಾದಿ ಶಬ್ದಗಳಿಂದ ಸಿದ್ಧವಾಗಿದೆ.) **ನವಿಲಕ್ಷಣತ್ವಾಧಿಕರಣವು** ॥ 2 ॥

**ಆಪಃ**=ಜಲಗಳು, ವದಂತಿ=ಹೇಳುತ್ತವೆ, **ಇತ್ಯಾದಿಕಂ ವಚಃ**=**''ಆಪೋಽಬ್ರುವನ್'' ''ತತ್ತೇಜೋಽಸೃಜತ''** ಇದು ಮೊದಲಾದ ಮಾತು, **ನ ಅಯುಕ್ತವಾದಿ**=ಯುಕ್ತಿವಿರುದ್ಧವಾದ ಅರ್ಥವನ್ನು ಹೇಳತಕ್ಕುದಲ್ಲ, ಏಕೆಂದರೆ- **ದೇವತಾವಚನಾತ್**=ಜಲಾದಿಗಳಿಗೆ ಅಭಿಮಾನಿಗಳಾದ ದೇವತೆಗಳ ವಾಕ್ಯವಾದುದರಿಂದಲೂ, ಅಬಾದಿಶಬ್ದಗಳಿಂದ ತದಭಿಮಾನಿಗಳಾದ ದೇವತೆಗಳನ್ನೇ ಪ್ರತಿಪಾದಿಸುವುದರಿಂದಲೂ, **''ಪೃಥಿವ್ಯಾದ್ಯಭಿಮಾನಿನ್ಯೋ ದೇವತಾ ಪ್ರಥಿತಾ ಜಸಃ''** ಇದು ಮೊದಲಾದ ದೇವತೆಗಳನ್ನು ಪ್ರತಿಪಾದಿಸುವ ಆಗಮರೂಪವಾಕ್ಯದಿಂದಲೂ, (ಪಾ. ಆಪೋವದಂತೀತ್ಯಾದಿನಾ=**''ಆಪೋ ವದಂತಿ''** ಇತ್ಯಾದಿ ವಾಕ್ಯದಿಂದ, **ದೇವತಾವಚನಾತ್**= ದೇವತೆಯನ್ನು ಪ್ರತಿಪಾದಿಸುವುದರಿಂದ, **ವಚಃ**=ಅಂತಹ ವಾಕ್ಯವು, ಅಯುಕ್ತವಾದಿ ನ=ಯುಕ್ತಿವಿರುದ್ಧಾರ್ಥವನ್ನು ಹೇಳತಕ್ಕದು ಆಗುವುದಿಲ್ಲ, ಆದ ಪ್ರಯುಕ್ತ, **ವಚಃ**=ಆ ಮಾತು, **ನ** =ಅಪ್ರಮಾಣವಲ್ಲ.) (**''ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ'' ''ಮೃದಬ್ರವೀತ್''** ಇತ್ಯಾದಿ ಶ್ರುತಿಗಳಲ್ಲಿ ಅಭಿಮಾನಿಯಾದ ಚೇತನವನ್ನೇ ಹೇಳಿದ್ದು, ಜಡವನ್ನು ಹೇಳಿದ್ದಲ್ಲ, ಆದ ಪ್ರಯುಕ್ತ **''ಮೃನ್ನ ವಕ್ತ್ರೀ ಜಡತ್ವಾತ್''** ಜಡವಿದ್ದ ಪ್ರಯುಕ್ತ ಮಣ್ಣು ಹೇಳುವುದಿಲ್ಲ, ಎಂಬ ಯುಕ್ತಿವಿರೋಧವಿಲ್ಲ, ಅಭಿಮಾನಿಗೆ ದೇಹವಿದ್ದ ಪ್ರಯುಕ್ತ ಆದರ್ಶನಾದಿಗಳು ಹೇಗೆ ಕೂಡುತ್ತವೆ ಎಂದರೆ- ಸಾಮರ್ಥ್ಯ ಅಭಿಮನ್ಯಮಾನಗಳಾದವುಗಳಲ್ಲಿ ವ್ಯಾಪ್ತಿ ಇವುಗಳಿಂದ ಸರ್ವವೂ ಯುಕ್ತವಾಗುತ್ತದೆ.) **ಅಭಿಮಾನ್ಯಧಿಕರಣವು** ॥ 3 ॥

**ಅಸತ್**=ಪ್ರಲಯಕಾಲದಲ್ಲಿರುವ ವಿಶ್ವಪ್ರಾಗಭಾವವು, **ಕಾರಣಂ**=ಕರ್ತೃ ಆದುದಾಗಿ, **ಕ್ವಚಿತ್**= ಯಾವ ವಸ್ತುವಿನಲ್ಲಿಯೂ, **ನೈವ ದೃಶ್ಯತೇ**=(ಪ್ರಮಾಣಗಳಿಂದ) ಕಾಣಲ್ಪಡುವುದೇ ಇಲ್ಲವು. (ಅಂದರೆ ಕೇವಲ ನಿಷೇಧಸ್ವರೂಪವೇ ಆಗಿರುವುದರಿಂದ ಅಭಾವವು ಕರ್ತೃ ಆಗಲಾರದು. ಅಥವಾ ಅಭಾವವು ಉಪಾದಾನಕಾರಣವಾಗಿದ್ದರೆ ಪ್ರಲಯದಲ್ಲಿ ಅಭಾವವೇ ಅವಶಿಷ್ಟವಾಗಬೇಕಾಗುವುದು. ಆದರೆ ಯಾವ ಪ್ರಮಾಣದಲ್ಲಿಯೂ ಪ್ರಲಯಕಾಲದಲ್ಲಿ ಕೇವಲ ಅಭಾವವು ಅವಿಶಿಷ್ಟವಾದುದು

ಕಾಣಲ್ಪಡಲಿಲ್ಲ, ಅಥವಾ ಕಾರಣವು ಪ್ರಲಯಕಾಲದಲ್ಲಿ ಅಸತ್ತು (ಅಭಾವವು) ಆಗುವುದೇ ಇಲ್ಲವು, ಭಾವವೇ. ಅನುಮಾನರೂಪಪ್ರಮಾಣದಿಂದಲೂ ಹಾಗೆಯೇ ದೃಷ್ಟವಾಗುತ್ತದೆ. ''**ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ**'' ಪ್ರಲಯಕಾಲದಲ್ಲಿರತಕ್ಕ ವಿಶ್ವಪ್ರಾಗಭಾವವು ಜಗತ್ಕಾರಣವೆಂದು ಹೇಳಕೂಡದು, ಅಭಾವಧರ್ಮವಾಗದೆ ಸ್ವರೂಪದಿಂದಲೇ ನಿಷೇಧಬುದ್ಧಿಗೆ ವಿಷಯವಾಗಿದೆ.) **ಅಸದಧಿಕರಣವು** ॥ 4 ॥

**ಅಸಜ್ಜೀವಪ್ರಧಾನಾದಿಶಬ್ದಾಃ**=ಅಸತ್ ಜೀವ ಪ್ರಧಾನ ಮೊದಲಾದ ಶಬ್ದಗಳು, **ಬ್ರಹ್ಮೈವ**= ಪರಬ್ರಹ್ಮನನ್ನೇ, **ಕಾರಣತ್ವೇನ**=ಕಾರಣನನ್ನಾಗಿ, **ವದಂತಿ**=ಹೇಳುತ್ತವೆ. **ಕ್ವಾಪಿ**=ಎಲ್ಲಿಯೂ, ಅಪರಂ= ಇತರರನ್ನು, **ನ ವದಂತಿ**=ಕಾರಣರನ್ನಾಗಿ ಹೇಳುವುದಿಲ್ಲ. (ಅಂದರೆ, ಹೇಗೆ ಅಸತ್ತಿಗೆ ಕಾರಣತ್ವವು ಎಲ್ಲಿಯೂ ಉಪಲಬ್ಧವಾಗಲಿಲ್ಲವೊ ಹಾಗೆಯೇ ಜೀವ ಪ್ರಧಾನ ಕಾಲ ಧರ್ಮಾದಿಗಳೂ ಕಾರಣವಾಗಿ ಎಲ್ಲಿಯೂ ಉಪಲಬ್ಧವಾಗಲಿಲ್ಲ, ಸುಖ ದುಃಖಾದಿಗಳಲ್ಲಿ ಜೀವರಿಗೆ ಸ್ವಾತಂತ್ರ್ಯವು ದೃಷ್ಟವಾಗಲಿಲ್ಲ, ಪ್ರಧಾನಾದಿಗಳು ಜಡಗಳಾದುದರಿಂದ ಅಸ್ವತಂತ್ರಗಳಾಗಿವೆ. ಆ ಕಾರಣ ಕಾರಣತ್ವಪರಗಳಾದ ಅಸದಾದಿಶಬ್ದಗಳು ಮುಖ್ಯವಾಗಿ ಪರಬ್ರಹ್ಮನನ್ನೇ ಪ್ರತಿಪಾದಿಸುತ್ತವೆ. ''**ಓಂ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ**'' ಸತ್ತು ಕಾರಣವು ಎನ್ನುವಲ್ಲಿ ದೃಷ್ಟಾಂತವಿದ್ದ ಪ್ರಯುಕ್ತವೂ, ಜೀವಾದಿಗಳು ಕಾರಣರು ಎನ್ನುವಲ್ಲಿ ದೃಷ್ಟಾಂತವಿಲ್ಲದಿದ್ದ ಪ್ರಯುಕ್ತವೂ ವೇದಗಳಲ್ಲಿ ಪರಿಗ್ರಹಿಸದಿರುವ ವೇದವಿರುದ್ಧಗಳಾದ ಜೀವ ಕಾಲ ಸ್ವಭಾವಗಳು ಕರ್ತೃಗಳು ಎಂಬ ಪಕ್ಷಗಳೂ ನಿರಸ್ತಗಳಾದವು.) **ಏತೇನ ಶಿಷ್ಟಾ ಅಧಿಕರಣವು** ॥ 5 ॥

**ಹರಿಃ ಪೂರ್ಣಗುಣಃ**=(ಜೀವೇಶ್ವರರ ಭೇದವು ನಿರ್ದೋಷಗಳಾದ ಶ್ರುತಿ ಸಾಕ್ಷ್ಯಾದಿಗಳಿಂದ ಸಿದ್ಧವಾದ ಪ್ರಯುಕ್ತ ಜೀವೇಶ್ವರೈಕ್ಯವು ಬಾಧಿತವೇ ಆಗಿದೆ. ಆದುದರಿಂದ) ಶ್ರೀಹರಿಯು ಪರಿಪೂರ್ಣ ಗುಣಗಳುಳ್ಳವನೇ. (''**ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ಓಂ**'' ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮತ್ವವು ಪ್ರಾಪ್ತವಾಗುತ್ತದೆ ಎಂದು ''**ಪರೇಽವ್ಯಯೇ ಸರ್ವ ಏಕೀಭವಂತಿ**'' ಇತ್ಯಾದಿಗಳಲ್ಲಿ ಹೇಳಿರುವುದರಿಂದ ಜೀವೇಶರಿಗೆ ಭೇದವಿಲ್ಲ, ಶ್ರುತಿಯಲ್ಲಿರತಕ್ಕ ಐಕ್ಯಪ್ರಯೋಗವು ಲೋಕದಂತೆ ಸ್ಥಾನೈಕ್ಯ ಮತ್ಯೈಕ್ಯಾದಿ ನಿಮಿತ್ತಕವು.) **ಭೋಕ್ತ್ರಧಿಕರಣವು** ॥ 6 ॥

**ಸ್ವಾತಂತ್ರ್ಯಾತ್**=ಶ್ರೀ ಪರಬ್ರಹ್ಮನಿಗೇನೇ ಸ್ವಾತಂತ್ರ್ಯವಿದ್ದುದರಿಂದ, ಇತರರಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ, **ಶ್ರುತಿಃ**=ಯುಕ್ತಿವಿರುದ್ಧಾರ್ಥವನ್ನು ಹೇಳತಕ್ಕುದು ಶ್ರುತಿಯು, **ನ**=ಆಗುವುದಿಲ್ಲ, **ತತ್**=ಶ್ರೀಹರಿಗೇನೇ ಸ್ವಾತಂತ್ರ್ಯವು ಇತರರಿಗೆ ಸ್ವಾತಂತ್ರ್ಯವಿಲ್ಲವೆನ್ನುವುದನ್ನು, **ಶ್ರುತಿಃ**=''**ಕಿಂ ಸ್ವಿದಾಸೀದಧಿಷ್ಠಾಣಮಾರಂಭಣಂ** '' ''**ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾ**'' ಇದು ಮೊದಲಾದ ಸಾಧನಾಂತರಗಳಿಗೆ ಸ್ವಾತಂತ್ರ್ಯವನ್ನು ನಿರಾಕರಿಸತಕ್ಕ ಶ್ರುತಿಯು, **ವದೇತ್**= ಪ್ರತಿಪಾದಿಸುತ್ತದೆ. **ಅಯುಕ್ತಂ ನ**=ಯುಕ್ತಿರಹಿತವಾದುದು ಅಲ್ಲವು. ಸರ್ವ ವಸ್ತುಗಳಿಗೂ ಅವನ ಅಧೀನತೆಯಿದೆ, ಸಾಧನಗಳಿಗೆ ಸ್ಥಿತಿಯನ್ನು ಕೊಡುವುದು ಇದು ಮೊದಲಾದ ಯುಕ್ತಿಗಳಿಂದ ಸಿದ್ಧವೂ ಆಗಿರುತ್ತದೆ. **ತತ್**=ಸಾಧನಸ್ವರೂಪವನ್ನು ನಿರಾಕರಿಸತಕ್ಕುದು, **ಅಯುಕ್ತಂ**=ಅಯುಕ್ತವು. **ತತ್**=ಆ ಸಾಧನಗಳ ಸಮುದಾಯವನ್ನು, **ಶ್ರುತಿಃ**=ಶ್ರುತಿಯು, **ವದೇತ್**=ಪ್ರತಿಪಾದಿಸುತ್ತದೆ. **ತತ್ ಅಯುಕ್ತಂ ನ**=ಅದು ಅಯುಕ್ತವಲ್ಲವು. (''**ಓಂ ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ಓಂ**'' ಸ್ವತಂತ್ರ ಸಾಧನಕ್ಕೆ

ಬ್ರಹ್ಮನಿಂದ ಭೇದವಿಲ್ಲ. ಅಂದರೆ, ಸ್ವರೂಪಸಾಮರ್ಥ್ಯದಿಂದಲೇ ಸರ್ವಕರ್ತೃತ್ವವು, ಬೇರೆ ಸ್ವತಂತ್ರಸಾಧನದ ಅಪೇಕ್ಷೆಯಿಲ್ಲ. **''ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಥಾಸೀತ್''** ಎಂದು ಸ್ವತಂತ್ರ ಅಧಿಷ್ಠಾನಾದಿಗಳನ್ನು ಆಕ್ಷೇಪಿಸತಕ್ಕ ಶಬ್ದವಿದ್ದುದಿಂದ.) **ಆರಂಭಣಾಧಿಕರಣವು.** ॥ 7 ॥

**ಸರ್ವಕರ್ತೃತ್ವಾತ್**=ಶ್ರೀಹರಿಗೇನೇ ಸರ್ವಕರ್ತೃತ್ವವಿದ್ದುದರಿಂದ, **ಅಯುಕ್ತಂ**=ಯುಕ್ತಿವಿರುದ್ಧ ವಾದ ಜೀವಕರ್ತೃತ್ವವನ್ನು, **ಶ್ರುತಿಃ ನ ವದೇತ್**=ಶ್ರುತಿಯು ಹೇಳುವುದಿಲ್ಲ. **ತಚ್ಚ**=ಜೀವಕರ್ತೃತ್ವವು, **ಅಯುಕ್ತಂ**=ಯುಕ್ತಿರಹಿತವಾದುದು. ಹಿತವನ್ನು ಮಾಡದಿರೋಣ, ಅಹಿತವನ್ನು ಮಾಡುವಿಕೆ ಇದು ಮೊದಲಾದ ಯುಕ್ತಿಗಳಿಂದ ವಿರುದ್ಧವೂ ಆಗಿದೆ. (**''ಓಂ ಇತರ ವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ ಓಂ''** ಜೀವನು ಕರ್ತನೆಂದು **''ಜೀವಾದ್ಭವಂತಿ ಭೂತಾನಿ''** ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಜೀವನು ಸ್ವತಂತ್ರಕರ್ತನಾದರೆ ಹಿತವನ್ನು ಮಾಡದಿರುವುದು ಅಹಿತವನ್ನು ಮಾಡಿಕೊಳ್ಳುವಿಕೆ ಎಂಬ ದೋಷಗಳು ಬರುತ್ತವೆ. ಸ್ವತಂತ್ರನಿಗೆ ಅವೆರಡು ಕೂಡಲಾರವು.) ಇತರ **ವ್ಯಪದೇಶಾಧಿಕರಣವು** ॥ 8 ॥

ಅಥವಾ **ತತ್**=ಶ್ರೀಹರಿಗೆ ಸ್ರಷ್ಟೃತ್ವ ಮೊದಲಾದ ಅನಂತಗುಣಗಳು, **ಅಯುಕ್ತಂ ನ**=ಕೃತ್ಸ್ನಪ್ರಸಕ್ತಿ ಮೊದಲಾದ ಯುಕ್ತಿವಿರುದ್ಧವಾದುದು ಅಲ್ಲವು. **ತತ್**=ಲೋಕದಲ್ಲಿ ವಿರುದ್ಧಗಳಾದ ಧರ್ಮಗಳಿಗೂ ಶ್ರೀಹರಿಯಲ್ಲಿ ವಿರೋಧವಿಲ್ಲವೆನ್ನುವುದನ್ನು, **ಶ್ರುತಿಃ**=**''ಯೋಽಸೌ ವಿರುದ್ಧಃ ಅವಿರುದ್ಧ''** ಇದು ಮೊದಲಾದ ಶ್ರುತಿಯು (ಹಾಗೆಯೇ) ಅಪ್ರಾಕೃತಗಳಾದ ಕೈಕಾಲುಗಳು ಇವೆ ಎಂಬುವುದನ್ನು **''ಅಪಾಣಿ ಪಾದೋ ಜವನೋ ಗೃಹೀತಾ''** ಇದು ಮೊದಲಾದ ಶ್ರುತಿಯೂ, ಪ್ರತಿಪಾದಿಸುತ್ತದೆ. (''ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ'') **''ಯೋಽಸೌ ವಿರುದ್ಧೋ ಅವಿರುದ್ಧೋ ಮನುರಮನುಃ''** ಇತ್ಯಾದಿ ಶ್ರುತಿಗಳಿಂದ ಲೋಕವಿರುದ್ಧ ಧರ್ಮಗಳೂ ಶ್ರೀಹರಿಯಲ್ಲಿ ಅವಿರುದ್ಧಗಳಾಗಿವೆ ಎಂದು ಶ್ರುತವಾದ ಪ್ರಯುಕ್ತವೇ ಈಶ್ವರನು ಕರ್ತನೆಂದರೆ ಕೃತ್ಸ್ನಪ್ರಸಕ್ತ್ಯಾದಿಯುಕ್ತಿ ವಿರೋಧವಿಲ್ಲ. ಶ್ರುತಿಯಲ್ಲಿ ಹೇಳಿದ್ದರೂ ಯುಕ್ತಿವಿರುದ್ಧವಾದುದನ್ನು ಹೇಗೆ ಅಂಗೀಕರಿಸುವುದೆಂದರೆ ಶಬ್ದಗಳಿಂದಲೇ ತಿಳಿಯಲಿಕ್ಕೆ ಯೋಗ್ಯ ವಾಗಿರುವುದರಿಂದ ಕೇವಲ ಯುಕ್ತಿಗಳಿಗೆ ಅಯೋಗ್ಯ ವಾಗಿರುವುದರಿಂದ ಅದರಲ್ಲಿ ಯುಕ್ತಿವಿರೋಧ ವಿಲ್ಲ.) **ಶ್ರುತಿಶಬ್ದಮೂಲತ್ವಾಧಿಕರಣವು** ॥ 9 ॥

ಅಥವಾ ಸ್ರಷ್ಟೃತ್ವಾದ್ಯನಂತಗುಣಗಳು ಯುಕ್ತಿವಿರುದ್ಧಗಳಲ್ಲ. ಫಲವನ್ನಪೇಕ್ಷಿಸದೆ ಕ್ರೀಡೆ ಯಿಂದಲೇ ಸ್ರಷ್ಟೃತ್ವಮೊದಲಾದ ಗುಣಗಳಿವೆ ಎಂಬುವುದನ್ನು **''ದೇವಸ್ಯೈಷ ಸ್ವಭಾವೋಽಯಂ''** ಇದು ಮೊದಲಾದ ಶ್ರುತಿಯು ಪ್ರತಿಪಾದಿಸುತ್ತದೆ. (ಅಂದರೆ, ಲೋಕದಲ್ಲಿ ಮದೋನ್ಮತ್ತನಿಗೆ ನರ್ತನಾದಿಗಳಂತೆಯೇ ಪೂರ್ಣನಾದ ಶ್ರೀಹರಿಗೂ ಲೀಲೆಯಿಂದ ಸೃಷ್ಟಿಯು ಕೂಡುವುದು. **''ಓಂ ನ ಪ್ರಯೋಜನವತ್ವಾತ್ ಓಂ''** ಸೃಷ್ಟಿಯಿಂದ ಹೊಂದತಕ್ಕ ಪ್ರಯೋಜನವನ್ನು ಮೊದಲೇ ಹೊಂದಿರುವುದ ರಿಂದ, ಅಥವಾ ಪರರ ಪ್ರಯೋಜನವಿದ್ದುದರಿಂದ, ಶ್ರೀಹರಿಯ ಕರ್ತೃತ್ವವು ತನ್ನ ಪ್ರಯೋಜನಕ್ಕಾಗಿ ಅಲ್ಲ.) **ನ ಪ್ರಯೋಜನವತ್ವಾಧಿಕರಣವು** ॥ 10 ॥

ಅಥವಾ ಸ್ರಷ್ಟೃತ್ವಾದಿಗುಣಗಳು ಹಿಂದಿನ ಯುಕ್ತಿಗಳಿಂದ ವಿರುದ್ಧಗಳಾಗುವುದಿಲ್ಲ. **''ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ''** ಇದು ಮೊದಲಾದ ಶ್ರುತಿಯು ಆಯಾಯ ಕರ್ಮ ವನ್ನಪೇಕ್ಷಿಸಿಕೊಂಡೇ ಸ್ರಷ್ಟೃತ್ವಾದಿಗಳನ್ನು ಪ್ರತಿಪಾದಿಸುತ್ತದೆ. (ಅನಾದಿಯಾದ ಆಯಾಕರ್ಮವನ್ನ

ಪೇಕ್ಷಿಸಿಕೊಂಡು ಸುಖಾದಿಗಳನ್ನು ಕೊಡುವುದರಿಂದ ವೈಷಮ್ಯಾದಿದೋಷಗಳಿಗೆ ಪ್ರಸಕ್ತಿಯಿಲ್ಲವು. ಅಥವಾ ಅವರವರ ಅನಾದಿಯಾದ ಪೂರ್ವಪೂರ್ವ ಪುಣ್ಯಾದಿಗಳನ್ನಪೇಕ್ಷಿಸಿ ತಾನು ಅವರವರಿಂದ ಮಾಡಿಸಿ ಮೇಲು ಮೇಲಿನ ಪುಣ್ಯಾದಿಗಳನ್ನಪೇಕ್ಷಿಸಿ ಸುಖದುಃಖ ಮೊದಲಾದ ಫಲಗಳನ್ನು ಕೊಡುವುದರಿಂದ ಪ್ರಾಪ್ತಗಳಾದ ವೈಷಮ್ಯಾದಿಗಳು ದೋಷಗಳಲ್ಲವೆಂದು **''ಸ ಕಾರಯೇತ್ಪುಣ್ಯಮಥಾಪಿ ಪಾಪಂ ನ ತಾವತಾ ದೋಷವಾನೀಶಿತಾऽಪಿ''** ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ವೇದಗಳಿಗೆ ಅಪ್ರಾಮಾಣ್ಯಕ್ಕೆ ಕಾರಣವಾಗುವುದಿಲ್ಲವು, ಕಾರಣ ಯಾವ ದೋಷವೂ ಇಲ್ಲವು. **''ಓಂ ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ''** ಸುಖದುಃಖಾದಿ ಫಲಗಳನ್ನು ಕೊಡುವುದರಲ್ಲಿ ಕರ್ಮದ ಅಪೇಕ್ಷೆಯಿದ್ದುದರಿಂದ ನಿರ್ನಿಮಿತ್ತವಾಗಿ ಕೆಲವರಿಗೆ ಸುಖ ಕೆಲವರಿಗೆ ದುಃಖ ಇತ್ಯಾದಿಗಳನ್ನು ಕೊಡೋಣದರಿಂದ ಪ್ರಾಪ್ತಗಳಾದ ವೈಷಮ್ಯ ನೈರ್ಘೃಣ್ಯಗಳು ಶ್ರೀಹರಿಗೆ ಇಲ್ಲ. **''ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ''** ಎಂಬ ಶ್ರುತಿಯು ಹಾಗೆ ತೋರಿಸುತ್ತದೆ. **ವೈಷಮ್ಯಾಧಿಕರಣವು** ॥11॥

ಅಥವಾ ಶ್ರೀಹರಿಗೆ ಅನಂತಗುಣಗಳಿರುವಿಕೆಯು ಯುಕ್ತಿವಿರುದ್ಧವಲ್ಲವು. ಶ್ರೀಹರಿಗೆ ನಿರ್ದೋಷಗಳಾದ ಅಶೇಷಸದ್ಗುಣಗಳಿವೆ ಎಂಬುವುದನ್ನು **''ಗುಣಾಃ ಶ್ರುತಾಃ ಸುವಿರುದ್ಧಾಶ್ಚ''** ಎಂಬ ಶ್ರುತಿಯು ಪ್ರತಿಪಾದಿಸುತ್ತದೆ. (**''ಓಂ ಸರ್ವಧರ್ಮೋಪಪತ್ತೇಶ್ಚ ಓಂ''** ಜ್ಞಾನಾನಂದಾದಿಸದ್ಗುಣಗಳೂ ದುಃಖ ದ್ವೇಷಾದಿ ದೋಷಾಭಾವಗಳೂ ಶ್ರೀಹರಿಯಲ್ಲಿ ಯುಕ್ತಗಳಾಗುತ್ತವೆ. **''ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ''** ಎಂಬ ಶ್ರುತಿಯೂ ಇದೆ. ಆದಕಾರಣ ಯುಕ್ತಿವಿರೋಧವಿಲ್ಲ) **ಸರ್ವಧರ್ಮೋಪ್ಯಪತ್ಯಧಿಕರಣವು** ॥ 12 ॥

**ತತ್**=ಆದಕಾರಣ, ಅಂದರೆ ವಾದಿಗಳು ಹೇಳಿದ ಯುಕ್ತಿಗಳು ಸಿದ್ಧಾಂತಿಗಳು ಹೇಳಿದ ಶ್ರುತಿಯುಕ್ತಿಗಳಿಂದ ಬಾಧಿಸಲ್ಪಟ್ಟ ಪ್ರಯುಕ್ತ, ಶ್ರುತಿಃ=ಭಗವಂತನಿಗೆ ಸರ್ವಕರ್ತೃತ್ವ ಮೊದಲಾದ ಅನಂತಾನಂತಗುಣಗಳನ್ನು ಬೋಧಿಸಿಕೊಡತಕ್ಕ **''ಯತೋ ವಾ ಇಮಾನಿ ಭೂತಾನಿ ಜಾಯಂತೇ''** ಇದು ಮೊದಲಾದ ಶ್ರುತಿಯು ಯುಕ್ತಿವಿರುದ್ಧವಾದುದನ್ನು ಹೇಳುವುದಿಲ್ಲ. ॥

**ದ್ವಿತೀಯಾಧ್ಯಾಯದ ಪ್ರಥಮಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೨ ॥ ಪಾದ ॥ ೧ ॥ ಶ್ಲೋಕ ॥ ೪ ॥**

ಶ್ರುತಿಯು ಅಯುಕ್ತವಾದುದನ್ನು ಹೇಳುವುದಿಲ್ಲವೆಂದುಕ್ತವಾಯಿತು. ಆದಾಗ್ಯೂ ಸಾಂಖ್ಯ ಚಾರ್ವಾಕ, ವೈಶೇಷಿಕ ಮೊದಲಾದ ಅನೇಕ ಮತವಿರುದ್ಧವಾದುದನ್ನು ಪ್ರತಿಪಾದಿಸುವ ವಿಷ್ಣುಕರ್ತೃತ್ವ ಮೊದಲಾದುದನ್ನು ಪ್ರತಿಪಾದಿಸುವ ಶ್ರುತಿಯು ಅಪ್ರಮಾಣವಾಗಬೇಕಾಗುವುದು ಎಂದರೆ ಆ ಮತಗಳಿಗೆ ಅಪ್ರಾಮಾಣ್ಯವನ್ನು ವಿವರಿಸುವುದಕ್ಕಾಗಿ 2ನೇ ಪಾದವು ಪ್ರವೃತ್ತವಾಗಿದೆ.

**ಮೂಲ ॥ ಭ್ರಾಂತಿಮೂಲತಯಾ ಸರ್ವಸಮಯಾನಾಮಯುಕ್ತಿತಃ ।**
**ನ ತದ್ವಿರೋಧಾದ್ವಚನಂ ವೈದಿಕಂ ಶಂಕ್ಯತಾಂ ವ್ರಜೇತ್ ॥ ೫ ॥**

**ಅರ್ಥ ॥ ಸರ್ವಸಮಯಾನಾಂ=''ಅಕ್ಷಪಾದಕಣಾದೌ ಚ ಸಾಂಖ್ಯಯೋಗಾರ್ಹ ತಾಸ್ತಥಾ ।**

**ಶಿವಶಕ್ತಿಮಹಾವಾಮ ಲೋಕಾಯತ ಪುರಸ್ಸರಾಃ । ದುರಾಗಮಾ ಇತಿ ಜ್ಞೇಯಾಃ''** ಎಂದು ಬೃಹದ್ಭಾಷ್ಯದಲ್ಲಿ ಹೇಳಿದ ಪ್ರಕಾರ ದುರಾಗಮಗಳಾದ ವೇದವ್ಯಾಸರ ಸಿದ್ಧಾಂತದಿಂದ ಇತರಗಳಾದ ಸರ್ವಸಿದ್ಧಾಂತಗಳೂ, **ಭ್ರಾಂತಿಮೂಲತಯಾ**=ಮಿಥ್ಯಾಜ್ಞಾನಜನ್ಯವಾದುದರಿಂದಲೂ, ಭ್ರಮ, ಪ್ರಮಾದ, ವಿಪ್ರಲಿಪ್ಸಾದಿಗಳುಳ್ಳ ಪುರುಷರಿಂದ ಹುಟ್ಟಿದವುಗಳಾದುದರಿಂದಲೂ, **ಅಯುಕ್ತತಃ**= ಯುಕ್ತಿವಿಲ್ಲದಿರುವುದರಿಂದಲೂ, ಯುಕ್ತಿವಿರುದ್ಧವಾದುದರಿಂದಲೂ, **ತದ್ವಿರೋಧಾತ್**=ಆಯಾಯ ಸಿದ್ಧಾಂತ ವಿರೋಧವಿದ್ದುದರಿಂದಲೂ, **ವೈದಿಕಂ ವಚನಂ**=ಶ್ರುತಿಯು, **ಶಂಕ್ಯತಾಂ**=ಅಪ್ರಮಾಣವೆನ್ನುವ ಸಂಶಯ ವಿಷಯತ್ವವನ್ನು, **ನ ವ್ರಜೇತ್**=ಹೊಂದಲಾರದು.

**ತಾತ್ಪರ್ಯ ॥** ಈ ಸಮಯಪಾದಾರ್ಥವು ಭಾಷ್ಯದಲ್ಲಿ ವಿವರಿಸಲ್ಪಟ್ಟ ಪ್ರಯುಕ್ತ ಅತಿ ಸಂಕೋಚದಿಂದ ನಿರೂಪಿಸಿದರು. ಈ ಪಾದದಲ್ಲಿ 12 ಅಧಿಕರಣಗಳು. 1ನೇ ಅಧಿಕರಣದಲ್ಲಿ ನಿರೀಶ್ವರಸಾಂಖ್ಯನಿರಾಕರಣವು. 2ನೇದರಲ್ಲಿ ಸೇಶ್ವರ ಸಾಂಖ್ಯಮತ ನಿರಾಸವು. 3ನೇದರಲ್ಲಿ ಚಾರ್ವಾಕಮತ ನಿರಾಸವು. 4ನೇದರಲ್ಲಿ ಜೀವೋಪಸರ್ಜನಕವಾದ ಪ್ರಕೃತ್ತಿಗೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಸಾಂಖ್ಯೈಕದೇಶಿಮತ ನಿರಾಸವು. 5ನೇದರಲ್ಲಿ ಪ್ರಕೃತಿಯು ಅಪ್ರಧಾನವಾಗಿ ಉಳ್ಳ ಪುರುಷನಿಗೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಸಾಂಖ್ಯೈಕದೇಶಿಮತ ನಿರಾಸವು. 6ನೇದರಲ್ಲಿ ಪರಮಾಣ್ವಾರಂಭವಾದ ನಿರಾಕರಣವು. 7ನೇದರಲ್ಲಿ ಅವೈದಿಕ ಪಾಷಂಡ ಬೌದ್ಧೈಕ ದೇಶಿಗಳಾದ ವೈಭಾಷಿಕ ಸೌತ್ರಾಂತಿಕರ ನಿರಾಸವು. 8ನೇದರಲ್ಲಿ ಶೂನ್ಯವಾದಿ ಮಾಧ್ಯಮಿಕರ ಮತ ನಿರಾಸವು. 9ನೇದರಲ್ಲಿ ವಿಜ್ಞಾನವಾದಿ ಯೋಗಾಚಾರಮತ ನಿರಾಸವು. 10ನೇದರಲ್ಲಿ ಜೈನಮತ ನಿರಾಸವು. 11ನೇದರಲ್ಲಿ ವೈದಿಕಪಾಷಂಡಪಾಶುಪತಮತ ನಿರಾಸವು. 12ನೇದರಲ್ಲಿ ಶಾಕ್ತಮತ ನಿರಾಸವು. ಹೀಗೆ ಎಲ್ಲಾ ವಿರುದ್ಧಸಮಯ ನಿರಾಸವನ್ನು ಊಹಿಸಿಕೊಳ್ಳಬೇಕು.

**ದ್ವಿತೀಯಾಧ್ಯಾಯದ ದ್ವಿತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೨ ॥ ಪಾದ ॥ ೨ ॥ ಶ್ಲೋಕ ॥ ೫ ॥**

ಹಿಂದೆ ಹೇಳಿದ ಪ್ರಕಾರ ಯುಕ್ತಿ ಸಮಯಗಳು ದುಷ್ಟಗಳಾದುದರಿಂದ ಶ್ರೀಹರಿಗೆ ಹೇಳಿದ ಸ್ರಷ್ಟೃತ್ವಾದಿ ಗುಣಗಳಿಗೆ ಯುಕ್ತಿ ಸಮಯಗಳಿಂದ ವಿರೋಧವಿಲ್ಲದಿದ್ದರೂ ಅಧಿದೈವ ಅಧಿ ಭೂತಾದಿಗಳಿಗೆ ಅನಾದಿತ್ವವನ್ನು ತಿಳಿಸಿಕೊಡತಕ್ಕ ಶ್ರುತಿವಿರೋಧವು ಪ್ರಾಪ್ತವಾಗುವುದು ಎಂದರೆ ಅದನ್ನು ಪರಿಹರಿಸುವುದಕ್ಕಾಗಿ 3ನೇ ಪಾದವು ಪ್ರವೃತ್ತವಾಗಿದೆ. ಅಂತೂ ಶ್ರೀಹರಿಗೆ ಸ್ರಷ್ಟೃತ್ವಾದಿ ಗುಣಗಳಿವೆ ಎನ್ನುವುದಕ್ಕೆ ಆಕಾಶಾದಿಗಳಿಗೆ ಉತ್ಪತ್ತಿಯಿಲ್ಲವೆಂದು ಪ್ರತಿಪಾದಿಸುವ ಶ್ರುತಿಯಿಂದ ವಿರೋಧವಿಲ್ಲವೆನ್ನುವುದನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ.

**ಮೂಲ ॥ ಆಕಾಶಾದಿ ಸಮಸ್ತಂ ಚ ತಜ್ಜಂ ತೇನೈವ ಲೀಯತೇ ।**
**ಸೋಽನುತ್ಪತ್ತಿಲಯಃ ಕರ್ತಾ ಜೀವಸ್ತದ್ವಶಗಃ ಸದಾ ॥**
**ತದಾಭಾಸೋ ಹರಿಸ್ಸರ್ವರೂಪೇಷ್ವಪಿ ಸಮಸ್ಸದಾ ॥ ೬ ॥**

**ಅರ್ಥ ॥ ಆಕಾಶಾದಿ ಸಮಸ್ತಂ ಚ, ಆಕಾಶ**=ಅವ್ಯಾಕೃತಾಕಾಶ ಭೂತಾಕಾಶ, ಆ ನಿತ್ಯಜಡಗಳಿಗೆ ಅಭಿಮಾನಿಯರಾದ ಚಿತ್ರಕ್ರುತಿ ಗಣಪತಿಯರು, **ಆದಿ**=ವಾಯು, ತೇಜಸ್ಸು ಮೊದಲಾದ ಭೂತ

ತದಭಿಮಾನಿಗಳು, ಪ್ರಕೃತಿ, ಜೀವ, ಕಾಲ, ಮಹದಹಂಕಾರ, ಮನಸ್ಸು, ಬುದ್ಧಿ, ತದಭಿಮಾನಿಗಳು, **ಸಮಸ್ತಂ ಚ**=ಆಕಾಶವನ್ನಾರಂಭಿಸಿ ಜೀವಪರ್ಯಂತವಾದ ನಿತ್ಯಾನಿತ್ಯ ಸಮಸ್ತ ಜಗತ್ತು, **ತಜ್ಜಂ**=ಶ್ರೀಹರಿಯಿಂದಲೇ ಹುಟ್ಟಿದ್ದು. (ಅದರಲ್ಲಿ ಶ್ರೀಲಕ್ಷ್ಮೀದೇವಿಗೆ ಸಿಸೃಕ್ಷತ್ವವು, ಪ್ರಕೃತಿಗೆ ಪರಿಣಾಮವೂ, ಅವ್ಯಾಕೃತಾಕಾಶಕ್ಕೆ ಮೂರ್ತಸಂಬಂಧವೂ, ಜೀವನಿಗೆ ದೇಹಸಂಬಂಧವೂ, ಹೀಗೆ ನಿತ್ಯಗಳಲ್ಲಿ ಪರಾಧೀನ ವಿಶೇಷಪ್ರಾಪ್ತಿರೂಪವಾದ ಉತ್ಪತ್ತಿಯೂ, ಅನಿತ್ಯಗಳಲ್ಲಿ ಹಿಂದೆ ಇಲ್ಲದಿರುವುದು. ಹುಟ್ಟುವುದು ಹೀಗೆ ಸ್ವಯೋಗ್ಯಗಳಾದ ಉತ್ಪತ್ತಿಗಳನ್ನು ಇಟ್ಟುಕೊಳ್ಳಬೇಕು.) ಈ ವಿಷಯವು, **ತೇನೈವ**=''**ಆತ್ಮನಃ ಆಕಾಶಃ ಸಂಭೂತಃ**'' ''**ಇದಂ ಸರ್ವಮಸೃಜತ**'' ''**ಆತ್ಮಾ ವಾ ಇದಮೇಕ ಏವಾಗ್ರ ಆಸೀತ್**'' ''**ತೇ ವಾ ಏತೇ ಚಿದಾತ್ಮನೋ ವ್ಯುಚ್ಚರಂತಿ**'' ''**ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ**'' ''**ಖಂ ವಾಯುರ್ಜ್ಯೋತಿರಾಪಃ ಪೃಥಿವೀ**'' ''**ತತ್ತೇಜೋಽಸೃಜತ**'' ''**ತದಪೋಽಸೃಜತ**'' ಶ್ರೀಹರಿಯಿಂದ ಆಕಾಶವು ಹುಟ್ಟಿತು. ಇವೆಲ್ಲವನ್ನು ಸೃಷ್ಟಿಸಿದನು, ಶ್ರೀಹರಿಯೊಬ್ಬನೇ ಪ್ರಳಯಕಾಲದಲ್ಲಿದ್ದನು. ಈ ಚೇತನರೆಲ್ಲರೂ ಹುಟ್ಟುತ್ತಾರೆ. ಶ್ರೀಹರಿಯಿಂದಲೇ ಪ್ರಾಣನು, ಮನಸ್ಸು ಎಲ್ಲಾ ಇಂದ್ರಿಯಗಳೂ ಹುಟ್ಟುತ್ತವೆ. ಪಂಚಭೂತಗಳು ಹುಟ್ಟಿದವು. ಇವು ಮೊದಲಾದ ವೈದಿಕವಚನಗಳಿಂದ, (ತಿಳಿಯಲ್ಪಡುತ್ತದೆ.) **ತೇನೈವ**=ಆ ಶ್ರೀಹರಿಯಿಂದಲೇ ಹುಟ್ಟಿದ ಕ್ರಮದಿಂದ ವಿಪರೀತ ಕ್ರಮದಿಂದಲೇ, **ಲೀಯತೇ**=ಯಥಾಯೋಗ್ಯವಾಗಿ ಲಯವನ್ನು ಹೊಂದುತ್ತವೆ. ರುದ್ರನಿಂದಲ್ಲ. ಈ ವಿಷಯವು **ತೇನೈವ**=''**ಯಮಪ್ಯೇತಿ ಭುವನಂ ಸಾಂಪರಾಯೇ**'' ''**ಯ ಇದಂ ಸರ್ವಂ ವಿಲಾಪಯತಿ ಸ ಹರಿಃ**'' ''**ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿಃ**'' ಪ್ರಳಯಕಾಲದಲ್ಲಿ ಜಗತ್ತು ಯಾರನ್ನು ಪ್ರವೇಶಿಸುತ್ತದೋ ಆ ಹರಿಯು ನಾವು ಕೊಟ್ಟ ಆಹುತಿಯನ್ನು ಸ್ವೀಕರಿಸಲಿ. ಯಾರು ಇವೆಲ್ಲವನ್ನು ವಿನಾಶಗೊಳಿಸುತ್ತಾನೋ ಆತನು ಶ್ರೀಹರಿಯು. ಸೃಷ್ಟಿಸತಕ್ಕವನೂ, ರಕ್ಷಿಸತಕ್ಕವನೂ, ಸಂಹರಿಸತಕ್ಕವನು ಶ್ರೀಹರಿಯೇ. ಇದು ಮೊದಲಾದ ವೈದಿಕ ವಾಕ್ಯಗಳಿಂದಲೇ (ತಿಳಿಯಲ್ಪಡುತ್ತದೆ.) ಇದರಿಂದ ವಿಯದಧಿಕರಣ ॥ 1 ॥ ಮಾತರಿಶ್ವಾಧಿಕರಣ ॥ 2 ॥ ತೇಜೋಽಧಿಕರಣ ॥ 4 ॥ ಅಬಧಿಕರಣ ॥ 5 ॥ ಪೃಥಿವ್ಯಧಿಕರಣ ॥ 6 ॥ ತದಭಿಧ್ಯಾನಾಧಿಕರಣ ॥ 7 ॥ ವಿಪರ್ಯಯಾಧಿಕರಣ ॥ 8 ॥ ಜ್ಞಾಧಿಕರಣ ॥ 11 ॥ ಹೀಗೆ 8 ಅಧಿಕರಣಾರ್ಥವು ಉಕ್ತವಾಯಿತು.

**ಕರ್ತಾ**=ಸರ್ವ ಸ್ವತಂತ್ರಕರ್ತನಾದ, **ಸಃ**=ಆ ಶ್ರೀಹರಿಯೇ, **ಅನುತ್ಪತ್ತಿಲಯೇ**=ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯೂ, ದೇಹತ್ಯಾಗ ರೂಪವಾದ ಲಯವೂ ಇಲ್ಲದಿರುವವನು. ಇದರಿಂದ ಅಸಂಭವಾಧಿಕರಣ ॥ 3 ॥ ಅಂತರಾಧಿಕರಣ ॥ 9 ॥ ನಾತ್ಮಾಧಿಕರಣ ॥ 10 ॥ ಇವುಗಳ ಅರ್ಥವು ಉಕ್ತವಾಯಿತು.

**ಜೀವಃ**=ಜೀವನು, **ಸದಾ**=ಉತ್ಕ್ರಮಣಕಾಲದಲ್ಲಿಯೂ ಪರಲೋಕಾದಿಗಳಿಗೆ ಗಮನಾಗಮನ ಕಾಲದಲ್ಲಿಯೂ, **ತದ್ವಶಗಃ**=ಶ್ರೀಹರಿಯ ಅಧೀನವಾದ ಗಮನಾಗಮನಗಳುಳ್ಳವನು. (''**ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಧಿಗಚ್ಛತಿ**'' ಇತ್ಯಾದಿ ಶ್ರುತಿಗಳಿಂದ ಗಮನಾಗಮನಾದಿಗಳು ಇದ್ದ ಪ್ರಯುಕ್ತ ಜೀವನು ಅಣುವೇ. ವ್ಯಾಪ್ತಿಪ್ರತಿಪಾದಕವಾದ ಶ್ರುತಿಯು ಪರಬ್ರಹ್ಮಪರವಾಗಿದೆ.) **ಜೀವಃ**=ಜೀವನು, **ಸದಾ**=ಯಾವಾಗಲೂ, **ತದ್ವಶಗಃ**=ಶ್ರೀಹರಿಯ ಅಧೀನನಾದುದರಿಂದ, **ತದಾಭಾಸಃ**=ಶ್ರೀಹರಿಯ ಪ್ರತಿಬಿಂಬನೆಂದು ಹೇಳಲ್ಪಡುತ್ತಾನೆ. **ಯದ್ಯಪಿ ಹರಿಃ**=ಶ್ರೀಹರಿಯು, **ಸರ್ವರೂಪೇಷ್ವಪಿ**=ಮತ್ಸ್ಯಾದಿ ಎಲ್ಲಾ ರೂಪಗಳಲ್ಲಿಯೂ, **ಸದಾ**=ಯಾವಾಗಲೂ, **ಸಮಃ**=ಸಮಾನೈಶ್ವರ್ಯ

ವುಳ್ಳವನು. (ಆದಾಗ್ಯೂ ಈಶ್ವರ ಪ್ರತಿಬಿಂಬಭೂತನಾದ ಜೀವನಲ್ಲಿ ಅದೃಷ್ಟವೈಚಿತ್ರ್ಯದಿಂದ ಸುರನರಾದಿ ವಿಚಿತ್ರರೂಪಗಳುಳ್ಳವನು. ಅಂತೂ ಜೀವರು ಭಿನ್ನಾಂಶರು ಮತ್ಸ್ಯಾದಿಗಳು ಅಭಿನ್ನಾಂಶರು. ಆದುದರಿಂದ ಅಂಶತ್ವಸಮಾನವಾದರೂ ಸಾಮ್ಯವಿಲ್ಲ, ಇದರಿಂದ ಉತ್ಕ್ರಾಂತ್ಯಧಿಕರಣ ॥ 12 ॥ ವ್ಯತಿರೇಕಾಧಿಕರಣ ॥ 13 ॥ ಪೃಥಗಧಿಕರಣ ॥ 14 ॥ ಯಾವದಧಿಕರಣ ॥ 15 ॥ ಪುಂಸ್ತ್ವಾಧಿಕರಣ ॥ 16 ॥ ಕರ್ತೃತ್ವಾಧಿಕರಣ ॥ 17 ॥ ಇವುಗಳ ಅರ್ಥವು ಉಕ್ತವಾಯಿತು. ಅಂಶಾಧಿಕರಣ ॥ 18 ॥ ಅದೃಷ್ಟಾಧಿಕರಣ ॥ 19 ॥ ಇವುಗಳ ಅರ್ಥವನ್ನು ಊಹಿಸಿಕೊಳ್ಳಬೇಕು.

**ದ್ವಿತೀಯಾಧ್ಯಾಯದ ತೃತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೨ ॥ ಪಾದ ॥ ೩ ॥ ಶ್ಲೋಕ ॥ ೬ ॥**

ಸಮನ್ವಯದಿಂದ ಸಿದ್ಧಗಳಾದ ಸರ್ವಗುಣಗಳಿಗೆ ಕೆಲವು ಶ್ರುತಿಗಳಿಂದ ವಿರೋಧವಿಲ್ಲದಿದ್ದರೂ ಶ್ರುತಿಸ್ಮೃತಿಗಳಿಂದ ಹೇಳಲ್ಪಟ್ಟ ಯುಕ್ತಿಸಹಿತವಾದ ಶ್ರುತಿ ವಿರೋಧವು ಪ್ರಾಪ್ತವಾಗುವುದು ಅದನ್ನು ( ಆ ನ್ಯಾಯೋಪೇತ ಶ್ರುತಿವಿರೋಧವನ್ನು) ಪರಿಹರಿಸುವುದಕ್ಕಾಗಿ 4ನೇ ಪಾದವು ಪ್ರವೃತ್ತವಾಗಿದೆ. ಕೆಲವು ಶ್ರುತಿಗಳಿಂದ ಅವಿರೋಧಮಾತ್ರವಲ್ಲ, ಮತ್ತೆ ಶ್ರುತ್ಯಾದಿಗಳಿಂದ ಸ್ವೀಕರಿಸಲ್ಪಟ್ಟ ಯುಕ್ತಿಸಹಿತವಾದ ಸರ್ವ ವೇದದಿಂದಲೂ ವಿರೋಧವಿಲ್ಲವೆಂದು ಸೂತ್ರಕಾರರು ''**ಉಕ್ತಾಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ**'' ಎಂದು ಈ ಪಾದದಲ್ಲಿ ನಿರೂಪಿಸಿದರು.

**ಮೂಲ ॥ ಮುಖ್ಯಪ್ರಾಣಶ್ಚೇಂದ್ರಿಯಾಣಿ ದೇಹಶ್ಚೈವ ತದುದ್ಭವಃ ।**
**ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ ॥ ೭ ॥**
**ಸರ್ವದೋಷೋಜ್ಝಿತಸ್ತಸ್ಮಾದ್ಭಗವಾನ್ ಪುರುಷೋತ್ತಮಃ ।**
**ಉಕ್ತಾ ಗುಣಾಶ್ಚಾವಿರುದ್ಧಾಸ್ತಸ್ಯ ವೇದೇನ ಸರ್ವಶಃ (ಥಾ) ॥ ೮ ॥**

**ಅರ್ಥ ॥ ತದುದ್ಭವಃ**=ಎಲ್ಲಾ ಜೀವರ ಜನನಾದಿಗಳಿಗೆ ಕಾರಣನಾದ, **ಮುಖ್ಯಪ್ರಾಣಶ್ಚ**= ಮುಖ್ಯಪ್ರಾಣನೂ ಕೂಡ, **ತದುದ್ಭವಃ**=ಶ್ರೀಹರಿಯಿಂದಲೇ ಉತ್ಪತ್ತಿಯುಳ್ಳವನು. ಅಥವಾ ಪ್ರಕೃಷ್ಟಚೇಷ್ಟೆ ಯುಳ್ಳ ಮುಖ್ಯಪ್ರಾಣನಿಗೂ ಉತ್ಕ್ರಮಣಾದಿಗಳ ಇದ್ದುದರಿಂದ ಆತನು ಅಣುವೇ ಆಗಿರುತ್ತಾನೆ. **ಇಂದ್ರಿಯಾಣಿ**=ಮನಸ್ಸು ಮೊದಲಾದ ಎಲ್ಲಾ ಇಂದ್ರಿಯಗಳು, (ಶ್ರೀಹರಿಯಿಂದಲೇ ಹುಟ್ಟಿದವುಗಳು) ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯಗಳು, ಸೃಷ್ಟಿಕಾಲದಲ್ಲಿ ಭೂತಗಳಿಂದ ಉಪಚಿತಗಳಾಗಿ ಹುಟ್ಟುತ್ತವೆ. ಇತ್ಯಾದ್ಯರ್ಥಗಳನ್ನು ಇಟ್ಟುಕೊಳ್ಳಬೇಕು. ಇದರಿಂದ ಪ್ರಾಣೋತ್ಪತ್ತ್ಯಧಿಕರಣ, ॥ 1 ॥ ತತ್ಪ್ರಾಗಧಿಕರಣ ॥ 2 ॥ ತತ್ಪೂರ್ವಕತ್ವಾಧಿಕರಣ, ॥ 3 ॥ ಸಪ್ತಗತ್ಯಧಿಕರಣ ॥ 4 ॥ ಅಣ್ವಧಿಕರಣ ॥ 5 ॥ ಶ್ರೇಷ್ಠಾಧಿಕರಣ ॥ 6 ॥ ಇವುಗಳ ಅರ್ಥವು ಉಕ್ತವಾಯಿತು.

**ದೇಹಶ್ಚ**=ಶರೀರವೂ ಕೂಡ, **ತದುದ್ಭವ ಏವ**=3 ಭೂತಗಳಿಂದ ಹುಟ್ಟಿದ್ದೇ, ಒಂದೊಂದರಿಂದ ಮಾತ್ರ ಹುಟ್ಟಿದ್ದಲ್ಲ, ಯಾವ ದೇಹದಲ್ಲಿ ಯಾವ ಭೂತಕ್ಕೆ ವಿಶೇಷಸಂಯೋಗವಿದೆಯೋ ಅದನ್ನು ನಿಮಿತ್ತೀಕರಿಸಿ ವಿಶೇಷವ್ಯಪದೇಶವು. 13ನೇ ಮಾಂಸಾಧಿಕರಣಾರ್ಥವು, ಉಕ್ತವಾಯಿತು.

**ಸರ್ವಂ**=ರುದ್ರ ಮೊದಲಾದ ಎಲ್ಲಾ ಜಗತ್ತು, **ಸದಾ**=ಯಾವಾಗಲೂ, **ಮುಖ್ಯಪ್ರಾಣವಶೇ**=

ಮುಖ್ಯಪ್ರಾಣನ ಅಧೀನದಲ್ಲಿದೆ. **ಸಃ**=ಮುಖ್ಯಪ್ರಾಣನು, **ಸದಾ**=ಯಾವಾಗಲೂ, **ವಿಷ್ಣೋಃ**=ಶ್ರೀಹರಿಯ, **ವಶಗಃ**=ಅಧೀನದಲ್ಲಿರುವವನು. (ಮುಖ್ಯಪ್ರಾಣನಿಗೆ ಸ್ವಾತಂತ್ರ್ಯಪ್ರತಿಪಾದಕವಾದ ಶ್ರುತಿಯು ಅವಾಂತರ ಈಶ್ವರಪರವಾದುದು.) ಇದರಿಂದ ಚಕ್ಷುರಾದ್ಯಧಿಕರಣ ॥ 7 ॥ ಪಂಚವೃತ್ಯಧಿಕರಣ ॥ 8 ॥ ಅಣ್ವಧಿಕರಣ ॥ 9 ॥ ಜ್ಯೋತಿರಧಿಕರಣ ॥ 10 ॥ ತ ಇಂದ್ರಿಯಾಧಿಕರಣ ॥ 11 ॥ ಇವುಗಳ ಅರ್ಥವು ಉಕ್ತವಾಯಿತು.

(ಅಧ್ಯಾಯಾರ್ಥವನ್ನುಪಸಂಹಾರ ಮಾಡುತ್ತಾರೆ) ತಸ್ಮಾತ್=ವಿರೋಧಿಗಳಾದ ಎಲ್ಲಾ ಶ್ರುತಿಗಳು ಸಾವಕಾಶಗಳಾದುದರಿಂದ, **ತಸ್ಯ**=ಆ ಹರಿಗೆ, **ಉಕ್ತಾಃ**=1ನೇ ಅಧ್ಯಾಯದಲ್ಲಿ ಹೇಳಲ್ಪಟ್ಟ, **ಗುಣಾಃ**=ಸ್ರಷ್ಟೃತ್ವಾದಿಗುಣಗಳು, **ಸರ್ವಶಃ ವೇದೇನ**=ಬಾಹ್ಯಯುಕ್ತಿಯಿಂದಲೂ ಶ್ರುತಿ ಸ್ಮೃತಿಗಳಿಂದ ಹೇಳಲ್ಪಟ್ಟ ಯುಕ್ತಿಯಿಂದಲೂ ಯುಕ್ತವಾದ ವೇದದಿಂದ ಅಥವಾ ಅಧಿಭೂತ ಅಧಿದೈವ ಪರಮಾತ್ಮ ಜೀವರನ್ನು ವಿಷಯೀಕರಿಸುವ ಎಲ್ಲಾ ವೇದದಿಂದಲೂ, **ಅವಿರುದ್ಧಾಃ**=ವಿರೋಧರಹಿತಗಳಾಗಿವೆ. **ತಸ್ಮಾತ್**=ಎಲ್ಲಾ ವಿರೋಧಗಳನ್ನು ಪರಿಹರಿಸುವುದರಿಂದ, **ಭಗವಾನ್**=ಷಡ್ಗುಣೈಶ್ವರ್ಯ ಸಂಪನ್ನನಾದ, **ಪುರುಷೋತ್ತಮಃ**=ಕ್ಷರಾಕ್ಷರಪುರುಷರಿಂದುತ್ತಮನಾದ ಶ್ರೀಹರಿಯು, **ಸರ್ವದೋಷೋಜ್ಝಿತಃ**=ಸರ್ವ ದೋಷವಿರಹಿತನು, ಮತ್ತು **ತಸ್ಯ**=ಆ ಹರಿಗೆ, **ಸರ್ವಶಃ ವೇದೇನ**=ಸರ್ವವೇದಸಮನ್ವಯದಿಂದ, **ಉಕ್ತಾ ಗುಣಾಶ್ಚ**=ಪೂರ್ವಾಧ್ಯಾಯದಲ್ಲಿ ಹೇಳಿದ ಗುಣಗಳು, **ಅವಿರುದ್ಧಾಃ**=ಯುಕ್ತ್ಯಾದಿ ವಿರುದ್ಧಗಳು ಆಗುವುದಿಲ್ಲ. ॥8॥

**ದ್ವಿತೀಯಾಧ್ಯಾಯದ ಚತುರ್ಥಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೨ ॥ ಪಾದ ॥ ೪ ॥ ಶ್ಲೋಕ ॥ ೮ ॥**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಾಣುಭಾಷ್ಯೇ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಿತೀಯೋಽಧ್ಯಾಯಃ ॥೨॥**

**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀವೇದವ್ಯಾಸಕೃತ ಬ್ರಹ್ಮಸೂತ್ರಾಣುಭಾಷ್ಯದಲ್ಲಿ ೨ನೇ ಅಧ್ಯಾಯವು ಸಮಾಪ್ತವಾಯಿತು. ॥ ೨ ॥**

## ಮೂರನೇ ಅಧ್ಯಾಯವು

ನಿರ್ದೋಷಾನಂತಗುಣಗಳುಳ್ಳವನು ವಿಷ್ಣುವಾದರೆ ತಾನು ಏನು ಮಾಡಬೇಕೆಂದು ಅಧಿಕಾರಿಗೆ ಸಂಶಯ ಬಂದರೆ ಮುಕ್ತಿಗೆ ಕಾರಣವಾದ ಭಗವಂತನ ಪ್ರೀತಿಗಾಗಿ ಸಾಧನವನ್ನನುಷ್ಠಾನ ಮಾಡಬೇಕೆಂಬ ಅಭಿಪ್ರಾಯದಿಂದ 3ನೇ ಸಾಧನಾಧ್ಯಾಯವು ಪ್ರವೃತ್ತವಾಗಿದೆ-

**ಮೂಲ ॥ ಶುಭೇನ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।**
**ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂ ಪದಂ ॥ ೧ ॥**

**ಯಾತಿ ತಸ್ಮಾದ್ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್ ।**

**ಅರ್ಥ ॥** (ಜೀವಃ=ಜೀವನು) **ತಸ್ಮಾತ್**=ಈ ಪಾದದಲ್ಲಿ ಪ್ರತಿಪಾದ್ಯವಾದುದನ್ನು ಅನುಸಂಧಾನ ಮಾಡಿಕೊಂಡು, (ವಿರಕ್ತನಾಗುವೆನೆಂದು ಜ್ಞಾನೇತರ ಸಾಧನದಲ್ಲಿಯೂ ಅದರಿಂದುಂಟಾದ ಫಲದಲ್ಲಿಯೂ ವಿರಕ್ತಿಗಾಗಿ ಈ ಪಾದದಲ್ಲಿ ಸ್ವರ್ಗ ನರಕ ಗಮನಾಗಮನಾದಿಗಳು ಹೇಳಲ್ಪಡುತ್ತವೆ) **ತಸ್ಮಾತ್**=ವೈರಾಗ್ಯದಿಂದ, **ವಿರಕ್ತಃ ಸನ್**=ವಿಶಬ್ದವಾಚ್ಯನಾದ ಪರಮಾತ್ಮನಲ್ಲಿ ವಿಶೇಷತಃ ಸ್ನೇಹಯುಕ್ತನಾಗಿ, (ಇತರ ಕಡೆಯಲ್ಲಿ ವಿರಕ್ತಿಯಿಂದ ಶ್ರೀಹರಿಯಲ್ಲಿ ದೃಢವಾದ ಭಕ್ತಿಯುಳ್ಳವನಾಗಿ) **ಜ್ಞಾನಮೇವ**=ಈಶ್ವರಜ್ಞಾನವನ್ನೇ, **ಸಮಾಶ್ರಯೇತ್**=ಶ್ರವಣ ಮನನ ನಿದಿಧ್ಯಾಸನರೂಪ ಸಾಧನಗಳಿಂದ ಹೊಂದಬೇಕು. (ಇಲ್ಲಿ ಮರಣವನ್ನು ಹೊಂದಿದ ಜೀವನು.) ಶುಭೇನ **ಕರ್ಮಣಾ**= ಪುಣ್ಯಕರ್ಮದಿಂದ, **ಸ್ವರ್ಗಂ**=ಸ್ವರ್ಗವನ್ನು, **ಯಾತಿ**=ಹೊಂದುತ್ತಾನೆ. (ಕಾಮ್ಯಶುಭಕರ್ಮವನ್ನು ಮಾಡಿದವನು ಮುಕ್ತಿಯನ್ನು ಹೊಂದಲಾರನು. ಮರಣಮಾತ್ರದಿಂದ ಪುನಃ ತಿರುಗಿ ಬರತಕ್ಕ ಲೋಕವೇ ಪ್ರಾಪ್ತವಾಗುವುದರಿಂದ ಮುಕ್ತಿಯಾಗಲಾರದು. ಇದರಿಂದ ತದಂತರಾಧಿಕರಣ ॥ 1 ॥ ತ್ರ್ಯಾತ್ಮಕತ್ವಾಧಿಕರಣ ॥ 2 ॥ ಪ್ರಾಣಗತ್ಯಧಿಕರಣ ॥ 3 ॥ ಅಗ್ನ್ಯಾದ್ಯಧಿಕರಣ ॥ 4 ॥ ಪ್ರಥಮೇಶ್ರವಣಾಧಿ ಕರಣ ॥ 5 ॥ ಅಶ್ರುತತ್ವಾಧಿಕರಣ ॥ 6 ॥ ಈ 6 ಅಧಿಕರಣಾರ್ಥವು ಉಕ್ತವಾಯಿತು. ಮೇಲೆಯೂ ಹೀಗೆಯೇ ತಿಳಿಯತಕ್ಕದ್ದು.

(ಕಾಮ್ಯಕರ್ಮವನ್ನು ಮಾಡಿದವನಾದರೆ) **ಶುಭೇನ ಕರ್ಮಣಾ**=ಸೋಮಯಾಗಾದಿ ರೂಪವಾದ ಶುಭಕರ್ಮದಿಂದ, **ಸ್ವರ್ಗಂ**=ಸ್ವರ್ಗವನ್ನು, ಯಾತಿ=ಹೊಂದುತ್ತಾನೆ. (ಮೋಕ್ಷವನ್ನೂ, ಜ್ಞಾನವನ್ನೂ ಹೊಂದಲಾರನು. ಅಕಾಮ್ಯವನ್ನು ಮಾಡುವವನಾದರೆ ಆ ಸೋಮಯಾಗ ಮೊದಲಾದ ಅಕಾಮ್ಯವಾದ ಶುಭಕರ್ಮದಿಂದುಂಟಾದ) **ಜ್ಞಾನೇನೈವ**=ಜ್ಞಾನದಿಂದಲೇ, **ಪರಂ ಪದಂ**=ಮುಕ್ತಿ ಸ್ಥಾನ ವನ್ನು, ಯಾತಿ=ಹೊಂದುತ್ತಾನೆ. ಬೇರೆ ಯಾವುದರಿಂದಲೂ ಹೊಂದಲಾರನು. ॥ **ಭಾಕ್ತಾಧಿಕರಣ** ॥7॥

ಕರ್ಮಣಾ **ವಿಕರ್ಮಣಾ ಚ**=ಕರ್ಮದಿಂದಲೂ ವಿಕರ್ಮದಿಂದಲೂ ಯುಕ್ತನಾಗಿಯೇ, **ಅಸ್ವರ್ಗಂ**=ಭೂಲೋಕವನ್ನು, **ಯಾತಿ**=ಹೊಂದುತ್ತಾನೆ. ಸ್ವರ್ಗಲೋಕದಿಂದ ಕರ್ಮಶೇಷದಿಂದ ಯುಕ್ತನಾಗಿಯೇ ಭೂಲೋಕಕ್ಕೆ ಹೋಗುತ್ತಾನೆ. **ಕೃತಾತ್ಯಯಾಧಿಕರಣ** ॥ 8 ॥

ಶುಭಕರ್ಮದಿಂದ ಸ್ವರ್ಗಕ್ಕೆ ಹೋದ ಮಾರ್ಗದಿಂದಲೇ ಸ್ವಲ್ಪ ದೂರ ಹೋಗಿ ಆಮೇಲೆ ಕೆಳಗೆ ಬೇರೆ ಮಾರ್ಗದಿಂದ ಭೂಲೋಕಕ್ಕೆ ಹೋಗುತ್ತಾನೆ. **ಯಥೇತಾಧಿಕರಣ** ॥ 9 ॥

ಸ್ವರ್ಗಂ=ಸ್ವರ್ಗವನ್ನು, ಅಸ್ವರ್ಗಂ=ಭೂಮಿ ಮೊದಲಾದುದನ್ನು, ಕರ್ಮಣಾ=ಯಜ್ಞಾದಿ ಕರ್ಮದಿಂದ, (ಹೊಂದುತ್ತಾನೆ, ಬೇರೆ ಆಚಾರದಿಂದ ಹೊಂದಲಾರನು) **ಚರಣಾಧಿಕರಣ** ॥ 10 ॥

**ವಿಕರ್ಮಣಾ**=ತನಗೆ ಉಚಿತಗಳಾದ ಕರ್ಮಗಳನ್ನನುಷ್ಠಾನಮಾಡದೆ ಇರುವುದರಿಂದಲೂ, ವಿರುದ್ಧಕರ್ಮದಿಂದಲೂ, (ಪಾಪಕರ್ಮದಿಂದಲೂ) **ನಿರಯಂ ಚ**=ನರಕವನ್ನು, **ಯಾತಿ**=ಹೊಂದು ತ್ತಾನೆ. **ಮಿಥ್ಯಾಜ್ಞಾನೇನ**=ಮಿಥ್ಯಾಜ್ಞಾನದಿಂದ, **ತಮಶ್ಚ**=(ನರಕವನ್ನನುಭವಿಸಿ ಆಮೇಲೆ) ನಿತ್ಯನರಕ ವನ್ನು, **ಯಾತಿ**=ಹೊಂದುತ್ತಾನೆ. **ಅನಿಷ್ಟಾಧಿಕರಣ** ॥ 11 ॥ **ಅಪಿಸಪ್ತಾಧಿಕರಣ** ॥ 12 ॥

**ವಿಕರ್ಮಣಾ**=ವಿಶಬ್ದವಾಚ್ಯನಾದ ಪರಮಾತ್ಮನ, ಪ್ರೇರಣರೂಪವ್ಯಾಪಾರದಿಂದ, **ನಿರಯಂ ಚ**=ನರಕದುಃಖವನ್ನೂ ಕೂಡ, (ಅನುಭವಿಸುತ್ತಾನೆ) **ತತ್ರಾಪ್ಯಾಧಿಕರಣ** ॥ 13 ॥ **ವಿದ್ಯಾಧಿಕರಣ** ॥ 14॥

**ಜ್ಞಾನೇನೈವ**=ಭಗವಜ್ಜ್ಞಾನದಿಂದಲೇ, **ಪರಂ ಪದಂ**=ಮುಕ್ತಿಸ್ಥಾನವನ್ನು, **ಯಾತಿ**=ಹೊಂದುತ್ತಾನೆ. (ಸ್ವರ್ಗಕ್ಕಾಗಲೀ ಮುಕ್ತಿಗಾಗಲೀ ಸ್ವತಂತ್ರನಾಗಿ ಹೋಗಲಾರನು.) **ನ ತೃತೀಯಾಧಿಕರಣವು** ॥15॥

**ಶುಭೇನ ಕರ್ಮಣಾ**=ಶುಭಕರ್ಮದಿಂದ, **ಸ್ವರ್ಗಮೇವ**=ಸ್ವರ್ಗವನ್ನೇ, **ಯಾತಿ**=ಹೊಂದುತ್ತಾನೆ. (ದೇವತ್ವವನ್ನು ಹೊಂದಲಾರನು.) **ಜ್ಞಾನೇನೈವ**=ಸ್ವಯೋಗ್ಯಜ್ಞಾನದಿಂದಲೇ, **ಪರಂ ಪದಂ**=ದೇವತಾ ಪದವಿಯನ್ನು, **ಯಾತಿ**=ಹೊಂದುತ್ತಾನೆ. ತತ್ಸ್ವಾಭಾವ್ಯಾಧಿಕರಣ ॥ 16 ॥ **ನಾತಿಚಿರೇಣಾಧಿಕರಣ** ॥17॥ **ಅಗ್ನ್ಯಾಧಿಕರಣ** ॥ 18 ॥

**ತಸ್ಮಾತ್**=ಜ್ಞಾನದಿಂದ ಇತರವಾದುದು ಸ್ಥಿರವಲ್ಲದ ಅನರ್ಥಫಲಕ್ಕೆ ಸಾಧನವಾದುದರಿಂದಲೂ ಜ್ಞಾನವೇ ಸ್ಥಿರವಾದ ಮಹಾಫಲಕ್ಕೆ ಸಾಧನವಾದುದರಿಂದಲೂ, **ವಿರಕ್ತಃ ಸನ್**=ಜ್ಞಾನೇತರದಲ್ಲಿ ವಿರಕ್ತಿಯನ್ನು ಹೊಂದಿದವನಾಗಿ, ಜ್ಞಾನಮೇವ=ಭಗವಂತನ ಜ್ಞಾನವನ್ನೇ, **ಸಮಾಶ್ರಯೇತ್**=ಭಕ್ತಿ, ಶ್ರವಣ, ಮನನ, ನಿದಿಧ್ಯಾಸನ ಮೊದಲಾದ ಸಾಧನಗಳಿಂದ ಸಂಪಾದಿಸಬೇಕು. **ರೇತೋಧಿಕರಣ** ॥ 19 ॥ **ಯೋನ್ಯಧಿಕರಣ** ॥ 20 ॥

**ತೃತೀಯಾಧ್ಯಾಯದ ಪ್ರಥಮಾಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೩ ॥ ಪಾದ ॥ ೧ ॥ ಶ್ಲೋಕ ॥ ೧ ॥**

ಅಧಿಕಾರಿಗೆ ವೈರಾಗ್ಯವು ಹುಟ್ಟಿದರೂ ಭಕ್ತಿಯುಳ್ಳವನಿಗೇನೇ ಶ್ರವಣಾದಿಗಳಿಂದ ಈಶ್ವರನ ಅಪರೋಕ್ಷಜ್ಞಾನವು ಹುಟ್ಟುವುದರಿಂದ ಭಕ್ತಿಯು ಈ ಪಾದದಲ್ಲಿ ನಿರೂಪಿತವಾಗುತ್ತದೆ-

**ಮೂಲ ॥ ಸರ್ವಾವಸ್ಥಾಪ್ರೇರಕಶ್ಚ ಸರ್ವರೂಪೇಷ್ವಭೇದವಾನ್ ॥ ೨ ॥**
**ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ ।**
**ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ ॥ ೩ ॥**

**ಅರ್ಥ ॥ ಸರ್ವಾವಸ್ಥಾಪ್ರೇರಕಶ್ಚ**=ಸ್ವಪ್ನ, ಸ್ವಪ್ನತಿರೋಧಾನ, ಜಾಗ್ರತ್, ಸುಷುಪ್ತಿ, ಸುಪ್ತಪ್ರಬೋಧ, ಮೋಹರೂಪಗಳಾದ ಎಲ್ಲಾ ಅವಸ್ಥೆಗಳಿಗೂ ನಿಯಾಮಕನು. **ಸಃ ಏಕಃ ಪರಮೇಶ್ವರಃ**=2 ಅಧ್ಯಾಯಗಳಲ್ಲಿ ನಿರ್ದೋಷಗುಣಪರಿಪೂರ್ಣನಾದವನಾಗಿ ಯಾವನು ನಿರ್ಣೀತನಾಗಿರುವನೋ ಅವನೇ ಒಬ್ಬ ಪರಮೇಶ್ವರನು. ಇದರಿಂದ ಸಂಧ್ಯಾಧಿಕರಣ ॥ 1 ॥ ಪರಾಭಿಧ್ಯಾನಾಧಿಕರಣ ॥ 2 ॥ ದೇಹಯೋಗಾಧಿಕರಣ ॥ 3 ॥ ತದಭಾವಾಧಿಕರಣ ॥ 4 ॥ ಪ್ರಬೋಧಾಧಿಕರಣ ॥ 5 ॥ ಸಂಪತ್ತ್ಯಧಿಕರಣ ॥ 7 ॥ ಈ 6 ಅಧಿಕರಣಾರ್ಥವು ಉಕ್ತವಾಯಿತು.

**ಸರ್ವಾವಸ್ಥಾಪ್ರೇರಕಶ್ಚ**=ಎಲ್ಲಾ ಪ್ರಜೆಗಳಿಗೂ ಎಲ್ಲಾ ಅವಸ್ಥೆಗಳಿಗೂ ಪ್ರೇರಕನು ಆ ಒಬ್ಬ ಪರಮೇಶ್ವರನೇ. **ಕರ್ಮಾನುಸ್ಮೃತ್ಯಧಿಕರಣವು** ॥ 6 ॥

**ಸರ್ವದೇಶೇಷು**=ಸುರನರಾದಿಗಳ ಶರೀರ, ದಕ್ಷಿಣಾಕ್ಷಿ ಮೊದಲಾದ ಸರ್ವದೇಶಗಳಲ್ಲಿ, **ಕಾಲೇಷು**=ಜಾಗ್ರದಾದಿ ಸರ್ವಕಾಲಗಳಲ್ಲಿಯೂ ಇರತಕ್ಕ, **ಸರ್ವರೂಪೇಷು**=ವಿಶ್ವಾದಿ ಸರ್ವರೂಪಗಳಲ್ಲಿಯೂ, **ಅಭೇದವಾನ್**=ಭೇದವಿಲ್ಲದಿರುವವನು, **ಸಃ ಏಕಃ ಪರಮೇಶ್ವರಃ**=ಆ ಒಬ್ಬ

ಪರಮೇಶ್ವರನು. ಅಥವಾ ಆ ಒಬ್ಬ ಪರಮೇಶ್ವರನು ಎಲ್ಲಾ ದೇಶಕಾಲಗಳಲ್ಲಿರತಕ್ಕ ರೂಪಗಳಲ್ಲಿ ವಿಶೇಷವಿಲ್ಲದಿರುವವನು. ಅಥವಾ **ಸರ್ವದೇಶೇಷು**=ಎಲ್ಲಾ ದೇಶಗಳಲ್ಲಿ, **ಕಾಲೇಷು**=ಕಾಲಗಳಲ್ಲಿ, (ಎಲ್ಲಾ ವಸ್ತುಗಳಿಗೆ ಸೃಷ್ಟ್ಯಾದಿಗಳನ್ನು ಮಾಡಿದವನು) ಆ ಒಬ್ಬ ಪರಮೇಶ್ವರನೇ, ಮತ್ತೊಬ್ಬನಲ್ಲ; ಏಕೆಂದರೆ ''ಏಷಃ ಸರ್ವಃ ಏಷ ಸರ್ವಗಃ'' ಇತ್ಯಾದಿ ಶ್ರುತಿಗಳಲ್ಲಿ ಪರಮೇಶ್ವರನಿಗೇನೇ ಜಗತ್ತಿನ ಸೃಷ್ಟ್ಯಾದಿಗಳಿಗಾಗಿ ಸರ್ವಗತತ್ವವು ಹೇಳಲ್ಪಡುತ್ತದೆ. ಇತರ ಜೀವಾದಿಗಳು ಸರ್ವಕಾಲದಲ್ಲಿದ್ದರೂ ಸರ್ವದೇಶದಲ್ಲಿಲ್ಲದಿರುವುದರಿಂದ ಅವರಿಗೆ ಸರ್ವಗತತ್ವವು ಹೇಳಲ್ಪಡುವುದಿಲ್ಲ. ಇದರಿಂದ ನಸ್ಥಾನತೋಽಪ್ಯಧಿಕರಣ ॥ 8 ॥ ಅರೂಪಾಧಿಕರಣ ॥ 9 ॥ ಉಪಮಾಧಿಕರಣ ॥ 10 ॥ ಪ್ರಕೃತೈತಾವತ್ವಾಧಿಕರಣ ॥ 13 ॥ ತದವ್ಯಕ್ತಾಧಿಕರಣ ॥ 14 ॥ ಅಹಿಕುಂಡಲಾಧಿಕರಣ ॥ 15 ॥ ಪರಮತೋಧಿಕರಣ ॥ 16 ॥ ಸ್ಥಾನವಿಶೇಷಾಧಿಕರಣ ॥ 17 ॥ ತಥಾನ್ಯತ್ವಾಧಿಕರಣ ॥ 18 ॥ ಅನೇನ ಸರ್ವಗತತ್ವಾಧಿಕರಣ ॥ 19 ॥ ಫಲಾಧಿಕರಣ ॥ 20 ॥ ಹೀಗೆ 11 ಅಧಿಕರಣಾರ್ಥವು ಉಕ್ತವಾಯಿತು.

**ಬ್ರಹ್ಮಾದೀನಾಂ ಸರ್ವೇಷಾಂ ಚ**=ಚತುರ್ಮುಖನೇ ಆದಿಯಾಗಿವುಳ್ಳ ಸರ್ವರಿಗೂ, **ಯಥಾಕ್ರಮಂ**=ಶ್ರುತ್ಯುಕ್ತಕ್ರಮವನ್ನತಿಕ್ರಮಿಸದೆ, **ವಿಮುಕ್ತಿಗಂ**=ಮೋಕ್ಷದಲ್ಲಿರತಕ್ಕುದು ಯಾವುದು, **ಆನಂದಾದೇಃ ತಾರತಮ್ಯಂ**=ಆನಂದಾದಿಗಳ ತರತಮಭಾವವೋ, **ತತ್**=ಅದು, **ತದ್ಭಕ್ತಿತಾರತಮ್ಯೇನ**= ಆ ಪರಮೇಶ್ವರನ ಭಕ್ತಿತರತಮಭಾವದಿಂದಲೇ, (ಆಗುತ್ತದೆ, ಬೇರೆ ಯಾವುದರಿಂದಲೂ ಆಗುವುದಿಲ್ಲ) ಅಂಬುವದಧಿಕರಣ ॥ 11 ॥ ವೃದ್ಧಿಹ್ರಾಸಾಧಿಕರಣ ॥ 12 ॥

**ತೃತೀಯಾಧ್ಯಾಯದಲ್ಲಿ ದ್ವಿತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೩ ॥ ಪಾದ ॥ ೨ ॥ ಶ್ಲೋಕ ॥ ೩ ॥**

ವೈರಾಗ್ಯ ಭಕ್ತಿಗಳನ್ನು ನಿರೂಪಣಮಾಡಿ ಈಗ ಉಪಾಸನೆಯು ನಿರೂಪಿಸಲ್ಪಡುತ್ತದೆ.

**ಮೂಲ ॥ ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ಸುರೇಶ್ವರೈಃ ।**
**ಯಥಾಕ್ರಮಂ ಬಹುಗುಣೈರ್ಬ್ರಹ್ಮಣಾ ತ್ವಖಿಲೈರ್ಗುಣೈಃ ॥ ೪ ॥**
**ಉಪಾಸ್ಯ ಸರ್ವವೇದೈಶ್ಚ ಸರ್ವೈರಪಿ ಯಥಾಬಲಂ ।**
**ಜ್ಞೇಯೋ ವಿಷ್ಣುರ್ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಂ ॥ ೫ ॥**

**ಅರ್ಥ ॥ ಸತ್**=ನಿರ್ದೋಷನು, **ಚಿತ್**=ಜ್ಞಾನಸ್ವರೂಪನು, **ಆನಂದಃ**=ಆನಂದಸ್ವರೂಪನು, **ಆತ್ಮಾ**=ಸ್ವಾಮಿಯು, **ಇತಿ**=ಈ ಪ್ರಕಾರವಾಗಿ, **ಬಹುಗುಣೈಃ**=ಅನೇಕ ಗುಣಗಳಿಂದ, **ಮಾನುಷೈಶ್ಚ**= ಮನುಷ್ಯರು ಮೊದಲಾದ, **ಸುರೇಶ್ವರೈಃ**=ಬ್ರಹ್ಮಪರ್ಯಂತ ಎಲ್ಲಾ ಮುಮುಕ್ಷುಗಳಿಂದಲೂ, **ವಿಷ್ಣುಃ**= ಶ್ರೀಹರಿಯು, **ಯಥಾಕ್ರಮಂ**=ಸ್ವಪ್ರಾಪ್ಯವಾದ ಫಲವನ್ನತಿಕ್ರಮಿಸದೆ, **ಉಪಾಸ್ಯಃ**=ಧ್ಯಾನಮಾಡಿಸಿ ಕೊಳ್ಳಲು ಯೋಗ್ಯನು. ಆನಂದಾಧಿಕರಣ ॥ 5 ॥

''**ಸತ್ ಚಿತ್ ಆನಂದಃ ಆತ್ಮಾ**'' ಎಂದು ಮನುಷ್ಯ ಮೊದಲಾದ ಬ್ರಹ್ಮೇತರರು ಧ್ಯಾನಮಾಡಬೇಕು. ಪ್ರಿಯ ಶಿರಸ್ತ್ವ ಮೊದಲಾದ ಗುಣವಿಶಿಷ್ಟನೆಂದು ಮನುಷ್ಯರು ಉಪಾಸನಾ ಮಾಡಬಾರದು. ಪ್ರಿಯಶಿರಸ್ತ್ವಾಧಿಕರಣ ॥ 6 ॥

ಮನುಷ್ಯರು ಶ್ರೀಹರಿಯು ಸ್ವರ್ಗ ಪೃಥಿವೀಭರಣ, ಸರ್ವಲೋಕ ಪ್ರಕಾಶವುಳ್ಳವನೆಂದು ಉಪಾಸನಾ ಮಾಡಬಾರದು. **ಸಂಭೃತ್ಯಧಿಕರಣ** ॥ 14 ॥

ಶ್ರೀಹರಿಯು ವೇಧಭೇದಾದಿಗಳನ್ನು ಮಾಡುವವನೆಂದು ಯತ್ಯಾದಿಗಳು ಉಪಾಸನಾ ಮಾಡಬಾರದು. **ವೇಧಾಧಿಕರಣ ॥ 16 ॥ ಭೂಮಕ್ರತ್ವಧಿಕರಣ ॥ 37 ॥ ನಾನಾಶಬ್ದಾದ್ಧಿಕರಣ ॥ 38 ॥**

ದುರಿತನಿವೃತ್ಯಾದಿರೂಪವಾದ ತನ್ನಿಂದ ಪ್ರಾಪ್ಯವಾದ ಫಲವನ್ನನುಸರಿಸಿ ಮನುಷ್ಯಾದಿಗಳು ನರಸಿಂಹಾದಿರೂಪಿಯಾದ ಶ್ರೀಹರಿಯನ್ನು ಉಪಾಸನಾ ಮಾಡಬೇಕು. **ವಿಕಲ್ಪಾಧಿಕರಣ ॥ 39 ॥ ಕಾಮ್ಯಾಧಿಕರಣ ॥ 40 ॥**

ಮನುಷ್ಯಾದಿಗಳು ಚತುರ್ಮುಖಾದಿಪರಿವಾರಯುಕ್ತನಾದ ಶ್ರೀಹರಿಯನ್ನು ಉಪಾಸನಾ ಮಾಡಬೇಕು. **ಅಂಗಾವಬದ್ಧಾಧಿಕರಣ** ॥ 36 ॥

ಸುರೇಶ್ವರರು ಸತ್, ಚಿತ್, ಆನಂದ, ಆತ್ಮಾದಿ ಬಹುಗುಣಗಳಿಂದ ತಂತಮ್ಮಿಂದ ಪ್ರಾಪ್ಯವಾದ ಫಲವನ್ನನುಸರಿಸಿ ಉಪಾಸನಾ ಮಾಡಬೇಕು. ಇತರಾಧಿಕರಣ ॥ 7 ॥ ಯಾವದಧಿಕರಣ ॥ 20 ॥ ಏಕಾಧಿಕರಣ ॥ 35 ॥

**ಬ್ರಹ್ಮಣಾ ತು**=ಚತುರ್ಮುಖನಿಂದಲಾದರೆ, ಸರ್ವವೇದೈಶ್ಚ=ಎಲ್ಲಾ ವೇದಗಳಿಂದಲೂ ಹೇಳಿದ ರೀತಿಯಾಗಿ, **ಅಖಿಲೈರ್ಗುಣೈಃ**=ರೂಪಗಳಿಂದಲೂ ಕ್ರಿಯಾದಿಗಳಿಂದಲೂ, **ಯಥಾಕ್ರಮಂ**= ಸಂಪೂರ್ಣ ಫಲವನ್ನನುಸರಿಸಿ, **ಉಪಾಸ್ಯಃ**=ವಿಶೇಷಾಕಾರವಾಗಿ ಉಪಾಸನಾ ಮಾಡಿಸಿಕೊಳ್ಳಲು ಯೋಗ್ಯನು. **ಉಪಸಂಹಾರಾಧಿಕರಣ** ॥ 2 ॥ ಪ್ರಾಪ್ತ್ಯಧಿಕರಣ ॥ 3 ॥ ಸರ್ವಾಭೇದಾಧಿಕರಣ ॥ 4 ॥ ಆಧ್ಯಾನಾಧಿಕರಣ ॥ 8 ॥ ಆತ್ಮಗೃಹೀತ್ಯಧಿಕರಣ ॥ 9 ॥ ಅನ್ವಯಾಧಿಕರಣ ॥ 10 ॥ ಕಾರ್ಯಾಧಿಕರಣ ॥ 11 ॥ ಸಮಾನಾಧಿಕರಣ ॥ 12 ॥ ನವಾವಿಶೇಷಾಧಿಕರಣ ॥ 13 ॥ ಪುರುಷವಿದ್ಯಾಧಿಕರಣ ॥ 14 ॥ ಪುರುಷವಿದ್ಯಾಧಿಕರಣ ॥ 15 ॥ ಹಾನ್ಯಧಿಕರಣ ॥ 17 ॥ ಛಂದಾಧಿಕರಣ ॥ 18 ॥ ಅನಿಯಮಾಧಿಕರಣ ॥ 19 ॥ ವ್ಯತಿಹಾರಾಧಿಕರಣ ॥ 22 ॥ ಸತ್ಯಾಧಿಕರಣ ॥ 23 ॥ ಕಾಮಾಧಿಕರಣ ॥ 24 ॥ ಅಂಗಾಧಿಕರಣ ॥ 41 ॥ ನವಾಧಿಕರಣ ॥ 42 ॥

**ಸರ್ವೈರಪಿ**=ಎಲ್ಲಾ ಅಧಿಕಾರಿಗಳಿಂದಲೂ, **ಯಥಾಬಲಂ**=ತಮ್ಮ ಶಕ್ತಿಯನ್ನತಿಕ್ರಮಿಸದೆ, **ಸರ್ವವೇದೈಶ್ಚ**=ಎಲ್ಲಾ ವೇದಗಳಿಂದಲೂ (ಹೇಳಲ್ಪಟ್ಟ ಪ್ರಕಾರ), **ಅಖಿಲೈರ್ಗುಣೈಃ**=ಎಲ್ಲಾ ಗುಣಗಳಿಂದ, **ವಿಷ್ಣುಃ**=ಶ್ರೀಹರಿಯು, **ಜ್ಞೇಯಃ**=ತಿಳಿಯಲ್ಪಡಬೇಕು. ಸರ್ವವೇದಾಧಿಕರಣ ॥ 1 ॥

**ಸರ್ವೈರಪಿ**=ಎಲ್ಲಾ ಅಧಿಕಾರಿಗಳಿಂದಲೂ, **ಸರ್ವೈರಪಿ**=ಶ್ರವಣ, ಮನನ, ನಿದಿಧ್ಯಾಸನ, ಪ್ರೀತಿಪೂರ್ವಕಗುರೂಪದೇಶ, ಹರಿಗುರುಭಕ್ತಿ, ಶಮದಮಾದಿಗಳಿಂದಲೂ, **ಯಥಾಬಲಂ**=ತಮ್ಮ ಶಕ್ತಿಯನ್ನತಿಕ್ರಮಿಸದೆ, **ಜ್ಞೇಯಃ**=ಅಪರೋಕ್ಷೀಕರಿಸಲ್ಪಡಬೇಕು. ನಿರ್ಧಾರಣಾಧಿಕರಣ ॥ 25 ॥ ಪ್ರದಾನಾಧಿಕರಣ ॥ 26 ॥ ಲಿಂಗಭೂಯಸ್ತ್ವಾಧಿಕರಣ ॥ 27 ॥ ವಿಕಲ್ಪಾಧಿಕರಣ ॥ 28 ॥ ವಿದ್ಯಾಧಿಕರಣ ॥ 29 ॥ ಶ್ರುತ್ಯಧಿಕರಣ ॥ 30 ॥ ಅನುಬಂಧಾಧಿಕರಣ ॥ 31 ॥ ಪರೇಣಾಧಿಕರಣ ॥ 34 ॥

**ಉತ್ತರೋತ್ತರಂ**=ದೇವಾದಿಗಳ ತಾರತಮ್ಯವನ್ನನುಸರಿಸಿ, **ಜ್ಞಾನೇ**=ಈಶಾಪರೋಕ್ಷದಲ್ಲಿಯೂ, ಪರೋಕ್ಷಜ್ಞಾನದಲ್ಲಿಯೂ, **ವಿಶೇಷಸ್ತು**=ವಿಶೇಷಾಕಾರವಾಗಿ ತಾರತಮ್ಯವು, **ಸ್ಯಾದೇವ**=ಆಗುವುದು.

ಅಥವಾ ಉಪಾಸನೆಯಲ್ಲಿ ತಾರತಮ್ಯವಿದ್ದುದರಿಂದಲೇ ಜ್ಞಾನದಲ್ಲಿಯೂ ತಾರತಮ್ಯವು. ಪ್ರಜ್ಞಾಂತರಾಧಿಕರಣ ॥ 32 ॥ ನ ಸಾಮಾನ್ಯಾಧಿಕರಣ ॥ 33 ॥

**ತೃತೀಯಾಧ್ಯಾಯದಲ್ಲಿ ತೃತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೩ ॥ ಪಾದ ॥ ೩ ॥ ಶ್ಲೋಕ ॥ ೫ ॥**

**ಮೂಲ ॥ ಸರ್ವೇಽಪಿ ಪುರುಷಾರ್ಥಾಃ ಸ್ಯುರ್ಜ್ಞಾನಾದೇವ ನ ಸಂಶಯಃ ।**
**ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥ ೬ ॥**
**ಗುಣದೋಷೈಃ ಸುಖಸ್ಯಾಪಿ ವೃದ್ಧಿ ಹ್ರಾಸೌ ವಿಮುಕ್ತಿಗೌ ।**
**ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತಂ ಯಥಾಕ್ರಮಂ ॥ ೭ ॥**

**ಅರ್ಥ ॥ ಸರ್ವೇಽಪಿ ಪುರುಷಾರ್ಥಾಃ**=ಪುರುಷರಿಂದ ಇಚ್ಛಿಸಲ್ಪಡುವ ಮೋಕ್ಷ ಸ್ವರ್ಗಾದಿಗಳೆಲ್ಲವೂ, **ಜ್ಞಾನಾದೇವ**=ಜ್ಞಾನದಿಂದಲೇ, **ಸ್ಯುಃ**=ಆಗುವವು, **ನ ಸಂಶಯಃ**=ಸಂದೇಹವಿಲ್ಲವು. ಅಥವಾ ಮನುಷ್ಯರು ಮಾತ್ರ ಜ್ಞಾನದಿಂದಲೇ ಸ್ವರ್ಗಾದಿ ಪುರುಷಾರ್ಥವುಳ್ಳವರಾಗುವುದಲ್ಲ, ಮತ್ತೆ **ಉತ್ತರೋತ್ತರಂ**=ಪೂರ್ವೋಕ್ತಾಧಿಕಾರಿಗಳಲ್ಲಿ ಸುರೇಶ್ವರಾದ್ಯುತ್ತಮಾಧಿಕಾರಿಗಳೆಲ್ಲರೂ ಜ್ಞಾನದಿಂದಲೇ ಸರ್ವಪುರುಷಾರ್ಥವುಳ್ಳವರಾಗುತ್ತಾರೆ. (ಅಂತೂ ಮುಕ್ತಿಯು ಮುಖ್ಯವಾಗಿ ಜ್ಞಾನದಿಂದಲೇ, ಸ್ವರ್ಗಾದಿಗಳು ಕರ್ಮಯುಕ್ತಜ್ಞಾನದಿಂದಲೇ, ಆದರಲ್ಲಿ ಜ್ಞಾನವು ಮುಖ್ಯವು. ಕರ್ಮವು ಅಮುಖ್ಯವು) ಪುರುಷಾರ್ಥಾಧಿಕರಣ ॥ 1 ॥ ಅಸಾರ್ವತ್ರಿಕ್ಯಧಿಕರಣ ॥ 2 ॥ ನಾ ವಿಶೇಷಾಧಿಕರಣ ॥ 3 ॥ ಉಭಯಲಿಂಗಾಧಿಕರಣ ॥ 5 ॥ ಆಧಿಕಾರಿಕಾಧಿಕರಣ ॥ 6 ॥ ಅನಾವಿಷ್ಕಾರಾಧಿಕರಣ ॥ 9 ॥ ಮುಕ್ತಿಫಲಾಧಿಕರಣ ॥ 11 ॥

**ಜ್ಞಾನವಾಂಶ್ಚ**=ಅಪರೋಕ್ಷಜ್ಞಾನಿಯು, **ಸರ್ವದೋಷೈಃ**=ತಾನು ಮಾಡಿದ ಪಾಪಕರ್ಮಗಳಿಂದ, **ಕ್ವಚಿದಪಿ**=ಮನುಷ್ಯಲೋಕದಲ್ಲಿ ಆಗಲೀ, ಪರಲೋಕದಲ್ಲಿ ಆಗಲೀ, **ನ ಲಿಪ್ಯತೇ**=ಲೇಪಿಸಲ್ಪಡುವುದಿಲ್ಲ, ಅಂದರೆ- ಅಶುಚಿತ್ವವನ್ನೂ, ನರಕಾದಿಗಳನ್ನೂ, ಮುಕ್ತ್ಯಭಾವವನ್ನೂ ಹೊಂದುವುದಿಲ್ಲ, **ಗುಣದೋಷೈಃ**=ಜ್ಞಾನ ಹುಟ್ಟಿದ ಮೇಲೆ ಮಾಡಲ್ಪಟ್ಟ ಸದಸತ್ಪ್ರವೃತ್ತಿಗಳಿಂದ, **ಸುಖಸ್ಯಾಪಿ**=ಜ್ಞಾನಿಭೋಗ್ಯವಾದ ಸುಖಾದಿಗೇನೇ, **ವಿಮುಕ್ತಿಗೌ**=ವಿಶಿಷ್ಟಮುಕ್ತಿಯಲ್ಲಿರುವ, **ವೃದ್ಧಿಹ್ರಾಸೌ**=ವ್ಯಕ್ತಿ, ಅವ್ಯಕ್ತಿಗಳು, (ಆಗುತ್ತವೆ) ತಥಾಚ ಜ್ಞಾನಾನಂತರದಲ್ಲಿ ಉಂಟಾದ ಅಸತ್ಪ್ರವೃತ್ತಿಯಿಂದ ಮುಕ್ತಿಯಲ್ಲಿರುವ ಸುಖಕ್ಕೇನೇ ಹ್ರಾಸವು. ವಿಶೇಷತಃ ನರಕಾದಿದುಃಖವು ಪ್ರಾಪ್ತಿಯಾಗುವುದಿಲ್ಲ, ಸತ್ಪ್ರವೃತ್ತಿಯಿಂದ ಮುಕ್ತಿಯಲ್ಲಿರುವ ಸುಖಕ್ಕೇನೇ ವೃದ್ಧಿವಿಶೇಷವು. ಬೇರೆ ಹುಟ್ಟುವುದಿಲ್ಲ, ಅಥವಾ **ಗುಣದೋಷೈಃ**=ಜ್ಞಾನಾನಂತರದಲ್ಲಿ ಉಂಟಾದ ಪುಣ್ಯ ಪಾಪಗಳಿಂದ, ನೃಣಾಂ=ಮನುಷ್ಯರ, **ಸುಖಸ್ಯಾಪಿ**=ಸ್ವರೂಪ ಸುಖಕ್ಕೂ ಕೂಡ, **ವಿಮುಕ್ತಿಗೌ ವೃದ್ಧಿಹ್ರಾಸೌ**=ಮುಕ್ತಿಯಲ್ಲಿರುವ ವೃದ್ಧಿಹ್ರಾಸಗಳು ಅಂದರೆ- ಸ್ರಕ್‌ಚಂದನ ವನಿತಾದಿ ವಿಷಯ ಭೋಗನಿಮಿತ್ತಕವಾದ ವ್ಯಕ್ತ್ಯತಿಶಯ ತದಭಾವರೂಪಗಳಾದ ವೃದ್ಧಿಹ್ರಾಸಗಳು ಆಗುತ್ತವೆ. **ಸುರಾಣಾಂ ತು**=ದೇವತೆಗಳಿಗಾದರೂ, **ಮುಕ್ತೌ**=ಮುಕ್ತಿಯಲ್ಲಿ, **ಯಥಾಕ್ರಮಂ**=ತಾರತಮ್ಯ ಕ್ರಮವನ್ನನುಸರಿಸಿ, **ಸುಖಂ**=ಸುಖವು, **ಕ್ಲೃಪ್ತಮೇವ**=ಅಭಿವ್ಯಕ್ತಿ ಯುಕ್ತವೇ ಆಗಿರುತ್ತದೆ. ಹ್ರಾಸವಿರತಕ್ಕುದು ಅಲ್ಲ,

**ತಾತ್ಪರ್ಯ ||** ದೇವತೆಗಳಿಗೆ ಅಸತ್ಪ್ರವೃತ್ತಿಯಿಂದ ಮನುಷ್ಯರಂತೆ ಮುಕ್ತಿಯಲ್ಲಿರುವ ಸುಖಕ್ಕೆ ಹ್ರಾಸವಿರುವುದಿಲ್ಲ, ಆನಂದಾನುಭವದಲ್ಲಿಯೂ ತಾರತಮ್ಯಾದಿಗಳಿವೆ. ಅಂತೂ ದೇವತೆಗಳಿಗೆ ಮುಕ್ತಿಯಲ್ಲಿರುವ ಸುಖವು ಕ್ಲೃಪ್ತವೇ ಆಗಿರುತ್ತದೆ. ಅಸತ್ಪ್ರವೃತ್ತಿಯಿಂದ ವಿಶೇಷವಿಲ್ಲವೆಂದಾಗುವುದು ಎಂದು ಹೇಳಕೂಡದು. ಕ್ಲೃಪ್ತಕ್ಕೆ ಹಾನಿಯಿಲ್ಲದಿದ್ದರೂ ತನ್ನ ಯೋಗ್ಯತಾಪರಿಪೂರ್ತಿಗೆ ಎಷ್ಟು ಸಾಧನಗಳು ಆವಶ್ಯಕಗಳೋ, ಅದರಿಂದ ಹೆಚ್ಚು ಮಾಡಿದ ಸಾಧನಗಳಿಂದ ಯಾವ ಆನಂದಾದಿಗಳು ಪ್ರಸಕ್ತಗಳಾಗುತ್ತವೋ, ಅವುಗಳು ಇಲ್ಲವೆಂದಾಗುವುವು. ಅತ ಏವ **''ಚಂದ್ರ ಸುಗ್ರೀವಯೋಶ್ಚೈವ ಸ್ವೋಚ್ಚದಾರ ಪರಿಗ್ರಹಾತ್ । ಪ್ರಾಪ್ತಹಾನಿರಭೂತ್ ನೈವ ಕ್ಲೃಪ್ತಹಾನಿಃ ಕಥಂ ಚ ನ''||** ಎಂದು ಉಕ್ತವಾಗಿದೆ. ಇದೂ ಚತುರ್ಮುಖನಿಂದ ಇತರರಾದ ಜೀವರ ವಿಷಯಕವು. ಚತುರ್ಮುಖನಿಗೆ ಅಸತ್ಪ್ರವೃತ್ತಿಯೇ ಇಲ್ಲದಿರುವುದರಿಂದ ಪ್ರಾಪ್ತಕ್ಕೆ ಹಾನಿಯೂ ಇರುವುದಿಲ್ಲ. ಸ್ತುತ್ಯಧಿಕರಣ || 4 || ಫಲಶ್ರುತ್ಯಧಿಕರಣ || 7 || ಕೃತ್ಸ್ನಭಾವಾಧಿಕರಣ || 8 || ಐಹಿಕಾಧಿಕರಣ || 10 ||

**ತೃತೀಯಾಧ್ಯಾಯದ ಚತುರ್ಥಪಾದಾರ್ಥವು ಸಮಾಪ್ತವಾಯಿತು**

**ಅಧ್ಯಾಯ || ೩ || ಪಾದ || ೪ || ಶ್ಲೋಕ || ೭ ||**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಾಣುಭಾಷ್ಯೇ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ತೃತೀಯೋऽಧ್ಯಾಯಃ || ೩ ||**

**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀವೇದವ್ಯಾಸಕೃತಬ್ರಹ್ಮಸೂತ್ರಾಣುಭಾಷ್ಯದಲ್ಲಿ ೩ನೇ ಅಧ್ಯಾಯವು ಸಮಾಪ್ತವಾಯಿತು. ||೩||**

# ನಾಲ್ಕನೇ ಅಧ್ಯಾಯವು

ಈ 4ನೇ ಅಧ್ಯಾಯದಲ್ಲಿ ಕರ್ಮಕ್ಷಯ ಉತ್ಕ್ರಾಂತಿ ಮಾರ್ಗ ಭೋಗರೂಪವಾದ ಮೋಕ್ಷಫಲವು ಹೇಳಲ್ಪಡುತ್ತದೆ. ಅದರಲ್ಲಿಯೂ ಕೆಲವು ಅಧಿಕರಣಗಳಲ್ಲಿ ಮುಕ್ತಿಯ ಅಂತರಂಗ ಸಾಧನಗಳನ್ನು ನಿರೂಪಿಸುತ್ತಾರೆ-

**ಮೂಲ || ವಿಷ್ಣುರ್ಬ್ರಹ್ಮ ತಥಾऽದಾತೇತ್ಯೇವಂ ನಿತ್ಯಮುಪಾಸನಂ ।**
**ಕಾರ್ಯಮಾಪದ್ಯಪಿ ಬ್ರಹ್ಮ ತೇನ ಯಾತ್ಯಪರೋಕ್ಷತಾಂ || ೧ ||**
**ಪ್ರಾರಬ್ಧಕರ್ಮಣೋऽನ್ಯಸ್ಯ ಜ್ಞಾನಾದೇವ (ನೇನ ಸ್ಯಾತ್) ಪರಿಕ್ಷಯಃ ।**
**ಅನಿಷ್ಟಸ್ಯೋಭಯಸ್ಯಾಪಿ ಸರ್ವಸ್ಯಾನ್ಯಸ್ಯ ಭೋಗತಃ || ೨ ||**

**ಅರ್ಥ ||** **ವಿಷ್ಣುಃ**=ಶ್ರೀಹರಿಯು, **ಬ್ರಹ್ಮ**=ಸರ್ವಗುಣಪರಿಪೂರ್ಣನು, **ತಥಾ**=ಹಾಗೆಯೇ, **ಆದಾತಾ**=ಸ್ವಾಮಿಯು, **ಇತ್ಯೇವಂ**=ಈ ಪ್ರಕಾರ, **ಉಪಾಸನಂ**=ಪೂರ್ವೋಕ್ತ ಶ್ರವಣಾದಿರೂಪ ಉಪಾಸನೆಯು, **ಆಪದ್ಯಪಿ**=ವ್ಯಾಧ್ಯಾದಿಗಳಿಂದ ಅತ್ಯಾಪತ್ಕಾಲದಲ್ಲಿಯೂ, **ನಿತ್ಯಂ**=ಯಾವಾಗಲೂ, **ಕಾರ್ಯಂ**=ಅತ್ಯಾದರದಿಂದ ಮಾಡತಕ್ಕುದು. (ಒಂದಾವರ್ತಿ ಮಾಡುವುದಲ್ಲ.) ಆವೃತ್ತ್ಯಧಿಕರಣ || 1 ||

ಆತ್ಮಾಧಿಕರಣ ॥ 2 ॥ ನ ಪ್ರತೀಕಾಧಿಕರಣ ॥ 3 ॥ ಬ್ರಹ್ಮದೃಷ್ಟ್ಯಧಿದಕರಣ ॥ 4 ॥ ಆದಿತ್ಯಾಧಿಕರಣ ॥ 5 ॥ ಆಸೀನಾಧಿಕರಣ ॥ 6 ॥ ಆಪ್ರಾಯಾಣಾಧಿಕರಣ ॥ 7 ॥

(ವಿಷ್ಣುವಿನ ಉಪಾಸನೆಯನ್ನು ಅತ್ಯಾದರದಿಂದ ನಿರಂತರದಲ್ಲಿಯೂ ಅವಶ್ಯವಾಗಿ ಮಾಡಬೇಕೆಂದು ಹೇಳಿ ಫಲವನ್ನು ಹೇಳುತ್ತಾರೆ.) **ತೇನ**=ಬ್ರಹ್ಮತ್ವಾದ್ಯುಪಾಸನದಿಂದ, **ಬ್ರಹ್ಮ**= ಪರಬ್ರಹ್ಮನು, **ಅಪರೋಕ್ಷತಾಂ**=(ಅಧಿಕಾರಿಗಳಿಗೆ) ಪ್ರತ್ಯಕ್ಷ ವಿಷಯತ್ವವನ್ನು, **ಯಾತಿ**=ಹೊಂದುತ್ತಾನೆ. ಆವೃತ್ಯಧಿಕರಣ ॥ 1 ॥

**ಪ್ರಾರಬ್ಧಕರ್ಮಣಃ**=ಪ್ರಾರಬ್ಧಕರ್ಮದಿಂದ, **ಅನ್ಯಸ್ಯ**=ಇತರವಾದ, (ಅಪ್ರಾರಬ್ಧವಾದ) **ಉಭಯಸ್ಯಾಪಿ**=ಜ್ಞಾನದಿಂದ ಪೂರ್ವೋತ್ತರಕಾಲೀನವಾದ, **ಅನಿಷ್ಟಸ್ಯ ಸರ್ವಸ್ಯ**=ಎಲ್ಲಾ ಅನಿಷ್ಟಕ್ಕೂ, ಅಥವಾ ಪುಣ್ಯಪಾಪರೂಪವಾದ ಎರಡು ಅನಿಷ್ಟಕ್ಕೂ, **ಜ್ಞಾನಾದೇವ**=ಅಪರೋಕ್ಷ ಜ್ಞಾನದಿಂದಲೇ, **ಪರಿಕ್ಷಯಃ**=ನಾಶವು, **ಭವತಿ**=ಆಗುತ್ತದೆ. **ಸರ್ವಸ್ಯ ಅನ್ಯಸ್ಯ**=ಅಪ್ರಾರಬ್ಧ ವ್ಯತಿರಿಕ್ತವಾದ ಪುಣ್ಯಪಾಪ ರೂಪವಾದ ಎಲ್ಲಾ ಪ್ರಾರಬ್ಧಕರ್ಮಕ್ಕೂ ಹಾಗೆಯೇ ಅನಿಷ್ಟಕಾಮ್ಯದಿಂದ ವ್ಯತಿರಿಕ್ತವಾದ ಇಷ್ಟಕಾಮ್ಯಕ್ಕೂ, ಅಂದರೆ ಪ್ರಾರಬ್ಧಪಾಪಕ್ಕೂ ಪ್ರಾರಬ್ಧಪುಣ್ಯಕ್ಕೂ, **ಭೋಗತಃ**=ಭೋಗದಿಂದಲೇ, **ಪರಿಕ್ಷಯಃ**=ನಾಶವು. (ಇಷ್ಟಕಾಮ್ಯಕ್ಕೂ ನಾಶವಾಗುವುದಾದರೆ ಜ್ಞಾನವು ಇಷ್ಟಕ್ಕೆ ವಿಘಾತಕ ವಾದುದರಿಂದ ಪುರುಷಾರ್ಥವಾಗದೆ ಹೋಗಬೇಕಾಗುವುದು.) ಪ್ರಾರಬ್ಧಕ್ಕೂ ನಾಶವಿದ್ದರೆ ಬ್ರಹ್ಮೋಪದೇಶಗಳೇ ವ್ಯರ್ಥವಾಗಬೇಕಾಗುವುದು. ಆತ್ಮಾಧಿಕರಣ ॥ 2 ॥ ತದಧಿಗಮಾಧಿಕರಣ ॥8॥

**ಚತುರ್ಥಾಧ್ಯಾಯದ ಪ್ರಥಮಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೪ ॥ ಪಾದ ॥ ೧ ॥ ಶ್ಲೋಕ ॥ ೨ ॥**

ಹೀಗೆ ಜ್ಞಾನ ಭೋಗಗಳಿಂದ ಕ್ಷೀಣವಾದ ಕರ್ಮವುಳ್ಳ ಅಧಿಕಾರಿಗಳಿಗೆ ಶರೀರದ ತ್ಯಾಗ ಪ್ರಕಾರವನ್ನು ಹೇಳುವುದಕ್ಕಾಗಿ ಎರಡನೇ ಪಾದವು ಪ್ರವೃತ್ತವಾಗಿದೆ.

**ಮೂಲ ॥ ಉತ್ತರೇಷೂತ್ತರೇಷ್ವೇವಂ (ವ) ಯಾವದ್ವಾಯುಂ ವಿಮುಕ್ತಿಗಾಃ।**
**ಪ್ರವಿಶ್ಯ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ ॥ ೩ ॥**
**ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಶ್ಚೈವೋತ್ತರೋತ್ತರಂ ।**
**ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ತುರಾಃ ॥ ೪ ॥**

**ಅರ್ಥ** ॥ (ಪೂರ್ವೇ ಪೂರ್ವೇ=ನಿಕೃಷ್ಟ ನಿಕೃಷ್ಟದೇವತೆಗಳು) **ಉತ್ತರೇಷು ಉತ್ತರೇಷು**= ತಂತಮ್ಮನ್ನು ಹುಟ್ಟಿಸಿದ ಉತ್ತಮೋತ್ತಮ ದೇವತೆಗಳಲ್ಲಿ **ದೇಹಕ್ಷಯಾತ್**=ದೇಹಲಯದಿಂದ, **ಪ್ರವಿಶ್ಯ**=(ಆ ಮೇಲೆ ಅವರಲ್ಲಿ) ಪ್ರವೇಶಮಾಡಿ, (ಅವರೂ ಸ್ವೋತ್ತರದಲ್ಲಿ ದೇಪಕ್ಷಯವನ್ನು ಹೊಂದಿ) **ಏವಂ**=ಇದೇ ಕ್ರಮದಿಂದ, **ಯಾವದ್ವಾಯುಂ**=ಚತುರ್ಮುಖಪರ್ಯಂತವಾಗಿ, **ವಿಮುಕ್ತಿಗಾಃ**=ಕರ್ಮಾದಿಬಂಧದಿಂದ ವಿಶೇಷಾಕಾರವಾಗಿ ಮುಕ್ತಿಯನ್ನು ಹೊಂದಿದವರಾಗಿ (ಅಂದರೆ ಸರ್ವ ದೇವತೆಗಳೂ ತಂತಮ್ಮ ತಾರತಮ್ಯಕ್ರಮವನ್ನನುಸರಿಸಿ ಉತ್ತಮದೇವತೆಗಳಲ್ಲಿ ಪ್ರವೇಶಮಾಡಿ) **ತದಂತಃ**=ಶರೀರದ ಒಳಗೂ, **ಬಹಿರೇವ ವಾ**=ಶರೀರದ ಹೊರಗೆ ಹೊರಟು ಹೋಗಿ ಆಗಲೀ, **ಭೋಗಾನ್**=ತಮಗೆ ಯೋಗ್ಯಗಳೇ ಆದ ಸುಖಾದಿಗಳನ್ನು,ಭುಂಜತ ಏವ=ಅನುಭವಿಸುತ್ತಾರೆ. ವಾಗಧಿಕರಣ ॥ 1 ॥ ಮನಃಪ್ರಾಣಾಧಿಕರಣ ॥ 2 ॥ ಭೂತಾಧಿಕರಣ ॥ 4 ॥ ನೈಕಸ್ಮಿನ್ನಧಿಕರಣ ॥5॥

**ವಾಯುಃ**=ಚತುರ್ಮುಖನು, (ದೇಹಲಯವನ್ನು ಹೊಂದಿ) **ವಿಷ್ಣುಂ**=ಶ್ರೀ ಹರಿಯನ್ನು, **ಪ್ರವಿಶ್ಯೈವ**=ಪ್ರವೇಶಮಾಡಿಯೇ, **ತದಂತಃ ಬಹಿರೇವ ವಾ**=ಶರೀರದ ಒಳಗೂ ಹೊರಗೇ ಆಗಲೀ, **ಭೋಗಾನ್**=ತದ್ಭಿನ್ನ ಭೋಗಗಳನ್ನು, **ಭುಂಕ್ತೇ**=ಅನುಭವಿಸುತ್ತಾನೆ, **ಭೋಗಶ್ಚ**=ಅವರಿಂದ ಭೋಗಿಸಲ್ಪಡತಕ್ಕ ಆನಂದಾದಿ ಭೋಗವು ವಿಷಯಾನುಭವವಾಗಲೀ, **ಉತ್ತರೋತ್ತರಂ**=ತಾರತಮ್ಯ ಶ್ರುತ್ಯನುಸಾರವಾಗಿ, ತರತಮಭಾವದಿಂದಲೂ ಅವರ ಅಧೀನವಾಗಿಯೇ (ಆಗುತ್ತದೆ.) ಅಧ್ಯಕ್ಷಾಧಿಕರಣ ॥ 3 ॥ ಸಮನಾಧಿಕರಣ ॥ 6 ॥ ತಾನಿಪರಾಧಿಕರಣ ॥ 7 ॥ ಅವಿಭಾಗಾಧಿಕರಣ ॥ 8 ॥

**ಮಾನುಷಾಃ**=ಜ್ಞಾನಿಮನುಷ್ಯರು, (ಬ್ರಹ್ಮನಾಡಿಯಿಂದ) **ಉತ್ಕ್ರಮ್ಯ**=ದೇಹದಿಂದ ಹೊರಟು ಹೋಗಿ, **ದೇಹಕ್ಷಯಾತ್**=ಚರಮದೇಹದಿಂದ ಉತ್ಕ್ರಮಣವನ್ನು ಹೊಂದಿ (ಹೊರಟುಹೋಗಿ), **ಮುಕ್ತಿಂ**=ಲಿಂಗಭಂಗಾಖ್ಯ ಮುಕ್ತಿಯನ್ನು, **ಯಾಂತಿ**=ಹೊಂದುತ್ತಾರೆ. ತದೋಕೋಧಿಕರಣ ॥ 9 ॥ ಯೋಗ್ಯಧಿಕರಣ ॥ 10 ॥

**ಸುರಾಃ**=ದೇವತೆಗಳು, **ದೇಹಕ್ಷಯಾತ್**=ಶರೀರದ ನಾಶದಿಂದ, **ಮುಕ್ತಿಂ**=ಮೋಕ್ಷವನ್ನು, **ಯಾಂತಿ**=ಹೊಂದುತ್ತಾರೆ. (ಮುಕ್ತಿಗೆ ಹೋಗುವ ಕಾಲದಲ್ಲಿಯೇ ದೇವತೆಗಳಿಗೆ ದೇಹಲಯವೂ, ಬೇರೆ ಭೂಮಿಯಲ್ಲಿ ಅವತರಿಸುವಾಗ ಉತ್ಕ್ರಮಣವೂ ಇದೆ ಎಂದು ಸೂಚಿತವಾಯಿತು.) ॥ 4 ॥

**ಚತುರ್ಥಾಧ್ಯಾಯದಲ್ಲಿ ದ್ವಿತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೪ ॥ ಪಾದ ॥ ೨ ॥ ಶ್ಲೋಕ ॥ ೪ ॥**

**ಮೂಲ ॥ ಅರ್ಚಿರಾದಿಪಥಾ ವಾಯುಂ ಪ್ರಾಪ್ಯ ತೇನ ಜನಾರ್ದನಂ ।**
**ಯಾಂತ್ಯುತ್ತಮಾ ನರೋಚ್ಚಾದ್ಯಾ ಬ್ರಹ್ಮಲೋಕಾತ್ಸಹಾಮುನಾ ॥ ೫ ॥**

**ಅರ್ಥ ॥ ಉತ್ತಮಾಃ ನರೋಚ್ಚಾದ್ಯಾಃ**=ಮುಕ್ತಿಯೋಗ್ಯರಾದ ಉತ್ತಮ ಜೀವರು (ಪ್ರತೀಕಾಲಂಬನರು) **ಅರ್ಚಿರಾದಿಪಥಾ**=(ಉತ್ಕ್ರಮಣಾನಂತರದಲ್ಲಿ) ಅರ್ಚಿರಾದಿ ಮಾರ್ಗದಿಂದ, **ವಾಯುಂ**=ಭಾರತೀಪತಿಯನ್ನು, **ಪ್ರಾಪ್ಯ**=ಹೊಂದಿ, **ತೇನ**=ಆ ವಾಯುವಿನಿಂದ, (ಕಾರ್ಯಬ್ರಹ್ಮನನ್ನು ಹೊಂದಿ ಬ್ರಹ್ಮಲೋಕದಲ್ಲಿ ಇರುತ್ತಾರೆ. ಅಪ್ರತೀಕಾಲಂಬನರಾದರೂ ಅರ್ಚಿರಾದಿ ಮಾರ್ಗದಿಂದ ವಾಯುದೇವರನ್ನು ಹೊಂದಿ ಆ ವಾಯುದೇವರಿಂದ ಅಕಾರ್ಯನಾದ ಪರಬ್ರಹ್ಮನನ್ನು ಹೊಂದಿ ಅವನ ಸಮೀಪದಲ್ಲಿಯೇ ಇರುತ್ತಾರೆ. ಅವರಿಬ್ಬರೂ ಲಯಕಾಲದಲ್ಲಿ ಕಾರ್ಯಬ್ರಹ್ಮನನ್ನು ಹೊಂದಿ ಅವನ ಉಪದೇಶದಿಂದ) **ಬ್ರಹ್ಮಲೋಕಾತ್**=ಬ್ರಹ್ಮಲೋಕವನ್ನು ಬಿಟ್ಟು, **ಅಮುನಾ**=ಕಾರ್ಯಬ್ರಹ್ಮನಿಂದ ಕೂಡಿಕೊಂಡೇ, **ಜನಾರ್ದನಂ**=ಮುಕ್ತಿಪ್ರದನಾದ ವಾಸುದೇವನನ್ನು, **ಯಾಂತಿ**=ಹೊಂದುತ್ತಾರೆ. ಅಥವಾ **ನರೋಚ್ಚಾದ್ಯಾಃ**=ಮನುಷ್ಯಶ್ರೇಷ್ಠರು, ''**ಉತ್ಕ್ರಾಂತಸ್ತು ಶರೀರಾತ್ಸ್ವಾದ್ಗಚ್ಛತ್ಯರ್ಚಿಷಮೇವ ತು** '' ಇತ್ಯಾದಿ ಸ್ಮೃತಿಯಲ್ಲಿ ಹೇಳಲ್ಪಟ್ಟ ಅರ್ಚಿಮಾರ್ಗದಿಂದಲೂ **ಉತ್ತಮಾಃ**=ದೇವಾದಿಗಳು ''**ತಸ್ಮಾದಶೇಷಾ ಗಿರಿಜಾಂ ಪ್ರವಿಶ್ಯ ತಯೈವ ರುದ್ರಂ ಸಹ ತೇನ ವಾಣೀಂ**'' ಇತ್ಯಾದ್ಯನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಪ್ರವೇಶಮಾರ್ಗದಿಂದಲೂ, **ಅರ್ಚಿರಾದಿಪಥಾ**=ಅರ್ಚಿಮಾರ್ಗದಿಂದಲೂ ದೇವತೆಗಳ ಲಯ ಮಾರ್ಗದಿಂದಲೂ, **ವಾಯುಂ**=ಭಾರತೀಪತಿಯಾದ ವಾಯುವನ್ನು, **ಪ್ರಾಪ್ಯ**=ಹೊಂದಿ, **ತೇನ**=ಆ ವಾಯುವಿನಿಂದ, **ಜನಾರ್ದನಂ**=ಜನ್ಮರಹಿತನೂ, ಸಂಸಾರನಾಶಕನೂ ಆದ ಶ್ರೀಹರಿಯನ್ನು,

**ಯಾಂತಿ**=ಹೊಂದುತ್ತಾರೆ. **ನರೋಚ್ಚಾದ್ಯಾಃ**=ದೇವತೆಗಳಿಂದಿತರರಾದ ಮನುಷ್ಯೋತ್ತಮಾದಿಗಳು, **ಬ್ರಹ್ಮಲೋಕಾತ್**=ಚತುರ್ಮುಖಾಧಿಷ್ಠಿತಲೋಕವನ್ನು ಹೊಂದಿ, **ಅಮುನಾ**=ಚತುರ್ಮುಖ ಬ್ರಹ್ಮನಿಂದ, **ಸಹ**=ಕೂಡಿಕೊಂಡು, **ತೇನ**=ಆ ವಾಯುವಿನಿಂದ, **ಜನಾರ್ದನಂ**=ಶ್ರೀಹರಿಯನ್ನು, **ಯಾಂತಿ**= ಹೊಂದುತ್ತಾರೆ.

ತಾತ್ಪರ್ಯ ॥ ''**ಪ್ರತೀಕಂ ದೇಹ ಉದ್ದಿಷ್ಟಃ ಯೇಷಾಂ ತತ್ರೈವ ದರ್ಶನಂ। ನ ತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ ॥ ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ । ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ ಶತಂ ತಥಾ ॥ ಏತೇಽಧಿಕಾರಿಣೋ ವ್ಯಾಪ್ತದರ್ಶನೇಽನ್ಯೇ ನ ತು ಕ್ವಚಿತ್ । ಅಯೋಗ್ಯ ದರ್ಶನೇ ಯತ್ನಾದ್ಭ್ರಂಶಃ ಪೂರ್ವಸ್ಯ ಚಾಪಿ ತು ॥ ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು । ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ಬ್ರಹ್ಮ ಸಲೋಕತಾಂ ॥ ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಂ ॥**'' ದೇಹಾದಿಗಳು ಪ್ರತೀಕವೆನ್ನಿಸುತ್ತವೆ. ಯಾವ ಅಧಿಕಾರಿಗಳಿಗೆ ದೇಹಾದಿಗಳಲ್ಲಿಯೇ ಬ್ರಹ್ಮದರ್ಶನವಾಗುತ್ತದೋ, ಯಾವ ಕಾಲದಲ್ಲಿಯೂ ಸರ್ವತ್ರ ವ್ಯಾಪ್ತನೆಂದು ಬ್ರಹ್ಮನ ದರ್ಶನವಾಗುವುದಿಲ್ಲವೋ, ಅವರು ಪ್ರತೀಕಾಲಂಬನರು. ಅಪ್ರತೀಕಾಲಂಬನರಾದರೂ ದೇವತೆಗಳು, 100 ಋಷಿಗಳು, 100 ರಾಜರು, 100 ಗಂಧರ್ವರು, 100 ಅಪ್ಸರ ಸ್ತ್ರೀಯರು, ಇವರು ವ್ಯಾಪ್ತಭಗವದ್ರೂಪವನ್ನು ಪ್ರತ್ಯಕ್ಷೀಕರಿಸುವವರು. ಇತರರಾದ ಮನುಷ್ಯೋತ್ತಮಾದಿಗಳು ಯಾವ ಕಾಲದಲ್ಲಿಯೂ ವ್ಯಾಪ್ತದರ್ಶನದಲ್ಲಿ ಯೋಗ್ಯರಾಗುವುದಿಲ್ಲ, ತಮಗೆ ಅಯೋಗ್ಯವಾದ ದರ್ಶನಕ್ಕಾಗಿ ಶ್ರವಣಾದಿರೂಪಪ್ರಯತ್ನದಿಂದ ಪೂರ್ವದಲ್ಲಿ ಹುಟ್ಟಿದ್ದ ದರ್ಶನಕ್ಕೂ ಫಲವಿಲ್ಲವೆಂದಾಗುವುದು. ಯಾರು ಅಪ್ರತೀಕಾಲಂಬನರೋ ಅವರು ವೈಕುಂಠದಲ್ಲಿರುವ ಹರಿಯನ್ನೇ ಹೊಂದುತ್ತಾರೆ. ಪ್ರತೀಕಾಲಂಬನರು ತಮ್ಮ ಶರೀರದಲ್ಲಿಯೇ ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡು ಪರಬ್ರಹ್ಮನ ಲೋಕ ವನ್ನೇ ಹೊಂದುವರು. ಪ್ರಲಯಕಾಲವು ಪ್ರಾಪ್ತವಾಗುವಾಗ ಚತುರ್ಮುಖನಿಂದೊಡಗೂಡಿಯೇ ಬ್ರಹ್ಮನನ್ನು ಹೊಂದುವರು ಎಂಬ ಗಾರುಡವಚನದಿಂದ ದೇವಾದಿಗಳು (ಅಪ್ರತೀಕಾಲಂಬನರು) ಸಾಕ್ಷಾತ್ತಾಗಿಯೇ ಜನಾರ್ದನನನ್ನು ಹೊಂದುತ್ತಾರೆ. ಮನುಷ್ಯೋತ್ತಮರು ಚತುರ್ಮುಖದ್ವಾರಾ ಪರಬ್ರಹ್ಮನನ್ನು ಹೊಂದುತ್ತಾರೆ. ಇದರಿಂದ ಅರ್ಚಿರಧಿಕರಣ ॥ 1 ॥ ವಾಯುಶಬ್ದಾಧಿಕರಣ ॥ 2 ॥ ತಟಿದಧಿಕರಣ ॥ 3 ॥ ಆತಿವಾಹಿಕಾಧಿಕರಣ ॥ 4 ॥ ವೈದ್ಯುತಾಧಿಕರಣ ॥ 5 ॥ ಕಾರ್ಯಾಧಿಕರಣ ॥ 6 ॥ ಹೀಗೆ ಈ ಪಾದದಲ್ಲಿರುವ 6 ಅಧಿಕರಣಾರ್ಥವೂ ಉಕ್ತವಾಯಿತು. ॥ 5 ॥

**ಚತುರ್ಥಾಧ್ಯಾಯದ ತೃತೀಯಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೪ ॥ ಪಾದ ॥ ೩ ॥ ಶ್ಲೋಕ ॥ ೫ ॥**

ಅರ್ಚಿರಾದಿಮಾರ್ಗದಿಂದ ಬ್ರಹ್ಮನನ್ನು ಹೊಂದಿದವರಿಗೆ ಭೋಗವನ್ನು ಹೇಳುವುದಕ್ಕಾಗಿ 4ನೇ ಪಾದವು ಪ್ರವೃತ್ತವಾಗಿದೆ.

**ಮೂಲ ॥ ಯಥಾಸಂಕಲ್ಪಭೋಗಾಶ್ಚ ಚಿದಾನಂದಶರೀರಿಣಃ ।**
**ಜಗತ್ಸೃಷ್ಟ್ಯಾದಿವಿಷಯೇ (ಯಂ) ಮಹಾಸಾಮರ್ಥ್ಯಮಪ್ಯೃತೇ ॥ ೬ ॥**
**ಯಥೇಷ್ಟಶಕ್ತಿಮಂತಶ್ಚ ವಿನಾ ಸ್ವಾಭಾವಿಕೋತ್ತಮಾನ್ ।**

**ಅನನ್ಯವಶಗಾಶ್ಚೈವ ವೃದ್ಧಿಹ್ರಾಸವಿವರ್ಜಿತಾಃ ।**
**ದುಃಖಾದಿರಹಿತಾ ನಿತ್ಯಂ ಮೋದಂತೇಽವಿರತಂ ಸುಖಂ ॥ ೭ ॥**

**ಅರ್ಥ ॥ ಉತ್ತಮಾಃ ನರೋಚ್ಚಾದ್ಯಾಃ**=ವಿಷ್ಣುವನ್ನು ಹೊಂದಿರುವ ಮನುಷ್ಯೋತ್ತಮಾದಿಗಳು (ಮುಕ್ತರು) **ಯಥಾಸಂಕಲ್ಪಭೋಗಾಃ**=ವಿಷ್ಣುವಿನ ಇಚ್ಛಾನುಸಾರಿಯಾದ ಭೋಗವುಳ್ಳವರಾಗಿ, **ಚಿದಾನಂದಶರೀರಿಣಶ್ಚ**=ಜ್ಞಾನಾನಂದಾತ್ಮಕ ಶರೀರವುಳ್ಳವರೂ, ಅಪ್ರಾಕೃತ ಶರೀರವುಳ್ಳವರೂ ಆಗಿ, **ಜಗತ್ಸೃಷ್ಟ್ಯಾದಿವಿಷಯೇ**=ಅಮುಕ್ತವರ್ಗಕ್ಕೆ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವ ವಿಷಯದಲ್ಲಿ **ಮಹಾಸಾಮರ್ಥ್ಯಮಪಿ**=ತಮಗೆ ಯೋಗ್ಯವಾಗಿರುವುದಕ್ಕಿಂತ ಹೆಚ್ಚು ಆನಂದಾದಿಗಳನ್ನು, **ಋತೇ**=ಹೊರತು, **ಯಥೇಷ್ಟಶಕ್ತಿಮಂತಶ್ಚ**=ಮುಕ್ತರೂ ಸ್ವಕೀಯರೂ ಆದ ಅವರನ್ನು ನಿಯಮಿಸುವುದೇ ಮೊದಲಾದ ಇಚ್ಛಾನುಸಾರ ಸಾಮರ್ಥ್ಯವುಳ್ಳವರಾಗಿ, **ಸ್ವಾಭಾವಿಕೋತ್ತಮಾನ್ ವಿನಾ ಅನನ್ಯವಶಗಾಃ**=ಸ್ವಾಭಾವಿಕವಾಗಿಯೇ ಸ್ವೋತ್ತಮರಾದ ವಿಷ್ಣು ದೇವತಾ ಗುರ್ವಾದಿಗಳನ್ನು ಹೊರತು ಇತರರ ಅಧೀನದಲ್ಲಿಲ್ಲದಿರುವವರೂ ಆಗಿ, (ಸರ್ವಥಾ ಮತ್ತೊಬ್ಬರ ಅಧೀನದಲ್ಲಿಲ್ಲವೆಂದಲ್ಲ, ಸ್ವೋತ್ತಮರ ಅಧೀನರೇ ಆಗಿರುತ್ತಾರೆ) **ದುಃಖಾದಿರಹಿತಾಃ**=ದುಃಖ, ಚಿಂತಾ, ಆಲಸ್ಯಾದಿ ದೋಷವಿರಹಿತರಾಗಿ, **ವೃದ್ಧಿಹ್ರಾಸವಿವರ್ಜಿತಾಃ**=ವಿಷಯಭೋಗವಾದಾಗ್ಯೂ ಆನಂದಾದಿಗಳಿಗೆ ವೃದ್ಧಿಹ್ರಾಸವಿಲ್ಲದಿರುವವರಾಗಿ ಅಂದರೆ ಸರ್ವದಾ ಏಕಪ್ರಕಾರವಾಗಿ, **ಅವಿರತಂ ಸುಖಂ**=ಅವಸಾನವೇ ಇಲ್ಲದಿರುವ (ಪುನರಾವೃತ್ತಿಯಿಲ್ಲದಿರುವ) ಸುಖವನ್ನು, **ನಿತ್ಯಂ ಮೋದಂತೇ**=ಸರ್ವಕಾಲದಲ್ಲಿಯೂ ಅನುಭವಿಸುತ್ತಾ ಇರುತ್ತಾರೆ.

**ತಾತ್ಪರ್ಯ ॥** ''**ಯಥಾಸಂಕಲ್ಪಭೋಗಾಶ್ಚ ಚಿದಾನಂದಶರೀರಿಣಃ ।**'' ಎನ್ನುವುದರಿಂದ, ಸಂಪದ್ಯಾಧಿಕರಣ ॥ 1 ॥ ಮುಕ್ತಾಧಿಕರಣ ॥ 2 ॥ ಆತ್ಮಾಧಿಕರಣ ॥ 3 ॥ ಅವಿಭಾಗಾಧಿಕರಣ ॥ 4 ॥ ಬ್ರಾಹ್ಮಾಧಿಕರಣ ॥ 5 ॥ ಸಂಕಲ್ಪಾಧಿಕರಣ ॥ 6 ॥ ''**ಜಗತ್ಸೃಷ್ಟ್ಯಾದಿವಿಷಯೇ ಮಹಾಸಾಮರ್ಥ್ಯಮಪ್ಯೃತೇ ॥ ಯಥೇಷ್ಟಶಕ್ತಿಮಂತಶ್ಚ**'' ಇದರಿಂದ ಜಗದ್ವ್ಯಾಪಾರಾಧಿಕರಣ ॥ 9 ॥ ''**ವೃದ್ಧಿಹ್ರಾಸ ವಿವರ್ಜಿತಾಃ ॥ ದುಃಖಾದಿರಹಿತಾಃ** '' ಇದರಿಂದ ಅಭಾವಾಧಿಕರಣ ॥ 8 ॥ ಸ್ಥಿತ್ಯಧಿಕರಣ ॥ 10 ॥ ''**ನಿತ್ಯಂ ಮೋದಂತೇಽವಿರತಂ ಸುಖಂ ॥**'' ಇದರಿಂದ ಅನಾವೃತ್ತ್ಯಧಿಕರಣ ॥ 11 ॥ ಇವುಗಳ ಅರ್ಥಗಳು ಪ್ರತಿಪಾದಿಸಲ್ಪಟ್ಟವು. ॥ 6 ॥ 7 ॥

**ಚತುರ್ಥಾಧ್ಯಾಯದ ಚತುರ್ಥಪಾದಾರ್ಥವು ಸಮಾಪ್ತವಾಯಿತು.**

**ಅಧ್ಯಾಯ ॥ ೪ ॥ ಪಾದ ॥ ೪ ॥ ಶ್ಲೋಕ ॥ ೭ ॥**

ತನ್ನ ಸ್ವರೂಪವನ್ನು ಅಧಿಕಾರಿಗಳಿಗೆ ಸೂಚಿಸುತ್ತಾ ತಾನು ಮಾಡಿದ ಅಣುಭಾಷ್ಯದಿಂದ ಪರಮಾತ್ಮನು ಪ್ರೀತನಾಗಲಿ ಎಂದು ಬೇಡಿಕೊಳ್ಳುತ್ತಾರೆ-

**ಮೂಲ ॥ ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥಸಂಗ್ರಹಃ ।**
**ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ ॥ ೮ ॥**
**ನಮೋ ನಮೋಽಶೇಷದೋಷದೂರಪೂರ್ಣಗುಣಾತ್ಮನೇ ।**
**ವಿರಿಂಚಿ (ಚ) ಶರ್ವಪೂರ್ವೇಡ್ಯ ವಂದ್ಯಾಯ ಶ್ರೀವರಾಯ ತೇ ॥ ೯ ॥**

**ಅರ್ಥ ॥ ಪೂರ್ಣಪ್ರಜ್ಞೇನ ಮುನಿನಾ**=ಪರಿಪೂರ್ಣ ಜ್ಞಾನವಿರುವುದರಿಂದ ಪೂರ್ಣಪ್ರಜ್ಞ ನಾಮಕರಾದ ಮುನಿಗಳಿಂದ, **ಸರ್ವಶಾಸ್ತ್ರಾರ್ಥಸಂಗ್ರಹಃ ಅಯಂ**=ಸರ್ವಪ್ರಮೇಯವನ್ನು ವಿಷಯೀ ಕರಿಸಿರುವ ಮೀಮಾಂಸಾಶಾಸ್ತ್ರದ ಅರ್ಥದ ಸಂಗ್ರಹರೂಪವಾದ ಅಣುಭಾಷ್ಯಾಖ್ಯವಾದ ಈ ಗ್ರಂಥವು, **ಕೃತಃ**=ಮಾಡಲ್ಪಟ್ಟಿತು. **ತೇನ**=ನಾನು ಮಾಡಿದ ಗ್ರಂಥದಿಂದ, **ಪರಮಾತ್ಮಾ ರಮಾಪತಿಃ**=ಸರ್ವಸ್ವಾಮಿ ಯಾದ ಲಕ್ಷ್ಮೀಪತಿಯು, **ಪ್ರೀಯತಾಂ**=ಪ್ರೀತನಾಗಲಿ ॥ 8 ॥ **ಅಶೇಷದೋಷದೂರ**=ಪಾರತಂತ್ರ್ಯ ಮೊದಲಾದ ಸರ್ವದೋಷಗಳ ಅತ್ಯಂತಾಭಾವಕ್ಕೆ ಆಧಾರನೇ, ವಿರಿಂಚಶರ್ವಪೂರ್ವೇಡ್ಯ= ಬ್ರಹ್ಮರುದ್ರಾದಿ ದೇವತೆಗಳಿಂದ ಸ್ತುತ್ಯನೇ, **ಪೂರ್ಣಗುಣಾತ್ಮನೇ**=ಜ್ಞಾನಾನಂದಾದಿ ಪೂರ್ಣಗುಣ ಸ್ವರೂಪನೂ, **ವಂದ್ಯಾಯ**=ಸರ್ವಸ್ತುತ್ಯನೂ ಆದ, **ಶ್ರೀವರಾಯ ತೇ**=ಲಕ್ಷ್ಮೀಪತಿಯಾದ ನಿನಗೋಸ್ಕರ, **ನಮೋ ನಮಃ**=ನಮಸ್ಕಾರ ನಮಸ್ಕಾರವು. (ನಿರ್ದೋಷತ್ವಾದಿ ಗುಣವಿಶಿಷ್ಟನಾದ ವಿಷ್ಣುವೇ ಬ್ರಹ್ಮಮೀಮಾಂಸಾಶಾಸ್ತ್ರಪ್ರತಿಪಾದ್ಯನು.) ॥ 9 ॥

**ತಾತ್ಪರ್ಯ ॥** (1) 1ನೇ ಅಧ್ಯಾಯದಲ್ಲಿ ಶ್ರೀಹರಿಯೇ ಸರ್ವಶಾಸ್ತ್ರಪ್ರತಿಪಾದ್ಯನು, ಸರ್ವಜಗತ್ಕರ್ತನು, ಅನಂತಾನಂತ ಗುಣಪರಿಪೂರ್ಣನು ಎಂದು ಪ್ರತಿಪಾದಿಸಿದರು. ಅದರಲ್ಲಿ 1ನೇ ಪಾದದಲ್ಲಿ ಅನ್ಯತ್ರಪ್ರಸಿದ್ಧಗಳಾದ ಆಕಾಶ, ಪ್ರಾಣ ಮೊದಲಾದ ನಾಮಾತ್ಮಕ ಶಬ್ದಗಳಿಗೆ ಸಮನ್ವಯವನ್ನು ಮಾಡಿದರು. 2ನೇ ಪಾದದಲ್ಲಿ ಲಿಂಗಾತ್ಮಕಗಳು ಧರ್ಮವಾಚಕಗಳಾದುದರಿಂದ ಧರ್ಮಿವಾಚಕಗಳಾದ ನಾಮಾತ್ಮಕ ಶಬ್ದಗಳಿಂದ ಅಮುಖ್ಯಗಳಾದ ಪ್ರಯುಕ್ತ ಅನಂತರದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ಸರ್ವಗತತ್ವ ಅತ್ತೃತ್ವ ಮೊದಲಾದ ಲಿಂಗಾತ್ಮಕಶಬ್ದಗಳಿಗೆ ಸಮನ್ವಯವನ್ನು ಮಾಡಿದರು. 3ನೇ ಪಾದದಲ್ಲಿ ಉಭಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ ಅನ್ಯಪರತ್ವವನ್ನು ಮಾತ್ರ ನಿರಾಕರಿಸಬೇಕು. ಭಗವತ್ಪರತ್ವವನ್ನು ಸಮರ್ಥಿಸಬೇಕಾಗಿಲ್ಲ. ಅನ್ಯತ್ರಪ್ರಸಿದ್ಧಗಳಿಗಾದರೂ ಅನ್ಯ ಪರತತ್ವವನ್ನು ನಿರಾಕರಿಸಿ ಭಗವತ್ಪರತ್ವವನ್ನೂ ಸಮರ್ಥಿಸಬೇಕು. ಅನ್ಯತ್ರ ಪ್ರಸಿದ್ಧಿಯನ್ನು ನಿರಾಕರಿಸಿ ಭಗವಂತನಲ್ಲಿ ಪ್ರಸಿದ್ಧಿಯನ್ನು ಸಮರ್ಥಿಸುವುದಕ್ಕಿಂತ ಅನ್ಯತ್ರ ಪ್ರಸಿದ್ಧಿಯನ್ನು ಮಾತ್ರ ನಿರಾಕರಿಸುವುದು ಅಮುಖ್ಯವು. ಆದಕಾರಣ ಉಭಯತ್ರ (ಶ್ರೀಹರಿಯಲ್ಲಿಯೂ ರುದ್ರಾದಿಗಳಲ್ಲಿಯೂ) ಪ್ರಸಿದ್ಧಗಳಾದ ದ್ಯುಭ್ವಾದ್ಯಾಯತನತ್ವ ಭೂಮ ಸತ್ ಇತ್ಯಾದಿ ನಾಮಲಿಂಗಾತ್ಮಕ ಶಬ್ದಗಳಿಗೆ ಸಮನ್ವಯವನ್ನು ಮಾಡಿದರು. 4ನೇ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧಗಳಾದ ಅವ್ಯಕ್ತಾದಿ ಶಬ್ದಗಳು ಪ್ರಥಮತಃ ಬುದ್ಧಿಯಲ್ಲಿ ಆರೂಢವಾಗದಿರುವುದರಿಂದ ಆ ಅವ್ಯಕ್ತಾದಿ ಶಬ್ದಗಳಿಗೆ ಸಮನ್ವಯವನ್ನು ಮಾಡಿದರು. (2) ಆ ವಿಷಯದಲ್ಲಿ, ಯುಕ್ತ್ಯಾದಿಗಳಿಂದ ವಿರೋಧವು ಪ್ರಾಪ್ತವಾಗುವಾಗ 2ನೇ ಅಧ್ಯಾಯದಲ್ಲಿ ವಿರೋಧವಿಲ್ಲವೆಂದು ನಿರೂಪಿಸಿದರು. ಅದರಲ್ಲಿ 1ನೇ ಪಾದದಲ್ಲಿ ಯುಕ್ತಿಗಳಿಂದ ವಿರೋಧವಿಲ್ಲವೆಂದು ನಿರೂಪಿಸಿದರು. 2ನೇ ಪಾದದಲ್ಲಿ ವಿರುದ್ಧ ಸಮಯಗಳನ್ನು ನಿರಾಕರಿಸಿದರು. 3ನೇ ಪಾದದಲ್ಲಿ ಜೀವ ಪರಮಾತ್ಮಾದಿ ವಿಷಯಕ ಶ್ರುತಿಗಳ ವಿಷಯದಲ್ಲಿ ಪರಸ್ಪರ ವಿರೋಧವನ್ನು ತಿರಸ್ಕರಿಸಿದರು. 4ನೇ ಪಾದದಲ್ಲಿ ಶ್ರುತಿಗಳಿಗೆ ಯುಕ್ತಿಸಹಿತ ಶ್ರುತಿಗಳಿಂದ ವಿರೋಧವನ್ನು ಪರಿಹರಿಸಿದರು. (3) 3ನೇ ಅಧ್ಯಾಯದಲ್ಲಿ ಮುಕ್ತಿಗೆ ಸಾಧನಭೂತವಾದ ಭಗವದಪರೋಕ್ಷ ಜ್ಞಾನಕ್ಕೆ ಸಾಧನಗಳಾದ ವೈರಾಗ್ಯ, ಭಕ್ತಿ, ಶ್ರವಣಾದಿರೂಪ ಉಪಾಸನಗಳ ವಿಚಾರವನ್ನು ನಿರೂಪಿಸಿದರು. ಅದರಲ್ಲಿ 1ನೇ ಪಾದದಲ್ಲಿ ವೈರಾಗ್ಯವಿಲ್ಲದೆ ದೃಢಭಕ್ತಿಯು ಹುಟ್ಟದಿರುವುದರಿಂದ ಭಕ್ತಿಯಿಲ್ಲದೆ ಉಪಾಸನೆಯು ಕೂಡದಿರುವುದರಿಂದ ವೈರಾಗ್ಯವನ್ನು ಪ್ರಥಮದಲ್ಲಿ ನಿರೂಪಿಸಿದರು. 2ನೇ ಪಾದದಲ್ಲಿ ವೈರಾಗ್ಯಸಾಧ್ಯವಾದ ಪ್ರಯುಕ್ತವೂ, ಉಪಾಸನಾಕ್ಕೆ

ಅಂಗಭೂತ ವಾದುದರಿಂದಲೂ, ವೈರಾಗ್ಯ ಉಪಾಸನಗಳ ಮಧ್ಯದಲ್ಲಿ ಭಕ್ತಿಯನ್ನು ನಿರೂಪಿಸಿದರು. 3ನೇ ಪಾದದಲ್ಲಿ ಭಕ್ತಿಸಾಧ್ಯವಾದ ಪ್ರಯುಕ್ತವೂ, ಜ್ಞಾನಕ್ಕೆ ಸಾಧನವಾದ ಪ್ರಯುಕ್ತವೂ, ಭಕ್ತಿಯನ್ನು ನಿರೂಪಣ ಮಾಡಿದ ಮೇಲೆ ಜ್ಞಾನವನ್ನು ನಿರೂಪಿಸುವುದಕ್ಕಿಂತ ಮೊದಲೇ, ಬ್ರಹ್ಮಜಿಜ್ಞಾಸಾರೂಪ ಉಪಾಸನೆಯನ್ನು ನಿರೂಪಿಸಿದರು. 4ನೇ ಪಾದದಲ್ಲಿ ಯಾವ ಜ್ಞಾನಕ್ಕಾಗಿ ಉಪಾಸನೆಯನ್ನು ಹೇಳಿದರೋ, ಅಂತಹ ಅಪರೋಕ್ಷಜ್ಞಾನದ ಸಾಮರ್ಥ್ಯವನ್ನು ನಿರೂಪಿಸಿದರು. (4) 4ನೇ ಅಧ್ಯಾಯದಲ್ಲಿ ವಿರಕ್ತ್ಯಾದಿ ಸಾಧನಗಳಿಂದುಂಟಾಗುವ ಬ್ರಹ್ಮದರ್ಶನಕ್ಕೆ ಫಲಭೂತವಾದ ಮುಕ್ತಿಸ್ವರೂಪವನ್ನು ವಿಚಾರಮಾಡಿದರು. ಅದರಲ್ಲಿ 1ನೇ ಪಾದದಲ್ಲಿ ಕರ್ಮನಾಶಾಖ್ಯಫಲವನ್ನು ನಿರೂಪಿಸಿದರು. 2ನೇ ಪಾದದಲ್ಲಿ ದೇವತೆಗಳಿಗೆ ದೇಹದಿಂದ ಮೋಕ್ಷವು ಅಂದರೆ, ಸ್ವೋತ್ತಮರಲ್ಲಿ ಪ್ರವೇಶದಿಂದ ಅಲ್ಲಿ ದೇಹಲಯವೂ ಬೇರೆಯವರಿಗೆ ಬ್ರಹ್ಮನಾಡಿಯಿಂದ ದೇಹದಿಂದ ಉತ್ಕ್ರಾಂತಿಯೂ ಇವುಗಳನ್ನು ನಿರೂಪಿಸಿದರು. 3ನೇ ಪಾದದಲ್ಲಿ ಬ್ರಹ್ಮನಾಡಿಯಿಂದ ಉತ್ಕ್ರಾಂತರಾದ ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿಯಾಗಲಿಕ್ಕೆ ಯಾವುದು ಮಾರ್ಗವೋ, ಆ ಮಾರ್ಗದಿಂದ ಹೋಗಿ ದೇಹ ಲಯವುಳ್ಳವರಿಗೆ ಗಮ್ಯವಾದುದನ್ನು ನಿರೂಪಿಸಿದರು. 4ನೇ ಪಾದದಲ್ಲಿ ಚತುರ್ಮುಖನಿಂದೊಡಗೂಡಿ ಪರಬ್ರಹ್ಮನನ್ನು ಹೊಂದಿದವರಿಗೆ ಆಗತಕ್ಕ ಭೋಗವನ್ನು ನಿರೂಪಿಸಿದರು. (5) ಈ ಪ್ರಕಾರ ವಿರಕ್ತಿ ಭಕ್ತಿ, ಉಪಾಸನೆಗಳಿಂದುಂಟಾದ ಭಗವತ್ಸಾಕ್ಷಾತ್ಕಾರದಿಂದ ಹುಟ್ಟಿದ ಶ್ರೀಹರಿಯ ಪ್ರಸಾದದಿಂದ ಸರ್ವ ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮುಕ್ತಿಯು ಸಿದ್ಧಿಸುವುದರಿಂದ ಲಕ್ಷ್ಮೀಪತಿಯಾದ ಶ್ರೀನಾರಾಯಣನು ಅಶೇಷಗುಣಪರಿಪೂರ್ಣನೆಂದೂ, ದೋಷಲೇಶವಿಲ್ಲದಿರುವವನೆಂದೂ, ಮುಮುಕ್ಷುಗಳಿಂದ ಸರ್ವದಾ ಜಿಜ್ಞಾಸ್ಯನೆಂದೂ ಸಿದ್ಧವಾಯಿತು. ॥ 8 ॥ 9 ॥

ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಾಣುಭಾಷ್ಯೇ
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಚತುರ್ಥೋಽಧ್ಯಾಯ ॥ ೪ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀವೇದವ್ಯಾಸಕೃತ
ಬ್ರಹ್ಮಸೂತ್ರಾಣುಭಾಷ್ಯದಲ್ಲಿ ೪ನೇ ಅಧ್ಯಾಯವು ಸಮಾಪ್ತವಾಯಿತು ॥ ೪ ॥ ಶ್ರೀಃ ॥

ಸುಖಮುಖಗುಣಪೂರ್ಣಂ ಸರ್ವದೋಷಾತಿತೀರ್ಣಂ
ಶ್ರುತಿಮತಿರತಿಮದ್ಭಿರ್ಗಮ್ಯಮಾದ್ಯಾದಿಸದ್ಭಿಃ ।
ನಿಖಿಲನಿಗಮವೇದ್ಯಂ ನಿರ್ಜರಾರಾಧ್ಯಮಾದ್ಯಂ
ನವನಲಿನಸುನೇತ್ರಂ ನೌಮಿ ಲಕ್ಷ್ಮೀಕಳತ್ರಂ ॥ ೧ ॥

ಭಾರತೀಶ ನಮಸ್ತುಭ್ಯಂ ರಾಮಪ್ರಿಯ ನಮೋಽಸ್ತು ತೇ ।
ನಮಸ್ತೇ ದ್ರೌಪದೀಕಾಂತ ವ್ಯಾಸಶಿಷ್ಯ ನಮೋಽಸ್ತು ತೇ ॥ ೨ ॥

ವ್ಯಾಖ್ಯಯಾಸ್ಯಾಣುಭಾಷ್ಯಸ್ಯ ಪ್ರೀತೋ ಮಧ್ವಮುನಿರ್ಮಮ ।
ನಿವಾರಯನ್ನಪ್ರಕಾಶಂ ಸುಪ್ರಕಾಶಂ ದದಾತು ಮೇ ॥ ೩ ॥

ಶ್ರೀಪೂರ್ಣಬೋಧರಚಿತಾಃ ಸದಾಚಾರಸ್ಮೃತಿಃ ಪರಾ ।
ನಖಸ್ತುತಿಃ ಶ್ರೀಜಯಂತೀನಿರ್ಣಯಃ ಕಂದುಕಸ್ತುತಿಃ ॥ ೪ ॥

ದ್ವಾದಶಸ್ತೋತ್ರಮೀಡ್ಯಂ ಶ್ರೀಕೃಷ್ಣಾಮೃತಮಹಾರ್ಣವಃ ॥
ಅಣುಭಾಷ್ಯಂ ಚೇತಿ ಸಪ್ತ ಕೃತಯಸ್ತಾ ಇಮಾ ಮಯಾ ॥ ೫ ॥

ರೂಪ್ಯಪೀಠಕಲಾಶಾಲಾಪಂಡಿತೇನ ಸತಾಂ ಮುದೇ ।
ತಂತ್ರಿನಾರಾಯಣಾಖ್ಯೇನ ಕಾರ್ನಾಟಕ್ಯಾ ಸುಭಾಷಯಾ ॥ ೬ ॥

ಸಾರಮಾದಾಯ ಟೀಕಾಯಾಃ ಟಿಪ್ಪಣೀನಾಂ ಯಥಾಮತಿ ।
ವ್ಯಾಖ್ಯಾತಾ ವಿಜಯಂತಾಂ ಶ್ರೀಮಧ್ವನಾಥಃ ಪ್ರಸೀದತಾತ್ ॥ ೭ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ದ್ವಾದಶಸ್ತೋತ್ರವು

ಕಳತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।
ಶಿವಾದ್ಯಾ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ ॥
ಪ್ರಣಮ್ಯ ಶ್ರೀಮದಾನಂದತೀರ್ಥಾದಿಗುರುಶೇಖರಾನ್ ।
ದ್ವಾದಶಸ್ತೋತ್ರಸುವಾಖ್ಯಾಂ ಸಂಗೃಹ್ಣಾಮಿ ಯಥಾಮತಿ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಮ್ ॥

**ಮೂಲ ॥ ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಂ ।**
**ಇಂದಿರಾಪತಿಮಾದ್ಯಾದಿ ವರದೇಶವರಪ್ರದಂ ॥ ೧ ॥**

**ಅರ್ಥ ॥** ವಂದ್ಯಂ=(ಬ್ರಹ್ಮಾದಿಗಳಿಂದ) ನಮಸ್ಕರಿಸಿಕೊಳ್ಳಲಿಕ್ಕೂ ಸ್ತುತಿಸಿಕೊಳ್ಳಲಿಕ್ಕೂ ಯೋಗ್ಯನಾದ, ಆದ್ಯಾದಿವರದೇಶವರಪ್ರದಂ, **ಆದ್ಯಂ**=ಚತುರ್ಮುಖನೇ, **ಆದಿ**=ಮೊದಲಾಗಿವುಳ್ಳ, **ವರ**=ಅಭೀಷ್ಟಗಳನ್ನು, **ದ**=ಕೊಡುವ, **ಈಶ**=ನಿಯಾಮಕರಾದ ರುದ್ರೇಂದ್ರಾದಿದೇವತೆಗಳಿಗೆ, **ವರ**=ಉತ್ಕೃಷ್ಟವಾದ ಐಶ್ವರ್ಯಾದಿರೂಪ ಅಭೀಷ್ಟವನ್ನು, **ಪ್ರದಂ**=ಕೊಡುವ, ಸದಾನಂದಂ, **ಸತ್**=ದುಃಖ ಪಾರತಂತ್ರ್ಯ ಮೊದಲಾದ ಸರ್ವದೋಷಗಳ ಸಂಪರ್ಕವಿಲ್ಲದಿರುವ, **ಆನಂದಂ**=ಆನಂದ ಪೂರ್ಣೈಶ್ವರ್ಯ ಮೊದಲಾದ ಸರ್ವ ಕಲ್ಯಾಣಗುಣಗಳ ಸಮೂಹವುಳ್ಳ, ಅಥವಾ ಸಜ್ಜನರಿಗೆ ಆನಂದವನ್ನು ಕೊಡುವ, **ನಿರಂಜನಂ**=ಅಜ್ಞಾನಾದಿ ದೋಷರಹಿತನಾದ, **ಇಂದಿರಾಪತಿಂ**=ಲಕ್ಷ್ಮೀಪತಿ ಯಾದ, **ವಾಸುದೇವಂ**=ಶ್ರೀಕೃಷ್ಣನನ್ನು, **ವಂದೇ**=ನಮಸ್ಕರಿಸುತ್ತೇನೆ.

**ತಾತ್ಪರ್ಯ ॥** ಅತಿವಿಸ್ತೃತವಾಗಿಯೂ ಗಂಭೀರವಾಗಿಯೂ ಇರುವ ಶಾಸ್ತ್ರಾಂಭೋನಿಧಿಯಲ್ಲಿ ಪ್ರವೇಶಿಸಲು ಅಸಮರ್ಥರಾದ ಸಜ್ಜನರಿಗೆ ಅನುಗ್ರಹಿಸಬೇಕೆಂದಿಚ್ಛಿಸಿದರೂ ಜ್ಞಾನವಿಲ್ಲದೆ ಮುಕ್ತಿಯು ಲಭಿಸದಿರುವುದರಿಂದ ಅದಕ್ಕೆ ಉಪಾಯಭೂತವಾದ ಭಗವದನುಗ್ರಹವು ಆ ಹರಿಯ ಸ್ತುತಿಯಿಂದಲೇ ಆಗುವುದೆಂದು ನಿಶ್ಚಯಿಸಿ ಶ್ರೀಮದಾನಂದತೀರ್ಥಾಚಾರ್ಯರು ಸರ್ವೋತ್ತಮನಾದ ಶ್ರೀಹರಿಯ ವಂದನರೂಪವಾದ ಪರಮಮಂಗಳವನ್ನು ನಿಬಂಧಿಸಿದರು. ॥ 1 ॥

**ಮೂಲ ॥ ನಮಾಮಿ ನಿಖಿಲಾಧೀಶಕಿರೀಟಾಘೃಷ್ಟಪೀಠವತ್ ।**
**ಹೃತ್ತಮಶ್ಶಮನೇಽಕಾರ್ಭಂ ಶ್ರೀಪತೇಃ ಪಾದಪಂಕಜಂ ॥ ೨ ॥**

**ಅರ್ಥ ॥** ನಿಖಿಲಾಧೀಶಕಿರೀಟಾಘೃಷ್ಟಪೀಠವತ್, **ನಿಖಿಲ**=ಸರ್ವಪ್ರಪಂಚಕ್ಕೆ, ಯಾ ಸಮಸ್ತರಾದ, **ಅಧೀಶ**=ನಿಯಾಮಕರಾದ ಬ್ರಹ್ಮರುದ್ರಾದಿ ದೇವತೆಗಳ, **ಕಿರೀಟ**=ಮುಕುಟಗಳಿಂದ, **ಆಘೃಷ್ಟ**=ಚೆನ್ನಾಗಿ ಸಂಘರ್ಷಿಸಲ್ಪಟ್ಟ, **ಪೀಠವತ್**=ಪಾದಪೀಠವುಳ್ಳ, ಹೃತ್ತಮಶ್ಶಮನೇ, **ಹೃತ್**=ಮನಸ್ಸಿನ, **ತಮಃ**=ಅಜ್ಞಾನಾಂಧಕಾರವನ್ನು, **ಶಮನೇ**=ಪರಿಹರಿಸುವ ವಿಷಯದಲ್ಲಿ, **ಅರ್ಕಾಭಂ**=ಬಾಲಸೂರ್ಯನ

ಪ್ರಕಾಶದಂತೆ ಪ್ರಕಾಶವುಳ್ಳ, **ಶ್ರೀಪತೇಃ**=ಲಕ್ಷ್ಮೀಪತಿಯಾದ ಶ್ರೀಪರಮಾತ್ಮನ, **ಪಾದಪಂಕಜಂ**=ಕಮಲದಂತಿರುವ ಪಾದಗಳನ್ನು, **ನಮಾಮಿ**=ನಮಸ್ಕರಿಸುತ್ತೇನೆ.

**ತಾತ್ಪರ್ಯ ॥** ಬ್ರಹ್ಮರುದ್ರಾದಿ ದೇವತೆಗಳು ಮುಕುಟಧಾರಿಗಳಾಗಿ ಶ್ರೀಹರಿಯ ಪಾದಕಮಲಕ್ಕೆ ಬಿದ್ದು ನಮಸ್ಕಾರ ಸ್ತುತ್ಯಾದಿಗಳನ್ನು ಸಮರ್ಪಿಸಲು ಅವರವರ ಯೋಗ್ಯತೆಯನ್ನನುಸರಿಸಿ ಪ್ರಕಾಶವನ್ನು ಹೊಂದಿರುವ ಮನಸ್ಸಿನ ಅಜ್ಞಾನಾಂಧಕಾರವನ್ನು ಪರಿಹರಿಸುವ ವಿಷಯದಲ್ಲಿ ಸೂರ್ಯನಂತಿರುವ ಪಾದಾರವಿಂದವನ್ನು ನಮಸ್ಕರಿಸುತ್ತೇನೆ. ॥ 2 ॥

**ಮೂಲ ॥ ಜಾಂಬೂನದಾಂಬರಾಧಾರಂ ನಿತಂಬಂ ಚಿಂತ್ಯಮೀಶಿತುಃ ।**
**ಸ್ವರ್ಣಮಂಜೀರಸಂವೀತಮಾರೂಢಂ ಜಗದಂಬಯಾ ॥ ೩ ॥**

**ಅರ್ಥ ॥ ಈಶಿತುಃ**=ಸರ್ವರಿಗೂ ಸ್ವಾಮಿಯಾದ ಶ್ರೀಹರಿಯ, ಜಾಂಬೂನದಾಂಬರಾಧಾರಂ, **ಜಾಂಬೂನದ**=ಸುವರ್ಣದಂತಿರುವ, **ಅಂಬರ**=ಪೀತಾಂಬರಕ್ಕೆ, **ಆಧಾರಂ**=ಆಶ್ರಯನಾದ, (ಅಂದರೆ ಪೀತಾಂಬರವನ್ನು ಧರಿಸಿಕೊಂಡ) ಸ್ವರ್ಣಮಂಜೀರಸಂವೀತಂ, **ಸ್ವರ್ಣ**=ಸುವರ್ಣಮಯವಾದ, **ಮಂಜೀರ**=ಮೇಖಲೆಯಿದ, **ಸಂವೀತಂ**=ಪೀತಾಂಬರದ ಮೇಲೆ ಸುತ್ತಿಸಲ್ಪಟ್ಟ, (ಸುವರ್ಣದ ವಡ್ಯಾಣವನ್ನು ಧರಿಸಿಕೊಂಡ) **ಜಗದಂಬಯಾ**=ತ್ರಿಲೋಕಕ್ಕೆ ಜನನಿಯರಾದ ಶ್ರೀಲಕ್ಷ್ಮೀದೇವಿಯರಿಂದ, **ಆರೂಢಂ**=ಆಶ್ರಯಿಸಲ್ಪಟ್ಟ, **ನಿತಂಬಂ**=ಕಟಿಪ್ರದೇಶವು, **ಚಿಂತ್ಯಂ**=(ಮೋಕ್ಷೇಚ್ಛುಗಳಿಂದ) ಧ್ಯಾನಿಸಲ್ಪಡಬೇಕು. ಅಥವಾ ಧ್ಯಾನಾರ್ಹವಾದ ಕಟಿಪ್ರದೇಶವನ್ನು, **ನಮಾಮಿ**=ನಮಸ್ಕರಿಸುತ್ತೇನೆ. ॥3॥

**ಮೂಲ ॥ ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂ ಭರಂ ।**
**ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥ ೪ ॥**

**ಅರ್ಥ ॥ ತನುತ್ವೇಽಪಿ**=ಉದರವು ಸೂಕ್ಷ್ಮವಾದಾಗ್ಯೂ, **ಅಖಿಲಂ**=ಸರ್ವಜಗತ್ತನ್ನು, **ಭರಂ**=ಧರಿಸುವ, **ವಲಿತ್ರಯಾಂಕಿತಂ**=ಉದರದಲ್ಲಿ ಅಡ್ಡವಾಗಿರುವ ರೇಖೆಗಳ ಮೂರರಿಂದ ಚಿಹ್ನಿಸಲ್ಪಟ್ಟ, **ಏಕಯಾ**=ಮುಖ್ಯಳಾದ, (ಸಮಾನಿಕರಿಲ್ಲದಿರುವ) **ಶ್ರಿಯಾ**=ಲಕ್ಷ್ಮೀದೇವಿಯಿಂದ, **ನಿತ್ಯಂ**=ಯಾವಾಗಲೂ, **ಉಪಗೂಢಂ**=ಆಲಿಂಗಿಸಲ್ಪಟ್ಟ, **ಈಶಸ್ಯ**=ಶ್ರೀಕೃಷ್ಣನ, **ಉದರಂ**=ಜಠರಪ್ರದೇಶವು, **ಚಿಂತ್ಯಂ**=ಧ್ಯಾನಿಸತಕ್ಕುದು. ॥ 4 ॥

**ಮೂಲ ॥ ಸ್ಮರಣೀಯಮುರೋ ವಿಷ್ಣೋ-**
**ರಿಂದಿರಾವಾಸಮೀಶಿತುಃ (ಮುತ್ತಮಂ)।**
**ಅನಂತಮಂತವದಿವ ಭುಜಯೋರಂತರಂ ಗತಂ ॥ ೫ ॥**

**ಅರ್ಥ ॥ ಈಶಿತುಃ**=ಸರ್ವರಿಗೂ ಸ್ವಾಮಿಯಾದ, **ವಿಷ್ಣೋಃ**=ಶ್ರೀಕೃಷ್ಣನ, **ಇಂದಿರಾವಾಸಂ**=ಲಕ್ಷ್ಮೀದೇವಿಗೆ ಆವಾಸಸ್ಥಾನವಾದ, **ಅಂತವದಿವ**=ಅಲ್ಪದೇಶದಲ್ಲಿರುವಂತೆ ಇರುವ, **ಭುಜಯೋಃ**=ಬಾಹುಗಳ, **ಅಂತರಂ**=ಮಧ್ಯಪ್ರದೇಶವನ್ನು, **ಗತಂ**=ಹೊಂದಿದ, **ಅನಂತಂ**=ಸರ್ವದೇಶ ಕಾಲಗಳಲ್ಲಿ ವ್ಯಾಪ್ತವಾದ ಅನಂತಗುಣಪರಿಪೂರ್ಣವಾದ, ಅಥವಾ ನಾಶವಿಲ್ಲದಿರುವ, **ಉರಃ**=ವಕ್ಷಸ್ಥಳವು, **ಸ್ಮರಣೀಯಂ**=(ಭಕ್ತರಿಂದ) ಧ್ಯಾನಿಸತಕ್ಕುದು.)

**ತಾತ್ಪರ್ಯ ||** ಶ್ರೀಹರಿಯ ಸ್ವರೂಪಕ್ಕೂ ಅವಯವಗಳಿಗೂ ಅತ್ಯಂತಾಭೇದವಿದ್ದುದರಿಂದ ವಕ್ಷಃಪ್ರದೇಶವೂ ಅನಂತವೆಂದೇ ಪ್ರಮಾಣಸಿದ್ಧವು. ಶ್ರೀಹರಿಯು ಭಕ್ತರಿಗೆ ನೋಡಲು ಶಕ್ಯಗಳಾದ ಅಲ್ಪರೂಪಗಳನ್ನೇ ತೋರಿಸುವನು. ಹಾಗೆಯೇ ಅಲ್ಪಗಳಾದ ಅವಯವಗಳನ್ನೇ ತೋರಿಸುವನು. ಇದರಿಂದ ಶ್ರೀಹರಿಗೆ ನಿರವಧಿಕವಾದ ಅಘಟಿತಘಟನಾಶಕ್ತಿಯಿದೆ ಎಂದು ಸೂಚಿಸಲ್ಪಟ್ಟಿತು. || 5 ||

**ಮೂಲ || ಶಂಖಚಕ್ರ (ಚಕ್ರಶಂಖ) ಗದಾಪದ್ಮಧರಾಶ್ಚಿಂತ್ಯಾಹರೇರ್ಭುಜಾಃ |**
**ಪೀನವೃತ್ತಾ ಜಗದ್ರಕ್ಷಾ ಕೇವಲೋದ್ಯೋಗಿನೋಽನಿಶಂ || ೬ ||**

**ಅರ್ಥ || ಹರೇಃ**=ಶ್ರೀಪರಮಾತ್ಮನ, ಶಂಖಚಕ್ರಗದಾಪದ್ಮಧರಾಃ, **ಶಂಖ**=ಪಾಂಚಜನ್ಯವು, **ಚಕ್ರ**=ಸುದರ್ಶನವು, **ಗದಾ**=ಕೌಮೋದಕಿಯು, **ಪದ್ಮ**=ಕಮಲವೂ ಇವುಗಳನ್ನು, **ಧರಾಃ**=ಧರಿಸಿದ, **ಪೀನವೃತ್ತಾಃ**=ಪುಷ್ಟಗಳೂ ವರ್ತುಲಗಳೂ ಆದ, ಜಗದ್ರಕ್ಷಾ ಕೇವಲೋದ್ಯೋಗಿನಃ, **ಜಗತ್**=ಲೋಕಗಳನ್ನು, **ರಕ್ಷಾ**=ಪಾಲಿಸುವುದೇ, **ಕೇವಲ**=ಮುಖ್ಯವಾಗಿ, **ಉದ್ಯೋಗಿನಃ**=ವ್ಯಾಪಾರವಾಗಿ ಉಳ್ಳ, **ಭುಜಾಃ**=ನಾಲ್ಕುಬಾಹುಗಳು, **ಅನಿಶಂ**=ಯಾವಾಗಲೂ, **ಚಿಂತ್ಯಾಃ**=ಧ್ಯಾನಿಸಲ್ಪಡಬೇಕು. || 6 ||

**ಮೂಲ || ಸತತಂ ಚಿಂತಯೇತ್ಕಂಠಂ ಭಾಸ್ವತ್ಕೌಸ್ತುಭಭಾಸಕಂ |**
**ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ || ೭ ||**

**ಅರ್ಥ || ಯತಃ**=ಯಾವ ಕಂಠದಿಂದ, **ಅಖಿಲಾಃ**=ಸಮಸ್ತಗಳಾದ, **ವೇದಾಃ**=ಋಗಾದಿ ವೇದಗಳು, **ಅನಿಶಂ**=ನಿರಂತರದಲ್ಲಿಯೂ, **ಉದ್ಗೀರ್ಯಂತೇ**=(ಶ್ರೀಹರಿಯಿಂದುಚ್ಚರಿಸಲ್ಪಡುತ್ತವೋ, ತಂ=ಆ, **ವೈಕುಂಠಸ್ಯ**=ಶ್ರೀನಾರಾಯಣ ದೇವರ, ಭಾಸ್ವತ್ಕೌಸ್ತುಭಭಾಸಕಂ, **ಭಾಸ್ವತ್**=ಸೂರ್ಯನಂತಿರುವ, ಯಾ ಪ್ರಕಾಶಮಾನವಾದ, **ಕೌಸ್ತುಭಃ**=ಕೌಸ್ತುಭಾಖ್ಯ ಮಣಿಗೆ, **ಭಾಸಕಂ**=ಪ್ರಕಾಶಕವಾದ, (ಸ್ವಭಾವತಃ ಪ್ರಕಾಶಕದ ಕೌಸ್ತುಭ ಮಣಿಗೂ, ಶೋಭೆಯನ್ನು ಕೊಡುವುದು. ಸರ್ವವೇದಗಳನ್ನಭಿವ್ಯಕ್ತೀಕರಿಸುವದರಿಂದಲೂ, ಲೋಕವಿಲಕ್ಷಣವಾದ ಲಾವಣ್ಯವಿದ್ದುದರಿಂದಲೂ ಶ್ರೀಹರಿಯ ಕಂಠವು ಭೂಷಣಕ್ಕೂ ಭೂಷಣವೆನ್ನುವುದುಚಿತವೇ ಸರಿ.) **ಕಂಠಂ**=ಕುತ್ತಿಗೆಯನ್ನು, **ಸತತಂ**=ಯಾವಾಗಲೂ, **ಚಿಂತಯೇತ್**=ಧ್ಯಾನಿಸಬೇಕು.

**ತಾತ್ಪರ್ಯ ||** 1) ವೇದಗಳು ಅಪೌರುಷೇಯಗಳಾದುದರಿಂದ ಶ್ರೀಹರಿಯ ಕಂಠದಿಂದ ಅಭಿವ್ಯಕ್ತಗಳೇ ಸರಿ. ನಿರ್ಮಿತಗಳಾದವುಗಳಲ್ಲ, (2) ಕಂಠವು ಪ್ರಕಾಶಿಸುವ ಕೌಸ್ತುಭಮಣಿಯನ್ನೂ ಪ್ರಕಾಶಪಡಿಸುವುದು. ಅಂದರೆ ಶ್ರೀಹರಿಯು ಅತಿ ಸುಂದರನಾದುದರಿಂದ ಆಭರಣಕ್ಕೂ ಆಭರಣನು. || 7 ||

**ಮೂಲ || ಸ್ಮರೇತ ಯಾಮಿನೀನಾಥ ಸಹಸ್ರಾಮಿತಕಾಂತಿಮತ್|**
**ಭವತಾಪಾಪನೋದೀಢ್ಯಂ ಶ್ರೀಪತೇರ್ಮುಖಪಂಕಜಂ || ೮ ||**

**ಅರ್ಥ || ಶ್ರೀಪತೇಃ**=ಲಕ್ಷ್ಮೀಪತಿಯಾದ ಶ್ರೀಹರಿಯ, ಯಾಮಿನೀನಾಥ ಸಹಸ್ರಾಮಿತ ಕಾಂತಿಮತ್, **ಯಾಮಿನಿ**=ರಾತ್ರಿಗಳಿಗೆ, **ನಾಥ**=ಅಧಿಪತಿಗಳಾದ ಚಂದ್ರರ, **ಸಹಸ್ರ**=ಸಾವಿರದಿಂದಲೂ, **ಅಮಿತ**=ಎಣಿಸಲಶಕ್ಯವಾದ, (ಅಂದರೆ ಅಧಿಕವಾದ) **ಕಾಂತಿಮತ್**=ಶೋಭೆಯುಳ್ಳ

ಭವತಾಪಾಪನೋದೀಢ್ಯಂ, **ಭವ**=ಸಂಸಾರದ, **ತಾಪ**=ಆಧ್ಯಾತ್ಮಿಕಾದಿ ದುಃಖವನ್ನು, **ಅಪನೋದಿ**= ಪರಿಹರಿಸುವ, **ಈಢ್ಯಂ**=ಸ್ತುತಿಗೆ ಯೋಗ್ಯವಾದ, **ಮುಖಪಂಕಜಂ**=ವದನಾರವಿಂದವನ್ನು, (ಮೋಕ್ಷ ವನ್ನಿಚ್ಛಿಸುವವನು) ಸ್ಮರೇತ=ಸ್ಮರಿಸತಕ್ಕುದು. ॥ 8 ॥

**ಮೂಲ ॥ ಪೂರ್ಣಾನನ್ಯಸುಖೋದ್ಭಾಸಿ, ಮಂದಸ್ಮಿತಮಧೀಶಿತುಃ ।**
**ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾನಂದಪದ (ಫಲ) ಪ್ರದಂ ॥ ೯ ॥**

**ಅರ್ಥ ॥ ಅಧೀಶಿತುಃ**=ಸರ್ವರಿಗೂ ಸ್ವಾಮಿಯಾದ, **ಗೋವಿಂದಸ್ಯ**=ವೇದಗಳಿಂದ ತಿಳಿಯಲ್ಪಡ ತಕ್ಕ ಶ್ರೀಕೃಷ್ಣನ, ಪೂರ್ಣಾನನ್ಯಸುಖೋದ್ಭಾಸಿ, **ಪೂರ್ಣ**=ಪರಿಪೂರ್ಣವಾದ, ನಿರವಧಿಕವಾದ, **ಅನನ್ಯ**=ಅಸಾಧಾರಣವಾದ, **ಸುಖ**=ಸುಖದಿಂದ, **ಉದ್ಭಾಸಿ**=ಚೆನ್ನಾಗಿ ಪ್ರಕಾಶಿಸುವ ಸ್ವಭಾವವುಳ್ಳ, ನಿತ್ಯಾನಂದಪದಪ್ರದಂ, **ನಿತ್ಯಾನಂದ**=ಮೋಕ್ಷದ, **ಪದ**=ಸ್ಥಾನವಾದ ವೈಕುಂಠವನ್ನು (ನಿತ್ಯಾನಂದಫಲ= ಸರ್ವದಾ ಆನಂದವುಳ್ಳ ಮೋಕ್ಷವನ್ನು) **ಪ್ರದಂ**=ಚೆನ್ನಾಗಿ ಕೊಡತಕ್ಕ, **ಮಂದಸ್ಮಿತಂ**=ಮಂದಹಾಸವು, **ಸದಾ**=ಯಾವಾಗಲೂ, **ಚಿಂತ್ಯಂ**=ಧ್ಯಾನಿಸಲ್ಪಡಬೇಕು ॥ 9 ॥

**ಮೂಲ ॥ ಸ್ಮರಾಮಿ ಭವಸಂತಾಪ ಹಾನಿದಾಮೃತಸಾಗರಂ ।**
**ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಂ ॥ ೧೦ ॥**

**ಅರ್ಥ ॥ ಪೂರ್ಣಾನಂದಸ್ಯ**=ನಿರವಧಿಕ ಆನಂದಮಯರಾದ, **ರಾಮಸ್ಯ**=ಸರ್ವದಾ ಯೋಗಿಗಳ ಧ್ಯಾನಕ್ಕೆ ವಿಷಯನಾದ ಶ್ರೀಹರಿಯ ಅಥವಾ ಶ್ರೀರಾಮಚಂದ್ರದೇವರ, ಭವಸಂತಾಪ- ಹಾನಿದಾಮೃತಸಾಗರಂ, **ಭವ**=ಸಂಸಾರದ, **ಸಂತಾಪ**=ಆಧ್ಯಾತ್ಮಿಕಾದಿ ದುಃಖಗಳಿಗೆ, **ಹಾನಿ**=ನಾಶವನ್ನು, ದ=ಕೊಡುವುದೆಂಬ, **ಅಮೃತ**=ಪೀಯೂಷದಿಂದ, **ಸಾಗರಂ**=ಸಮುದ್ರದಂತಿರುವ, **ಸಾನುರಾಗಾವ- ಲೋಕನಂ**=ದಯೆಯಿಂದೊಡಗೂಡಿದ ನೋಡುವಿಕೆಯನ್ನು, **ಸ್ಮರಾಮಿ**=ಸ್ಮರಿಸುತ್ತೇನೆ. ॥ 10 ॥

**ಮೂಲ ॥ ಧ್ಯಾಯೇದಜಸ್ರಮೀಶಸ್ಯ ಪದ್ಮಜಾದಿ ಪ್ರತೀ(ದೀ)ಕ್ಷಿತಂ ।**
**ಭ್ರೂಭಂಗಂ ಪಾರಮೇಷ್ಠ್ಯಾದಿ ಪದದಾಯಿ ವಿಮುಕ್ತಿದಂ ॥ ೧೧ ॥**

**ಅರ್ಥ ॥ ಈಶಸ್ಯ**=ಲಕ್ಷ್ಮೀದೇವಿಗೂ ಸುಖಪ್ರದನಾದ, ಮುಕ್ತನಿಯಾಮಕನಾದ ಶ್ರೀಹರಿಯ, ಪದ್ಮಜಾದಿ ಪ್ರತೀಕ್ಷಿತಂ, **ಪದ್ಮಜ**=ಚತುರ್ಮುಖಬ್ರಹ್ಮನೇ, **ಆದಿ**=ಮೊದಲಾಗಿವುಳ್ಳ ದೇವತೆಗಳಿಂದ, **ಪ್ರತೀಕ್ಷಿತಂ**=ಅಭಿಲಷಿತವಾದ, ಪಾರಮೇಷ್ಠ್ಯಾದಿಪದದಾಯಿವಿಮುಕ್ತಿದಂ, **ಪಾರಮೇಷ್ಠ್ಯ**= ಚತುರ್ಮುಖನ ಪದವಿಯೇ, (ಸತ್ಯಲೋಕಾಧಿಪತ್ಯವೇ) **ಆದಿ**=ಮೊದಲಾಗಿವುಳ್ಳ, **ಪದ**=ರುದ್ರಾದಿ ಪದವಿಗಳನ್ನು, **ದಾಯಿ**=ಕೊಡುವ ಸ್ವಭಾವವುಳ್ಳ, **ವಿಮುಕ್ತಿದಂ**=ಮೋಕ್ಷವನ್ನು ಕೊಡುವ, **ಭ್ರೂಭಂಗಂ**= ಹುಬ್ಬುಗಳ ವಿಲಾಸವನ್ನು, **ಧ್ಯಾಯೇತ್**=ಧ್ಯಾನಿಸಬೇಕು. ॥ 11 ॥

**ಮೂಲ ॥ ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ ।**
**ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥ ೧೨ ॥**

**ಅರ್ಥ ॥ ಅಜಾದಯಃ**=ಬ್ರಹ್ಮಾದಿ ದೇವತೆಗಳು, **ಸಂತತಂ**=ಯಾವಾಗಲೂ, **ಗೃಣಂತಃ**=ಸ್ತುತಿಸಿ ದರೂ ಕೂಡ, **ಯದ್ಗುಣಾನಾಂ**=ಯಾವ ಶ್ರೀಹರಿಯ ಜ್ಞಾನಾನಂದಾದಿ ಗುಣಗಳ, **ಅಂತಂ**=

ಅವಸಾನವನ್ನು, **ನೈವ ಉದಾಪುಃ**=ಹೊಂದಲೇ ಇಲ್ಲವೋ, **ತಾದೃಶಂ**=ಅಂತಹ, **ಅನಂತಂ**=ಅಪರಿಚ್ಛಿನ್ನ ಗುಣಗಳುಳ್ಳ ಶ್ರೀಹರಿಯನ್ನು ಅಥವಾ ನಾಶವಿಲ್ಲದಿರುವ ಶ್ರೀಹರಿಯನ್ನು, **ಸಂತತಂ**=ಯಾವಾಗಲೂ, **ಚಿಂತಯೇ**=ಧ್ಯಾನಿಸುತ್ತೇನೆ. **ಅಂತಕಾಲೇ**=ಪ್ರಾಣತ್ಯಾಗಕಾಲದಲ್ಲಿ **ವಿಶೇಷತಃ**=ವಿಶೇಷಾಕಾರವಾಗಿ (ಸರ್ವಥಾ ಇತರರನ್ನು ಸ್ಮರಿಸದೆ) **ಚಿಂತಯೇ**=ಧ್ಯಾನಿಸುತ್ತೇನೆ.

**ತಾತ್ಪರ್ಯ ॥** ಅಂತ್ಯಕಾಲದಲ್ಲಿ ಭಗವಂತನ ಸ್ಮೃತಿಯು ಬರುವುದಕ್ಕಾಗಿ ಸರ್ವದಾ ಪರಮಾತ್ಮನನ್ನು ಸ್ಮರಿಸುತ್ತಿರಬೇಕೆಂಬ ಅಭಿಪ್ರಾಯವನ್ನು ಎಲ್ಲಾ ಸಜ್ಜನರಿಗೂ ತೋರಿಸಿಕೊಟ್ಟರು ॥ 12 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ದ್ವಾದಶಸ್ತೋತ್ರೇ ಪ್ರಥಮೋಽಧ್ಯಾಯಃ ॥ ೧ ॥**

**ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ದ್ವಾದಶಸ್ತೋತ್ರದಲ್ಲಿ ಒಂದನೇ ಅಧ್ಯಾಯವು ಸಮಾಪ್ತವಾಯಿತು. ॥ ೧ ॥**

## ದ್ವಿತೀಯಾಧ್ಯಾಯವು

**ಮೂಲ ॥ ಸು(ಸ್ವ)ಜನೋದಧಿಸಂವೃದ್ಧಿಪೂರ್ಣಚಂದ್ರೋ ಗುಣಾರ್ಣವಃ ।**
**ಅಮಂದಾನಂದಸಾಂದ್ರೋ ನಃ ಪ್ರೀಯತಾಮಿಂ(ಸದಾವ್ಯಾದಿಂ)ದಿರಾಪತಿಃ ॥ ೧ ॥**

**ಅರ್ಥ ॥** ಸುಜನೋದಧಿಸಂವೃದ್ಧಿಪೂರ್ಣಚಂದ್ರಃ, **ಸು**=ಸಮೀಚೀನರಾದ, (ಭಕ್ತಿ ವೈರಾಗ್ಯಾದಿಗಳುಳ್ಳ) **ಜನ**=ಜನರೆಂಬ, **ಉದಧಿ**=ಸಮುದ್ರಗಳ, **ಸಂವೃದ್ಧಿ**=ಅಭಿವೃದ್ಧಿವಿಷಯದಲ್ಲಿ, **ಪೂರ್ಣಚಂದ್ರಃ**=ಷೋಡಶಕಲಾ ಪರಿಪೂರ್ಣನಾದ ಚಂದ್ರನಂತಿರುವನು, ಗುಣಾರ್ಣವಃ, **ಗುಣ**=ಆನಂದಾದಿ ಗುಣಗಳಿಂದ, **ಅರ್ಣವಃ**=ಸಮುದ್ರನಂತಿರುವನು, (ಅಂದರೆ ಅನಂತಗುಣಭರಿತ ನಾದ) ಅಮಂದಾನಂದಸಾಂದ್ರಃ, **ಅಮಂದ**=ಪೂರ್ಣಗಳಾದ, **ಆನಂದ**=ಸಂತೋಷಗಳಿಂದ, **ಸಾಂದ್ರಃ**=ನಿಬಿಡನಾದವನು, ಅಥವಾ ಮನೋಹರನಾದ, ಅಥವಾ **ಅಮಂದಾನಂದ**=ಮುಕ್ತರಿಗೆ, **ಸಾಂದ್ರಃ**=ಮನೋಹರನಾದ, **ಇಂದಿರಾಪತಿಃ**=ಲಕ್ಷ್ಮೀಪತಿಯಾದ ಶ್ರೀಪರಮಾತ್ಮನು, **ನಃ**=ನಮಗೆ, **ಪ್ರೀಯತಾಂ**=ಪ್ರೀತನಾಗಲಿ. (ಸದಾ=ಯಾವಾಗಲೂ, ಅವ್ಯಾತ್=ರಕ್ಷಿಸಲಿ.) ॥ 1 ॥

**ಮೂಲ ॥ ರಮಾ ಚಕೋರೀ ವಿಧವೇ ದುಷ್ಟದ(ಸ)ರ್ಪೋದವಹ್ನಯೇ ।**
**ಸತ್ಪಾಂಥಜನಗೇಹಾಯ ನಮೋ ನಾರಾಯಣಾಯ ತೇ ॥ ೨ ॥**

**ಅರ್ಥ ॥** ರಮಾಚಕೋರೀವಿಧವೇ, **ರಮಾ**=ಲಕ್ಷ್ಮೀದೇವಿಯೆಂಬ, **ಚಕೋರೀ**=ಚಕೋರ ಪಕ್ಷಿಗೆ, **ವಿಧವೇ**=ಚಂದ್ರನಂತೆ, ಆಹ್ಲಾದವನ್ನುಂಟುಮಾಡುವ, ದುಷ್ಟದ (ಸ)ರ್ಪೋದವಹ್ನಯೇ, **ದುಷ್ಟ**=ದುರ್ಜನರ, **ದರ್ಪ**=ಅಹಂಕಾರವನ್ನು, (ಕೆಟ್ಟ ಸರ್ಪಗಳನ್ನು) (ನಾಶ ಮಾಡುವ ವಿಷಯದಲ್ಲಿ) **ಉದವಹ್ನಯೇ**=ವಡವಾಗ್ನಿಯಂತಿರುವವನು, ಅಥವಾ ದುರ್ಜನರ ಅಹಂಕಾರವೆಂಬ ನೀರಿಗೆ ಬೆಂಕಿಯಂತಿರುವವನು, (ಅಂದರೆ ನೀರನ್ನು ಬೆಂಕಿಯು ಹೇಗೆ ಒಣಗಿಸುತ್ತದೋ ಹಾಗೆ ದುರ್ಜನರ

ಅಹಂಕಾರವನ್ನು ಖಂಡಿಸುವವನು) ಸತ್ಪಾಂಥಜನಗೇಹಾಯ, ಸತ್=ಸಜ್ಜನರೆಂಬ, ಪಾಂಥಜನ=ಮಾರ್ಗಸ್ಥರಿಗೆ, ಗೇಹಾಯ=ಮಂದಿರದಂತಿರುವವನು, ಇಂತಹ, ನಾರಾಯಣಾಯ=ನಾರಾಯಣನಾದ, ತೇ=ನಿನಗೋಸ್ಕರ, ನಮಃ=ನಮಸ್ಕಾರವು. ॥ 2 ॥

**ಮೂಲ ॥ ಚಿದಚಿದ್ಭೇದಮಖಿಲಂ ವಿಧಾಯಾಧಾಯ ಭುಂಜತೇ ।**
**ಅವ್ಯಾಕೃತಗೃಹಸ್ಥಾಯ ರಮಾಪ್ರಣಯಿನೇ ನಮಃ ॥ ೩ ॥**

**ಅರ್ಥ ॥ ಚಿದಚಿದ್ಭೇದಂ**=ಚೇತನ ಪ್ರಪಂಚಕ್ಕೂ ಅಚೇತನ ಪ್ರಪಂಚಕ್ಕೂ ಭೇದವುಳ್ಳ, **ಅಖಿಲಂ**=(ಬ್ರಹ್ಮ ಮೊದಲಾದ) ಸರ್ವಪ್ರಪಂಚವನ್ನು, **ವಿಧಾಯ**=ಸೃಷ್ಟಿಕಾಲದಲ್ಲಿ ಸೃಷ್ಟಿಸಿ, **ಆಧಾಯ**=ಸ್ಥಿತಿಕಾಲದಲ್ಲಿ ರಕ್ಷಿಸಿ, **ಭುಂಜತೇ**=ಸಂಹಾರಕಾಲದಲ್ಲಿ ಸಂಹರಿಸತಕ್ಕ, ಯಾ ಸರ್ವಸಾರಭೋಕ್ತನಾದ, **ಅವ್ಯಾಕೃತ ಗೃಹಸ್ಥಾಯ**=ವಿಕಾರಶೂನ್ಯನೂ ಕುಟುಂಬಿಯೂ ಆದ, ಅಥವಾ ಜಗತ್ಸೃಷ್ಟ್ಯಾದಿಗಳಿಗೆ ಕಾರಣನಾದ ಪ್ರಯುಕ್ತ ಪ್ರಸಿದ್ಧಗಳಾದ ಜನ್ಮ ಮೊದಲಾದ 6 ಭಾವವಿಕಾರಗಳಿಂದೊಡಗೂಡಿದ ಲೌಕಿಕ ಗೃಹಸ್ಥರಿಂದ ವಿಲಕ್ಷಣಗೃಹಸ್ಥನಾದ, ಯಾ ವಿಕಾರಶೂನ್ಯನೂ ವೈಕುಂಠಾಖ್ಯ ಸ್ಥಾನದಲ್ಲಿರುವವನೂ ಆದ, **ರಮಾಪ್ರಣಯಿನೇ**=ಲಕ್ಷ್ಮೀಪತಿಯಾದ ಶ್ರೀಪರಮಾತ್ಮನಿಗೋಸ್ಕರ, **ನಮಃ**=ನಮಸ್ಕಾರವು. ॥ 3 ॥

**ಮೂಲ ॥ ಅಮಂದಗುಣಸಾರೋಽಪಿ ಮಂದಹಾಸೇನ ವೀಕ್ಷಿತಃ ।**
**ನಿತ್ಯಮಿಂದಿರಯಾನಂದಸಾಂದ್ರೋ ಯೋ ನೌಮಿ ತಂ ಹರಿಂ ॥ ೪ ॥**

**ಅರ್ಥ ॥ ಆನಂದಸಾಂದ್ರಃ**=ಆನಂದಪೂರ್ಣನಾದ, **ಯಃ**=ಯಾವ ಶ್ರೀಹರಿಯು, ಅಮಂದ-ಗುಣಸಾರೋಽಪಿ, **ಅಮಂದ**=ಪೂರ್ಣಗಳಿಂದ, **ಗುಣ**=ಜ್ಞಾನಾನಂದಾದಿ ಗುಣಗಳಿಂದ, **ಸಾರೋಽಪಿ**=ಶ್ರೇಷ್ಠನಾದಾಗ್ಯೂ, ಅಥವಾ ಬಲವುಳ್ಳವನಾದಾಗ್ಯೂ, **ನಿತ್ಯಂ**=ಯಾವಾಗಲೂ, **ಇಂದಿರಯಾ**=ಲಕ್ಷ್ಮೀದೇವಿಯಿಂದ, **ಮಂದಹಾಸೇನ**=ಮಂದಹಾಸದಿಂದ, **ವೀಕ್ಷಿತಃ**=ಕಾಣಿಸಲ್ಪಡುತ್ತಾನೋ, ಸೇವಿಸಲ್ಪಡುತ್ತಾನೋ, **ತಂ**=ಆ, ಹರಿಂ=ನಾರಾಯಣನನ್ನು, **ನೌಮಿ**=ನಮಸ್ಕರಿಸುತ್ತೇನೆ. ॥ 4 ॥

**ಮೂಲ ॥ ವಶೀ ವಶೇ ನ ಕಸ್ಯಾಪಿ ಯೋಽಜಿತೋ ವಿಜಿತಾಖಿಲಃ ।**
**ಸರ್ವಕರ್ತಾ ನ ಕ್ರಿಯತೇ ತಂ ನಮಾಮಿ ರಮಾಪತಿಂ ॥ ೫ ॥**

**ಅರ್ಥ ॥ ವಶೀ**=ಸರ್ವವನ್ನು ತನ್ನ ಅಧೀನವಾಗಿಟ್ಟುಕೊಳ್ಳುವುದರಿಂದ ಸ್ವತಂತ್ರನಾದ, ಅಥವಾ ಪ್ರಾಕೃತಗುಣಲೇಪವಿಲ್ಲದಿರುವ, **ಯಃ**=ಯಾವ ಶ್ರೀಹರಿಯು, **ಕಸ್ಯಾಪಿ**=ಲೋಕೇಶರೆಂದು ಆಶಂಕಿತರಾದ ಬ್ರಹ್ಮರುದ್ರಾದಿಗಳಿಗೂ ಕೂಡ, **ವಶೇ**=ಅಧೀನದಲ್ಲಿ, **ನ**=ಇರುವುದಿಲ್ಲವೋ, **ಅಜಿತಃ**=ಯಾರಿಂದಲೂ ಪರಾಜಿತನಾಗದಿರುವ ಅಜಿತನಾಮಕ ಪರಮಾತ್ಮನು, **ವಿಜಿತಾಖಿಲಃ**=ಚೆನ್ನಾಗಿ ತಿರಸ್ಕರಿಸಲ್ಪಟ್ಟ ಸಮಸ್ತ ಪ್ರಪಂಚವುಳ್ಳವನೋ, (ತನ್ನ ಮಹಿಮೆಯಿಂದ ಪ್ರಪಂಚವನ್ನು ತಿರಸ್ಕರಿಸಿದವನು) **ಸರ್ವಕರ್ತಾ**=ಸರ್ವಜಗತ್ತನ್ನು ಸೃಷ್ಟಿಸಿದವನು, **ನ ಕ್ರಿಯತೇ**=(ಬೇರೆ ಯಾರಿಂದಲೂ) ತಾನು ಸೃಷ್ಟಿಸಲ್ಪಡುವುದಿಲ್ಲವೋ, **ತಂ**=ಅಂತಹ, **ರಮಾಪತಿಂ**=ಲಕ್ಷ್ಮೀಪತಿಯಾದ ಶ್ರೀಹರಿಯನ್ನು, **ನಮಾಮಿ**=ನಮಸ್ಕರಿಸುತ್ತೇನೆ. ॥ 5 ॥

**ಮೂಲ ॥ ಅಗುಣಾಯ ಗುಣೋದ್ರೇಕ ಸ್ವರೂಪಾಯಾದಿಕಾರಿಣೇ ।**
**ವಿದಾರಿತಾರಿಸಂಘಾಯ ವಾಸುದೇವಾಯ ತೇ ನಮಃ ॥ ೬ ॥**

**ಅರ್ಥ ॥ ಅಗುಣಾಯ**=ಪ್ರಾಕೃತಗುಣಗಳಿಲ್ಲದಿರುವ, ಸರ್ವೋತ್ತಮನಾದ, ಅಥವಾ ಗುಣೋದ್ರೇಕಸ್ವರೂಪಾಯ, **ಗುಣ**=ಅಪ್ರಾಕೃತಗಳಾದ ಜ್ಞಾನಾನಂದಾದಿಗುಣಗಳ, **ಉದ್ರೇಕ**= ಅಭಿವೃದ್ಧಿಯೇ, (ಅತಿಶಯವೇ,) **ಸ್ವರೂಪಾಯ**=ಸ್ವರೂಪವಾಗಿವುಳ್ಳ, ಅಥವಾ **ಗುಣೋದ್ರೇಕ**= ಗುಣಪೂರ್ಣತ್ವದಲ್ಲಿ **ಸ್ವರೂಪಯಾ**=ಸ್ವಕೀಯವಾದ ಆಗಮಪ್ರಮಾಣವುಳ್ಳ, **ಆದಿಕಾರಿಣೇ**=ಮೂಲ ಕಾರಣನಾದ, **ಅಥವಾ**=ಪ್ರಥಮದಲ್ಲಿ ಹುಟ್ಟಿದ ಚತುರ್ಮುಖನಿಗೂ ಕಾರಣನಾದ, ವಿದಾರಿತಾರಿ-ಸಂಘಾಯ, **ವಿದಾರಿತ**=ಪರಾಜಿತಗಳಾದ, **ಅರಿ**=ಬಾಹ್ಯಾಭ್ಯಂತರಶತ್ರುಗಳ, **ಸಂಘಾಯ**= ಸಮುದಾಯ ವುಳ್ಳ, **ವಾಸುದೇವಾಯ**=ವಸುದೇವನ ಪುತ್ರನಾದ, **ತೇ**=ನಿನಗೋಸ್ಕರ, **ನಮಃ**= ನಮಸ್ಕಾರವು ॥ 6 ॥

**ಮೂಲ ॥ ಆದಿದೇವಾಯ ದೇವಾನಾಂ ಪತಯೇ ಸಾದಿತಾರಯೇ ।**
**ಅನಾದ್ಯಜ್ಞಾನಪಾರಾಯ ನಮೋ**
**ವರವರಾಯ ತೇ (ನಮಃ ಪಾರಾವರಾಶ್ರಯ) ॥ ೭ ॥**

**ಅರ್ಥ ॥ ಆದಿದೇವಾಯ**=ಪ್ರಥಮ ದೇವನಾದ, **ದೇವಾನಾಂ**=ಬ್ರಹ್ಮರುದ್ರಾದಿ ದೇವತೆಗಳಿಗೆ, **ಪತಯೇ**=ರಕ್ಷಕನಾದ, **ಸಾರಿತಾರಯೇ**=ನಾಶಮಾಡಲ್ಪಟ್ಟ ಶತ್ರುಗಳುಳ್ಳ, (ಶತ್ರುಗಳನ್ನು ಸಂಹರಿಸಿದ) ಅನಾದ್ಯಜ್ಞಾನಪಾರಾಯ, **ಅನಾದ್ಯಜ್ಞಾನ**=ಸಂಸಾರಕ್ಕೆ ಕಾರಣವಾದ ಅವಿದ್ಯೆಯನ್ನು, **ಪಾರಾಯ**= ದಾಟಿಸುವ, (ಅಜ್ಞಾನವನ್ನು ಪರಿಹರಿಸುವ) ಅಜ್ಞಾನಮೂಲಕ ಸಂಸಾರಸಮುದ್ರಕ್ಕೆ ಪಾರಭೂತನು, ಅಥವಾ ಅನಾದಿಯಾದ ಅಜ್ಞಾನವನ್ನು ಸಮಾಪಿಸುವ ಅಂದರೆ ಭಕ್ತರ ಅನಾದಿಯಾದ ಅಜ್ಞಾನವನ್ನು ನಿವರ್ತಿಸತಕ್ಕ, **ವರವರಾಯ**=ಉತ್ತಮೋತ್ತಮನಾದ, ಅಥವಾ ಭಕ್ತರನ್ನಂಗೀಕರಿಸುವ, ಅಥವಾ ಏಕಾಂತಭಕ್ತರಿಗೆ ಅತಿಪ್ರಿಯನಾದ, **ತೇ**=ನಿನಗೋಸ್ಕರ (ಪಾರಾವರಾಶ್ರಯ=ಸರ್ವಾಶ್ರಯನೇ) **ನಮಃ**= ನಮಸ್ಕಾರವು ॥7॥

**ಮೂಲ ॥ ಅಜಾಯ, ಜನಯಿತ್ರೇಽಸ್ಯ ವಿಜಿತಾಖಿಲದಾನವ ।**
**ಅಜಾದಿಪೂಜ್ಯಪಾದಾಯ ನಮಸ್ತೇ ಗರುಡಧ್ವಜ ॥ ೮ ॥**

**ಅರ್ಥ ॥** ವಿಜಿತಾಖಿಲದಾನವ, **ವಿಜಿತ**=ಗೆಲ್ಲಲ್ಪಟ್ಟ, **ಅಖಿಲ**=ಸಮಸ್ತರಾದ, **ದಾನವ**=ದೈತ್ಯರುಳ್ಳ, (ಎಲ್ಲಾ ದೈತ್ಯರನ್ನು ಜಯಿಸಿದ) **ಗರುಡಧ್ವಜ**=ಗರುಡನು ಧ್ವಜದಲ್ಲಿರುವವನೇ, **ಅಜಾಯ**=ಸ್ವರೂಪ ದಿಂದಲೂ ದೇಹದಿಂದಲೂ ಉತ್ಪತ್ತಿಶೂನ್ಯನಾದ, **ಅಸ್ಯ**=ನಿತ್ಯ ಅನಿತ್ಯವಾದ ಸರ್ವಪ್ರಪಂಚಕ್ಕೂ, **ಜನಯಿತ್ರೇ**=ಉತ್ಪಾದಕನಾದ, ಅಜಾದಿಪೂಜ್ಯಪಾದಾಯ, **ಅಜ**=ಚತುರ್ಮುಖನೇ, **ಆದಿ**=ಮೊದಲಾದ ರುದ್ರಾದಿಗಳಿಂದ, **ಪೂಜ್ಯ**=ಪೂಜಿಸಲ್ಪಡತಕ್ಕ, **ಪಾದಾಯ**=ಚರಣಗಳುಳ್ಳ, **ತೇ**=ನಿನಗೋಸ್ಕರ, **ನಮಃ**=ನಮಸ್ಕಾರವು ॥ 8 ॥

**ಮೂಲ ॥ ರಮಾರಮಣ ಏವೈಕೋ ರಣಜಿಚ್ಚರಣಂ ಸತಾಂ ।**
**ಕಾರಣಂ ಕಾರಣಸ್ಯಾಪಿ ತರುಣಾದಿತ್ಯಸಪ್ರಭಃ ॥ ೯ ॥**

**ಅರ್ಥ ॥** ಲಕ್ಷ್ಮೀಪತಿಯೊಬ್ಬನೇ, ಯುದ್ಧದಲ್ಲಿ ಸರ್ವಶತ್ರುಸಂಹಾರಕನು. ಸಜ್ಜನರಿಗೆ ರಕ್ಷಕನು. ಜಗತ್ಕಾರಣನಾದ ಬ್ರಹ್ಮನಿಗೂ ಜನಕನು. ಉದಯಿಸಿಕೊಂಡು ಬರುವ ಸೂರ್ಯನಂತೆ ಕಾಂತಿಯುಳ್ಳವನು. ॥ 9 ॥

**ಮೂಲ ॥ ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ ।**
**ಅಸ್ಮದಿಷ್ಟೈಕಕಾರ್ಯಾಯ ಪೂರ್ಣಾಯ ಹರಯೇ ನಮಃ ॥ ೧೦ ॥**

**ಅರ್ಥ ॥** ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ, **ಇಂದಿರಾ**=ಲಕ್ಷ್ಮೀದೇವಿಯ, **ಅಮಂದ**=ಬಹಳಗಳಾದ, **ಸಾಂದ್ರ**=ಭಕ್ತ್ಯಾದಿಗಳಿಂದ ನಿಬಿಡಗಳಾದ, **ಅಗ್ರ್ಯ**=ಉತ್ಕೃಷ್ಟಗಳಾದ, **ಕಟಾಕ್ಷ**=ಕಡೆಗಣ್ಣಿನ ನೋಟಗಳಿಂದ, **ಪ್ರೇಕ್ಷಿತ**=ಚೆನ್ನಾಗಿ ನೋಡಲ್ಪಟ್ಟ, **ಆತ್ಮನೇ**=ಸ್ವರೂಪವುಳ್ಳ, ಅಸ್ಮದಿಷ್ಟೈಕಕಾರ್ಯಾಯ, **ಅಸ್ಮತ್**=ಭಕ್ತರಾದ ನಮ್ಮ, **ಇಷ್ಟ**=ಪ್ರಿಯವಾದುದೇ, **ಏಕಕಾರ್ಯಾಯ**= ಮುಖ್ಯಕಾರ್ಯವಾಗಿವುಳ್ಳ, ಅಥವಾ ಏಕಾಂತಭಕ್ತರಾದ ನಮಗೆ ಪ್ರಿಯನೂ ಮುಖ್ಯೋದ್ದೇಶ್ಯನೂ ಆದ, **ಪೂರ್ಣಾಯ**=ನಿರವಧಿಕನಾದ, ಹರಯೇ=ಪಾಪಪರಿಹಾರಕನಾದ, ನಿನಗೋಸ್ಕರ, **ನಮಃ**= ನಮಸ್ಕಾರವು.

**ತಾತ್ಪರ್ಯ ॥** ಲಕ್ಷ್ಮೀದೇವಿಯರ ಕಡೆಗಣ್ಣಿನ ನೋಟಗಳಿಂದ ಸೇವಿತನಾದ ಮೋಕ್ಷಪ್ರದನಾದ ನಿನಗೋಸ್ಕರ ನಮಸ್ಕಾರವು. ॥ 10 ॥

**ಮೂಲ ॥ ಏವಂ ವಿಧಃ ಪರೋ ವಿಷ್ಣುರವ್ಯಾಚ್ಛ್ರೀಪುರುಷೋತ್ತಮಃ ।**
**ತಮಹಂ ಸರ್ವದಾ ವಂದೇ ಶ್ರೀನಿಕೇತಂ ಪರಂ ಹರಿಂ ॥ ೧೧ ॥**

**ಅರ್ಥ ॥** ಇಂತಹ ಸರ್ವೋತ್ತಮನಾದ, ವ್ಯಾಪ್ತನಾದ ಶ್ರೀಪುರುಷೋತ್ತಮನು ನಮ್ಮನ್ನು ರಕ್ಷಿಸಲಿ. ಅಂತಹ ಸರ್ವೋತ್ತಮನಾದ ಲಕ್ಷ್ಮೀಪತಿಯನ್ನು ನಾನು ನಮಸ್ಕರಿಸುತ್ತೇನೆ. ॥ 11 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ**
**ದ್ವಾದಶಸ್ತೋತ್ರೇ ದ್ವಿತೀಯೋಽಧ್ಯಾಯಃ ॥ ೨ ॥**

**ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಎರಡನೇ ಅಧ್ಯಾಯವು ಸಮಾಪ್ತವಾಯಿತು.॥ ೨ ॥**

## ಮೂರನೇ ಅಧ್ಯಾಯವು

**ಮೂಲ ॥ ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ**
**ಹರಿಪಾದ ವಿನಮ್ರಧಿಯಾ ಸತತಂ ।**
**ಹರಿರೇವ ಪರೋ ಹರಿರೇವ ಗುರುರ್ಹರಿರೇವ**
**ಜಗತ್ಪಿತೃಮಾತೃಗತಿಃ ॥ ೧ ॥**

**ಅರ್ಥ ||** **ಸತತಂ**=ಯಾವಾಗಲೂ, **ಹರಿ**=ಶ್ರೀಪರಮಾತ್ಮನ, **ಪಾದ**=ಚರಣಗಳಲ್ಲಿ, **ವಿನಮ್ರ**= ಆಸಕ್ತವಾದ, **ಧಿಯಾ**=ಬುದ್ಧಿಯಿಂದ, **ನಿಜಂ**=ಸ್ವಕೀಯವಾದ, **ಕರ್ಮ**=ಕರ್ಮವನ್ನು, **ನಿಯತಂ**= ಅವಶ್ಯವಾಗಿ, **ಕುರು**=ಮಾಡು, **ಭುಂಕ್ಷ್ವ ಚ**=ಅನುಭವಿಸು, **ಹರಿರೇವ**=ಶ್ರೀಪರಮಾತ್ಮನೇ, **ಪರಃ**= ಸರ್ವೋತ್ತಮನು, ಪಾಲಕನು, **ಹರಿರೇವ**=ಶ್ರೀಹರಿಯೇ, **ಗುರುಃ**=ಸಜ್ಜನರಿಗೆ ಹಿತೋ(ತತ್ವೋ) ಪದೇಶಕನು, **ಹರಿರೇವ**=ಶ್ರೀಹರಿಯೇ, **ಜಗತ್**=ಲೋಕಗಳಿಗೆ, **ಪಿತೃ**=ಉತ್ಪಾದಕನಾದುದರಿಂದ ತಂದೆಯು, **ಮಾತೃ**=ಪೋಷಕನಾದುದರಿಂದ ತಾಯಿಯು, **ಗತಿಃ**=ಶರಣ್ಯನಾದುದರಿಂದ ಪ್ರಾಪ್ಯನು. ||1||

**ಮೂಲ || ನ ತತೋಽಸ್ತ್ಯಪರಂ ಜಗತೀ (ದೀ) ಡ್ಯತಮಂ**
**ಪರಮಾತ್ಪರತಃ ಪುರುಷೋತ್ತಮತಃ ।**
**ತದಲಂ ಬಹುಲೋಕ ವಿಚಿಂತನಯಾ**
**ಪ್ರವಣಂ ಕುರು ಮಾನಸಮೀಶಪದೇ || ೨ ||**

**ಅರ್ಥ ||** **ತತಃ**=ಶ್ರೀಹರಿಯೊಬ್ಬನೇ ಸರ್ವೋತ್ತಮತ್ವಾದಿ ಗುಣಗಳಿಂದೊಡಗೂಡಿದ ಪ್ರ[illegible] **ಪರತಃ**=ಮಹದಾದಿಗಳಿಗೆ ಕಾರಣವಾದುದರಿಂದುತ್ಕೃಷ್ಟವಾದ ಪ್ರಕೃತಿ ಮೊದಲಾದ ಎಲ್ಲಾ ಜಡಸಮುದಾಯದಿಂದ, **ಪರಮಾತ್**=ನಿಯಾಮಕರಾದುದರಿಂದುತ್ಕೃಷ್ಟರಾದ, **ಪುರುಷೋತ್ತಮತಃ**= ಕ್ಷರಾಕ್ಷರ ಪುರುಷರಿಂದ ಸರ್ವೋತ್ತಮನು, **ಅಪರಂ**=ಬೇರೆಯಾದ ವಸ್ತುವು, **ಜಗತಿ**=ಚೇತನಾ ಚೇತನಾತ್ಮಕವಾದ ಸರ್ವಪ್ರಪಂಚದಲ್ಲಿ **ಈಡ್ಯತಮಂ**=ಸರ್ವೋತ್ತಮನೆಂಬುವ ಬುದ್ಧಿಯಿಂದ ಸ್ತುತಿಸಲಿಕ್ಕೆ ಯೋಗ್ಯವಾದುದು, (ಜಗದೀಡ್ಯತಮಂ=ಪ್ರಪಂಚದಲ್ಲಿ ಮುಖ್ಯಸ್ತುತ್ಯವಾ[illegible]) ನಾಸ್ತಿ=ಇಲ್ಲವೇ ಇಲ್ಲ, **ತತ್**=ಸರ್ವವೂ ಪರತಂತ್ರವಾದುದರಿಂದ, **ಬಹುಲೋಕವಿಚಿಂತನಯಾ**= ಲೋಕಗಳಲ್ಲಿರತಕ್ಕ ದ್ರವ್ಯ ಮನೆ ಮೊದಲಾದ ಅನೇಕಾನೇಕ ಪದಾರ್ಥಗಳ ಹೆಚ್ಚು ಚಿಂತೆಯಿಂದ, **ಅಲಂ**=ಸಾಕು. **ಈಶಪದೇ**=ಭಗವಂತನ ಪಾದಾರವಿಂದದಲ್ಲಿಯೇ, **ಮಾನಸಂ**=ಅಂತಃಕರಣವನ್ನು, **ಪ್ರವಣಂ**=ಆಸಕ್ತವನ್ನಾಗಿ, **ಕುರು**=ಮಾಡು. || 2 ||

**ಮೂಲ || ಯತತೋಽಪಿ ಹರೇಃ ಪದಸಂಸ್ಮರಣೇ**
**ಸಕಲಂ ಹ್ಯಘಮಾಶು ಲಯಂ ವ್ರಜತಿ ।**
**ಸ್ಮರತಸ್ತು ವಿಮುಕ್ತಿಪದಂ ಪರಮಂ**
**ಸ್ಫುಟಮೇಷ್ಯತಿ ತತ್ಕಿಮ(ಮು) ಪಾಕ್ರಿಯತೇ || ೩ ||**

**ಅರ್ಥ ||** **ಹರೇಃ**=ಶ್ರೀಪರಮಾತ್ಮನ, **ಪದಸಂಸ್ಮರಣೇ**=ಪಾದಾರವಿಂದಗಳ ವಿಶೇಷ ಧ್ಯಾನದಲ್ಲಿ, **ಯತತೋಽಪಿ**=ಪ್ರಯತ್ನವನ್ನು ಮಾತ್ರ ಮಾಡುವವರದ್ದೂ ಕೂಡ, **ಹಿ**=ನಿಶ್ಚಯವಾಗಿ, **ಸಕಲಂ**= ನಿಶ್ಶೇಷವಾಗಿ, **ಅಘಂ**=ಜ್ಞಾನಾದಿಶ್ರೇಯಸ್ಸಿಗೆ ಪ್ರತಿಬಂಧಕವಾದ ಪಾಪಗಳ ಸಮುದಾಯವು, ಪಾಪದಿಂದ ಹುಟ್ಟತಕ್ಕ ವ್ಯಸನ ದುಃಖವಾಗಲೀ, **ಆಶು**=ಶೀಘ್ರವಾಗಿ, **ಲಯಂ**=ನಾಶವನ್ನು, **ವ್ರಜತಿ**=ಹೊಂದುತ್ತದೆ. ('ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣು ಧರ್ಮೇ ನ ನಿಷ್ಫಲಾ' ಎಂಬುವ ಸ್ಮೃತಿಯಿದ್ದುದರಿಂದ) **ಸ್ಮರತಸ್ತು**=ಶ್ರವಣ ಮನನ ಪೂರ್ವಕವಾಗಿ ಶ್ರೀಹರಿಯ ಪಾದಾರವಿಂದವನ್ನು

ಧ್ಯಾನಿಸಿದವನಿಗಾದರೂ, **ಪರಮಂ**=ಧರ್ಮಾದಿಗಳಿಗಿಂತ ಮುಖ್ಯವಾದ, **ಮುಕ್ತಿಪದಂ**=ಮೋಕ್ಷ ಸ್ಥಾನವು, **ಸ್ಫುಟಂ**=ನಿಶ್ಚಯವಾಗಿಯೂ, **ಏಷ್ಯತಿ**=ಲಭಿಸುವುದು, **ತತ್**=ಆದಕಾರಣ, **ಕಿಂ**=ಯಾವ ಕಾರಣದಿಂದ, (ಅತ್ಯುತ್ಕೃಷ್ಟವಾದ ಮೋಕ್ಷರೂಪ ಫಲವನ್ನು ಕೊಡುವ ಪಾದಾರವಿಂದದ ಸ್ಮರಣೆಯು,) ಅ(ಉ) **ಪಾಕ್ರಿಯತೇ**=ಪರಿತ್ಯಾಗ ಮಾಡಲ್ಪಡುತ್ತದೆ. ॥ 3 ॥

**ಮೂಲ ॥ ಶೃಣುತಾಮಲಸತ್ಯವಚಃ ಪರಮಂ**
**ಶಪಥೇರಿತಮುಚ್ಛ್ರಿತಬಾಹುಯುಗಂ ।**
**ನ ಹರೇಃ ಪರಮೋ ನ ಹರೇಃ ಸದೃಶಃ**
**ಪರಮಃ ಸ ತು ಸರ್ವಚಿದಾತ್ಮಗಣಾತ್ ॥ ೪ ॥**

**ಅರ್ಥ ॥** (ಹೇ ಸಂತಃ=ಎಲೋ ಸಜ್ಜನರೇ) **ಹರೇಃ**=ವಿಷ್ಣುವಿನ ಸಕಾಶದಿಂದ, **ಪರಮಃ**= ಮತ್ತೊಬ್ಬ ಉತ್ತಮನು, ನ=ಇಲ್ಲ, **ಹರೇಃ**=ವಿಷ್ಣುವಿಗೆ, **ಸದೃಶಃ**=ಸಮಾನಿಕನು, ನ=ಇರುವುದಿಲ್ಲ, ಸ **ತು**= ಆತನೇ, **ಸರ್ವಚಿದಾತ್ಮಗಣಾತ್**=ಎಲ್ಲಾ ಜೀವರ ಸಮುದಾಯದಿಂದ, **ಪರಮಃ**=ಉತ್ಕೃಷ್ಟನು, ಇತಿ=ಈ ಪ್ರಕಾರ, **ಉಚ್ಛ್ರಿತ**=ಮೇಲಕ್ಕೆ ಎತ್ತಲ್ಪಟ್ಟ, **ಬಾಹುಯುಗಂ**=ಎರಡು ಭುಜಗಳುಳ್ಳದ್ದು ಹೇಗೆ ಆದೀತೋ ಹಾಗೆ, **ಶಪಥೇರಿತಂ**='ಸತ್ಯಂ ಪುನಸ್ಸತ್ಯಂ' ಎಂಬೀ ರೂಪವಾದ ಶಪಥದಿಂದ ಹೇಳಲ್ಪಟ್ಟ, **ಪರಮಂ**= 'ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ' ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ ವೇದದಿಂದಲೂ ಶ್ರೇಷ್ಠವಾದ, **ಅಮಲ**=ನಿರ್ಮಲವಾದ, ಅಂದರೆ 'ಇತಿಹಾಸ ಪುರಾಣಃ ಪಂಚಮೋ ವೇದಾನ್ಾಂ ವೇದಃ' ಎನ್ನುವುದರಿಂದ ಐದನೇ ವೇದವೆಂದು ಪ್ರಸಿದ್ಧವಾದ ಮಹಾಭಾರತದಲ್ಲಿದ್ದುದ ರಿಂದ ದೋಷರಹಿತವಾದ, **ಸತ್ಯ**=ಅಬಾಧಿತವಾದ ಅರ್ಥವನ್ನೇ ಬೋಧಿಸಿಕೊಡುವ, **ವಚಃ**='ನ ದೈವಂ ಕೇಶವಾತ್ಪರಂ' ಇತ್ಯಾದಿ ವಾಕ್ಯವನ್ನು, ಅಥವಾ **ಅಮಲ**=ಭ್ರಾಂತ್ಯಾದಿ ದೋಷರಹಿತರಾದ, **ಸತ್ಯ**=ಸಾಧುಗುಣ ಪೂರ್ಣರಾದುದರಿಂದ ಸತ್ಯನಾಮಕರಾದ ವೇದವ್ಯಾಸದೇವರ, **ವಚಃ**='ನ ದೈವಂ ಕೇಶವಾತ್ಪರಂ' ಎಂಬೀ ಮಾತನ್ನು, **ಶೃಣುತ**=ಕೇಳಿರಿ. ಅಥವಾ **ತು**=ಯಾವ ಕಾರಣದಿಂದ, **ಸಃ**= ಹರಿಯು, **ಸರ್ವಚಿದಾತ್ಮಗಣಾತ್**=ಸಮಸ್ತ ಚೇತನಾಚೇತನಸಮೂಹಗಳಿಂದ, ಪರಮಃ ಅತಃ ಹರೇಃ ಪರಮಃ ನಾಸ್ತಿ (ಹಿಂದಿನಂತೆ ಅರ್ಥವು) ॥ 4 ॥

**ಮೂಲ ॥ ಯದಿ ನಾಮ ಪರೋ ನ ಭವೇತ್ಸ ಹರಿಃ**
**ಕಥಮಸ್ಯ ವಶೇ ಜಗದೇತದಭೂತ್ ।**
**ಯದಿ ನಾಮ ನ ತಸ್ಯ ವಶೇ ಸಕಲಂ**
**ಕಥಮೇವ ತು ನಿತ್ಯಸುಖಂ ನ ಭವೇತ್ ॥ ೫ ॥**

**ಅರ್ಥ ॥ ಸಃ**=ಆ, **ಹರಿಃ**=ಶ್ರೀವಿಷ್ಣುವು, **ಪರಃ**=ಸರ್ವೋತ್ತಮನು, ನ **ಭವೇತ್ ಯದಿ ನಾಮ**=ಆಗದೆ ಹೋಗಿದ್ದರೆ, **ಅಸ್ಯ**=ಈ ಹರಿಯ, **ವಶೇ**=ಅಧೀನವಾಗಿ, **ಕಥಂ**=ಹೇಗೆ, **ಏತತ್**=ಈ, **ಜಗತ್**=ಪ್ರಪಂಚವು, **ಅಭೂತ್**=ಆಗಿದ್ದೀತು? (ಆಗಲಾರದೆಂದೇ ತಾತ್ಪರ್ಯವು) **ತಸ್ಯ**=ಆ ಹರಿಯ, **ವಶೇ**=ಅಧೀನವಾಗಿ, **ಸಕಲಂ**=ಸರ್ವ ಜಗತ್ತು, **ಯದಿ ನಾಮ ನ**=ಇಲ್ಲವೆಂದಾದರೆ, (ಅಂದರೆ ಸ್ವತಂತ್ರವಾಗಿಯೇ ಇದ್ದರೆ) **ಕಥಂ**=ಯಾವ ಕಾರಣದಿಂದ, **ನಿತ್ಯಸುಖಂ ತ್ವೇವ**=ಪೂರ್ಣಾನಂದ

ವುಳ್ಳದ್ದೇ, ನ ಭವೇತ್=ಆಗದೆ ಹೋಗಿದ್ದೀತು. (ಯಾವಾಗಲೂ ಜಗತ್ತಿಗೆ ಪೂರ್ಣಸುಖವೇ ಆಗಬೇಕಾಗುವುದು. ದುಃಖವು ಎಂದೂ ಯಾರಿಗೂ ಬಾರದೆ ಹೋಗಬೇಕಾಗುವುದು.) ॥ 5 ॥

**ಮೂಲ ॥ ನ ಚ ಕರ್ಮ ವಿಮಾ(ನಾ) ಮಲ ಕಾಲ ಗುಣ**
**ಪ್ರಭೃ(ಕೃ)ತೀ ಶಮಚಿತ್ತನು ತದ್ಧಿ ಯತಃ ।**
**ಚಿದಚಿತ್ತನು ಸರ್ವಮಸೌ ತು ಹರಿ-**
**ರ್ಯಮಯೇದಿತಿ ವೈದಿಕಮಸ್ತಿ ವಚಃ ॥ ೬ ॥**

**ಅರ್ಥ ॥** ಕರ್ಮವಿಮಾ ಮಲ ಕಾಲ ಗುಣ ಪ್ರಭೃತಿ, **ಕರ್ಮ**=ಪುಣ್ಯಪಾಪರೂಪಕರ್ಮವು, (ಯಾಗಾದಿ ಕರ್ಮವು), **ವಿಮಾ**=ಅವಿದ್ಯೆಯು, **ಮಲ**=ರಾಗಾದಿ ದೋಷಗಳು, **ಕಾಲ**= ಅಹೋರಾತ್ರಾದಿರೂಪವಾದ ಕಾಲವು, **ಗುಣ**=ಸತ್ವರಜಸ್ತಮೋಗುಣಗಳಿಗೆ ಸಮಾನಾವಸ್ಥೆಯಾದ ಪ್ರಕೃತಿಯೇ, **ಪ್ರಭೃತಿ**=ಮೊದಲಾದ ಸ್ವಭಾವ ಮೊದಲಾದುದು, **ಈಶಂ**=ಸ್ವತಂತ್ರಕಾರಣವು, **ನ ಚ ಭವೇತ್**=ಆಗುವುದೇ ಇಲ್ಲವು, **ಯತಃ**=ಯಾವ ಕಾರಣದಿಂದ, **ತತ್**=ಕರ್ಮ ಮೊದಲಾದುದು, **ಅಚಿತ್ತನು**=ಜಡಸ್ವರೂಪವಾಗಿ, **ಹಿ**=ಪ್ರಸಿದ್ಧವೋ, **ಅಸೌ ಹರಿಃ ತು**=ಈ ಹರಿಯೇ, **ಚಿದಚಿತ್ತನು**= ಚೇತನಾಚೇತನಾತ್ಮಕವಾದ, **ಸರ್ವಂ**=ಎಲ್ಲಾ ಪ್ರಪಂಚವನ್ನು, **ಯಮಯೇತ್**=ನಿಯಮಿಸುವನು, **ಇತಿ**=ಈಪ್ರಕಾರ, **ವೈದಿಕಂ**=ಶ್ರುತ್ಯುಕ್ತವಾದ, **ವಚಃ**="ಯಃ ಪೃಥಿವ್ಯಾಂ ತಿಷ್ಠನ್" ಇತ್ಯಾದಿ ಮಾತು, **ಅಸ್ತಿ**=ಇರುತ್ತದೆ.

**ತಾತ್ಪರ್ಯ ॥** ಕೆಲವರು (ಭಾಟ್ಟ ಪ್ರಾಭಾಕರರು) ಕರ್ಮವೇ ಪ್ರಪಂಚಕ್ಕೆ ಕಾರಣವೆಂದೂ, ಕೆಲವರು ಅವಿದ್ಯೆಯೇ ಕಾರಣವೆಂದೂ, ಇನ್ನು ಕೆಲವರು ದುಷ್ಕರ್ಮಗಳೇ ಬಂಧಕ್ಕೆ ಕಾರಣಗಳೆಂದೂ, ನೈಯಾಯಿಕರು ಕಾಲವೇ ಕಾರಣವೆಂದೂ, ಮತ್ತೆ ಕೆಲವರು (ಸಾಂಖ್ಯರು) ಪ್ರಕೃತಿಯೇ ಕಾರಣವೆಂದೂ ಹೇಳುವರು. ಇವುಗಳೆಲ್ಲವೂ ಜಡಸ್ವರೂಪಗಳಾದುದರಿಂದ ಸ್ವತಂತ್ರಕಾರಣಗಳಾಗಲಾರವು. ಶ್ರೀಹರಿಯೊಬ್ಬನೇ ಸರ್ವ ಪ್ರಪಂಚಕ್ಕೂ ಪ್ರೇರಕನೆಂದೂ ಸ್ವತಂತ್ರಕಾರಣನೆಂದೂ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿ ವೇದಗಳು ಉದ್ಘೋಷಿಸುತ್ತಿವೆ ॥ 6 ॥

ಪರಮಾತ್ಮನಿಗೂ ಜಗತ್ತಿಗೂ ನಿಯಮ್ಯ ನಿಯಾಮಕ ಭಾವವಿದೆ. ಆದರೆ ಅದಕ್ಕೆ ಪ್ರಯೋಜಕವಾದ ಭೇದವು ಪಾರಮಾರ್ಥಿಕ ಸತ್ಯವಾದುದಲ್ಲ, ವ್ಯಾವಹಾರಿಕ ಸತ್ಯವಾದುದೆಂದರೆ-

**ಮೂಲ ॥ ವ್ಯವಹಾರಭಿದಾಽಪಿ ಗುರೋರ್ಜಗತಾಂ**
**ನ ತು(ಹಿ) ಚಿತ್ತಗತಾ ಸ ಹಿ ಚೋದ್ಯ ಪರಂ ।**
**ಬಹವಃ ಪುರುಷಾಃ ಪುರುಷಪ್ರವರೋ**
**ಹರಿರಿತ್ಯವದತ್ಸ್ವಯಮೇವ ಹರಿಃ ॥ ೭ ॥**

**ಅರ್ಥ ॥ ಜಗತಾಂ**=ಲೋಕಗಳಿಗೆ (ಪರಮಾತ್ಮನಿಗೂ), **ವ್ಯವಹಾರಭಿದಾಽಪಿ**=ವ್ಯಾವಹಾರಿಕ ಭೇದವಾದರೂ, **ಜಗತಾಂ ಗುರೋಃ**=ಬ್ರಹ್ಮಾದಿಗಳಿಗೆ ಹಿತೋಪದೇಶಕರಾದ ವೇದವ್ಯಾಸ ದೇವರಿಗೆ, **ಚಿತ್ತಗತಾ**=ಅಭಿಮತವಾದುದು, **ನ ತು(ಹಿ)**=ಅಲ್ಲವೇ ಅಲ್ಲ, **ಸ ಹಿ**=ಆ ವೇದವ್ಯಾಸದೇವರೇ,

**ಚೋದ್ಯಪರಂ**='ಬಹವಃ ಪುರುಷಾ ಬ್ರಹ್ಮನ್' ಎಂಬುವ ಪ್ರಶ್ನಾನಂತರದಲ್ಲಿ, **ಪುರುಷಾಃ**=ಜೀವರಾಶಿಗಳು, **ಬಹವಃ**=ಅನೇಕರು, **ಹರಿಃ**=ನಾರಾಯಣನೇ, **ಪುರುಷಪ್ರವರಃ**=ಪುರುಷರಲ್ಲಿ ಶ್ರೇಷ್ಠನು, **ಇತಿ**=ಈ ಪ್ರಕಾರವಾಗಿ, **ಹರಿಃ**=ನಾರಾಯಣನು, **ಸ್ವಯಮೇವ**=ತಾನಾಗಿಯೇ ವೇದವ್ಯಾಸ ರೂಪದಿಂದ, **ಅವದತ್**=ಉತ್ತರಕೊಟ್ಟನು.

**ತಾತ್ಪರ್ಯ ॥** ಜಗತ್ತಿಗೂ ಪರಮಾತ್ಮನಿಗೂ ತೋರುವ ಭೇದವು ವ್ಯಾವಹಾರಿಕವೆನ್ನುವುದು ವೇದವ್ಯಾಸರಿಗೂ ಸಂಮತವಲ್ಲ, ವೇದವ್ಯಾಸರೇ ಭಾರತದಲ್ಲಿ ''ಬಹವಃ ಪುರುಷಾಃ ಬ್ರಹ್ಮನ್ ಉತಾಹೋ ಏಕ ಏವ ತು । ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ವಕ್ತುಮರ್ಹತಿ''॥ ಎಂದು ಜನಮೇಜಯನು ಪ್ರಶ್ನಿಸಲು ''ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ'' ಎಂದು ಪುರುಷನು ಒಬ್ಬನಲ್ಲವೆಂದು ನಿಷೇಧಿಸಿ, ಅನೇಕರೆಂಬೀ ಪಕ್ಷವನ್ನಂಗೀಕರಿಸಿ, ''ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ। ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಂ''॥ ಎನ್ನುವುದರಿಂದ ಅನೇಕ ಜೀವರನ್ನು ಸಾಧಿಸಿ ಸರ್ವರಿಂದಲೂ ಶ್ರೀಹರಿಯೇ ಸರ್ವೋತ್ತಮನೆಂದು ಸಾಧಿಸಿರುವರು . ॥ 7 ॥

**ಮೂಲ ॥ ಚತುರಾನನ ಪೂರ್ವ ವಿಮುಕ್ತಗಣಾ**
**ಹರಿಮೇತ್ಯ ತು ಪೂರ್ವವದೇವ ಸದಾ ।**
**ನಿಯತೋಚ್ಚವಿನೀಚತಯೈವ ನಿಜಾಂ**
**ಸ್ಥಿತಿಮಾಪುರಿತಿ ಸ್ಮ ಪರಂ ವಚನಂ ॥ ೮ ॥**

**ಅರ್ಥ ॥** ಚತುರಾನನಪೂರ್ವವಿಮುಕ್ತಗಣಾಃ, **ಚತುರಾನನ**=ಚತುರ್ಮುಖನೇ, **ಪೂರ್ವ**=ಮೊದಲಾಗಿವುಳ್ಳ, **ವಿಮುಕ್ತ**=ಮುಕ್ತಿಯನ್ನು ಹೊಂದಿದವರ, **ಗಣಾಃ**=ಸಮುದಾಯಗಳು, **ಹರಿಂ**=ಶ್ರೀ ಪರಮಾತ್ಮನನ್ನು, **ಏತ್ಯ ತು**=ಪ್ರಾಪಿಸಿಯೇ, **ಪೂರ್ವವದೇವ**=ಸಂಸಾರಾವಸ್ಥೆಯಲ್ಲಿದ್ದಂತೆಯೇ, **ಸದಾ**=ಯಾವಾಗಲೂ, **ನಿಯತೋಚ್ಚವಿನೀಚತಯೈವ**=ನಿಯತವಾಗಿ ಆಧಿಕ್ಯನ್ಯೂನತಾವಸ್ಥೆಯಿಂದಲೇ, (ಆನಂದಾದಿತಾರತಮ್ಯಕ್ರಮದಿಂದ) **ನಿಜಾಂ**=ಸ್ವಕೀಯವಾದ, (ಸ್ವಸ್ವರೂಪಾನಂದಾವಿರ್ಭಾವ ರೂಪವಾದ) **ಸ್ಥಿತಿಂ**=ಮುಕ್ತಿಯನ್ನು, **ಆಪುಃ**=ಹೊಂದಿರುವರು. **ಇತಿ**=ಈ ಪ್ರಕಾರ, **ಪರಂ**=ಅಪೌರುಷೇಯವಾದ ಪ್ರಯುಕ್ತ ಉತ್ಕೃಷ್ಟವಾದ, **ವಚನಂ**='ಸೈಷಾನಂದಸ್ಯ ಮೀಮಾಂಸಾ ಭವತಿ' ಇದು ಮೊದಲಾದ ಆಗಮವು, **ಅಸ್ತಿ**=ಇರುತ್ತದೆ. **ಸ್ಮ**=''ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ । ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ'' ಎಂಬೀ ಭಾರತವಾಕ್ಯದಲ್ಲಿ ಪ್ರಸಿದ್ಧವು.

**ತಾತ್ಪರ್ಯ ॥** ಪರಮಮುಕ್ತಿಕಾಲದಲ್ಲಿಯೂ, ತಾರತಮ್ಯಪ್ರಯೋಜಕಭೇದವೇ ಇದ್ದ ಪ್ರಯುಕ್ತ ಭೇದವು ಯಥಾರ್ಥವೇ ಸರಿ. ತತ್ಪ್ರಯುಕ್ತವಾದ ಸರ್ವನಿಯಾಮಕತ್ವವೂ ಯಥಾರ್ಥವೇ ಸರಿ. ॥8॥

**ಮೂಲ ॥ ಆನಂದತೀರ್ಥ ಸನ್ನಾಮ್ನಾ ಪೂರ್ಣಪ್ರಜ್ಞಾಭಿಧಾಯುಜಾಃ ।**
**ಕೃತಂ ಹರ್ಯಷ್ಟಕಂ ಭಕ್ತ್ಯಾ ಪಠತಃ ಪ್ರೀಯತೇ ಹರಿಃ ॥ ೯ ॥**

**ಅರ್ಥ ॥** ಆನಂದತೀರ್ಥ=ಆನಂದಸ್ವರೂಪಿಯಾದ ಮುಕ್ತಿಯನ್ನು ಕೊಡತಕ್ಕ ಶಾಸ್ತ್ರವುಳ್ಳ

ಪೂರ್ಣಪ್ರಜ್ಞಾಚಾರ್ಯರೆಂದು, ಅಥವಾ ಭಗವದ್ವಿಷಯಕವಾದ ಸಚ್ಛಾಸ್ತ್ರಪ್ರವರ್ತಕರಾದುದರಿಂದ ಆನಂದತೀರ್ಥರೆಂದು, **ಸತ್**=ಸಮೀಚಿನವಾದ, **ನಾಮ್ನಾ**=ಹೆಸರುಳ್ಳ, **ಪೂರ್ಣಪ್ರಜ್ಞಾಭಿಧಾಯುಜಾ**=ಪೂರ್ಣಪ್ರಜ್ಞರೆಂಬ ಹೆಸರಿನಿಂದೊಡಗೂಡಿದವರಿಂದ, **ಕೃತಂ**=ಮಾಡಲ್ಪಟ್ಟ, **ಹರ್ಯಷ್ಟಕಂ**=ಶ್ರೀಹರಿಯು ಸರ್ವೋತ್ತಮನೆಂದು ಪ್ರತಿಪಾದಿಸುವುದರಿಂದ ಹರಿವಿಷಯಕವಾದ ಎಂಟು ಶ್ಲೋಕರೂಪವಾದ ಸ್ತೋತ್ರವನ್ನು, **ಭಕ್ತ್ಯಾ**=ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹದಿಂದ, **ಪಠತಃ**=ಅಧ್ಯಯನ ಮಾಡುವವರಿಗೆ, **ಹರಿಃ**=ನಾರಾಯಣನು, **ಪ್ರೀಯತೇ**=ಪ್ರಸನ್ನನಾಗುತ್ತಾನೆ.॥ 9 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ತೃತೀಯೋಽಧ್ಯಾಯಃ ॥ ೩ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ದ್ವಾದಶಸ್ತೋತ್ರದಲ್ಲಿ ಮೂರನೇ ಅಧ್ಯಾಯವು ಸಮಾಪ್ತವಾಯಿತು.॥ ೩ ॥**

## ನಾಲ್ಕನೇ ಅಧ್ಯಾಯವು

**ಮೂಲ ॥ ನಿಜಪೂರ್ಣಸುಖಾಮಿತಬೋಧತನುಃ**
**ಪರಶಕ್ತಿರನಂತಗುಣಃ ಪರಮಃ ।**
**ಅಜರಾಮರಣಃ ಸಕಲಾರ್ತಿಹರಃ**
**ಕಮಲಾಪತಿರೀಢ್ಯತಮೋಽವತು ನಃ ॥ ೧ ॥**

**ಅರ್ಥ ॥** ನಿಜ=ಸ್ವಾಭಾವಿಕಗಳಾದ, **ಪೂರ್ಣ**=ನಿರವಧಿಕಗಳಾದ, **ಸುಖ**=ಆನಂದಗಳು, **ಅಮಿತ**=ಅಪರಿಮಿತವಾದ, **ಬೋಧ**=ಜ್ಞಾನವೂ ಇವುಗಳೇ, **ತನುಃ**=ಶರೀರವಾಗಿವುಳ್ಳವನು, (ಜ್ಞಾನಾನಂದಾತ್ಮಕವಾದ ಶರೀರವುಳ್ಳವನು,) **ಪರಶಕ್ತಿಃ**=ಲೋಕವಿಲಕ್ಷಣವಾದ ಸಾಮರ್ಥ್ಯವುಳ್ಳವನು, **ಅನಂತಗುಣಃ**=ನಿರವಧಿಕಗಳಾದ ಆನಂದಾದಿ ಗುಣಗಳುಳ್ಳವನು, **ಪರಮಃ**=ಸರ್ವೋತ್ತಮನು, **ಅಜರಾಮರಣಃ**=ವಾರ್ಧಕ್ಯಮರಣಗಳಿಲ್ಲದಿರುವವನು, **ಸಕಲಾರ್ತಿಹರಃ**=ಭಕ್ತರ ಎಲ್ಲಾ ಪೀಡೆಗಳನ್ನು ಪರಿಹರಿಸತಕ್ಕವನು, ಅಥವಾ ಸಜ್ಜನರ ದುಃಖಪರಿಹಾರಕನು, **ಈಢ್ಯತಮಃ**=ಸ್ತುತಿಗೆ ಯೋಗ್ಯರಾದವರಲ್ಲಿ ಉತ್ತಮನು, ಇಂತಹ, **ಕಮಲಾಪತಿಃ**=ಲಕ್ಷ್ಮೀಪತಿಯಾದ ಶ್ರೀಪರಮಾತ್ಮನು, **ನಃ**=ಭಕ್ತರಾದ ನಮ್ಮನ್ನು, **ಅವತು**=ರಕ್ಷಿಸಲಿ. ॥ 1 ॥

**ಮೂಲ ॥ ಯದಸುಪ್ತಿಗತೋಽಪಿ ಹರಿಃ ಸುಖವಾನ್ಸುಖ(ಹರೇಃ ಸ್ತವನಂ ಸುಖ-)**
**ರೂಪಿಣಮಾಹುರತೋ ನಿಗಮಾಃ ।**
**ಸ್ವ(ಸು)ಮತಿ ಪ್ರಭವಂ ಜಗದಸ್ಯ ಯತಃ**
**ಪರಬೋಧತನುಂ ಚ ತತಃ ಖಪತಿಂ ॥ ೨ ॥**

**ಅರ್ಥ ॥ ಯತ್**=ಯಾವ ಕಾರಣದಿಂದ, **ಹರಿಃ**=ಶ್ರೀಪರಮಾತ್ಮನು, **ಅಸುಪ್ತಿ ಗತೋಽಪಿ**=ನಿದ್ರೆ

ಯಿಲ್ಲದವನಾದಾಗ್ಯೂ, **ಸುಖವಾನ್**=ಆನಂದವುಳ್ಳವನೋ, **ಅತಃ**=ನಿದ್ರೆಯಿಲ್ಲದಿದ್ದರೂ ಸುಖವಿದ್ದುದರಿಂದ, **ನಿಗಮಾಃ**=ವೇದಾದಿಗಳು, (''ಆಕೇಶಾತ್ ಆನಖಾಗ್ರಾತ್ ಆನಂದಃ, ಆನಂದೋ ಬ್ರಹ್ಮೇತಿ ವ್ಯಜಾನಾತ್, ಸದ್ದೇಹಸ್ಸುಖಗಂಧಶ್ಚ ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ'' ಇವು ಮೊದಲಾದ ಶ್ರುತಿಗಳು) **ಸುಖರೂಪಿಣಂ**=ನಿದ್ರೆಯನ್ನು ಹೊಂದದೆ ಇರುವವನಾದಾಗ್ಯೂ, (ಅಂದರೆ-ಸರ್ವದಾ ಜಾಗ್ರದವಸ್ಥೆಯಲ್ಲಿಯೇ ಇರುವವನಾದಾಗ್ಯೂ) ಆನಂದರೂಪಿಯಾದವನನ್ನಾಗಿ, **ಆಹುಃ**=ಹೇಳುತ್ತವೆ. **ಯತಃ**=ಯಾವ ಕಾರಣದಿಂದ, **ಜಗತ್**=ಪ್ರಪಂಚವು, **ಅಸ್ಯ**=ಈ ವಿಷ್ಣುವಿನ, **ಸ್ವಮತಿಪ್ರಭವಂ**=''ಮನಸೇದಂ ಜಜಾನ'' ಇತ್ಯಾದಿ ಶ್ರುತಿಯಿದ್ದುದರಿಂದ ಸ್ವರೂಪಭೂತ ಜ್ಞಾನವಿಶೇಷಾತ್ಮಕವಾದ ಸಂಕಲ್ಪದಿಂದಲೇ ಹುಟ್ಟಿದ್ದೋ? ಯಾ ತನ್ನ ಇಚ್ಛೆಯಿಂದಲೇ ಹುಟ್ಟಿದ್ದೋ? **ತತಃ**=ಆ ಕಾರಣದಿಂದ, **ಪರಬೋಧತನುಂ**=ವಿಲಕ್ಷಣವಾದ ಜ್ಞಾನಾತ್ಮಕಶರೀರವುಳ್ಳವನನ್ನಾಗಿ, **ಖಪತಿಂ ಚ**=ಸರ್ವೇಂದ್ರಿಯಗಳಿಗೂ ಪ್ರೇರಕನನ್ನಾಗಿಯೂ, **ನಿಗಮಾಃ**='ಪ್ರಾಣಸ್ಯ ಪ್ರಾಣಃ' 'ಚಕ್ಷುಷಶ್ಚಕ್ಷುಃ' 'ಶ್ರೋತ್ರಸ್ಯ ಶ್ರೋತ್ರಂ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ವೇದಗಳು, **ಆಹುಃ**=ಹೇಳುತ್ತವೆ. ॥2॥

**ಮೂಲ ॥ ಬಹುಚಿತ್ರಜಗದ್ಬಹುಧಾಕರಣಾತ್**
**ಪರಶಕ್ತಿರನಂತಗುಣಃ ಪರಮಃ ।**
**ಸುಖರೂಪಮಮುಷ್ಯ ಪದಂ ಪರಮಂ**
**ಸ್ಮರತಸ್ತು ಭವಿಷ್ಯತಿ ತತ್ಸತತಂ ॥ ೩ ॥**

**ಅರ್ಥ ॥** ಬಹುಚಿತ್ರಜಗತ್, **ಬಹು**=ಅನೇಕ ವಿಧಗಳಾದ, **ಚಿತ್ರ**=ಆಶ್ಚರ್ಯಗಳುಳ್ಳ, ಅಥವಾ ಅನೇಕ ಅವಾಂತರಭೇದಭಿನ್ನವಾದ, **ಜಗತ್**=ಲೋಕವನ್ನು, **ಬಹುಧಾಕರಣಾತ್**=ಅನೇಕ ಪ್ರಕಾರವಾಗಿ ಸೃಷ್ಟಿ ಮಾಡಿರುವುದರಿಂದ, **ಹರಿಃ**=ಶ್ರೀಹರಿಯು, **ಪರಶಕ್ತಿಃ**=ಲೋಕವಿಲಕ್ಷಣವಾದ ಸಾಮರ್ಥ್ಯವುಳ್ಳವನು, **ಅನಂತಗುಣಃ**=ಅಪರಿಮಿತ ಗುಣಗಳುಳ್ಳವನು, **ಪರಮಃ**=ಸರ್ವೋತ್ತಮನು, **ಅಮುಷ್ಯ**=ಶ್ರೀಹರಿಯ, **ಪದಂ**=ಸ್ವರೂಪವನ್ನು, **ಸುಖರೂಪಂ**=ಆನಂದಸ್ವರೂಪವನ್ನಾಗಿಯೂ, **ಪರಮಂ**=ಸರ್ವೋತ್ತಮವನ್ನಾಗಿಯೂ, **ಸ್ಮರತಸ್ತು**=ಧ್ಯಾನಿಸುವವರಿಗೆ, **ಸತತಂ**=ಯಾವಾಗಲೂ, **ತತ್**=ಆ ಮುಕ್ತಿಸ್ಥಾನವು, **ಭವಿಷ್ಯತಿ**=ಆಗುವುದು. (ಅಥವಾ ಸ್ಮರತಸ್ತು=ಸ್ಮರಿಸಿದವನಿಗಾದರೂ, **ಅಮುಷ್ಯ**=ಈ ಹರಿಯ, **ಸುಖರೂಪಂ**=ಅಭಿವ್ಯಕ್ತ ಆನಂದಸ್ವರೂಪವಾದ ಮುಕ್ತಿಯು, ಭವಿಷ್ಯತಿ='ತಂ ಯಥಾ ಯಥೋಪಾಸತೇ ತಥೈವ ಭವತಿ' ಎಂಬೀ ಶ್ರುತಿಯಿಂದ ಯಥಾಯೋಗ್ಯವಾಗಿ ಆಗುವುದು.) **ತತ್**=ಪ್ರಸಿದ್ಧವಾದ, **ಅಮುಷ್ಯ**=ಶ್ರೀಹರಿಯ, **ಪದಂ**=ಸಾಲೋಕ್ಯ ಮೊದಲಾದ ಮೋಕ್ಷಸ್ಥಾನವು, **ಭವಿಷ್ಯತಿ**=ಆಗುವುದು, ಅಂದರೆ ಪ್ರಾರಬ್ಧಕರ್ಮವನ್ನು ಅನುಭವಿಸಬೇಕಾದ ವಿಳಂಬ ಮಾತ್ರವಿರುವುದು.॥ 3 ॥

**ಮೂಲ ॥ ಸ್ಮರಣೇ ಹಿ ಪರೇಶಿತುರಸ್ಯ ವಿಭೋ-**
**ರ್ಮಲಿನಾನಿ ಮನಾಂಸಿ ಕುತಃ ಕರಣಂ ।**
**ವಿಮಲಂ ಹಿ ಪದಂ ಪರಮಂ ಸ್ವರತಂ**
**ತರುಣಾರ್ಕಸವರ್ಣಮಜಸ್ಯ ಹರೇಃ ॥ ೪ ॥**

**ಅರ್ಥ ॥ಅಸ್ಯ**=ಈ, **ಪರೇಶಿತುಃ**=ಬ್ರಹ್ಮಾದಿಗಳಿಗೂ ನಿಯಾಮಕನಾದ, **ವಿಭೋಃ**=ಸರ್ವವ್ಯಾಪ್ತನಾದ ಶ್ರೀಹರಿಯನ್ನು, **ಸ್ಮರಣೇ**=ಸ್ಮರಿಸುತ್ತಿರಲು, **ಮನಾಂಸಿ**=ಅಂತಃಕರಣಗಳು, **ಕುತಃ**=ಯಾವ ಕಾರಣದಿಂದ, **ಮಲಿನಾನಿ**=ರಾಗಾದಿ ದೋಷಯುಕ್ತಗಳು, **ಸ್ಯುಃ**=ಆಗುತ್ತವೆ. (ಯಾವ ಕಾರಣದಿಂದಲೂ ಆಗಲಾರವು ನಿರ್ಮಲಗಳೇ ಆಗುತ್ತವೆ.) **ಕರಣಂ**=ಇಂದ್ರಿಯವು, **ಕುತಃ**=ಯಾವ ಕಾರಣದಿಂದ, **ಮಲಿನಂ**=ದೋಷಯುಕ್ತವು, **ಸ್ಯಾತ್**=ಆಗುವುದು, (ಯಾವ ಕಾರಣದಿಂದಲೂ ಆಗಲಾರದು. ಆದ ಪ್ರಯುಕ್ತ ಮಾಲಿನ್ಯಕ್ಕೆ ಕಾರಣವೇ ಇಲ್ಲದಿರುವುದರಿಂದ ಮನಸ್ಸುಗಳು ನಿರ್ಮಲಗಳೆಂದೇ ಯುಕ್ತವು) ಅಥವಾ **ಕರಣಂ**=ನಿಷಿದ್ಧ ಕರ್ಮಾಚರಣವು, **ಕುತಃ ಸ್ಯಾತ್**=ಯಾವ ಕಾರಣದಿಂದ ಆಗುವುದು, (ಅಂದರೆ ರಾಗಾದಿ ದೋಷರೂಪ ಕಾರಣಗಳೇ ಇಲ್ಲದಿರಲು ದುಷ್ಕರ್ಮಾಚರಣರೂಪವಾದ ಕಾರ್ಯವು ಹುಟ್ಟಲಾರದು.) **ಅಜಸ್ಯ**=ಜನ್ಮಾದಿ ವಿಕಾರರಹಿತನಾದ, **ಹರೇಃ**=ಶ್ರೀವಿಷ್ಣುವಿನ, **ಪರಮಂ**=ಸರ್ವೋತ್ತಮವಾದ, **ಸ್ವರತಂ**=ಸ್ವರಮಣವಾದ, **ತರುಣಾರ್ಕಸವರ್ಣಂ**=ಉದಯಿಸಿಕೊಂಡು ಬರುವ ಸೂರ್ಯನಿಗೆ ಸಮಾನವಾದ, **ಪದಂ**=ಸ್ವರೂಪವು, **ವಿಮಲಂ ಹಿ**=ನಿರ್ದುಷ್ಟವೇ. ॥ 4 ॥

**ಮೂಲ ॥ ವಿಮಲೈಃ ಶ್ರುತಿಶಾಣನಿಶಾತತಮೈಃ**
**ಸುಮನೋಽಸಿಭಿರಾಶು ನಿಹತ್ಯ ದೃಢಂ ।**
**ಬಲಿನಂ ನಿಜವೈರಿಣಮಾತ್ಮತಮೋ–**
**ಭಿದಮೀಶಮನಂತಮುಪಾಸ್ವ ಹರಿಃ ॥ ೫ ॥**

**ಅರ್ಥ ॥** ಶ್ರುತಿಶಾಣನಿಶಾತತಮೈಃ, **ಶ್ರುತಿ**=ಋಗಾದಿವೇದಗಳೆಂಬ, **ಶಾಣ**=ಒರೆಗಲ್ಲಿನಲ್ಲಿ, **ನಿಶಾತತಮೈಃ**=ಭಗವತ್ಸ್ವರೂಪ ಗುಣಾದಿವಿಷಯದಲ್ಲಿ ಅತ್ಯಂತ ತೀಕ್ಷ್ಣೀಕೃತಗಳಾದ, **ವಿಮಲೈಃ**=ಶುದ್ಧಗಳಾದ, ಅಂದರೆ ಪರಾಪರತತ್ವವಿಷಯದಲ್ಲಿ ಸಂಶಯ ವಿಪರ್ಯಯಗಳಿಲ್ಲದಿರುವ, **ಸುಮನೋಽಸಿಭಿಃ**=ಶೋಭನಗಳಾದ ಅಂತಃಕರಣಗಳೆಂಬ ಖಡ್ಗಗಳಿಂದ, (ಅಂದರೆ ಶ್ರೀಹರಿಯ ಅನಂತಗುಣಕರ್ಮಾದಿವಿಷಯಕಗಳಾದ ಮನೋವೃತ್ತಿರೂಪಗಳಾದ ಪರೋಕ್ಷಜ್ಞಾನ ಸಮೂಹಗಳಿಂದ,) **ದೃಢಂ**=ಅಸ್ತ್ರಗಳಿಂದ ಭೇದಿಸಲಶಕ್ಯವಾದ, (ಅನಾದಿಯಿಂದಲೂ ಅತಿಸ್ಥಿರವಾದ) **ಬಲಿನಂ**=ಸಾಮರ್ಥ್ಯವುಳ್ಳ, **ನಿಜವೈರಿಣಂ**=ಜೀವ ಸ್ವರೂಪಾಭಿವ್ಯಕ್ತಿಗೆ ಪ್ರತಿಬಂಧಕವಾದ ರಾಗಾದಿ ಶತ್ರುಸಮೂಹವನ್ನು, **ದೃಢಂ**=ಮೂಲಭೇದವಾಗುವ ಹಾಗೆ, **ನಿಹತ್ಯ**=ಸಂಹರಿಸಿ, **ಆತ್ಮತಮೋಭಿದಂ**=ಜೀವರಿಗೆ ಆವರಕವಾದ ಭಾವರೂಪಾಜ್ಞಾನವನ್ನು ಪರಿಹರಿಸುವ, **ಈಶಂ**=ಸ್ವಾಮಿಯಾದ, **ಅನಂತಂ**=ಅಪರಿಚ್ಛಿನವಾದ, (ಆದ್ಯಂತ ಶೂನ್ಯನಾದ,) **ಹರಿಂ**=ಶ್ರೀಪರಮಾತ್ಮನನ್ನು, **ಉಪಾಸ್ವ**= ಆರಾಧಿಸು. ॥ 5 ॥

**ಮೂಲ ॥ ಸ ಹಿ ವಿಶ್ವಸೃಜೋ ವಿಭು ಶಂಭು**
**ಪುರಂದರ ಸೂರ್ಯ ಮುಖಾನಪರಾನಪ (ಮ)ರಾನ್**
**(ನಮರಾನಪರಾನ್) । ಸೃಜತೀಢ್ಯತಮೋಽವತಿ ಹಂತಿ ನಿಜಂ**
**ಪದಮಾಪಯತಿ ಪ್ರಣತಾನ್ಸು(ನ್ಸ್ವ) ಧಿಯಾ ॥ ೬ ॥**

**ಅರ್ಥ ॥ ಈಡ್ಯತಮಃ**=ಸ್ತುತಿಗೆ ಯೋಗ್ಯರಾದವರಲ್ಲಿ ಉತ್ತಮನಾದ, **ಸ ಹಿ**=ಆ ಹರಿಯೇ, **ವಿಶ್ವಸೃಜಃ**=ಶ್ರೀಹರಿಯ ಅಧೀನದಲ್ಲಿದ್ದು ಸರ್ವಪ್ರಪಂಚವನ್ನು ಸೃಷ್ಟಿಸುವ, ವಿಭುಶಂಭುಪುರಂದರ ಸೂರ್ಯಮುಖಾನ್, **ವಿಭು**=ಬ್ರಹ್ಮನು, **ಶಂಭು**=ರುದ್ರನು, **ಪುರಂದರ**=ದೇವೇಂದ್ರನು, **ಸೂರ್ಯ**=ಸೂರ್ಯನೂ ಇವರೇ **ಮುಖಾನ್**=ಮೊದಲಾಗಿವುಳ್ಳ, **ಅಮರಾನ್**=ದೇವತೆಗಳನ್ನು, **ಅಪರಾನ್**=ಋಷಿಗಂಧರ್ವಾದಿಗಳನ್ನೂ, ಮನುಷ್ಯಾದಿಗಳನ್ನೂ ಕೂಡ, ಸೃಜತಿ (ಪ್ರತಿಕಲ್ಪದಲ್ಲಿಯೂ) ಸೃಷ್ಟಿಸುತ್ತಾನೆ. **ಅವತಿ**=ರಕ್ಷಿಸುತ್ತಾನೆ. **ಹಂತಿ**=ಸಂಹರಿಸುತ್ತಾನೆ. **ಸುಧಿಯಾ**=ಭಕ್ತಿವಿಶಿಷ್ಟವಾದ ಬುದ್ಧಿಯಿಂದ, **ಪ್ರಣತಾನ್**=ಶರಣಾಗತರಾದವರನ್ನು, **ನಿಜಂ ಪದಂ**=ಸ್ವಕೀಯವಾದ ಮುಕ್ತಿಸ್ಥಾನವನ್ನು, **ಆಪಯತಿ**=ಪ್ರಾಪಿಸಿಕೊಡುತ್ತಾನೆ. **ಹಿ**=''ಏಕಃ ಪುರಸ್ತಾದ್ಯ ಇದಂ ಬಭೂವ ಯತೋ ಬಭೂವ ಭುವನಸ್ಯ ಗೋಪಾಃ । ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇತ್ಯಾದಿ ಶ್ರುತಿಪ್ರಸಿದ್ಧವು. (ಆದಕಾರಣ ಅತ್ಯುದಾರನೂ ಸರ್ವಜಗತ್ತಿನ ಉತ್ಪತ್ತ್ಯಾದಿಗಳಿಗೆ ಕಾರಣೀಭೂತನೂ ಆದ ಶ್ರೀಹರಿಯನ್ನು ಉಪಾಸನೆ ಮಾಡು.) ॥ 6 ॥

**ಮೂಲ ॥ ಪರಮೋಽಪಿ ರಮೇಶಿತುರಸ್ಯ ಸಮೋ**
**ನ ಹಿ ಕಶ್ಚಿದಭೂನ್ನ ಭವಿಷ್ಯತಿ ಚ ।**
**ಕ್ವಚಿದದ್ಯ ತನೋಽಪಿ ನ ಪೂರ್ಣಸದಾ**
**ಗಣಿತೇಡ್ಯಗುಣಾನುಭವೈಕ ತನೋಃ ॥ ೭ ॥**

**ಅರ್ಥ ॥** ಪೂರ್ಣಸದಾಗಣಿತೇಡ್ಯಗುಣಾನುಭವೈಕತನೋಃ, **ಪೂರ್ಣ**=ನಿರವಧಿಕಗಳಾದ, **ಸತ್**=ಉತ್ಕೃಷ್ಟಗಳಾದ, **ಆ ಅಗಣಿತ**=ಚೆನ್ನಾಗಿ ಅಪರಿಮಿತಗಳಾದ, **ಈಡ್ಯ**=ಸ್ತುತ್ಯಗಳಾದ, **ಗುಣ**= ಆನಂದಾದಿಗುಣಗಳೂ, **ಅನುಭವ**=ಜ್ಞಾನವೂ ಇವುಗಳೇ, **ಏಕ**=ಮುಖ್ಯವಾಗಿ, **ತನೋಃ**=ಶರೀರ ವಾಗಿವುಳ್ಳ, **ರಮೇಶಿತುಃ**=ಲಕ್ಷ್ಮೀಪತಿಯಾದ, **ಅಸ್ಯ**=ಈ ಹರಿಯ ಸಕಾಶದಿಂದ, **ಕಶ್ಚಿತ್**=ಯಾರೊಬ್ಬ ಬೇರೆ ಪುರುಷನೂ, **ಪರಮಃ**=ಉತ್ತಮನೂ, **ಸಮೋಽಪಿ**=ಸಮಾನಿಕನೂ ಕೂಡ, **ಕ್ವಚಿತ್**=ಯಾವ ಕಾಲದಲ್ಲಿಯೂ, ಯಾವ ದೇಶವಿಶೇಷದಲ್ಲಿಯೂ, **ನಾಭೂತ್**=ಇದಕ್ಕಿಂತ ಮೊದಲು ಇರಲಿಲ್ಲ, **ನ ಭವಿಷ್ಯತಿ ಚ**=ಇನ್ನು ಮುಂದೆಯೂ ಇರಲಾರನು, **ಅದ್ಯತನೋಽಪಿ**=ವರ್ತಮಾನಕಾಲದಲ್ಲಿದ್ದವನೂ ಕೂಡ, **ನ**=ಆಗುವುದಿಲ್ಲ, **ಹಿ**=''ಪರೋ ಮಾತ್ರಯಾ ತನ್ವಾವೃಧಾನ ನ ತೇ ಮಹಿತ್ವಮನ್ವಶ್ನವಂತಿ । ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ''॥ ಇತ್ಯಾದಿ ಶ್ರುತಿಗಳೂ 'ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ' ಎಂಬೀ ಭಾರತವೂ ಇತ್ಯಾದಿಗಳಲ್ಲಿ ಪ್ರಸಿದ್ಧವು. (ಆದಕಾರಣ ನಿರಂತರದಲ್ಲಿಯೂ ಭಗವಂತನನ್ನೇ ಧ್ಯಾನಿಸುತ್ತಾ ಇರಬೇಕು.) ॥ 7 ॥

**ಮೂಲ ॥ ಇತಿ ದೇವವರಸ್ಯ ಹರೇಃ ಸ್ತವನಂ**
**ಕೃತವಾನ್ಮುನಿರುತ್ತಮಮಾದರತಃ ।**
**ಸುಖತೀರ್ಥಪದಾಭಿಹತಃ ಪಠತ-**
**ಸ್ತದಿದಂ ಭವತಿ ಧ್ರುವಮುಚ್ಚಸುಖಂ ॥ ೮ ॥**

**ಅರ್ಥ ॥ ಸುಖತೀರ್ಥಪದಾಭಿಹಿತಃ**=ಆನಂದತೀರ್ಥರೆಂಬುವ ಹೆಸರಿನಿಂದ ಪ್ರಸಿದ್ಧರಾದ,

ಮುನಿಃ=ಮನನಶೀಲರಾದ ಮಧ್ವಮುನಿಗಳು, ದೇವವರಸ್ಯ=ದೇವಶ್ರೇಷ್ಠರಾದ, ಹರೇಃ= ಶ್ರೀಪರಮಾತ್ಮನ, ಇತಿ=ಈಪ್ರಕಾರದಿಂದ, ಉತ್ತಮಂ=ವೇದಾರ್ಥಗರ್ಭಿತವಾದ ಪ್ರಯುಕ್ತ ಶ್ರೇಷ್ಠವಾದ, ಸ್ತವನಂ=ಸ್ತೋತ್ರವನ್ನು, ಆದರತಃ=ಭಕ್ತಿಯಿಂದ, ಕೃತವಾನ್=ಮಾಡಿದರು. ತತ್ ಇದಂ=ಆ ಈ ಸ್ತೋತ್ರವನ್ನು, ಆದರತಃ=ಭಕ್ತ್ಯತಿಶಯದಿಂದ, ಪಠತಃ=ಅಧ್ಯಯನ ಮಾಡುವವರಿಗೆ, ಧ್ರುವಂ=ನಿಶ್ಚಯ ವಾಗಿ, ಅಥವಾ ನಿತ್ಯವಾದ, ಉಚ್ಚಸುಖಂ=ನಿರ್ದುಃಖಾನಂದವು, ಭವತಿ=ಆಗುತ್ತದೆ. ।। 9 ।।

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ**
**ದ್ವಾದಶಸ್ತೋತ್ರೇ ಚತುರ್ಥೋಽಧ್ಯಾಯಃ ।। ೪ ।।**

**ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು. ।। ೪ ।।**

## ಐದನೇ ಅಧ್ಯಾಯವು

ಮುಕ್ತಿಪ್ರದನು ವಾಸುದೇವನಾದುದರಿಂದ ಆತನನ್ನಾರಂಭಿಸಿ ಕೇಶವಾದಿ 12 ಭಗವನ್ಮೂರ್ತಿ ಗಳನ್ನು ಸ್ತುತಿಸುತ್ತಾರೆ.

**ಮೂಲ ।। ವಾಸುದೇವಾಪರಿಮೇಯ ಸುಧಾಮನ್**
**ಶುದ್ಧ ಸದೋದಿತ ಸುಂದರೀಕಾಂತ ।**
**ಧರಾಧರ ಧಾರಣ ವೇಧುರಧರ್ತ**
**ಸೌಧೃತಿ ದೀಧಿತಿ ವೇಧೃವಿಧಾತಃ ।।**
**ಅಧಿಕ ಬಂಧಂ ರಂಧಯ ಬೋಧಾ(ಧ)**
**ಚ್ಛಿಂಧಿ ಪಿ (ವಿ) ಧಾನಂ ಬಂಧುರಮದ್ಧಾ ।। ೧ ।।**

**ಅರ್ಥ ।।** ಅಪರಿಮೇಯಸುಧಾಮನ್, ಅಪರಿಮೇಯ=ಸಂಪೂರ್ಣ ತಿಳಿಯಲಿಕ್ಕೂ ಯಾರಿಂದಲೂ ದೃಷ್ಟಾಂತೀಕರಿಸಲಿಕ್ಕೂ ಅಶಕ್ಯವಾದ, ಸುಧಾಮನ್=ಹೆಚ್ಚು ತೇಜಸ್ಸುಳ್ಳವನೇ, ಅಥವಾ ವೈಕುಂಠ ಮೊದಲಾದ ಮಂದಿರವುಳ್ಳವನೇ, ಅಥವಾ, ಅಪರಿಮೇಯ=ಅನುಮಾನಕ್ಕೆ ಅವಿಷಯನಾದವನೇ, ಸುಧಾಮನ್=ಶೋಭನವಾದ ರೂಪವುಳ್ಳವನೇ, ಸುಂದರವಾದ ವೈಕುಂಠ ವಾಸಿಯೇ, ಹೆಚ್ಚು ಪ್ರಭಾವವುಳ್ಳವನೇ, ಶುದ್ಧ=ನಿರ್ದೋಷನೇ, ನಿತ್ಯಪವಿತ್ರನೇ, ಸದೋದಿತ= ಸಜ್ಜನರಿಂದ ಚೆನ್ನಾಗಿ ಉತ್ತಮನೆಂದು ತಿಳಿಯಲ್ಪಟ್ಟವನೇ, ಉತ್ತಮನಾಗಿಯೇ ಸ್ಮರಿಸಲ್ಪಟ್ಟವನೇ, ಸದಾ=ತ್ರಿಕಾಲದಲ್ಲಿಯೂ, ಉದಿತ=ಅಸ್ತಮಯವಿಲ್ಲದಿರುವವನೇ, ಸದಾ=ಯಾವಾಗಲೂ, ಉದಿತ=ಜಾಗರೂಕನೇ, ಸುಂದರೀಕಾಂತ=ಲಕ್ಷ್ಮೀಪ್ರಿಯನೇ, ಧರಾಧರ=ವರಾಹರೂಪದಿಂದ ಭೂಮಿಯನ್ನು ಧರಿಸಿದವನೇ, ಧರಾಧರಧಾರಣ=ಗೋವರ್ಧನ ಮಂದರಪರ್ವತಗಳನ್ನು ಧರಿಸಿದವನೇ, ಅಥವಾ ಧಾರಣ ವೇಧುರದರ್ತಃ ಧಾರಣ=ಭೂಮಿಯನ್ನು ಧರಿಸಿದ ಮೇರ್ವಾದಿ ಪರ್ವತಗಳನ್ನು, ವೇಧುರ=ಸಂಹರಿಸುವ ಸ್ವಭಾವವುಳ್ಳ ಶೇಷನಿಗೆ, ಧರ್ತಃ=ಧಾರಕನಾದ, (ಅಂದರೆ

ಪ್ರಳಯಕಾಲದಲ್ಲಿ ತನ್ನ ಮುಖದಿಂದ ಹೊರಟ ಅಗ್ನಿಯ ಜ್ವಾಲೆಯಿಂದ ಮೇರು ಮೊದಲಾದ ಪರ್ವತಗಳನ್ನು, ವೇಧುರ=ಸಂಹರಿಸುವ ಸ್ವಭಾವವುಳ್ಳ ಶೇಷನನ್ನು ಕೂರ್ಮರೂಪದಿಂದ ಧರಿಸಿದವನೇ) ವೇಧುರ=ಅಸುರನಾಶಕನೇ, ಧರ್ತಃ=ಸರ್ವ ಜಗದ್ಧಾರಕನೇ, ಸೌಧೃತಿದೀಧಿತಿ ವೇಧೃವಿಧಾತಃ ಸೌಧೃತಿ=ಚೆನ್ನಾಗಿ ಧರಿಸಲ್ಪಟ್ಟ ದೀಧಿತಿ=ಕಾಂತಿಯುಳ್ಳ ರುದ್ರಾದಿಗಳಿಗೆ, ವೇಧೃ=ಸೃಷ್ಟಿಕರ್ತನಾದ ಚತುರ್ಮುಖನಿಗೂ, ವಿಧಾತಃ=ಸೃಷ್ಟಿಕರ್ತನೇ, ವಾಸುದೇವ= ಸರ್ವಭೂತಗಳಿಗೂ ಆವಾಸಭೂತನೂ, ಕ್ರೀಡಾದಿಗುಣವಿಶಿಷ್ಟನೂ ಆದ ವಾಸುದೇವಮೂರ್ತಿಯೇ, ಅದ್ಧಾ=ನಿಶ್ಶೇಷವಾಗಿ, ಬಂಧಂ=ಸಂಸಾರಾಖ್ಯಬಂಧನವನ್ನು, ರಂಧಯ=ಭಸ್ಮೀಕರಿಸು. ಅಧಿಕ= ಸರ್ವೋತ್ತಮನೇ, ಬೋಧ=ಜ್ಞಾನಸ್ವರೂಪನೇ, ಬಂಧನಂ=ಬಂಧನಶೀಲವಾದ, ವಿಧಾನಂ= ಕಾಮಕರ್ಮಾನುಷ್ಠಾನವನ್ನು, ಛಿಂಧಿ=ನಾಶಪಡಿಸು, 'ಬೋಧಾತ್ ಛಿಂಧಿ ಪಿಧಾನಂ' ಎಂಬುವ ಪಾಠದಲ್ಲಿ, ಬಂಧಂ=ಕರ್ಮಬಂಧವನ್ನು, ರಂಧಯ= ಬಿಡಿಸು. ಬೋಧಾತ್=ಜ್ಞಾನವನ್ನು ಕೊಟ್ಟು, ಬಂಧುರಂ=ಅನೇಕ ಜನ್ಮಗಳನ್ನು ಪ್ರಾಪಿಸಿಕೊಡುವುದರಿಂದ ಬಂಧನಸ್ವಭಾವವುಳ್ಳ, ಪಿಧಾನಂ= ಸ್ವರೂಪಾಚ್ಛಾದಕವಾದ ಅಜ್ಞಾನವನ್ನು, ಛಿಂಧಿ=ವಿನಾಶಪಡಿಸು. ॥1॥

**ಮೂಲ ॥ ಕೇಶವ ಕೇಶವ ಶಾಸಕ ವಂದೇ**
**ಪಾಶಧರಾರ್ಚಿತ ಶೂರವರೇಶ ॥ ೨ ॥**

**ಅರ್ಥ ॥** ಶಾಸಕ=ದುಷ್ಟರನ್ನು ಶಿಕ್ಷಿಸತಕ್ಕವನೇ, ಸಜ್ಜನರಿಗೆ ಸುಖವನ್ನು ಪ್ರಾಪಿಸಿ ಕೊಡತಕ್ಕವನೇ, ಪಾಶಧರ=(ನಂದಗೋಪನನ್ನು ಕರಕೊಂಡು ಬರಲಿಕ್ಕೆ ವರುಣಲೋಕಕ್ಕೆ ಶ್ರೀಕೃಷ್ಣನು ಹೋಗೋಣ) ವರುಣನಿಂದ, ಅರ್ಚಿತ=ಪೂಜಿಸಲ್ಪಟ್ಟವನೇ, ಅಥವಾ ಪಶುಗಳನ್ನು ಬಂಧಿಸತಕ್ಕ ಹಗ್ಗವನ್ನು ಧರಿಸಿದ ಗೊಲ್ಲರಿಂದ ಪೂಜಿಸಲ್ಪಟ್ಟವನೇ, ಶೂರವರೇಶ=ಹೆಚ್ಚು ಪರಾಕ್ರಮಶಾಲಿಗಳಾದ ಬ್ರಹ್ಮಾದಿಗಳಿಗೆ ನಿಯಾಮಕನೇ, ಜ್ಞಾನ ಭಕ್ತ್ಯಾದಿಗಳಿಗೆ ನಿಯಾಮಕನೇ, ಕೇಶವ=ಬ್ರಹ್ಮರುದ್ರರನ್ನು ಅಹೇಯರನ್ನಾಗಿ (ಸರ್ವವಂದ್ಯರನ್ನಾಗಿ) ಸ್ಥಾಪಿಸಿದವನೇ, ಪ್ರಲಯಜಲದಲ್ಲಿ ಸುಖವಾಗಿ ತನ್ನಲ್ಲಿ ಪ್ರವರ್ತಿಸಿದವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 2 ॥

**ಮೂಲ ॥ ನಾರಾಯಣಾಮಲ (ರ) ಕಾರಣ ವಂದೇ**
**ಕಾರಣ ಕಾರಣ ಪೂರ್ಣ ವರೇಣ್ಯ ।**
**ಮಾಧವ ಮಾಧವ ಸಾ(ಶೋ)ಧಕ ವಂದೇ**
**ಬಾಧಕ ಬೋಧಕ ಶುದ್ಧಸಮಾಧೇ ॥ ೩ ॥**

**ಅರ್ಥ ॥** ಅಮಲಕಾರಣ=ವಿಕಾರಾದಿ ದೋಷರಹಿತನೂ ಜಗತ್ತಿಗೆ ನಿಮಿತ್ತಕಾರಣನೂ ಆದವನೇ, ಅಥವಾ ರಾಗಾದಿದೋಷರಹಿತರಾದ ಸನಕಾದಿಯೋಗಿಗಳಿಗೂ ರಕ್ಷಕನಾದವನೇ, ಅಥವಾ ದುಃಖಸಂಪರ್ಕವಿಲ್ಲದ ಸುಖಸ್ವರೂಪರಾದ ಮುಕ್ತರಿಗೂ ಆಶ್ರಯನಾದವನೇ, (ದೇವತೆಗಳಿಗೂ ಕಾರಣನಾದವನೇ) ಕಾರಣ ಕಾರಣ=ಜಗತ್ಕಾರಣಗಳೆಂದು ಪ್ರಸಿದ್ಧಗಳಾದ ಪ್ರಕೃತ್ಯಾದಿಗಳಿಗೂ ಕಾರಣನೇ, ಪೂರ್ಣ=ಗುಣಪೂರ್ಣನೇ, ಆಪ್ತಕಾಮನೇ, ವರೇಣ್ಯ=ಸರ್ವರಿ ಗಿಂತಲೂ ಮುಖ್ಯನಾದವನೇ, ಸರ್ವೋತ್ತಮನೇ, ನಾರಾಯಣ=ಅನಂತಗುಣಪರಿಪೂರ್ಣನೇ,

ತ್ವಾಂ=ನಿನ್ನನ್ನು, ವಂದೇ= ನಮಸ್ಕರಿಸುತ್ತೇನೆ. ಸಾಧಕ=ಭಕ್ತರಿಗೆ ಅಪೇಕ್ಷಿತವಾದುದನ್ನು ಪೂರ್ಣೀಕರಿಸ ತಕ್ಕವನೇ, ಬಾಧಕ=ದುಷ್ಟರನ್ನು ತಿರಸ್ಕರಿಸತಕ್ಕವನೇ, ಅಭಕ್ತರ ಇಷ್ಟವನ್ನು ತಿರಸ್ಕರಿಸುವವನೇ, ಬೋಧಕ=ವ್ಯಾಸ ದತ್ತ ಕಪಿಲ ಮೊದಲಾದ ರೂಪಗಳಿಂದ ಜ್ಞಾನವನ್ನು ಪ್ರವರ್ತಿಸಿದವನೇ, ಶುದ್ಧ=ಕಾಮಾದಿಗಳಿಂದ ಪೀಡಿತವಾಗದಿರುವ, ಸಮಾಧೇ=ಲೋಕಶಿಕ್ಷಾರ್ಥವಾಗಿ ವ್ಯಾಸಾದಿ ರೂಪ ಗಳಿಂದ ಮಾಡಲ್ಪಡತಕ್ಕ ಮನಃಪ್ರಣಿಧಾನ ರೂಪವಾದ ತಪಸ್ಸುಳ್ಳವನೇ, ಮಾಧವ=ಮಧುಕುಲದಲ್ಲಿ ಅವತರಿಸಿದವನೇ, ಮಾಧವ= ಲಕ್ಷ್ಮೀಪತಿಯೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 3 ॥

**ಮೂಲ ॥ ಗೋವಿಂದ ಗೋವಿಂದ ಪುರಂದರ ವಂದೇ**
**ಸ್ಕಂದ ಸು(ಸ) ನಂದನ ವಂದಿತಪಾದ ।**
**ವಿಷ್ಣೋ ಸೃಜಿಷ್ಣೋ ಗ್ರಸಿಷ್ಣೋ ವಿವಂದೇ**
**ಕೃಷ್ಣ ಸದುಷ್ಣ ವಧಿಷ್ಣೋ ಸುಧೃಷ್ಣೋ ॥ ೪ ॥**

**ಅರ್ಥ ॥** ಪುರಂದರ=ಜೀವಸ್ವರೂಪಕ್ಕೆ ಆಚ್ಛಾದಕವಾದ ಲಿಂಗಶರೀರವನ್ನು ವಿರಜಾನದಿಯಲ್ಲಿ ಸ್ನಾನಮಾಡುವುದರಿಂದ ನಾಶಮಾಡುವವನೇ, ಅಥವಾ ಜರಾಸಂಧಾದಿ ಶತ್ರುಗಳ ಪಟ್ಟಣವನ್ನು ನಾಶಮಾಡಿದವನೇ, ಸ್ಕಂದ=ರುದ್ರನ ಪುತ್ರನಾದ ಗುಹನು, ಸುನಂದನ=ಸುನಂದನನೂ ಇವರಿಬ್ಬ ರಿಂದ, (ಸನಂದನ=ಸನಂದನನಾಮಕ ಮುನಿಯೂ ಇವರಿಬ್ಬರಿಂದ,) ವಂದಿತ=ನಮಸ್ಕರಿಸಲ್ಪಟ್ಟ ಪಾದ=ಚರಣಾರವಿಂದಗಳುಳ್ಳವನೇ, ಅಥವಾ ರುದ್ರನಿಂದ ನಮಸ್ಕರಿಸಲ್ಪಟ್ಟ ಪಾದಕಮಲ ಗಳುಳ್ಳವನೇ, ಗೋವಿಂದ ಗೋವಿಂದ=ವೇದಪ್ರತಿಪಾದ್ಯನಾದ ಗೋವಿಂದನಾಮಕ ಶ್ರೀಹರಿಯೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ಸೃಜಿಷ್ಣೋ =ಜಗತ್ತನ್ನು ಸೃಷ್ಟಿಸುವ ಸ್ವಭಾವವುಳ್ಳವನೇ, ಗ್ರಸಿಷ್ಣೋ=ಜಗತ್ತನ್ನು ಸಂಹರಿಸುವ ಸ್ವಭಾವವುಳ್ಳವನೇ, ಸತ್=ಸಜ್ಜನರಿಗೆ, ಉಷ್ಣ=ಸಂತಾಪಕಾರಿಗಳಾದ ದೈತ್ಯರನ್ನು, ವಧಿಷ್ಣೋ=ಸಂಹರಿಸುವ ಸ್ವಭಾವವುಳ್ಳವನೇ, ಸುಧೃಷ್ಣೋ=ಚೆನ್ನಾಗಿ ರಕ್ಷಿಸತಕ್ಕ ಸ್ವಭಾವವುಳ್ಳವನೇ, ಧರ್ಮಮಾರ್ಗಪ್ರತಿಷ್ಠಾಪಕನೇ, ಕೃಷ್ಣ=ಶ್ಯಾಮವರ್ಣನೇ, ನಿತ್ಯಸುಖಾತ್ಮಕನೇ, ವಸುದೇವಪುತ್ರನೇ, ವಿಷ್ಣೋ=ಸರ್ವತ್ರ ವ್ಯಾಪ್ತನಾದವನೇ, ವಿವಂದೇ=ನಿನ್ನನ್ನು ವಿಶೇಷತ ನಮಸ್ಕರಿಸುತ್ತೇನೆ. ॥ 4 ॥

**ಮೂಲ ॥ ಮಧುಸೂದನ ದಾನವಸಾದನ ವಂದೇ**
**ದೈವತ ಮೋದಿತ (ಮೋದನ) ವೇದಿತಪಾದ ।**
**ತ್ರಿವಿಕ್ರಮ ನಿಷ್ಕ್ರಮ ವಿಕ್ರಮ ವಂದೇ**
**ಸುಕ್ರಮ ಸಂಕ್ರಮ ಹುಂಕೃತವಕ್ತ್ರ ॥ ೫ ॥**

**ಅರ್ಥ ॥** ದಾನವಸಾದನ=ಅಸುರರನ್ನು ನಾಶಮಾಡಿದವನೇ, ಅಥವಾ ಕುವಲಯಾಪೀಡಾಖ್ಯ ಆನೆಯನ್ನು ಸಂಹರಿಸಿದವನೇ, ಅಥವಾ ಸತ್ಪಾತ್ರದಾನಶೀಲರಾದ ಸಜ್ಜನರಿಗೆ ಸುಖವನ್ನುಂಟು ಮಾಡುವವನೇ, ದೈವತಮೋದನ=ದೇವತೆಗಳಿಗೆ ಸಂತೋಷವನ್ನುಂಟುಮಾಡುವವನೇ, ಅಥವಾ ವಿಷ್ಣುಭಕ್ತರ ಅಜ್ಞಾನವನ್ನು ಪರಿಹರಿಸತಕ್ಕವನೇ, ದೈವತಮೋದಿತ=ಬ್ರಹ್ಮಾದಿ ದೇವತೆಗಳಿಂದ ಸಂತೋಷಿಸಲ್ಪಟ್ಟವನೇ, ವೇದಿತಪಾದ=ಸಕಲವೇದಪ್ರತಿಪಾದ್ಯವಾದ ಸ್ವರೂಪವುಳ್ಳವನೇ, ಸಾಧು

ಗಳಿಂದ ತಿಳಿಸಲ್ಪಟ್ಟ ಚರಣಗಳುಳ್ಳವನೇ, ಮಧುಸೂದನ=ಮಧುನಾಮಕ ದೈತ್ಯನನ್ನು ನಾಶ ಮಾಡಿದವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ನಿಷ್ಕ್ರಮ=ನಿವೃತ್ತವಾದ ವರ್ಣಾಶ್ರಮಾಚಾರ ಕ್ರಮಗಳುಳ್ಳವನೇ, (ಕರ್ಮಬದ್ಧನಾಗದಿರುವವನೇ,) ವಿಕ್ರಮ= ಲೋಕಸಂಗ್ರಹಕ್ಕಾಗಿ ಮಾಡಲ್ಪಡತಕ್ಕ ಧರ್ಮ ಮರ್ಯಾದಾಸ್ಥಿತಿಗಳುಳ್ಳವನೇ, ಅತಿಶಯಿತ ಶಕ್ತಿಸ್ವರೂಪನೇ, ಸುಕ್ರಮ=ಶೋಭನವಾದ ವಾಸುದೇವಾದಿ ವ್ಯೂಹವುಳ್ಳವನೇ, ಶೋಭನವಾದ ಗತಿವಿಶೇಷವುಳ್ಳವನೇ, ಸಂಕ್ರಮ=ಪ್ರಲಯಕಾಲದಲ್ಲಿ ಜಗತ್ತನ್ನು ನಾಶಮಾಡುವುದಕ್ಕಾಗಿ, ಹುಂಕೃತ= ಹುಂಕಾರಶಬ್ದದಿಂದೊಡಗೂಡಿದ, ವಕ್ತ್ರ=ಮುಖವುಳ್ಳವನೇ, ಅಥವಾ ಹಿರಣ್ಯಾಕ್ಷನ ಯುದ್ಧದಲ್ಲಿ ಹುಂಕಾರಯುಕ್ತವಾದ ಮುಖವುಳ್ಳ ವರಾಹನೇ, ತ್ರಿವಿಕ್ರಮ=ಮೂರು ಪಾದವಿಕ್ಷೇಪಗಳುಳ್ಳವನೇ, ಅಥವಾ 3 ವೇದಗಳಲ್ಲಿಯೂ ಪ್ರತಿಪಾದ್ಯನಾದುದರಿಂದ ಹೆಚ್ಚು ಪರಾಕ್ರಮವುಳ್ಳವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ।। 5 ।।

**ಮೂಲ ।। ವಾಮನ ವಾಮನ ಭಾಮನ ವಂದೇ**
**ಸಾಮನ ಸೀಮನ ಶಾಮನ ಸಾನೋ ।**
**ಶ್ರೀಧರ ಶ್ರೀಧರ ಶಂಧರ ವಂದೇ**
**ಭೂಧ(ರ್ಧ)ರ ವಾರ್ಧರ ಕಂಧರಧಾರಿನ್ ।। ೬ ।।**

**ಅರ್ಥ ।।** ಭಾಮನ=ಭಕ್ತರಿಗೆ ಜ್ಞಾನಾದಿ ಪ್ರಕಾಶವನ್ನು ಪ್ರಾಪಿಸಿಕೊಡತಕ್ಕವನೇ, ದೈತ್ಯರಿಗೆ ಕ್ರೋಧವನ್ನು ಪ್ರಾಪಿಸಿಕೊಡತಕ್ಕವನೇ, ಸಾಮನ=ಸಾಮವೇದಗಳಿಂದ ಪ್ರಾಪಿಸಲ್ಪಡತಕ್ಕವನೇ, ತನ್ನನ್ನು ಅಂತರ್ಯಾಮಿಯಾಗಿ ಇರಿಸುವವನೇ, ಸೀಮನ=ಧರ್ಮ ಮರ್ಯಾದೆಗಳನ್ನು ಪ್ರಾಪಿಸಿಕೊಡ ತಕ್ಕವನೇ, ಶಾಮನ=ಶಾಂತಿಯನ್ನು ಕೊಡತಕ್ಕವನೇ, ಭಕ್ತರಿಗೆ ಸ್ವರೂಪವನ್ನು ತೋರಿಸಿಕೊಡತಕ್ಕವನೇ ಭಕ್ತರ ಕ್ರೋಧ ದುಃಖಾದಿಗಳನ್ನು ನಿವರ್ತಿಸತಕ್ಕವನೇ, ಸಾನೋ=ಸರ್ವಾಧಾರಕನೇ, ಸುಖಪ್ರದನೇ, ವಾಮನ=ಭಕ್ತರಿಗೆ ಕಲ್ಯಾಣವನ್ನು ಪ್ರಾಪಿಸಿಕೊಡತಕ್ಕವನೇ, ವಾಮನ=ದ್ವೇಷಿಗಳಿಗೆ ಅಮಂಗಲವನ್ನು ಪ್ರಾಪಿಸಿಕೊಡತಕ್ಕವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ಶಂಧರ=ಅಲೌಕಿಕ ಸುಖವನ್ನು ಧರಿಸಿದವನೇ, ಭೂಧರ=ಕೂರ್ಮಾದಿರೂಪದಿಂದ ಭೂಮಿಯನ್ನು ಧರಿಸಿದವನೇ, ಭೂಮಿಯನ್ನು ಧರಿಸತಕ್ಕ ಹರಿಶ್ಚಂದ್ರಾದಿಗಳಿಗೆ ಅಭೀಷ್ಟವನ್ನು ಕೊಡತಕ್ಕವನೇ, ವಾರ್ಧರ=ಪ್ರಕೃತ್ಯಾತ್ಮಕ ಜಲಗಳನ್ನು ಧರಿಸಿದವನೇ, ಪ್ರಲಯಜಲಕ್ಕೆ ಆಶ್ರಯನಾದವನೇ, ಕ್ಷೀರಸಮುದ್ರದಲ್ಲಿ ಕ್ರೀಡಿಸುವವನೇ, ಕಂಧರಧಾರಿನ್=ಸುಖವನ್ನು ಧರಿಸಿದ ಮುಕ್ತರನ್ನು ಧರಿಸಿದವನೇ, ಮುಕ್ತರಿಗೆ ಆಶ್ರಯನಾದವನೇ, ಲಕ್ಷ್ಮೀಯನ್ನು ಧರಿಸಿದವನೇ, ಕಂಬುಸಮಾನಕಂಠನೇ, ಶ್ರೀಧರ=ಕಾಂತಿಯನ್ನು ಧರಿಸಿದವನೇ, ಶ್ರೀಧರ=ಶ್ರೀಧರನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ।। 6 ।।

**ಮೂಲ ।। ಹೃಷೀಕೇಶ ಸುಕೇಶ ಪರೇಶ ವಿವಂದೇ**
**ಶರಣೇಶ ಕಲೇಶ ಬಲೇಶ ಸುಖೇಶ ।**
**ಪದ್ಮನಾಭ ಶುಭೋದ್ಭವ ವಂದೇ**
**ಸಂಭೃತ ಲೋಕ ಭರಾಭರ ಭೂರೇ ।। ೭ ।।**

**ಅರ್ಥ ॥** ಸುಕೇಶ=ಮನೋಹರವಾದ ಕೂದಲುಗಳುಳ್ಳವನೇ, ಶೋಭನನೂ ಚತುರ್ಮುಖನಿಗೆ ನಿಯಾಮಕನೂ ಆದವನೇ, ಕ್ಷೀರಾಬ್ಧಿಶಾಯಿಯೇ, ಶೋಭನರಾದ ಬ್ರಹ್ಮರುದ್ರರು ಪುತ್ರಪೌತ್ರರಾಗಿ ಉಳ್ಳವನೇ, ಶೋಭನವಾದ ಸುಖವನ್ನೇ ಭೋಗಿಸುವವನೇ, ಪರೇಶ= ಬ್ರಹ್ಮಾದಿಗಳಿಗೂ ನಿಯಮಾಕನಾದವನೇ, ಶರಣೇಶ=ರಕ್ಷಕನಿಗೂ ನಿಯಾಮಕನೇ, 108 ಆದಿ ಪತ್ನಿಯರ ಮನೆಗಳಿಗೂ ನಿಯಾಮಕನೇ, ಸುಖಕ್ಕೆ ಕಾರಣವಾದ ವೇದರೂಪವಾದ ಶಬ್ದಕ್ಕೆ ನಿಯಾಮಕನೇ, ಕಲೇಶ=64 ಕಲಾವಿದ್ಯೆಗಳಿಗೆ ಪ್ರವರ್ತಕನೇ, ಮತ್ಸ್ಯಕೂರ್ಮ ಮೊದಲಾದ ಅಂಶಾವತಾರಗಳನ್ನು ಅಭಿವ್ಯಕ್ತೀಕರಿಸಿದವನೇ, ಭಿನ್ನಾಂಶರಾದ ಬ್ರಹ್ಮರುದ್ರಾದಿ ಜೀವರಿಗೆ ನಿಯಾಮಕನೇ, ತನ್ನಿಂದ ವ್ಯತಿರಿಕ್ತರಾದ ಶ್ರೀಬ್ರಹ್ಮರುದ್ರಾದಿಗಳ ಸುಖವು ಲೇಶವಾಗಿ ಉಳ್ಳವನೇ, ಬ್ರಹ್ಮನು (ಎಲ್ಲಾ ಚೇತನ ವರ್ಗವೂ) ತೃಣಪ್ರಾಯನಾಗಿ ಉಳ್ಳವನೇ, ಬಲೇಶ=ಯಾದವ ಸೈನ್ಯಕ್ಕೂ ಪ್ರೇರಕನೇ, ಬಲರಾಮನು ಕೃಷ್ಣಾವತಾರದಲ್ಲಿ ಅಣ್ಣನಾದುದರಿಂದ ನಿಯಾಮಕನಾಗಿ ಉಳ್ಳವನೇ, ಬಲಸ್ವರೂಪನಾದ ಮುಖ್ಯಪ್ರಾಣನೂ ಕೂಡ ಅಲ್ಪನಾಗಿ ಉಳ್ಳವನೇ, ಮಹಾಯುದ್ಧಕ್ಕೂ ಪ್ರವರ್ತಕನೇ, ಸಾಮರ್ಥ್ಯಕ್ಕೂ ಪ್ರೇರಕನೇ, ಜ್ಞಾನ ಮನನಗಳಿಗೆ ಪ್ರವರ್ತಕನೇ, ಸುಖೇಶ= ಶೋಭನವಾದ ಅವ್ಯಾಕೃತಾಕಾಶಕ್ಕೂ ನಿಯಾಮಕನೇ, ಶೋಭನಗಳಾದ ಸರ್ವೇಂದ್ರಿಯಗಳಿಗೆ ಪ್ರೇರಕನೇ, ಮುಕ್ತಿಯಲ್ಲಿರುವ ಆನಂದವನ್ನು ಕೊಡತಕ್ಕವನೇ, ಆನಂದಕ್ಕೂ ನಿಯಾಮಕನೇ, ಹೃಷೀಕೇಶ=ಸರ್ವೇಂದ್ರಿಯಗಳಿಗೂ ಪ್ರೇರಕನಾದವನೇ, ತ್ವಾಂ=ನಿನ್ನನ್ನು, ವಿವಂದೇ=ವಿಶೇಷವಾಗಿ ನಮಸ್ಕರಿಸುತ್ತೇನೆ. ಶುಭೋದ್ಭವ=ಸಮಸ್ತ ಮಂಗಳವನ್ನು ಹುಟ್ಟಿಸಿದವನೇ, ಸಜ್ಜನರಿಗೆ ಶುಭಕ್ಕೆ ಕಾರಣಗಳಾದ ಉತ್ಕೃಷ್ಟಗಳಾದ ಅವತಾರಗಳುಳ್ಳವನೇ, ಅಪರಿಮಿತಗಳಾದ ಕಲ್ಯಾಣಗುಣಗಳ ನಿತ್ಯಾಭಿವೃದ್ಧಿಯುಳ್ಳವನೇ, ಮುಕ್ತಿಯೋಗ್ಯರಾದ ಸಜ್ಜನರನ್ನು ನಿವೃತ್ತವಾದ ಸಂಸಾರವುಳ್ಳವರನ್ನಾಗಿ ಮಾಡಿದವನೇ, ಅಂದರೆ ಸಜ್ಜೀವರನ್ನು ಮುಕ್ತರನ್ನಾಗಿ ಮಾಡಿದವನೇ, ಸಂಭೃತ=ಪುಷ್ಟರಾದ, ಲೋಕ=ಅನಂತ ಜೀವರಾಶಿಗಳ, ಭರ=ಭಾರವನ್ನು, ಆಭರ=ಚೆನ್ನಾಗಿ ಧರಿಸಿದವನೇ, ಅಥವಾ ಸಂಭೃತಲೋಕಭರ=ಲೋಕಪಾಲಕರಾದ ಬ್ರಹ್ಮಾದಿದೇವತೆಗಳನ್ನು ಧರಿಸಿದವನೇ, ಆಭರ= ಪ್ರಪಂಚವನ್ನೆಲ್ಲಾ ಚೆನ್ನಾಗಿ ಧರಿಸಿದವನೇ, ಭೂರೇ=ಅನೇಕರೂಪಗಳುಳ್ಳವನೇ, ಸರ್ವಗುಣ ಪರಿಪೂರ್ಣನೇ, ಪದ್ಮನಾಭ, ಪದ್ಮನ=ಕಮಲಕ್ಕೆ ವಿಕಾಸವನ್ನು ಪ್ರಾಪಿಸಿಕೊಡತಕ್ಕ ಸೂರ್ಯನ, ಆಭ=ಪ್ರಕಾಶದಂತೆ ಪ್ರಕಾಶವುಳ್ಳವನೇ, ಕಮಲವು ನಾಭಿಯಲ್ಲಿ ಉಳ್ಳವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 7 ॥

**ಮೂಲ ॥ ದಾಮೋದರ ದೂರತರಾಂತರ ವಂದೇ ।**
**ದಾರಿತ ಪಾರಗ ಪಾರ ಪರಸ್ಮಾತ್ ॥ ೮ ॥**

**ಅರ್ಥ ॥** ದೂರತರಾಂತರ=ದುರ್ಜನರಿಗೆ ಅತಿ ದೂರವಾದ ಅವಕಾಶವುಳ್ಳವನೇ, (ದುಷ್ಟರಿಗೆ ಅತಿ ದೂರನೇ) ಅಸಜ್ಜನರಿಗೆ ಅತಿದೂರನೂ, ಅಂತರ್ಗತನೂ ಆದವನೇ, (ಅಂದರೆ ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪ್ತನಾದವನೇ) ತನ್ನ ಗುಣಕ್ರಿಯಾದಿಗಳಿಂದ ಅತಿ ದೂರವಾದ ಭೇದವುಳ್ಳವನೇ, ಪರಸ್ಮಾತ್=ಕರ್ಮಾದಿಗಳಿಂದುತ್ತಮವಾದ ಜ್ಞಾನದಿಂದ, ದಾರಿತ=ನಾಶಮಾಡಲ್ಪಟ್ಟ ಸಂಸಾರ ಸಮುದ್ರದ, ಪಾರಗ=ಆಚೆ ದಡವನ್ನು ಹೊಂದಿದ ಮುಕ್ತರಿಗೆ, ಪಾರ=ಆಶ್ರಯನಾದವನೇ,

ಮುಕ್ತರಿಗೂ ರಕ್ಷಕನೇ, ದಾಮೋದರ=ಬಂಧಿಸತಕ್ಕ ಹಗ್ಗವು ಉದರದಲ್ಲಿರುವವನೇ, ಸಂಪದ್ದಾನಶೀಲ ರಾದ ಸಜ್ಜನರಿಗೆ ಸುಖವನ್ನು ಕೊಡುವವನೇ, ಭಗವದ್ಭಕ್ತರಿಂದ ಸಮರ್ಪಿತವಾದ ನೀರಿನಿಂದಲೂ (ಪತ್ರಾದಿಗಳಿಂದಲೂ) ಸಂತೋಷವನ್ನು ಹೊಂದುವವನೇ, ಶ್ರೀಹರಿಯಿಂದ ಸಂಹರಿಸಲ್ಪಡುವ ಬ್ರಹ್ಮಾದಿ ದೇವತೆಗಳುಳ್ಳ ಪ್ರಳಯಕಾಲದ ನೀರಿನಲ್ಲಿ ಕ್ರೀಡಿಸಿಕೊಂಡಿರುವವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 8 ॥

**ಮೂಲ ॥ ಆನಂದ ಸುತೀರ್ಥ ಮುನೀಂದ್ರ ಕೃತಾ**
**ಹರಿಗೀತಿರಿಯಂ ಪರಮಾದರತಃ ।**
**ಪರಲೋಕ ವಿಲೋಕನ ಸೂರ್ಯನಿಭಾ**
**ಹರಿಭಕ್ತಿ ವಿವರ್ಧನ ಶೌಂಡತಮಾ ॥ ೯ ॥**

**ಅರ್ಥ ॥** ಇಯಂ=ಈ, ಹರಿಗೀತಿಃ=ಪರಮಾತ್ಮನ ಸ್ತೋತ್ರವು, ಪರಮಾದರತಃ=ಅತಿಶಯವಾದ ಭಕ್ತಿಯಿಂದ, ಆನಂದತೀರ್ಥ=ಆನಂದತೀರ್ಥಾಖ್ಯರಾದ, ಮುನೀಂದ್ರ=ಯತಿಶ್ರೇಷ್ಠರಿಂದ, ಕೃತಾ= ಮಾಡಲ್ಪಟ್ಟದ್ದು (ಪಠನಮಾಡುವವರಿಗೂ ಕೇಳುವವರಿಗೂ) ಇಯಂ=ಈ ಸ್ತೋತ್ರವು, ಪರಲೋಕ= ವೈಕುಂಠದ, ವಿಲೋಕನ=ನೋಡುವುದರಲ್ಲಿ, ಸೂರ್ಯನಿಭಾ=ಸೂರ್ಯನಿಗೆ ಸದೃಶವಾದುದು, ಹರಿ=ಶ್ರೀಪರಮಾತ್ಮನಲ್ಲಿ, ಭಕ್ತಿ=ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹದ, ವಿವರ್ಧನ= ವಿಶೇಷಾಭಿವೃದ್ಧಿಯಲ್ಲಿ, ಶೌಂಡತಮಾ=ಅತಿ ಸಮರ್ಥವಾದುದು.

**ತಾತ್ಪರ್ಯ ॥** ಸೂರ್ಯನು ಹೇಗೆ ಲೋಕವನ್ನು ತೋರಿಸುತ್ತಾನೋ, ಹಾಗೆಯೇ ಈ ಸ್ತುತಿಯೂ ಪಠನಮಾಡುವವರಿಗೆ ವೈಕುಂಠಲೋಕವನ್ನು ತೋರಿಸುತ್ತದೆ. ॥ 9 ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
**ದ್ವಾದಶಸ್ತೋತ್ರೇ ಪಂಚಮೋಽಧ್ಯಾಯಃ ॥ ೫ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಐದನೇ ಅಧ್ಯಾಯವು ಸಮಾಪ್ತವಾಯಿತು. ॥ ೫ ॥**

## ಆರನೇ ಅಧ್ಯಾಯವು

**ಮೂಲ ॥ ಮತ್ಸ್ಯಕರೂಪ ಲಯೋದವಿಹಾರಿನ್**
**ವೇದವಿನೇತೃಚತುರ್ಮುಖವಂದ್ಯ ।**
**ಕೂರ್ಮಸ್ವರೂಪಕ ಮಂದರಧಾರಿನ್**
**ಲೋಕವಿಧಾರಕ ದೇವವರೇಣ್ಯ ॥ ೧ ॥**

**ಅರ್ಥ ॥** ಲಯೋದವಿಹಾರಿನ್=ಪ್ರಲಯಜಲದಲ್ಲಿ ಕ್ರೀಡಿಸತಕ್ಕವನೇ, ವೇದ=ವೇದಗಳಿಗೆ, ವಿನೇತೃ=ಪ್ರವರ್ತಕನಾದವನೇ, ಚತುರ್ಮುಖ=ಬ್ರಹ್ಮನಿಂದ, ವಂದ್ಯ=ಸ್ತುತಿಸಲ್ಪಡತಕ್ಕವನೇ,

ಮತ್ಸ್ಯಕರೂಪ=ಮತ್ಸ್ಯರೂಪಿಯೇ, ಮತ್ಸ್ಯಾಖ್ಯ ಸುಖಸ್ವರೂಪಿಯೇ, ತ್ವಾಂ=ನಿನ್ನನ್ನು, ವಂದೇ= ನಮಸ್ಕರಿಸುತ್ತೇನೆ. ಮಂದರಧಾರಿನ್=ಮಂದರಪರ್ವತವನ್ನು ಧರಿಸಿದವನೇ, ಲೋಕವಿಧಾರಕ= ಸರ್ವಲೋಕಗಳನ್ನೂ ಸಂರಕ್ಷಿಸತಕ್ಕವನೇ, ಬ್ರಹ್ಮಾಂಡಕ್ಕೆ ಆಧಾರವಾಗಿ ಹೊರಗೂ ಬ್ರಹ್ಮಾಂಡದೊಳಗೂ ಎರಡು ರೂಪಗಳಿಂದ ಧರಿಸುವವನೇ, ದೇವವರೇಣ್ಯ=ದೇವಶ್ರೇಷ್ಠನೇ, ಕೂರ್ಮಸ್ವರೂಪಕ= ಕೂರ್ಮಸ್ವರೂಪವುಳ್ಳವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 1 ॥

**ಮೂಲ ॥ ಸೂಕರ ರೂಪಕ ದಾನವ ಶತ್ರೋ**
**ಭೂಮಿವಿಧಾರಕ ಯಜ್ಞವರಾಂಗ ।**
**ದೇವ ನೃಸಿಂಹ ಹಿರಣ್ಯಕಶತ್ರೋ**
**ಸರ್ವಭಯಾಂತಕ ದೈವತಬಂಧೋ ॥ ೨ ॥**

**ಅರ್ಥ ॥** ದಾನವಶತ್ರೋ=ಹಿರಣ್ಯಾಕ್ಷಾಖ್ಯ ಅಸುರನನ್ನು ಸಂಹರಿಸಿದವನೇ, ಭೂಮಿ ವಿಧಾರಕ= ದಾಡೆಯ ತುದಿಯಿಂದ ಭೂಮಿಯನ್ನು ವಿಶೇಷಾಕಾರವಾಗಿ ಧರಿಸಿದವನೇ, ಯಜ್ಞವರಾಂಗ= ದೇವತೆಗಳಿಂದ ಯಾಗಮಾಡಲ್ಪಡತಕ್ಕವನೇ, ಉತ್ಕೃಷ್ಟವಾದ ಅಂಗವುಳ್ಳವನೇ, ಯಜ್ಞಾಭಿಮಾನಿ ದೇವತೆಗಳು ಉತ್ಕೃಷ್ಟಗಳಾದ ಅಂಗಗಳಾಗಿ ಉಳ್ಳವನೇ, ಯಾಗಮಾಡಲ್ಪಡತಕ್ಕ ಬ್ರಹ್ಮಾದಿ ಸಮಸ್ತದೇವತೆಗಳು ಉತ್ಕೃಷ್ಟ ಅಂಗಗಳಲ್ಲಿ ಉಳ್ಳವನೇ, ಯಜ್ಞ=ಜ್ಯೋತಿಷ್ಟೋಮಾದಿಗಳಿಂದ, ವರ=ಶ್ರೇಷ್ಠಗಳಾದ ಜ್ಞಾನಭಕ್ತ್ಯಾದಿಗಳು, ಅಂಗ=ಭಕ್ತರಿಗೆ ಮೋಕ್ಷವನ್ನು ಕೊಡುವುದರಿಂದ ಸಹಕಾರಿಕಾರಣಗಳಾಗಿ ಉಳ್ಳವನೇ, ಯಜ್ಞಸಾಧನವಾದ ಉತ್ತಮ ಅವಯವವುಳ್ಳವನೇ, ಸೂಕರರೂಪಕ=ವರಾಹಮೂರ್ತಿಯೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ದೇವ=ಕ್ರೀಡಾದಿ ಗುಣವಿಶಿಷ್ಟನೇ, ಹಿರಣ್ಯಕಶತ್ರೋ= ಹಿರಣ್ಯಕಶಿಪುವಿಗೆ ಸಂಹಾರಕನೇ, ಸರ್ವಭಯಾಂತಕ=ಕೇವಲ ಸ್ಮರಣದಿಂದ ಎಲ್ಲಾ ಭಕ್ತರ ಸಂಸಾರಪೀಡೆಯನ್ನು ನಾಶಮಾಡತಕ್ಕವನೇ, ದೈವತಬಂಧೋ= ದೇವತೆಗಳಿಗೆ ಅತಿಬಂಧುವಾದವನೇ, ನೃಸಿಂಹ=ನೃಸಿಂಹ ಮೂರ್ತಿಯೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 2 ।

**ಮೂಲ ॥ ವಾಮನ ವಾಮನ ಮಾಣವ ವೇಷ**
**ದೈತ್ಯವರಾಂ(ಕುಲಾಂ) ತಕ ಕಾರಣಸ್ವರೂಪ (ಭೂತ)।**
**ರಾಮ ಭೃಗೂದ್ವಹ ಸೂರ್ಜಿತ ದೀಪ್ತೇ**
**ಕ್ಷತ್ರಕುಲಾಂತಕ ಶಂಭುವರೇಣ್ಯ ॥ ೩ ॥**

**ಅರ್ಥ ॥** ವಾಮನ=ದೈತ್ಯರ ಅಹಂಕಾರವನ್ನು ನಾಶಮಾಡಿದವನೇ, ವಾಮನ=ಶೋಭನಗಳಾದ ಭಕ್ತ್ಯಾದಿಗುಣಗಳಿಂದ ವಶೀಕರಿಸಲ್ಪಡತಕ್ಕವನೇ, ಮಾಣವವೇಷ=ಬ್ರಹ್ಮಚಾರಿಯ ವೇಷವುಳ್ಳವನೇ, ದೈತ್ಯ=ಬಲಿಚಕ್ರವರ್ತಿಯ, ವರಾ=ಉತ್ಕೃಷ್ಟವಾದ ಸಂಪತ್ತನ್ನು, ಅಂತಕ=ಸೆಳೆದು ಇಂದ್ರನಿಗೆ ಕೊಡಿಸಿದವನೇ, ಅಥವಾ ಬಲಿಚಕ್ರವರ್ತಿಯ 'ಈ ವಟುವಿಗೆ ಅಭೀಷ್ಟವನ್ನು ಕೊಡುವೆನು' ಎಂಬುವ ಅಭಿಲಾಷೆಯನ್ನು ಪೂರ್ಣೀಕರಿಸಿದವನೇ. ಅಥವಾ ಬಲಿಚಕ್ರವರ್ತಿಯ ಗರ್ವವನ್ನು ನಾಶ

ಮಾಡಿದವನೇ, ಕಾರಣರೂಪ=ಬಲಿಚಕ್ರವರ್ತಿಗೆ ತ್ರಿಲೋಕ ಐಶ್ವರ್ಯದಿಂದಲೂ ಹೆಚ್ಚು ಸಂಪತ್ತನ್ನು ಮಾಡತಕ್ಕವನೇ, ಅಥವಾ ದೇವತೆಗಳ ಕಾರ್ಯವನ್ನು ನಿರ್ವಹಿಸುವುದಕ್ಕಾಗಿ ರೂಪವನ್ನು ತೆಗೆದು ಕೊಂಡವನೇ, ವಾಮನ=ದೈತ್ಯರ ಅಹಂಕಾರವನ್ನು ಪರಿಹರಿಸಿದವನೇ, ಶೋಭನಗಳಾದ ಭಕ್ತ್ಯಾದಿಗುಣ ಗಳಿಂದ ವಶೀಕರಿಸಲ್ಪಟ್ಟವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ಭೃಗೂದ್ವಹ= ಭೃಗುವಂಶವನ್ನುದ್ಧರಿಸತಕ್ಕವನೇ, ಸೂರ್ಜಿತದೀಪ್ತೇ=ಅತ್ಯುತ್ಕೃಷ್ಟ ಪ್ರಕಾಶವುಳ್ಳವನೇ, ಕ್ಷತ್ರಕುಲಾಂತಕ= ಕ್ಷತ್ರಿಯವಂಶವನ್ನು ನಾಶಮಾಡಿದವನೇ, ಶಂಭುವರೇಣ್ಯ=ರುದ್ರನಿಂದಲೂ ಸ್ತುತ್ಯನಾದವನೇ, ರಾಮ=ಪರಶುರಾಮನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 3 ॥

**ಮೂಲ ॥ ರಾಘವ ರಾಘವ ರಾಕ್ಷಸಶತ್ರೋ**
**ಮಾರುತಿವಲ್ಲಭ ಜಾನಕೀ ಕಾಂತ ।**
**ದೇವಕಿ ನಂದನ ಸುಂದರರೂಪ**
**ರುಕ್ಮಿ(ಗ್ಮಿ)ಣೀ ವಲ್ಲಭ ಪಾಂಡವಬಂಧೋ ॥ ೪ ॥**

**ಅರ್ಥ ॥** ರಾಘವ=ರಘುಕುಲದಲ್ಲಿ ಆವಿರ್ಭವಿಸಿದವನೇ, ರಾಘವ=ಶ್ರೀರಾಮಚಂದ್ರನೇ, ರಾಕ್ಷಸಶತ್ರೋ=ರಾವಣ್ಯಾದ್ಯನೇಕ ರಾಕ್ಷಸರನ್ನು ಸಂಹರಿಸಿದವನೇ, ಮಾರುತಿವಲ್ಲಭ=ಹನುಮಂತನಿಗೆ ಅತಿಪ್ರಿಯನಾದವನೇ, ಜಾನಕೀಕಾಂತ=ಸೀತಾರಮಣನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ದೇವಕಿನಂದನ=ದೇವಕೀಪುತ್ರನೇ, ಸುಂದರರೂಪ=ಅತಿ ಮನೋಹರವಾದ ಸ್ವರೂಪವುಳ್ಳವನೇ, ರುಗ್ಮಿಣೀವಲ್ಲಭ=ಭೀಷ್ಮಕರಾಜನ ಮಗಳಾದ ಲಕ್ಷ್ಮೀಸ್ವರೂಪಳಾದ ರುಗ್ಮಿಣೀದೇವಿಗೆ ಪ್ರಿಯನಾದವನೇ, ಪಾಂಡವಬಂಧೋ=ಪಾಂಡುರಾಜನ ಪುತ್ರರಾದ ಧರ್ಮಾದಿಗಳಿಗೆ ಪ್ರಾಣಬಂಧುವೇ. ಶ್ರೀಕೃಷ್ಣನೇ. (ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ.) ॥ 4 ॥

**ಮೂಲ ॥ ದೇವಕಿನಂದನ ನಂದಕುಮಾರ**
**ವೃಂದಾವನಾಂ ಚ (ಜ) ನ ಗೋಕುಲ ಚಂದ್ರ ।**
**ಕಂದ ಫಲಾಶನ ಸುಂದರರೂಪ (ಪಾ)-**
**ನಂದಿತ ಗೋಕುಲ ವಂದಿತ ಪಾದ ॥ ೫ ॥**

**ಅರ್ಥ ॥** ದೇವಕಿನಂದನ=ದೇವಕೀದೇವಿಯನ್ನು ಸಂತೋಷಪಡಿಸಿದವನೇ, ನಂದಕುಮಾರ= ನಂದಗೋಪನ ಪುತ್ರನೇ, ವೃಂದಾವನಾಂಚನ= ವೃಂದಾವನದಲ್ಲಿ ಸಂಚಾರಶೀಲನಿಗೆ ಅಥವಾ ವೃಂದಾವನವನ್ನು ಪೂಜಿತವನ್ನಾಗಿ ಮಾಡಿದವನೇ, ಗೋಕುಲಚಂದ್ರ=ಗೋಕುಲವೆಂಬುವ ಸಮುದ್ರಕ್ಕೆ ಸಂತೋಷಪ್ರದನಾದ ಚಂದ್ರನಂತಿರುವವನೇ, (ಗೋಕುಲವನ್ನು ಸಂತೋಷಿಸತಕ್ಕವನೇ), ಕಂದಫಲಾಶನ=ಕಂದಫಲಗಳನ್ನು ತಿನ್ನುವವನೇ, ಸುಂದರರೂಪ=ಅತಿ ಸುಂದರ ಶರೀರವುಳ್ಳವನೇ, ನಂದಿತಗೋಕುಲ=ವೇಣುಧ್ವನ್ಯಾದಿಗಳಿಂದ ಗೋಕುಲವನ್ನು ಸಂತೋಷಿಸಿದವನೇ, ವಂದಿತಪಾದ= ನಮಸ್ಕರಿಸಲ್ಪಟ್ಟ ಚರಣಗಳುಳ್ಳವನೇ, ದೇವಕಿನಂದನ=ಶ್ರೀಕೃಷ್ಣನೇ, (ನಿನಗೆ ನಮಸ್ಕಾರವು) ॥ 5 ॥

**ಮೂಲ ॥ ಇಂದ್ರಸುತಾವಕ ನಂದಕಹಸ್ತ (ಸ್ತಾ)**
**ಚಂದನಚರ್ಚಿತ ಸುಂದರೀ(ರಿ) ನಾಥ ।**

ಇಂದೀವರೋದರ ದಲನಯನ (ನಾ)
ಮಂದರ ಧಾರಿನ್ (ರಾ) ಗೋವಿಂದ ವಂದೇ ॥ ೬ ॥

**ಅರ್ಥ ॥** ಇಂದ್ರಸುತಾವಕ=ಇಂದ್ರನ ಪುತ್ರನಾದ ಅರ್ಜುನನನ್ನು ರಕ್ಷಿಸಿದವನೇ, ನಂದಕಹಸ್ತ= ನಂದಕವೆಂಬುವ ಖಡ್ಗವು ಕೈಯಲ್ಲಿ ಉಳ್ಳವನೇ, ಅಥವಾ ಗೋವರ್ಧನ ಪರ್ವತವನ್ನುದ್ಧರಿಸಿದ್ದರಿಂದ ನಂದಗೋಕುಲದ ಜನರನ್ನು ಸಂತೋಷಿಸಿದ ಕೈಯುಳ್ಳವನೇ, ಚಂದನಚರ್ಚಿತ=ಚಂದನದಿಂದ ಲೇಪಿಸಲ್ಪಟ್ಟವನೇ, ಸುಂದರೀನಾಥ=ರಮಣಿಯರಿಗೆ ಪ್ರಿಯನಾದವನೇ, ಇಂದೀವರೋದರದಲ ನಯನ=ನೀಲೋತ್ಪಲದ ಮಧ್ಯಭಾಗದ ದಳದಂತೆ ವಿಶಾಲವಾದ ಕಣ್ಣುಗಳುಳ್ಳವನೇ, ಮಂದರಧಾರಿನ್=ಗೋವರ್ಧನವನ್ನು ಧರಿಸಿದವನೇ, ಗೋವಿಂದ=ಶ್ರೀಕೃಷ್ಣನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 6 ॥

**ಮೂಲ ॥** ಚಂದ್ರಶತಾನನ ಕುಂದ ಸುಹಾಸ
ನಂದಿತದೈವತಾನಂದಸುಪೂರ್ಣ ।
ದೈತ್ಯವಿಮೋಹಕ ನಿತ್ಯಸುಖಾದೇ
ದೇವಸುಬೋಧಕ ಬುದ್ಧಸ್ವರೂಪ ॥ ೭ ॥

**ಅರ್ಥ ॥** ಚಂದ್ರಶತಾನನ=ಅನಂತ ಚಂದ್ರರಂತೆ ಸಂತೋಷಿಸತಕ್ಕ ಮುಖವುಳ್ಳವನೇ, ಕುಂದಸುಹಾಸ=ಮಲ್ಲಿಗೆಯಂದದಿ ಮುಗುಳುನಗೆಯುಳ್ಳವನೇ, ನಂದಿತದೈವತ=ಸಂತುಷ್ಟರಾದ ಬ್ರಹ್ಮಾದಿ ದೇವತೆಗಳುಳ್ಳವನೇ, ಆನಂದಸುಪೂರ್ಣ=ಅಲೌಕಿಕ ಆನಂದಗಳಿಂದ ಪರಿಪೂರ್ಣ ನಾದವನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ದೈತ್ಯವಿಮೋಹಕ=ದೈತ್ಯರನ್ನು ವಂಚಿಸಿ ದವನೇ, ನಿತ್ಯಸುಖಾದೇ=ಮುಕ್ತಿಗೆ ಕಾರಣನಾದವನೇ, ದೇವಸುಬೋಧಕ=ದೇವತೆಗಳಿಗೆ ಯಥಾರ್ಥ ಜ್ಞಾನವನ್ನು ಹುಟ್ಟಿಸತಕ್ಕವನೇ, ಬುದ್ಧಸ್ವರೂಪ=ಬುದ್ಧಾವತಾರನಾದ ಶ್ರೀಹರಿಯೇ, ತ್ವಾಂ=ನಿನ್ನನ್ನು, ವಂದೇ= ನಮಸ್ಕರಿಸುತ್ತೇನೆ. ॥ 7 ॥

**ಮೂಲ ॥** ದುಷ್ಟಕುಲಾಂತಕ ಕಲ್ಕಿಸ್ವರೂಪ
ಧರ್ಮವಿವರ್ಧನ ಮೂಲಯುಗಾದೇ ।
ನಾರಾಯಣಾಮಲ ಕಾರಣಮೂರ್ತೇ
ಪೂರ್ಣಗುಣಾರ್ಣವ ನಿತ್ಯ ವಿಬೋಧ ॥ ೮ ॥

**ಅರ್ಥ ॥** ದುಷ್ಟಕುಲಾಂತಕ=ದುಷ್ಟರಾದ ದೈತ್ಯರ ಸಮೂಹವನ್ನು ನಾಶಮಾಡಿದವನೇ, ಧರ್ಮವಿವರ್ಧನ=ಧರ್ಮಗಳನ್ನು ಅಭಿವೃದ್ಧಿಪಡಿಸಿದವನೇ, ಮೂಲಯುಗಾದೇ= ಮೂಲಯುಗ ವಾದ ಸತ್ಯಯುಗಕ್ಕೆ ಕಾರಣನಾದವನೇ, (ಕೃತಯುಗವನ್ನು ಪ್ರವರ್ತಿಸಿದವನೇ,) ನಾರಾಯಣ= ಗುಣಪೂರ್ಣನಾದವನೇ, ಅಮಲ=ದೋಷಲೇಶರಹಿತನೇ, ಕಾರಣಮೂರ್ತೇ=ಸಮಸ್ತಕ್ಕೂ ಕಾರಣವಾದ ಶರೀರವುಳ್ಳವನೇ, ಪೂರ್ಣಗುಣಾರ್ಣವ=ಅನಂತಾನಂತಗುಣಗಳಿಂದ ಸಮುದ್ರ ದಂತಿರುವವನೇ, ನಿತ್ಯವಿಬೋಧ=ವಿನಾಶವಿಲ್ಲದಿರುವ ವಿಶಿಷ್ಟಜ್ಞಾನವುಳ್ಳವನೇ, ಕಲ್ಕಿಸ್ವರೂಪ=

ಮ್ಲೇಂಛರನ್ನು ಯುಗಾಂತ್ಯದಲ್ಲಿ ಸಂಹರಿಸುವುದರಿಂದ ಕಲ್ಕಿಸ್ವರೂಪಿಯಾದ ಶ್ರೀಹರಿಯೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ॥ 9 ॥

**ಮೂಲ ॥ ಆನಂದತೀರ್ಥ ಮುನೀಂದ್ರಕೃತಾ ಹರಿಗಾಥಾ**
**ಪಾಪಹರಾ ಶುಭಾ (ಭ) ನಿತ್ಯಸುಖಾರ್ಥಾ ॥ ೯ ॥**

**ಅರ್ಥ ॥** ಸುಖತೀರ್ಥ=ಪೂರ್ಣಪ್ರಜ್ಞಾಚಾರ್ಯರೆಂಬ, ಮುನೀಂದ್ರ=ಮುನಿಶ್ರೇಷ್ಠರಿಂದ, ಕೃತಾ=ಮಾಡಲ್ಪಟ್ಟ, ಹರಿಗಾಥಾ=ಶ್ರೀಹರಿಯ ಗಾನವು, ಪಾಪಹರಾ=(ಪಠನ ಶ್ರವಣಾದಿಗಳಿಂದ,) ಮೋಕ್ಷಕ್ಕೆ ಪ್ರತಿಬಂಧಕಗಳಾದ ದುರಿತಗಳನ್ನು ಪರಿಹರಿಸತಕ್ಕುದು, ಶುಭಾ=(ಶ್ರುತಿಮೂಲಕ ವಾದುದರಿಂದಲೂ, ಸರ್ವಜ್ಞಾಚಾರ್ಯರಿಂದ ನಿರ್ಮಿಸಲ್ಪಟ್ಟ ಪ್ರಯುಕ್ತವೂ) ಮಂಗಲರೂಪ ವಾದುದು, ನಿತ್ಯಸುಖ=ಮುಕ್ತಿಯೇ, ಅರ್ಥಾ=ಪ್ರಯೋಜನವಾಗಿ ಉಳ್ಳದ್ದು. ॥ 9 ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ದ್ವಾದಶಸ್ತೋತ್ರೇ ಷಷ್ಠೋऽಧ್ಯಾಯಃ ॥ ೬ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಆರನೇ ಅಧ್ಯಾಯವು ಸಮಾಪ್ತವಾಯಿತು.॥ ೬ ॥**

## ಏಳನೇ ಅಧ್ಯಾಯವು

**ಮೂಲ ॥ ವಿಶ್ವಸ್ಥಿತಿ ಪ್ರಲಯ ಸರ್ಗ ಮಹಾವಿಭೂತಿ**
**ವೃತ್ತಿ ಪ್ರಕಾಶ ನಿಯಮಾವೃತಿ ಬಂಧ ಮೋಕ್ಷಾಃ ।**
**ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ**
**ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥ ೧ ॥**

**ಅರ್ಥ ॥** ಯಸ್ಯಾಃ=ಯಾವ ಲಕ್ಷ್ಮೀದೇವಿಯ, ಅಪಾಂಗಲವಮಾತ್ರತಃ=ಕಡೆಗಣ್ಣಿನ ಲೇಶ ದಿಂದಲೇ, ವಿಶ್ವ=ಜಗತ್ತಿನ, ಸ್ಥಿತಿ=ಸ್ಥಾನವು, (ರಕ್ಷಣಾದಿಗಳು,) ಪ್ರಲಯ=ಚೆನ್ನಾಗಿ ನಾಶವು, ಸರ್ಗ= ಸೃಷ್ಟಿಯು, ಮಹಾವಿಭೂತಿ=ಅದ್ಭುತ ಐಶ್ವರ್ಯವು, ಅಣಿಮಾದಿಗಳು, ವೃತ್ತಿ=ಜೀವನವು, ಪ್ರಕಾಶ= ಜ್ಞಾನವು, ನಿಯಮ=ಪ್ರೇರಣೆಯು, ಆವೃತಿ=ಆವರಣವಾದ ಅವಿದ್ಯೆಯು, ಬಂಧ=ಸಂಸಾರವು, ಮೋಕ್ಷಾಃ=ಮುಕ್ತಿಯೂ ಇವುಗಳು, ಭವಂತಿ=ಆಗುತ್ತವೋ, ಸಾ=ಆ, ಊರ್ಜಿತಾ=ಬ್ರಹ್ಮಾದಿಗಳಿಂದಲೂ ಅತ್ಯುತ್ತಮಳಾದ, ಶ್ರೀಃ =ಲಕ್ಷ್ಮೀದೇವಿಯು, ಯತ್ =ಯಾವ ಶ್ರೀಹರಿಯ, ಕಟಾಕ್ಷ=ಕೃಪಾಯುಕ್ತವಾದ ಕಡೆಗಣ್ಣಿನ ನೋಟದಿಂದ, ಬಲವತೀ=ಸಾಮರ್ಥ್ಯವುಳ್ಳವಳೋ, ತಂ=ಆ, ಅಜಿತಂ=ಯಾರಿಂದಲೂ ಜಯಿಸಲ್ಪಡದಿರುವ ಶ್ರೀವಿಷ್ಣುವನ್ನು, ನಮಾಮಿ=ನಮಸ್ಕರಿಸುತ್ತೇನೆ. ॥ 1 ॥

**ಮೂಲ ॥ ಬ್ರಹ್ಮೇಶ ಶಕ್ರ ರವಿ ಧರ್ಮ ಶಶಾಂಕಪೂರ್ವ**
**ಗೀರ್ವಾಣಸಂತತಿರಿಯಂ ಯದಪಾಂಗಲೇಶಂ ।**
**ಆಶ್ರಿತ್ಯ ವಿಶ್ವವಿಜಯಂ ವಿಸೃಜ(ದಧಾ)ತ್ಯಚಿಂತ್ಯಾ**
**ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥ ೨ ॥**

**ಅರ್ಥ ॥** ಇಯಂ=ಈ, ಬ್ರಹ್ಮಾ=ಚತುರ್ಮುಖನು, ಈಶ=ರುದ್ರನು, ಶಕ್ರ=ದೇವೇಂದ್ರನು, ರವಿ= ಸೂರ್ಯನು, ಧರ್ಮ=ಯಮನು, ಶಶಾಂಕ=ಚಂದ್ರನು ಇವರೇ, ಪೂರ್ವ=ಮೊದಲಾಗಿ ಉಳ್ಳ, ಗೀರ್ವಾಣ=ವಚನವೇ ಬಾಣವಾಗಿ ಉಳ್ಳ ದೇವತೆಗಳ, ಸಂತತಿಃ=ಸಮುದಾಯವು, ಯತ್=ಯಾವ ಲಕ್ಷ್ಮೀದೇವಿಯ, ಅಪಾಂಗಲೇಶ=ಕೃಪಾಯುಕ್ತವಾದ ನೋಡುವಿಕೆಯ ಏಕದೇಶವನ್ನು, ಆಶ್ರಿತ್ಯ= ಆಶ್ರಯಿಸಿ, ವಿಶ್ವವಿಜಯಂ=ಸರ್ವಪ್ರಪಂಚಕ್ಕೆ ಅಭ್ಯುದಯವನ್ನು, ವಿಸೃಜತಿ=ಅವರವರ ಯೋಗ್ಯತಾನುಸಾರವಾಗಿ ಅನೇಕ ಪ್ರಕಾರ ಮಾಡುತ್ತದೆ, ಅಚಿಂತ್ಯಾ=ಸಂಪೂರ್ಣವಾಗಿ ಆಲೋಚಿಸಲಿಕ್ಕೆ ಅಶಕ್ಯವಾದ ಐಶ್ವರ್ಯವುಳ್ಳ, ಶ್ರೀಃ=ಲಕ್ಷ್ಮೀದೇವಿಯು, ಯತ್=ಯಾವ ಶ್ರೀಹರಿಯ, ಕಟಾಕ್ಷ=ಕಡೆಗಣ್ಣಿನ ನೋಟದಿಂದ, ಬಲವತೀ=ಐಶ್ವರ್ಯವುಳ್ಳವಳೋ, ತಂ=ಆ, ಅಜಿತಂ=ನಾರಾಯಣನನ್ನು, ನಮಾಮಿ= ನಮಸ್ಕರಿಸುತ್ತೇನೆ.॥ 2 ॥

**ಮೂಲ ॥ ಧರ್ಮಾರ್ಥ ಕಾಮ ಸುಮತಿ ಪ್ರಚಯಾದ್ಯಶೇಷ**
**ಸನ್ಮಂಗಲಂ ವಿದಧತೇ ಯದಪಾಂಗಲೇಶಂ ।**
**ಆಶ್ರಿತ್ಯ ತತ್ಪ್ರಣತಸತ್ಪ್ರಣತಾ ಅಪೀಡ್ಯ**
**ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥ ೩ ॥**

**ಅರ್ಥ ॥** ಯದಪಾಂಗಲೇಶಂ=ಯಾವ ಲಕ್ಷ್ಮೀದೇವಿಯ ಕೃಪಾಯುಕ್ತವಾದ ಈಕ್ಷಣೈಕ ದೇಶವನ್ನು, ಆಶ್ರಿತ್ಯ=ಆಶ್ರಯಿಸಿ, ತತ್ಪ್ರಣತಸತ್ಪ್ರಣತಾ ಅಪಿ ತತ್=ಆ ಧರ್ಮಾದಿಗಳಲ್ಲಿ, ಪ್ರಣತ=ಆಸಕ್ತರಾದ, ಸತ್=ಸಜ್ಜನರಿಂದ, ಪ್ರಣತಾ ಅಪಿ=ನಮಸ್ಕರಿಸಲ್ಪಟ್ಟ ದೇವೇಂದ್ರನೇ ಮೊದಲಾದವರೂ ಕೂಡ, ಧರ್ಮಾರ್ಥ ಕಾಮ ಸುಮತಿ ಪ್ರಚಯಾದ್ಯಶೇಷಸನ್ಮಂಗಲಂ, ಧರ್ಮ=ಸುಕೃತವು, ಅರ್ಥ=ಸರ್ವರಿಂದಲೂ ಪ್ರಾರ್ಥಿಸಲ್ಪಡತಕ್ಕ ಧನಾದಿಯೂ, ಕಾಮ= ಅಭಿಲಾಷೆಯು, ಸುಮತಿ=ಯಥಾರ್ಥಜ್ಞಾನವೂ ಇವುಗಳ, ಪ್ರಚಯ=ಅಭಿವೃದ್ಧಿಯೇ, ಆದಿ= ಮೊದಲಾಗಿವುಳ್ಳ, ಅಶೇಷ=ಸಮಸ್ತರಾದ, ಸತ್=ಸಜ್ಜನರಿಗೆ, ಮಂಗಲಂ=ಕಲ್ಯಾಣವನ್ನು, ವಿದಧತೇ= ಮಾಡುತ್ತಾರೋ, ಈಡ್ಯ=ಸ್ತುತಿಯೋಗ್ಯನಾದ ಶ್ರೀಹರಿಯೇ, ಶ್ರೀಃ=ಆ ಲಕ್ಷ್ಮೀದೇವಿಯು, 'ಯತ್ಕಟಾಕ್ಷ ಬಲವತೀ ಅಜಿತಂ ನಮಾಮಿ' (ಹಿಂದಿನಂತೆ ಅರ್ಥವು.) ॥ 3 ॥

**ಮೂಲ ॥ ಷಡ್ವರ್ಗ ನಿಗ್ರಹ ನಿರಸ್ಯ ಸಮಸ್ತ ದೋಷಾ**
**ಧ್ಯಾಯಂತಿ ವಿಷ್ಣುಮೃಷಯೋ ಯದಪಾಂಗಲೇಶಂ ।**
**ಆಶ್ರಿತ್ಯ ಯಾನಪಿ ಸಮೇತ್ಯ ನ ಯಾತಿ ದುಃಖಂ**
**ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥ ೪ ॥**

**ಅರ್ಥ ॥** ಯಾನಪಿ=ಯಾವ ಋಷಿಗಳನ್ನೂ ಕೂಡ, ಸಮೇತ್ಯ=ಪ್ರಾಪಿಸಿ, ನರಃ=ಮನುಷ್ಯನು,

ದುಃಖಂ=ಪೀಡೆಯನ್ನು, ನ ಯಾತಿ=ಹೊಂದುವುದಿಲ್ಲವೋ (ಅವರು ಧ್ಯಾನಿಸತಕ್ಕ ದೇವೋತ್ತಮನಾದ ಶ್ರೀಹರಿಯನ್ನು ಹೊಂದಿದರೆ ದುಃಖವಿಲ್ಲವೆಂದು ಸುತರಾಂ ಸಿದ್ಧವಾಯಿತು. ಈ ಅರ್ಥವು 'ಅಪಿ' ಶಬ್ದದಿಂದ ಸಿಗುತ್ತದೆ.) ತೇ=ಆ, ಋಷಯಃ= ಋಷಿಗಳು, ಷಟ್=ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳ, ವರ್ಗ=ಸಮುದಾಯದ, ನಿಗ್ರಹ=ಜಯದಿಂದ, ನಿರಸ್ತ=ಜಯಿಸಲ್ಪಟ್ಟ, ಸಮಸ್ತ= ನಿಖಿಲಗಳಾದ, ದೋಷಾಃ=ದೋಷಗಳುಳ್ಳವರಾಗಿ, ಯದಪಾಂಗಲೇಶಂ=ಯಾವ ಲಕ್ಷ್ಮೀದೇವಿಯ ಕಟಾಕ್ಷೈಕದೇಶವನ್ನು, ಆಶ್ರಿತ್ಯ=ಆಶ್ರಯಿಸಿ, ವಿಷ್ಣುಂ=ನಾರಾಯಣನನ್ನು, ಧ್ಯಾಯಂತಿ=ಭಜಿಸುತ್ತಾರೋ, ಸಾ=ಆ, ಶ್ರೀಃ=ಲಕ್ಷ್ಮೀದೇವಿಯು, ಯತ್ಕಟಾಕ್ಷಬಲವತೀ ತಂ ಅಜಿತಂ ನಮಾಮಿ (ಹಿಂದಿನಂತೆ ಅರ್ಥವು). ॥ 4 ॥

**ಮೂಲ ॥ ಶೇಷಾಹಿವೈರಿ ಶಿವ ಶಕ್ರ ಮನು ಪ್ರಧಾನ**
**ಚಿತ್ರೋರು ಕರ್ಮರಚನಂ ಯದಪಾಂಗಲೇಶಂ ।**
**ಆಶ್ರಿತ್ಯ ವಿಶ್ವಮಖಿಲಂ ವಿದಧಾತಿ ಧಾತಾ**
**ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥ ೫ ॥**

**ಅರ್ಥ ॥** ಧಾತಾ=ಬ್ರಹ್ಮನು, ಯದಪಾಂಗಲೇಶಂ=ಯಾವ ಲಕ್ಷ್ಮೀದೇವಿಯ ಕಟಾಕ್ಷಲೇಶವನ್ನು, ಆಶ್ರಿತ್ಯ=ಆಶ್ರಯಿಸಿ, ಶೇಷಾಹಿವೈರಿ ಶಿವ ಶಕ್ರ ಮನು ಪ್ರಧಾನ ಚಿತ್ರೋರುಕರ್ಮರಚನಂ, ಶೇಷ=ನಾಗೇಂದ್ರನು, ಅಹಿವೈರಿ=ಸರ್ಪಗಳಿಗೆ ಶತ್ರುವಾದ ಗರುಡನು, ಶಿವ=ರುದ್ರನು, ಶಕ್ರ=ಇಂದ್ರನು, ಮನು=ಸ್ವಾಯಂಭುವಾದಿ ಮನುಗಳೂ ಇವರೇ, ಪ್ರಧಾನ=ಮುಖ್ಯರಾಗಿವುಳ್ಳ ದೇವತೆಗಳ, ಚಿತ್ರ=ವಿಚಿತ್ರಗಳಾದ, ಉರು=ಅನೇಕಗಳಾದ, ಕರ್ಮರಚನಂ=ಕೃತ್ಯನಿರ್ಮಾಣಗಳುಳ್ಳ, ಅಖಿಲಂ= ಸಮಸ್ತವಾದ, ವಿಶ್ವಂ=ಪ್ರಪಂಚವನ್ನು,ವಿದಧಾತಿ=ಸೃಷ್ಟಿಸುತ್ತಾನೆ. ಸಾ ಶ್ರೀಃಯತ್ಕಟಾಕ್ಷ ಬಲವತೀ ತಂ ಅಜಿತಂ ನಮಾಮಿ (ಹಿಂದಿನಂತೆ ಅರ್ಥವು). ॥ 5 ॥

**ಮೂಲ ॥ ಶಕ್ರೋಗ್ರದೀಧಿತಿ ಹಿಮಾಕರ ಸೂರ್ಯಸೂನು**
**ಪೂರ್ವಂ ನಿಹತ್ಯ ನಿಖಿಲಂ ಯದಪಾಂಗಲೇಶಂ ।**
**ಆಶ್ರಿತ್ಯ ನೃತ್ಯತಿ ಶಿವಃ ಪ್ರಕಟೋರುಶಕ್ತಿಃ**
**ಶ್ರೀರ್ಯಕಟಾಕ್ಷ ಬಲವತ್ಯಜಿತಂ ನಮಾಮಿ ॥ ೬ ॥**

**ಅರ್ಥ ॥** ಶಿವಃ=ರುದ್ರನು, ಯದಪಾಂಗಲೇಶಂ=ಯಾವ ಲಕ್ಷ್ಮೀದೇವಿಯರ ವೀಕ್ಷಣೈಕದೇಶ ವನ್ನು, ಆಶ್ರಿತ್ಯ=ಆಶ್ರಯಿಸಿ, ಪ್ರಕಟ=ಪ್ರಕಾಶಿಸಲ್ಪಟ್ಟ, ಉರು=ಬಹಳಗಳಾದ, ಶಕ್ತಿಃ=ಸಾಮರ್ಥ್ಯ ಗಳುಳ್ಳವನಾಗಿ, ಶಕ್ರ=ದೇವೇಂದ್ರನು, ಉಗ್ರದೀಧಿತಿ=ಕ್ರೂರಗಳಾದ ಕಿರಣಗಳುಳ್ಳ ಸೂರ್ಯನು, ಹಿಮಾಕರ=ಅತಿಶೀತಲಗಳಾದ ಕಿರಣಗಳುಳ್ಳ ಚಂದ್ರನು, ಸೂರ್ಯಸೂನು=ಸೂರ್ಯನ ಪುತ್ರನಾದ ಯಮನೂ ಇವರೇ, ಪೂರ್ವ=ಮೊದಲಾಗಿವುಳ್ಳ, ನಿಖಿಲಂ=ಸಮಸ್ತ ಜಗತ್ತನ್ನು, ನಿಹತ್ಯ= ಸಂಹರಿಸಿ, ನೃತ್ಯತಿ=ನರ್ತನಮಾಡುತ್ತಿರುವನೋ, ಸಾ ಶ್ರೀಃ ಯತ್ಕಟಾಕ್ಷಬಲವತೀ ತಂ ಅಜಿತಂ ನಮಾಮಿ (ಹಿಂದಿನಂತೆ ಅರ್ಥವು) ॥ 6 ॥

**ಮೂಲ ॥ ತತ್ಪಾದಪಂಕಜ ಮಹಾಸನತಾಮವಾಪ**
**ಶರ್ವಾದಿ ವಂದ್ಯ ಚರಣೋ ಯದಪಾಂಗಲೇಶಂ ।**
**ಆಶ್ರಿತ್ಯ ನಾಗಪತಿರನ್ಯಸುರೈರ್ದುರಾಪಾಂ**
**ಶ್ರೀರ್ಯತ್ಕಟಾಕ್ಷ ಬಲವತ್ಯರ್ಜಿತಂ ನಮಾಮಿ ॥ ೭ ॥**

**ಅರ್ಥ ॥** ಶರ್ವ=ರುದ್ರನೇ, ಆದಿ=ಮೊದಲಾದ ದೇವತೆಗಳಿಂದ, ವಂದ್ಯ=ನಮಸ್ಕರಿಸಲ್ಪಡತಕ್ಕ, ಚರಣಃ=ಪಾದಗಳುಳ್ಳ, ನಾಗಪತಿಃ=ಶೇಷದೇವರು, ಯದಪಾಂಗಲೇಶಂ=ಯಾವ ಲಕ್ಷ್ಮೀದೇವಿಯರ ಕಟಾಕ್ಷಲೇಶದ ಬಲವನ್ನು, ಆಶ್ರಿತ್ಯ=ಆಶ್ರಯಿಸಿ, ಅನ್ಯಸುರೈಃ=ಇತರರಾದ ಇಂದ್ರಾದಿದೇವತೆಗಳಿಂದ, ದುರಾಪಾಂ=ಹೊಂದಲಸಾಧ್ಯವಾದ, ತತ್=ಆ ಶ್ರೀಪತಿಯ, ಪಾದಪಂಕಜ=ಕಮಲದಂತಿರುವ ಚರಣಗಳ, ಮಹಾಸನತಾಂ=ಶ್ರೇಷ್ಠವಾದ ಶಯ್ಯಾತ್ಮಕತ್ವವನ್ನು, ಅವಾಪ=ಹೊಂದಿರುವನೋ, ಸಾ ಶ್ರೀಃ ಯತ್ಕಟಾಕ್ಷ ಬಲವತೀ ತಂ ಅಜಿತ್ಯಂ ನಮಾಮಿ (ಹಿಂದಿನಂತೆ ಅರ್ಥವು) ॥ 7 ॥

**ಮೂಲ ॥ ನಾಗಾರಿರುಗ್ರಬಲಪೌರುಷ ಆಪ ವಿಷ್ಣೋ-**
**ರ್ವಾ(ಷ್ಣುವಾ) ಹತ್ವಮುತ್ತಮಜವೋ ಯದಪಾಂಗಲೇಶಂ ।**
**ಆಶ್ರಿತ್ಯ ಶಕ್ರಮುಖದೇವಗಣೈರಚಿಂತ್ಯಂ**
**ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥ ೮ ॥**

**ಅರ್ಥ ॥** ಉಗ್ರಬಲಪೌರುಷಃ, ಉಗ್ರ=ಭಯಂಕರಗಳಾದ, ಬಲ=ದೇಹಜಸಾಮರ್ಥ್ಯವು, ಪೌರುಷಃ=ಪರಾಕ್ರಮವೂ ಇವುಗಳುಳ್ಳ, ಉತ್ತಮಜವಃ=ಅತ್ಯಧಿಕವಾದ ವೇಗವುಳ್ಳ, ನಾಗಾರಿಃ=ಸರ್ಪಗಳಿಗೆ ಶತ್ರುವಾದ ಗರುಡನು, ಯದಪಾಂಗಲೇಶಂ=ಯಾವ ಲಕ್ಷ್ಮೀದೇವಿಯ ಅಲ್ಪವಾದ ಕಡೆಕಣ್ಣಿನ ನೋಟವನ್ನು, ಆಶ್ರಿತ್ಯ=ಆಶ್ರಯಿಸಿ, ಶಕ್ರ=ದೇವೇಂದ್ರನೇ, ಮುಖ=ಮೊದಲಾಗಿವುಳ್ಳ, ದೇವ=ದೇವತೆಗಳ, ಗಣೈಃ=ಸಮೂಹಗಳಿಂದ, ಅಚಿಂತ್ಯಂ=ಮನಸ್ಸಿನಿಂದಲೂ ಹೊಂದಲಸಾಧ್ಯವಾದ, ವಿಷ್ಣೋಃ=ಶ್ರೀನಾರಾಯಣನ, ವಾಹತ್ವಂ=ವಾಹನತನವನ್ನು, ಆಪ=ಹೊಂದಿರುವನೋ, ಸಾ=ಆ, ಶ್ರೀಃ=ಲಕ್ಷ್ಮೀದೇವಿಯು, ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ (ಹಿಂದಿನಂತೆ ಅರ್ಥವು) ॥ 8 ॥

**ಮೂಲ ॥ ಆನಂದತೀರ್ಥಮುನಿ ಸನ್ಮುಖ ಪಂಕಜೋತ್ಥಂ**
**ಸಾಕ್ಷಾದ್ರಮಾಹರಿಮನಃ ಪ್ರಿಯಮುತ್ತಮಾರ್ಥಂ ।**
**ಭಕ್ತ್ಯಾ ಪಠತ್ಯಜಿತಮಾತ್ಮನಿ ಸನ್ನಿಧಾಯ**
**ಯಃ ಸ್ತೋತ್ರಮೇತದಭಿ (ನು) ಯಾತಿ ತಯೋರಭೀಷ್ಟಂ ॥ ೯ ॥**

**ಅರ್ಥ ॥** ಯಃ=ಯಾವ ಪುರುಷನು, ಆನಂದತೀರ್ಥಮುನಿಸನ್ಮುಖಪಂಕಜೋತ್ಥಂ, ಆನಂದತೀರ್ಥಮುನಿ=ಆನಂದತೀರ್ಥರೆಂಬ ಮುನಿಗಳವರ, ಸತ್=ಸಮೀಚೀನವಾದ, ಮುಖಪಂಕಜ=ವದನಾರವಿಂದದಿಂದ, ಉತ್ಥಂ=ಉತ್ಪನ್ನವಾದ, ಸಾಕ್ಷಾತ್=ಮುಖ್ಯವಾಗಿ, ರಮಾಹರಿಮನಃಪ್ರಿಯಂ=ಲಕ್ಷ್ಮೀನಾರಾಯಣನ ಮನಸ್ಸಿಗೆ ತುಷ್ಟಿಯನ್ನು ಮಾಡತಕ್ಕ,

ಉತ್ತಮಾರ್ಥಂ=ಸಕಲ ಶ್ರುತಿಗಳಲ್ಲಿಯೂ ಗಾನಮಾಡಲ್ಪಡತಕ್ಕ ಸರ್ವೋತ್ತಮನಾದ ಶ್ರೀಹರಿಯೇ, ವಾಚ್ಯನಾಗಿವುಳ್ಳ, ಏತತ್=ಈ, ಸ್ತೋತ್ರಂ=ಸ್ತುತಿರೂಪವಾದ ಗ್ರಂಥರಚನವನ್ನು, ಅಜಿತಂ=ಶ್ರೀಹರಿಯನ್ನು, ಆತ್ಮನಿ=ಹೃದಯದಲ್ಲಿ, ಸನ್ನಿಧಾಯ=ಅನುಸಂಧಾನಮಾಡಿಕೊಂಡು, ಭಕ್ತ್ಯಾ=ಆದರದಿಂದ, ಪಠತಿ=ಅಧ್ಯಯನಮಾಡುತ್ತಾನೋ, ಸಃ=ಆತನು, ತಯೋಃ=ಆ ಲಕ್ಷ್ಮೀನಾರಾಯಣರ ಅನುಗ್ರಹದಿಂದ, ಅಭೀಷ್ಟಂ=ತನ್ನ ಇಷ್ಟವನ್ನು, ಅಭಿ (ನು)ಯಾತಿ=ಹೊಂದುತ್ತಾನೆ. ॥ 9 ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ
ದ್ವಾದಶಸ್ತೋತ್ರೇ ಸಪ್ತಮೋಽಧ್ಯಾಯಃ ॥ ೭ ॥

ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ
ದ್ವಾದಶಸ್ತೋತ್ರದಲ್ಲಿ ಏಳನೇ ಅಧ್ಯಾಯವು ಸಮಾಪ್ತವಾಯಿತು. ॥ ೭ ॥

## ಎಂಟನೇ ಅಧ್ಯಾಯವು

**ಮೂಲ ॥ ವಂದಿತಾಶೇಷವಂದ್ಯೋರು ವೃಂದಾರಕಂ**
**ಚಂದನಾಚರ್ಚಿತೋದಾರ ಪೀನಾಂಸಕಂ ।**
**ಇಂದಿರಾ ಚಂಚಲಾಪಾಂಗನೀರಾಜಿತಂ**
**ಮಂದರೋದ್ಧಾರಿ ವೃತ್ತೋದ್ಭುಜಾಭೋಗಿನಂ ।**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಂ ।**
**ಪ್ರೀಣಯಾಮೋ ವಾಸುದೇವಂ ॥ ೧ ॥**

**ಅರ್ಥ ॥** ವಂದಿತ=ನಮಸ್ಕಾರ ಮಾಡತಕ್ಕ, ಅಶೇಷವಂದ್ಯ=ಮನುಷ್ಯರೇ ಮೊದಲಾದವರಿಂದ ನಮಸ್ಕರಿಸಿಕೊಳ್ಳಲಿಕ್ಕೆ ಯೋಗ್ಯರಾದ, ಉರು=ಬಹಳರಾದ, ವೃಂದಾರಕ=ಬ್ರಹ್ಮಾದಿದೇವತೆಗಳುಳ್ಳ, (ಸರ್ವರಿಂದಲೂ ನಮಸ್ಕರಿಸಲ್ಪಡತಕ್ಕ ಎಲ್ಲಾ ದೇವತೆಗಳೂ ವಾಸುದೇವನಿಗೆ ನಮಸ್ಕರಿಸುತ್ತಿದ್ದಾರೆ) ಚಂದನ=ಶ್ರೀಗಂಧ ಮೊದಲಾದ ಅನುಲೇಪನ ದ್ರವ್ಯಗಳಿಂದ, ಆ=ಚೆನ್ನಾಗಿ, ಚರ್ಚಿತ=ಲೇಪಿಸಲ್ಪಟ್ಟ ಉದಾರ=ಉತ್ಕೃಷ್ಟಗಳಾದ, ಉನ್ನತಗಳಾದ, ಪೀನ=ಪುಷ್ಟಗಳಾದ, ಅಂಸಕಂ=ಭುಜ ಶಿರಸ್ಸುಗಳುಳ್ಳ, ಇಂದಿರಾ=ಲಕ್ಷ್ಮೀದೇವಿಯಿಂದ, ಚಂಚಲ=ಚಲಿಸತಕ್ಕ, ಅಪಾಂಗ=ನೇತ್ರಪ್ರಾಂತಗಳಿಂದ, ನೀರಾಜಿತಂ=ಮಾಡಲ್ಪಟ್ಟ ನೀರಾಂಜನದಂತಿರುವ, (ಲಕ್ಷ್ಮೀದೇವಿಯರಿಂದ ಯಾವಾಗಲೂ ಪ್ರೇಮಪೂರ್ವಕವಾಗಿ ಕಾಣಲ್ಪಡುವ,) ಮಂದರ=ತುಚ್ಛಗಳಾದ ವಿಷಯಗಳಲ್ಲಿ ಆಸಕ್ತರಾದ ಜನರ ಸಮುದಾಯವನ್ನು, ಉದ್ಧಾರಿ=ಸಂಸಾರದಿಂದುದ್ಧರಿಸುವ ಸ್ವಭಾವವುಳ್ಳ ಅಥವಾ, ಮಂದರ=ಮಂದರಪರ್ವತಗಳನ್ನು, ಉದ್ಧಾರಿ=ಗರುಡನಲ್ಲಿ ಸ್ಥಾಪಿಸುವುದಕ್ಕಾಗಿ ಉಚ್ಚರಿಸುವ ಶೀಲವುಳ್ಳ, ವೃತ್ತ=ವರ್ತುಲಗಳಾದ, ಉದ್ಭುಜಾಭೋಗಿನಂ=ಉತ್ಕೃಷ್ಟ ಭುಜದಂಡ ಸಮೂಹಕ್ಕೆ, ಅಖಂಡ=ನಿರವಧಿಕವಾದ, ಮಂಡನಂ=ಅಲಂಕಾರ ಭೂತನಾದ, (ಸಂಪೂರ್ಣ ಅಲಂಕಾರದಂತೆ ಆಚರಿಸುವ,) ವಾಸುದೇವಂ=ಶ್ರೀಕೃಷ್ಣನನ್ನು,

ಆನಂದದೇವೇ=ಆನಂದದಿಂದಲೇ ಕ್ರೀಡಿಸುತ್ತಿರುವ ಶ್ರೀಹರಿಯಲ್ಲಿ ಅಥವಾ ಆನಂದರೂಪಿಯಾದ ದೇವನಲ್ಲಿ, ಮತಿಂ=ಮನೋವೃತ್ತಿಯನ್ನು, ಸಂದಧಾನಾಃ=ಚೆನ್ನಾಗಿ ಧರಿಸಿದ, ನಂದಿನಃ=ಆನಂದವುಳ್ಳ, (ಆನಂದಭರಿತರಾದ) ನಂದತೀರ್ಥೋರುಸನ್ನಾಮಿನಃ, ನಂದ=ಆನಂದಕ್ಕೆ ಕಾರಣವಾದ, ತೀರ್ಥ= ಸಜ್ಜನರಿಗೆ ತಾರಕವಾದ, ಉರು=ಶ್ರೇಷ್ಠವಾದ, ಸತ್=ಅಪ್ರಾಮಾಣಿಕತ್ವಾದಿ ದೋಷರಹಿತವಾದ, ನಾಮಿನಃ=ಹೆಸರುಳ್ಳ ಅಥವಾ ನಂದಿತೀರ್ಥ=ಆನಂದಕ್ಕೆ ಕಾರಣವಾದ ಭಗವತ್ಪ್ರತಿಪಾದಕಶಾಸ್ತ್ರದಲ್ಲಿ, ಉರು=ಬಹಳವಾದ, ಸತ್=ಸಜ್ಜನರನ್ನು, ನಾಮಿನಃ=ಚೆನ್ನಾಗಿ ಬಗ್ಗಿದವರನ್ನಾಗಿ ಮಾಡುವ ಸ್ವಭಾವವುಳ್ಳ, ಅಥವಾ ನಂದಿತೀರ್ಥ=ಆನಂದವನ್ನು ಕೊಡುವ ಶಾಸ್ತ್ರವುಳ್ಳ ಪೂರ್ಣಪ್ರಜ್ಞರೆಂಬ, ಉರು= ಉತ್ಕೃಷ್ಟವಾದ, ಸತ್=ನಿರ್ದುಷ್ಟವಾದ, ನಾಮಿನಃ=ಹೆಸರುಳ್ಳ, ವಯಂ=ನಾವು, ಪ್ರೀಣಯಾಮಃ= ಸಂತೋಷಿಸುತ್ತೇವೆ, ವಾಸುದೇವಂ ಪ್ರೀಣಯಾಮಃ। 1 ॥

**ಮೂಲ ॥ ಸೃಷ್ಟಿ ಸಂಹಾರ ಲೀಲಾ ವಿಲಾಸಾತತಂ**
**ಪುಷ್ಟಷಾಡ್ಗುಣ್ಯ ಸದ್ವಿಗ್ರಹೋಲ್ಲಾಸಿನಂ ।**
**ದುಷ್ಟನಿಃಶೇಷ ಸಂಹಾರ ಕರ್ಮೋದ್ಯತಂ**
**ಹೃಷ್ಟಪುಷ್ಟಾತಿಶಿಷ್ಟ ಪ್ರಜಾ ಸಂಶ್ರಯಂ ।**
**ಪ್ರೀಣಯಾಮೋ ವಾಸುದೇವಂ ದೇವತಾಮಂಡಲಾಖಂಡಮಂಡನಂ**
**ಪ್ರೀಣಯಾಮೋ ವಾಸುದೇವಂ ॥ ೨ ॥**

**ಅರ್ಥ ॥** ನಂದಿತೀರ್ಥೋರುಸನ್ನಾಮಿನಃ=ಪೂರ್ಣಪ್ರಜ್ಞರೆಂದು ಹೆಸರುಳ್ಳ, ವಯಂ=ನಾವು, ಸೃಷ್ಟಿ ಸಂಹಾರಲೀಲಾವಿಲಾಸಾತತಂ, ಸೃಷ್ಟಿ=ಜಗತ್ತಿನ ಸೃಷ್ಟಿಯೂ, ಸಂಹಾರ=ಸಂಹಾರವೂ (ಸೃಷ್ಟ್ಯಾದ್ಯಷ್ಟಕವ್ಯಾಪಾರರೂಪವಾದ) ಲೀಲಾ= ಕ್ರೀಡೆಯ, ವಿಲಾಸ=ವಿಸ್ತಾರದಿಂದ, ಆ=ಚೆನ್ನಾಗಿ, ತತಂ=ಪೂರ್ಣನಾದ, ಪುಷ್ಟ=ಪೂರ್ಣವಾದ, ಷಾಡ್ಗುಣ್ಯ=ಐಶ್ವರ್ಯಾದಿ ಆರು ಗುಣಗಳೆಂಬ, ಸತ್= ನಿರ್ದೋಷವಾದ, ವಿಗ್ರಹ=ಶರೀರದಿಂದ, ಉಲ್ಲಾಸಿನಂ=ಶೋಭಿಸತಕ್ಕ ಸ್ವಭಾವವಿರುವ, ದುಷ್ಟ=ದೈತ್ಯಾದಿಗಳ, ನಿಶ್ಶೇಷ=ಶೇಷವಿಲ್ಲದಿರುವ ಹಾಗೆ, ಸಂಹಾರಕರ್ಮ=ಸಂಹಾರರೂಪವಾದ ಕರ್ಮದಲ್ಲಿ, ಉದ್ಯತಂ=ಉದ್ಯುಕ್ತನಾದ, ಹೃಷ್ಟ=ಯದೃಚ್ಛಾಲಾಭದಿಂದ ಸಂತುಷ್ಟರಾದ, ಅಥವಾ ತಮ್ಮ ಮನೋರಥವು ಪೂರ್ತಿಯಾದುದರಿಂದ ಸಂತುಷ್ಟರಾದ, ಪುಷ್ಟ=ಜ್ಞಾನಭಕ್ತ್ಯಾದಿಗುಣಪೂರ್ಣರಾದ, ಶ್ರೀಹರಿಯಿಂದ ಪೋಷಿತರಾದ, ಅತಿಶಿಷ್ಟ=ಅತ್ಯಂತಶಿಕ್ಷಿತರಾದ, ಅತ್ಯಂತವಿಶಿಷ್ಟರಾದ, ಪ್ರಜಾ= ಪ್ರಜೆಗಳಿಗೆ, ಸಂಶ್ರಯಂ=ಆಧಾರಭೂತನಾದ, ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ ॥ 2 ॥

**ಮೂಲ ॥ ಉನ್ನತ ಪ್ರಾರ್ಥಿತಾಶೇಷಸಂಸಾಧಕಂ**
**ಸನ್ನತಾಲೌಕಿಕಾನಂದದ ಶ್ರೀಪದಂ ।**
**ಭಿನ್ನಕರ್ಮಾಶಯ ಪ್ರಾಣಿ ಸಂಪ್ರೇರಕಂ**
**ತನ್ನ ಕಿಂನೇತಿ ವಿದ್ವತ್ಸು ಮೀಮಾಂಸಿತಂ ।**
**ಪ್ರೀಣಯಾಮೋ ವಾಸುದೇವಂ**

**ದೇವತಾಮಂಡಲಾಖಂಡಮಂಡನಂ ।**
**ಪ್ರೀಣಯಾಮೋ ವಾಸುದೇವಂ ॥ ೩ ॥**

**ಅರ್ಥ ॥** 'ನಂದತೀರ್ಥೋರು ಸನ್ನಾಮಿನಃ ವಯಂ' (ಈ ಅಧ್ಯಾಯದ ಪ್ರತಿಶ್ಲೋಕಗಳಲ್ಲಿಯೂ ಇಟ್ಟುಕೊಳ್ಳಬೇಕು) ಉನ್ನತ ಪಾರ್ಥಿತಾಶೇಷಸಂಸಾಧಕಂ, ಉನ್ನತ=ಉತ್ತಮರಾದ ಧ್ರುವಾದಿ ಭಕ್ತರಿಂದ, ಪ್ರಾರ್ಥಿತ=ಬೇಡಲ್ಪಟ್ಟ ಅಶೇಷ=ಸರ್ವಾಭೀಷ್ಟವನ್ನು, ಸಂಸಾಧಕಂ=ಪೂರಯಿಸಿ ಕೊಡತಕ್ಕ, ಸನ್ನತ=ಚೆನ್ನಾಗಿ ನಮ್ರೀಭೂತರಾದ, ಭಕ್ತರಿಗೋಸ್ಕರ, ಅಲೌಕಿಕಾನಂದದ= ಲೋಕವಿಲಕ್ಷಣವಾದ ಸ್ವರೂಪಾನಂದವನ್ನು ಪ್ರಾಪಿಸಿಕೊಡುವ, ಶ್ರೀಪದಂ=ಲಕ್ಷ್ಮಿಯಿಂದೊಡಗೂಡಿದ ಪಾದಚರಣಗಳುಳ್ಳ, ಭಿನ್ನ= ಯೋಗ್ಯತಾಭೇದದಿಂದ ಅನೇಕವಿಧಗಳಾದ, ಕರ್ಮ=ಯಾಗಾದಿ ಕ್ರಿಯೆಗಳು, ಆಶಯಃ= ಅಂತಃಕರಣಗಳೂ ಇವುಗಳುಳ್ಳ, ಪ್ರಾಣಿ=ಜೀವರಿಗೆ, ಸಂಪ್ರೇರಕಂ=ಅವರವರ ಯೋಗ್ಯತಾನುಸಾರವಾಗಿ ಪ್ರೇರಿಸುವ, ವಿದ್ವತ್ತು=ವೇದಾರ್ಥ ವಿಚಾರ ಕುಶಲರಾದವರಲ್ಲಿ, ತತ್=ಆ ಪರಬ್ರಹ್ಮನು, ನ ಕಿಂ=ಇಲ್ಲವೇನು, ನಾಸ್ತೀತಿ ಯತ್ ತನ್ನ= ಇಲ್ಲವೆನ್ನುವುದು ಯಾವುದೋ ಅದು ಅಲ್ಲ, ಇದ್ದೇ ಇದ್ದಾನೆ, ಇತಿ=ಈ ಪ್ರಕಾರ, ಮೀಮಾಂಸಿತಂ= 'ಅಸನ್ನೇವ ಸ ಭವತಿ' ಇತ್ಯಾದಿ ಶ್ರುತಿಗಳಲ್ಲಿ ವಿಚಾರಿಸಲ್ಪಟ್ಟ, ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ. ॥ 3 ॥

**ಮೂಲ ॥ ವಿಪ್ರಮುಖ್ಯೈಃ ಸದಾ ವೇದವಾದೋನ್ಮುಖೈಃ**
**ಸುಪ್ರತಾಪೈಃ ಕ್ಷಿತೀಶೇಶ್ವರೈಶ್ಚಾರ್ಚಿತಂ ।**
**ಅ ಪ್ರತರ್ಕ್ಯೋರುಸಂವಿದ್ಗುಣಂ ನಿರ್ಮಲಂ**
**ಸಪ್ರಕಾಶಾಜರಾನಂದರೂಪಂ ಪರಂ ।**
**ಪ್ರೀಣಯಾಮೋ ವಾಸುದೇವಂ ದೇವತಾಮಂಡಲಾಖಂಡಮಂಡನಂ**
**ಪ್ರೀಣಯಾಮೋ ವಾಸುದೇವಂ ॥ ೪ ॥**

**ಅರ್ಥ ॥** ನಂದಿತೀರ್ಥೋರುಸನ್ನಾಮಿನಃ, ವಯಂ, - ಸದಾ= ಯಾವಾಗಲೂ, ವೇದ= ಋಗಾದಿವೇದಗಳ, ವಾದ=ಅಧ್ಯಯನ ವೇದಾರ್ಥವಿಚಾರಗಳಲ್ಲಿ, ಉನ್ಮುಖೈಃ=ಉದ್ಯುಕ್ತರಾದ, ವಿಪ್ರಮುಖ್ಯೈಃ=ಬ್ರಾಹ್ಮಣೋತ್ತಮರಾದ ವಸಿಷ್ಠಾದಿಗಳಿಂದ, ಸುಪ್ರತಾಪೈಃ=ಚೆನ್ನಾಗಿ ಪರಾಕ್ರಮವುಳ್ಳ, ಕ್ಷಿತೀಶೇಶ್ವರೈಶ್ಚ=ರಾಜರಿಗೂ ನಿಯಾಮಕರಾದ ಚಕ್ರವರ್ತಿಗಳಿಂದಲೂ, (ಪ್ರಿಯವ್ರತಾದಿಗಳಿಂದಲೂ,) ಅರ್ಚಿತಂ=ಸೇವಿಸಲ್ಪಟ್ಟ (ಇದರಿಂದ ವೇದಗಳಲ್ಲಿ ಹೇಳಿದ ವರ್ಣಾಶ್ರಮಗಳಿಗೆ ಉಚಿತವಾದ ಎಲ್ಲಾ ಕರ್ಮಗಳನ್ನು ಭಗವಂತನ ಆರಾಧನಕ್ಕಾಗಿಯೇ ಮಾಡಬೇಕೆಂದು ಉಕ್ತವಾಯಿತು.) ಅಪ್ರತರ್ಕ್ಯೋರುಸಂವಿದ್ಗುಣಂ, ಅಪ್ರತರ್ಕ್ಯ=ಸಂಪೂರ್ಣ ಊಹಿಸಲಿಕ್ಕೆ ಅಶಕ್ಯಗಳಾದ, ಉರು= ಮಹತ್ತಾದ, ಸಂವಿದ್ಗುಣಂ=ಜ್ಞಾನಾನಂದಾದಿಗುಣಗಳುಳ್ಳ, ನಿರ್ಮಲಂ=ಜನ್ಮಾದಿ ದೋಷವಿರಹಿತನಾದ, ಸಪ್ರಕಾಶಾಜರಾನಂದರೂಪಂ, ಸಪ್ರಕಾಶ=ಜ್ಞಾನದಿಂದೊಡಗೂಡಿದ, ಅಜರ=ಮುದಿತನ ಮೊದಲಾದ ವಿಕಾರಗಳಿಲ್ಲದಿರುವ, ಆನಂದರೂಪಂ=ಆನಂದಾತ್ಮಕ ಶರೀರವುಳ್ಳ, ಪರಂ= ಚೇತನಾಚೇತನಗಳಿಂದ ವಿಲಕ್ಷಣನಾದ, 'ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ - ॥ 4 ॥

**ಮೂಲ ॥ ಅತ್ಯಯೋ ಯಸ್ಯ ಕೇನಾಪಿ ನ ಕ್ವಾಪಿ ಹಿ**
**ಪ್ರತ್ಯಯೋ ಯದ್ಗುಣೇಷೂತ್ತಮಾನಾಂ ಪರಃ ।**
**ಸತ್ಯಸಂಕಲ್ಪ ಏಕೋ ವರೇಣ್ಯೋ ವಶೀ**
**ಮತ್ಯನೂನ್ಯೈಃ ಸದಾ ವೇದವಾದೋದಿತಃ ।**
**ಪ್ರೀಣಯಾಮೋ...... ವಾಸುದೇವಂ ॥ ೫ ॥**

**ಅರ್ಥ ॥** ವಯಂ=ನಾವು, ಯಸ್ಯ=ಯಾವ ವಿಷ್ಣುವಿನ, ಅತ್ಯಯಃ=ಅತಿಕ್ರಮವು, ಕ್ವಾಪಿ=ಯಾವ ದೇಶಕಾಲಗಳಲ್ಲಿಯೂ, ಕೇನಾಪಿ=ಯಾರಿಂದಲೂ (ದೇವಾದಿಗಳಲ್ಲೊಬ್ಬನಿಂದಲೂ,) ನ= ಮಾಡಲ್ಪಡಲಿಲ್ಲ, ಮಾಡಲ್ಪಡುವುದಿಲ್ಲ, ಹಿ=''ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ'' ಇದು ಮೊದಲಾದ ಪ್ರಮಾಣಗಳಲ್ಲಿ ಪ್ರಸಿದ್ಧವು. ಉತ್ತಮಾನಾಂ=ಸಾಧುಗಳಿಗೆ. ಯದ್ಗುಣೇಷು=ಯಾವ ಶ್ರೀಹರಿಯ ಗುಣಗಳಲ್ಲಿ, ಪರಃ=ಅಧಿಕವಾದ, ಪ್ರತ್ಯಯಃ=ವಿಶ್ವಾಸವು, ಅಸ್ತಿ=ಇದೆ, ಯಃ=ಯಾವಾತನು, ಸತ್ಯಸಂಕಲ್ಪಃ=ಅಬಾಧಿತವಾದ ಇಚ್ಛೆಯುಳ್ಳವನೋ, ಏಕಃ=ಸರ್ವ ಜೀವ ಜಡಗಳಿಂದ ಪ್ರಧಾನನೋ, ವರೇಣ್ಯಃ=ಗುಣಗಳಿಂದ ಶ್ರೇಷ್ಠನೋ, ವಶೀ=ಸ್ವತಂತ್ರನೋ, ಮತ್ಯನೂನ್ಯೈಃ=ಜ್ಞಾನಾಧಿಕರಾದ ಪುರುಷ ರಿಂದ, ಸದಾ=ಯಾವಾಗಲೂ, ವೇದವಾದ=ವೇದವಾಕ್ಯಗಳಿಂದ, ಉದಿತಃ=ಹೇಳಲ್ಪಟ್ಟ ಮಾಹಾತ್ಮ್ಯ ಗಳುಳ್ಳವನೆಂದು ಪ್ರತಿಪಾದಿಸಲ್ಪಟ್ಟಿದ್ದಾನೋ, ಅಥವಾ ವೇದಾರ್ಥ ವಿಚಾರಗಳಿಂದ ಸರ್ವೋತ್ತಮ ನೆಂದು ನಿಶ್ಚಯಿಸಲ್ಪಟ್ಟಿದ್ದಾನೋ, ತಂ ದೇವತಾ ಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ. ॥ 5 ॥

**ಮೂಲ ॥ ಪಶ್ಯತಾಂ ದುಃಖಸಂತಾನ ನಿರ್ಮೂಲನಂ**
**ದೃಶ್ಯತಾಂ ದೃಶ್ಯತಾಮಿತ್ಯಜೇಶಾರ್ಚಿತಂ ।**
**ನಶ್ಯತಾಂ ದೂರಗಂ ಸರ್ವದಾಪ್ಯಾತ್ಮಗಂ (ಕಂ)**
**ವಶ್ಯತಾಂ ಸ್ವೇಚ್ಛಯಾ ಸಜ್ಜನೇಷ್ವಾಗತಂ।**
**ಪ್ರೀಣಯಾಮೋ .... ವಾಸುದೇವಂ ॥ ೬ ॥**

**ಅರ್ಥ ॥** ವಯಂ=ನಾವು, ಪಶ್ಯತಾಂ=ಬ್ರಹ್ಮಾಪರೋಕ್ಷಜ್ಞಾನವುಳ್ಳವರಿಗೆ, ದುಃಖಸಂತಾನ ನಿರ್ಮೂಲಂ, ದುಃಖ=ಕ್ಲೇಶದ, ಸಂತಾನ=ಪ್ರವಾಹರೂಪವಾದ ಸಂಸಾರವನ್ನು, ನಿರ್ಮೂಲನಂ= ಮೂಲಸಹಿತವಾಗಿ ನಾಶಮಾಡುವ, (ಬ್ರಹ್ಮ=ಪರಬ್ರಹ್ಮನು, ಅಸ್ಮಾಭಿಃ=ನಮ್ಮಿಂದ) ದೃಶ್ಯತಾಂ ದೃಶ್ಯತಾಂ=ಕಾಣಲ್ಪಡಲಿ, ಕಾಣಲ್ಪಡಲಿ, ಇತಿ=ಈ ಪ್ರಕಾರ, ಅಜೇಶಾರ್ಚಿತಂ=ಬ್ರಹ್ಮರುದ್ರರಿಂದ ಪೂಜಿಸಲ್ಪಟ್ಟ, ನಶ್ಯತಾಂ=ಮಿಥ್ಯಾಜ್ಞಾನದಿಂದ ತಮಸ್ಸಿನಲ್ಲಿ ಬಿದ್ದು ಸ್ವರೂಪನಾಶವನ್ನು ಹೊಂದಿದ ಅಸುರರಿಗೆ, ದೂರಗಂ=ಅತಿದೂರದಲ್ಲಿರುವ, (ಯಥಾರ್ಥಜ್ಞಾನಿಗಳಿಗೆ) ಸರ್ವದಾಽಪಿ= ಯಾವಾಗಲೂ ಕೂಡ, ಆತ್ಮಗಂ=ಹೃದಯದಲ್ಲಿ ಸರ್ವಜೀವರಲ್ಲಿಯೂ ಅಂತರ್ಯಾಮಿಯಾಗಿ ಸನ್ನಿಹಿತನಾಗಿರುವ, ಸಜ್ಜನೇಷು=ಪಾಂಡವಾದಿಗಳಲ್ಲಿ, ಸ್ವೇಚ್ಛಯಾ=ತನ್ನ ಇಚ್ಛೆಯಿಂದ, ವಶ್ಯತಾಂ= ಅಧೀನತ್ವವನ್ನು, ಆಗತಂ=ಹೊಂದಿದ, ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ- ॥ 6 ॥

**ಮೂಲ ॥ ಅಗ್ರಜಂ ಯಃ ಸಸರ್ಜಾಜಮಗ್ರ್ಯಾಕೃತಿಂ**
**ವಿಗ್ರಹೋ ಯಸ್ಯ ಸರ್ವೇ ಗುಣಾ ಏವ ಹಿ ।**
**ಉಗ್ರ ಆದ್ಯೋऽಪಿ ಯಸ್ಯಾತ್ಮಜಾಗ್ರ್ಯಾತ್ಮಜಃ**
**ಸದ್ಗೃಹೀತಃ ಸದಾ ಯಃ ಪರಂ ದೈವತಂ ॥**
**ಪ್ರೀಣಯಾಮೋ .... ವಾಸುದೇವಂ ॥ ೭ ॥**

**ಅರ್ಥ ॥** ಯಃ=ಯಾವ ಹರಿಯು, ಅಗ್ರ್ಯಾಕೃತಿಂ, ಅಗ್ರ್ಯ=ಅಹಂಕಾರತತ್ವ ಮೊದಲಾದವುಗಳಿಗೆ ಹೇತುವಾದ ಪ್ರಯುಕ್ತ ಅಹಂಕಾರಾದಿಗಳಿಂದ ಶ್ರೇಷ್ಠವಾದ, ಆಕೃತಿಂ=ಮಹತ್ತತ್ವಾಖ್ಯ ಮೂರ್ತಿಯುಳ್ಳ, ಅಗ್ರಜಂ=ಸರ್ವ ವಸ್ತುಗಳಿಂದಲೂ ಪ್ರಥಮದಲ್ಲಿ ಹುಟ್ಟಿದ, ಅಜಂ=ಚತುರ್ಮುಖನನ್ನು, ಸಸರ್ಜ=ನಾಭಿಕಮಲದಿಂದ ಸೃಷ್ಟಿಸಿದನೋ, ಯಸ್ಯ=ಯಾವ ಶ್ರೀಹರಿಗೆ, ಸರ್ವೇ=ಸಮಸ್ತಗಳಾದ, ಗುಣಾ ಏವ=ಜ್ಞಾನಾನಂದಾದಿ ಗುಣಗಳೇ, ವಿಗ್ರಹಃ=ಶರೀರವೋ, ಹಿ=''ಜ್ಞಾನಾನಂದಾದಯೋ ದೇಹೋ ವಿಷ್ಣೋಃ'' ಇತ್ಯಾದಿ ಪ್ರಮಾಣಸಿದ್ಧವು. ಆದ್ಯೋऽಪಿ=ಆದಿಸೃಷ್ಟಿಯಲ್ಲಿ ಇಂದ್ರಾದಿಗಳ ದೆಶೆಯಿಂದ ಪ್ರಥಮದಲ್ಲಿ ಹುಟ್ಟಿದವನಾದಾಗ್ಯೂ, ಉಗ್ರಃ=ರುದ್ರನು, ಯಸ್ಯ=ಯಾವ ಶ್ರೀಹರಿಗೆ, ಆತ್ಮಜ=ಮಗನಾದ ಚತುರ್ಮುಖನ, ಅಗ್ರ್ಯ=ಶ್ರೇಷ್ಠನಾದ, ಆತ್ಮಜಃ=ಪುತ್ರನೋ, ಯಃ=ಯಾವ ಶ್ರೀಹರಿಯು, ಸದಾ=ಯಾವಾಗಲೂ, ಸದ್ಗೃಹೀತಾಃ, ಸತ್=ಬ್ರಹ್ಮಾದಿಗಳಿಂದ, ಗೃಹೀತಃ=ಸರ್ವೋತ್ತಮನಾಗಿಯೇ ಅಂಗೀಕರಿಸಲ್ಪಟ್ಟಿರುವನೋ, ಯಃ=ಯಾವಾತನು, ಪರಂ ದೈವತಂ=ಉತ್ಕೃಷ್ಟವಾದ ದೇವತೆಯೋ, ತಂ ದೇವತಾ ಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ.. ॥ 7 ॥

**ಮೂಲ ॥ ಅಚ್ಯುತೋ ಯೋ ಗುಣೈರ್ನಿತ್ಯಮೇವಾಖಿಲೈಃ**
**ಪ್ರಚ್ಯುತೋऽಶೇಷದೋಷೈಃ ಸದಾ ಪೂರ್ತಿತಃ ।**
**ಉಚ್ಯತೇ ಸರ್ವವೇದೋರುವಾದೈರಜಃ**
**ಸ್ವರ್ಚಿತೋ(ರ್ಚ್ಯತೇ) ಬ್ರಹ್ಮರುದ್ರೇಂದ್ರಪೂರ್ವೈಃ ಸದಾ ॥**
**ಪ್ರೀಣಯಾಮೋ ... ವಾಸುದೇವಂ ॥ ೮ ॥**

**ಅರ್ಥ ॥** ಯಃ=ಯಾವ ಶ್ರೀಹರಿಯು, ನಿತ್ಯ=ಯಾವಾಗಲೂ, ಅಖಿಲೈಃ=ಸಮಸ್ತಗಳಾದ, ಗುಣೈಃ=ಜ್ಞಾನಾನಂದಾದಿ ಗುಣಗಳಿಂದ, ಅಚ್ಯುತ ಏವ=ಬಿಡಲ್ಪಡದಿರುವವನೇ ಆಗಿರುವನೋ, (ಪರಿಪೂರ್ಣನೋ) ಸದಾ ಪೂರ್ತಿತಃ=ಸಮಸ್ತ ಕಲ್ಯಾಣಗುಣಗಳು ಪೂರ್ಣಗಳಾದುದರಿಂದಲೇ, ಅಶೇಷದೋಷೈಃ=ಅಸ್ವಾತಂತ್ರ್ಯ ಮೊದಲಾದ ಸರ್ವ ದೋಷಗಳಿಂದ, ಪ್ರಚ್ಯುತಃ=ಪರಿತ್ಯಕ್ತನೋ, ಅಜಃ=ಜನನಾದಿದೋಷವಿರಹಿತನೋ, ಸರ್ವವೇದೋರುವಾದೈಃ, ಸರ್ವ=ಸಮಸ್ತಗಳಾದ, ವೇದ=ಋಗಾದಿ ವೇದಗಳಲ್ಲಿರುವ, ಉರು=ಬಹಳಗಳಾದ, ವಾದೈಃ=ವಾಕ್ಯಗಳಿಂದ, ಉಚ್ಯತೇ=ಹೇಳಲ್ಪಡುತ್ತಾನೋ, ಪ್ರತಿಪಾದಿಸಲ್ಪಡುತ್ತಾನೋ, ಯಃ=ಯಾವ ಶ್ರೀಹರಿಯು, ಸದಾ=ಯಾವಾಗಲೂ, ಬ್ರಹ್ಮರುದ್ರೇಂದ್ರಪೂರ್ವೈಃ, ಬ್ರಹ್ಮ=ಚತುರ್ಮುಖನು, ರುದ್ರ=ಶಿವನು, ಇಂದ್ರ=ದೇವೇಂದ್ರನೂ ಇವರೇ, ಪೂರ್ವೈಃ=ಪ್ರಧಾನರಾಗಿವುಳ್ಳ ದೇವ ಋಷಿ ಪಿತೃ ಗಂಧರ್ವಾದಿಗಳಿಂದ, ಸ್ವರ್ಚಿತಃ=(ಸ್ವರ್ಚ್ಯತೇ) ಚೆನ್ನಾಗಿ ಪೂಜಿಸಲ್ಪಡುತ್ತಾನೋ, ತಂ ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ –

**ತಾತ್ಪರ್ಯ ॥** 'ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ' ಇತ್ಯಾದಿ ಶ್ರುತಿಗಳೂ, 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಇತ್ಯಾದಿ ಸ್ಮೃತಿಗಳೂ ಶ್ರೀಹರಿಯು ಅನುಮಾನಾದಿ ಗಳಿಂದ ಅವೇದ್ಯನೆಂದೂ, ಋಗಾದಿ ವೇದಗಳಿಂದಲೇ ವೇದ್ಯನೆಂದೂ ಉದ್ಘೋಷಿಸುತ್ತಿವೆ. ॥ 8 ॥

**ಮೂಲ ॥ ಧಾರ್ಯತೇ ಯೇನ ವಿಶ್ವಂ ಸದಾಜಾದಿಕಂ**
**ವಾರ್ಯತೇಽಶೇಷದುಃಖಂ ನಿಜಧ್ಯಾಯಿನಾಂ ।**
**ಪಾರ್ಯತೇ ಸರ್ವಮನ್ಯೈರ್ನ ಯತ್ಪಾರ್ಯತೇ**
**ಕಾರ್ಯತೇ ಚಾಖಿಲಂ ಸರ್ವಭೂತೈಃ ಸದಾ ॥**
**ಪ್ರೀಣಯಾಮೋ ... ವಾಸುದೇವಂ ॥ ೯ ॥**

**ಅರ್ಥ ॥** ಯೇನ=ಯಾವ ವಾಸುದೇವನಿಂದ, ಸದಾ=ಯಾವಾಗಲೂ, ಅಜಾದಿಕಂ=ಬ್ರಹ್ಮ ಮೊದಲುಗೊಂಡು ಎಲ್ಲಾ ಜಗತ್ತು, ಧಾರ್ಯತೇ=ಧರಿಸಲ್ಪಡುತ್ತದೋ, ಯೇನ=ಯಾವ ವಿಷ್ಣುವಿನಿಂದ, ನಿಜಧ್ಯಾಯಿನಾಂ=ಸ್ವಕೀಯರೂಪವನ್ನು ಧ್ಯಾನಿಸುವ ಸ್ವಭಾವವುಳ್ಳವರ, ಅಶೇಷದುಃಖಂ=ಸಾಂಸಾರಿಕಸರ್ವದುಃಖವೂ, ವಾರ್ಯತೇ=ನಿವಾರಿಸಲ್ಪಡುತ್ತದೋ, ಅನ್ಯೈಃ= ಬ್ರಹ್ಮಾದಿಗಳಿಂದ, ಯತ್= ಯಾವುದು, ನ ಪಾರ್ಯತೇ=ಸಮಾಪಿಸಲ್ಪಡುವುದಿಲ್ಲವೋ, (ಮಾಡಲು ಶಕ್ಯವಾಗುವುದಿಲ್ಲವೋ) ತತ್ಸರ್ವಂ=ಅದೆಲ್ಲವೂ, ಯೇನ=ಯಾರಿಂದ, ಪಾರ್ಯತೇ= ಸಮಾಪಿಸಲ್ಪಡುತ್ತದೋ, ಯೇನ=ಯಾರಿಂದ, ಸದಾ=ಯಾವಾಗಲೂ, ಸರ್ವಭೂತೈಃ=ಬ್ರಹ್ಮ ಮೊದಲಾದ ಸರ್ವಜೀವರಿಂದ, ಅಖಿಲಂ ಚ=ಅವರವರಿಗೆ ಯೋಗ್ಯವಾದ ಸರ್ವಕರ್ಮವು, ಕಾರ್ಯತೇ=ಮಾಡಿಸಲ್ಪಡುತ್ತದೋ, (ಅಂದರೆ ಬ್ರಹ್ಮರುದ್ರಾದಿಗಳೆಲ್ಲವರೂ ಯಾವ ವಾಸುದೇವನಿಂದ ಪ್ರೇರಿಸಲ್ಪಟ್ಟವರಾಗಿಯೇ ಸೃಷ್ಟಿ ಮೊದಲಾದ ಕರ್ಮಗಳನ್ನು ಮಾಡುತ್ತಾರೋ) ತಂ ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ. ॥ 9 ॥

**ಮೂಲ ॥ ಸರ್ವಪಾಪಾನಿ ಯತ್ಸಂಸ್ಮೃತೇಃ ಸಂಕ್ಷಯಂ**
**ಸರ್ವದಾ ಯಾಂತಿ ಭಕ್ತ್ಯಾ ವಿಶುದ್ಧಾತ್ಮನಾಂ ।**
**ಶರ್ವ ಗುರ್ವಾದಿ ಗೀರ್ವಾಣ ಸಂಸ್ಥಾನದಃ**
**ಕುರ್ವತೇ ಕರ್ಮ ಯತ್ಪ್ರೀತಯೇ ಸಜ್ಜನಾಃ ॥**
**ಪ್ರೀಣಯಾಮೋ ವಾಸುದೇವಂ ॥ ೧೦ ॥**

**ಅರ್ಥ ॥** ಭಕ್ತ್ಯಾ=ಸುದೃಢಸ್ನೇಹದಿಂದ, ವಿಶುದ್ಧಾತ್ಮನಾಂ=ನಿರ್ಮಲವಾದ ಅಂತಃಕರಣವುಳ್ಳ ಪುರುಷರ, ಸರ್ವದಾ=ಯಾವಾಗಲೂ, ಯತ್ಸಂಸ್ಮೃತೇಃ=ಯಾವ ಶ್ರೀಹರಿಯ ಚೆನ್ನಾಗಿ ಸ್ಮರಣದಿಂದ, ಸರ್ವಪಾಪಾನಿ=ಎಲ್ಲಾ ಪಾಪಗಳೂ, ಸಂಕ್ಷಯಂ=ನಾಶವನ್ನು, ಯಾಂತಿ=ಹೊಂದುತ್ತವೋ, ಯಃ= ಯಾವ ವಿಷ್ಣುವು, ಶರ್ವಗುರ್ವಾದಿಗೀರ್ವಾಣಸಂಸ್ಥಾನದಃ, ಶರ್ವ=ರುದ್ರನು, ಗುರು= ಬೃಹಸ್ಪತ್ಯಾಚಾರ್ಯರೂ ಇವರೇ, ಅಥವಾ ಶರ್ವಗುರು= ರುದ್ರನಿಗೆ ಗುರುವಾದ ಚತುರ್ಮುಖನೇ, ಆದಿ=ಮೊದಲಾಗಿವುಳ್ಳ, ಗೀರ್ವಾಣ=ದೇವತೆಗಳಿಗೆ, ಸಂಸ್ಥಾನದಃ=ಮುಕ್ತಿಯಲ್ಲಿ ಸ್ವರೂಪಾವಸ್ಥಾನ ವನ್ನು ಕೊಡುವವನೂ, ಅಥವಾ ಆಯಾಯ ಪದವಿಯನ್ನು ದಯೆಪಾಲಿಸಿದವನೂ,

ಸಜ್ಜನಾಃ=ಸಾಧುಗಳು, ಯತ್ಪ್ರೀತಯೇ=ಯಾವ ಶ್ರೀಹರಿಯ ಪ್ರೀತ್ಯರ್ಥವಾಗಿ, ಕರ್ಮ=ನಿತ್ಯ ನೈಮಿತ್ತಿಕ ಕರ್ಮಗಳನ್ನು, ಕುರ್ವತೇ=ಆಚರಿಸುತ್ತಾರೋ, ತಂ ದೇವತಾಮಂಡಲಾ ಖಂಡಮಂಡನಂ ವಾಸುದೇವಂ ಪ್ರೀಣಯಾಮಃ... ॥ 10 ॥

**ಮೂಲ ॥ ಅಕ್ಷಯಂ ಕರ್ಮ ಯಸ್ಮಿನ್ಪರೇ ಸ್ವರ್ಪಿತಂ**
**ಪ್ರಕ್ಷಯಂ ಯಾಂತಿ ದುಃಖಾನಿ ಯನ್ನಾಮತಃ ।**
**ಅಕ್ಷರೋ ಯೋಽಜರಃ ಸರ್ವದೈವಾಮೃತಃ**
**ಕುಕ್ಷಿಗಂ ಯಸ್ಯ ವಿಶ್ವಂ ಸದಾಜಾದಿಕಂ ॥**
**ಪ್ರೀಣಯಾಮೋ .... ವಾಸುದೇವಂ ॥ ೧೧ ॥**

**ಅರ್ಥ ॥** ನಂದಿತೀರ್ಥೋರುಸನ್ನಾಮಿನಃ ವಯಂ- ಯಸ್ಮಿನ್ ಪರೇ=ಯಾವ ಸರ್ವೋತ್ತಮನಾದ ವಾಸುದೇವನಲ್ಲಿ, ಸ್ವರ್ಪಿತಂ=ಚೆನ್ನಾಗಿ ಸಮರ್ಪಿಸಲ್ಪಟ್ಟ, ಕರ್ಮ=ವಿಹಿತವಾದ ಯಜ್ಞಾದಿಕರ್ಮವು, ಅಕ್ಷಯಂ=ನಾಶವಿಲ್ಲದಿರುವುದು, (ಅಂದರೆ ಅಕ್ಷಯಫಲವನ್ನು ಹುಟ್ಟಿಸುತ್ತದೆ.) ಯನ್ನಾಮತಃ=ಯಾವ ಶ್ರೀಹರಿಯ ನಾಮಧೇಯದಿಂದ, ಭಕ್ತಿಯಿಂದುಚ್ಚರಿಸಲ್ಪಟ್ಟ ರಾಮಕೃಷ್ಣಾದಿ ನಾಮಧೇಯದಿಂದ, ದುಃಖಾನಿ=ಸಮಸ್ತ ಕ್ಲೇಶಗಳು, ಪ್ರಕ್ಷಯಂ=ಸಂಪೂರ್ಣನಾಶವನ್ನು, ಯಾಂತಿ= ಹೊಂದುತ್ತವೆ. ಯಃ=ಯಾವಾತನು, ಅಕ್ಷರಃ=ನಾಶರಹಿತನೋ, ಅಜರಃ=ಮುಪ್ಪು ಮೊದಲಾದ ವಿಕಾರರಹಿತನೋ, ಸರ್ವದಾ=ಯಾವಾಗಲೂ, ಅಮೃತ ಏವ=ನಿತ್ಯಮುಕ್ತನೋ, ಅಜಾದಿಕಂ= ಚತುರ್ಮುಖ ಮೊದಲಾದ, ವಿಶ್ವಂ=ಜಗತ್ತು, ಸದಾ=ಯಾವಾಗಲೂ, ಯಸ್ಯ=ಯಾವ ಶ್ರೀಹರಿಯ, ಕುಕ್ಷಿಗಂ=ಹೊಟ್ಟೆಯಲ್ಲಿರುವುದೋ, ತಂ ದೇವತಾಮಂಡಲಾಖಂಡಮಂಡನಂ ವಾಸುದೇವಂ ಪ್ರೀಣಯಾಮಃ- ॥ 11 ॥

**ಮೂಲ ॥ ನಂದಿತೀರ್ಥೋರು ಸನ್ನಾಮಿನೋ ನಂದಿನಃ**
**ಸಂದಧಾನಾಃ ಸದಾನಂದದೇವೇ ಮತಿಂ ।**
**ಮಂದಹಾಸಾರುಣಾಪಾಂಗದತ್ತೋನ್ನತಿಂ**
**ನಂ(ವಂ)ದಿತಾಶೇಷದೇವಾದಿವೃಂದಂ ಸದಾ ॥**
**ಪ್ರೀಣಯಾಮೋ ವಾಸುದೇವಂ ॥ ೧೨ ॥**

**ಅರ್ಥ ॥** ಆನಂದದೇವೇ=ಆನಂದರೂಪನಾದ ಶ್ರೀಹರಿಯಲ್ಲಿ, ಮತಿಂ=ಅಂತಃಕರಣವನ್ನು, ಸಂದಧಾನಾಃ=ಧರಿಸತಕ್ಕ, ನಂದಿನಃ=ಬ್ರಹ್ಮನ ಸಾಕ್ಷಾತ್ಕಾರದಿಂದ ಆನಂದವುಳ್ಳ, ನಂದಿತೀರ್ಥೋರುಸನ್ನಾಮಿನಃ=ಪೂರ್ಣಪ್ರಜ್ಞರೆಂದುತ್ಕೃಷ್ಟವಾದ ನಿರ್ದುಷ್ಟವಾದ ನಾಮಧೇಯವುಳ್ಳ, ವಯಂ=ನಾವು, ಮಂದಹಾಸ=(ಭಕ್ತರಿಗೋಸ್ಕರ) ಮಂದಸ್ಮಿತದಿಂದೊಡಗೂಡಿದ, ಅರುಣ= ಕೆಂಪಾದ, ಅಪಾಂಗ=ಕಡೆಗಣ್ಣಿನ ನೋಟದಿಂದ, ದತ್ತ=ಕೊಡಲ್ಪಟ್ಟ, ಉನ್ನತಿಂ=ಅಭ್ಯುದಯವುಳ್ಳ, ಸದಾ=ಯಾವಾಗಲೂ, ನಂದಿತ=ಸಂತೋಷೀಕರಿಸಲ್ಪಟ್ಟ, ಅಶೇಷ=ಸಮಸ್ತರಾದ, ದೇವ=ದೇವತೆಗಳೇ, ಆದಿ=ಮೊದಲಾಗಿವುಳ್ಳವರ, ವೃಂದಂ=ಸಮುದಾಯವುಳ್ಳ, ದೇವತಾ ಮಂಡಲಾ ಖಂಡಮಂಡನಂ ವಾಸುದೇವಂ ಪ್ರೀಣಯಾಮಃ. ॥ 12 ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ
ದ್ವಾದಶಸ್ತೋತ್ರೇ ಅಷ್ಟಮೋಽಧ್ಯಾಯಃ ॥ ೮ ॥

ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ
ದ್ವಾದಶಸ್ತೋತ್ರದಲ್ಲಿ ಎಂಟನೇ ಅಧ್ಯಾಯವು ಸಮಾಪ್ತವಾಯಿತು. ॥ ೮ ॥

## ಒಂಭತ್ತನೇ ಅಧ್ಯಾಯವು

**ಮೂಲ ॥ ಅತಿಮತ ತಮೋಗಿರಿಸಮಿತಿವಿಭೇದನ**
**ಪಿತಾಮಹಭೂತಿದ ಗುಣಗಣನಿಲಯ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧ ॥**

**ಅರ್ಥ ॥**ಅತಿಮತ=ಸರ್ವೋತ್ತಮನೆಂದು ಸಮ್ಮತನಾದವನೇ, ಯೋಗಿಗಳಿಂದ ತಿಳಿಯಲ್ಪಟ್ಟವನೇ, ಅಥವಾ ಸಂಪೂರ್ಣವಾಗಿ ಜ್ಞಾನಕ್ಕೆ ಅವಿಷಯನಾದವನೇ, ತಮೋಗಿರಿಸಮಿತಿವಿಭೇದನ, ತಮಃ=ಅಂಧಕಾರಗಳಂತಿರುವ ಅಜ್ಞಾನಗಳೆಂಬ, ಗಿರಿ=ಪರ್ವತಗಳ, ಅಥವಾ ಅಜ್ಞಾನಗಳ ಪರ್ವತಗಳಂತಿರುವ ರಾಶಿಗಳ, ಸಮಿತಿ=ಸಮೂಹಗಳನ್ನು, ವಿಭೇದನ=ವಿನಾಶ ಮಾಡತಕ್ಕವನೇ, ಪಿತಾಮಹಭೂತಿದ= ಚತುರ್ಮುಖನಿಗೂ ಐಶ್ವರ್ಯಪ್ರದನೇ, ಗುಣಗಣನಿಲಯ=ಜ್ಞಾನಾದಿಗುಣಗಳ ಸಮೂಹಕ್ಕೆ ಆಶ್ರಯನಾದವನೇ, ಶುಭತಮಕಥಾಶಯ, ಶುಭತಮ=ಅತಿಶಯವಾಗಿ ಮಂಗಲ ಪ್ರದವಾದ, ಕಥಾ=ಭಗವಂತನ ತತ್ವವನ್ನು ತಿಳಿಯಬೇಕೆಂದಿಚ್ಛಿಸುವವರ ಚರ್ಚೆಗೆ, ಆಶಯ= ಆಶ್ರಯನಾದವನೇ, ಅಥವಾ ಆಶಯ=ಅಭಿಪ್ರಾಯ ಭೂತನಾದವನೇ, ಅಥವಾ ಶುಭತಮಕಥ= ರಮಣೀಯ ಕಥೆಗಳುಳ್ಳವನೇ, ಆಶಯ=ಸರ್ವರಿಗೂ ಆಶ್ರಯನಾದವನೇ, ಪರಮ= ಸರ್ವೋತ್ತಮನೇ, ಸದೋದಿತ=ಯಾವಾಗಲೂ ಪ್ರಕಾಶಮಾನನಾದವನೇ, ಜಗದೇಕಕಾರಣ= ಜಗತ್ತಿಗೆ ಮುಖ್ಯಕಾರಣನಾದವನೇ, ರಾಮ=ತನ್ನಲ್ಲಿಯೇ, ಕ್ರೀಡಿಸಿಕೊಂಡಿರುವವನೇ, ಆನಂದರೂಪನೇ, ರಮಾರಮಣ=ಲಕ್ಷ್ಮೀರಮಣನೇ, ತ್ವಂ=ನೀನು, ಮಮ=ನನಗೆ, ಶರಣಂ= ರಕ್ಷಕನು, ಭವ =ಆಗು, (ಕರ್ತೃಕ್ರಿಯಾ ಪದಗಳನ್ನು ಮೇಲಿನ ಶ್ಲೋಕದಿಂದ ಇಲ್ಲಿ ಇಟ್ಟುಕೊಳ್ಳಬೇಕು. ಶುಭತಮೇತ್ಯಾದಿಗಳಿಗೆ ಮೇಲಿನ ಶ್ಲೋಕಗಳಲ್ಲಿಯೂ ಇದೇರೀತಿಯಾಗಿ ಅರ್ಥವನ್ನು ಇಟ್ಟುಕೊಳ್ಳಬೇಕು.) ॥ 1 ॥

**ಮೂಲ ॥ ವಿಧಿ ಭವ ಮುಖ ಸುರ ಸತತ ಸುವಂದಿತ**
**ರಮಾಮನೋವಲ್ಲಭ ಭವ ಮಮ ಶರಣಂ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೨ ॥**

**ಅರ್ಥ ॥** ವಿಧಿ ಭವ ಮುಖಸುರ ಸತತ ಸುವಂದಿತ, ವಿಧಿ=ಬ್ರಹ್ಮನು, ಭವ=ರುದ್ರನು ಇವರೇ, ಮುಖ=ಪ್ರಧಾನರಾಗಿವುಳ್ಳ, ಸುರ= ದೇವತೆಗಳಿಂದ, ಸತತ=ನಿರಂತರದಲ್ಲಿಯೂ, ಸುವಂದಿತ=ಚೆನ್ನಾಗಿ

ಭಕ್ತಿಯಿಂದ ನಮಸ್ಕರಿಸಲ್ಪಟ್ಟವನೇ, ರಮಾಮನೋವಲ್ಲಭ=ಲಕ್ಷ್ಮೀದೇವಿಯ ಮನಸ್ಸಿಗೆ ಪ್ರಿಯನಾದವನೇ, ಶುಭತಮಕಥಾಶಯ ಪರಮ ಸದೋದಿತ ಜಗದೇಕಕಾರಣ ರಾಮ ರಮಾರಮಣ ಮಮ ಶರಣಂ ಭವ- ॥ 2 ॥

**ಮೂಲ ॥ ಅಗಣಿತ (ಅಪರಿಮಿತ) ಗುಣಗಣಮಯಶರೀರ**
**ಹೇ ವಿಗಣಿತಗುಣೇತರ ಭವ ಮಮ ಶರಣಂ ॥**
**ಶುಭ.......ರಮಾರಮಣ ॥ ೩ ॥**

**ಅರ್ಥ ॥** ಅಗಣಿತ (ಅಪರಿಮಿತ) ಗುಣಗಣಮಯಶರೀರ=ಅಸಂಖ್ಯಾತಗಳಾದ ಜ್ಞಾನಾನಂದಾದಿಗುಣಗಳೇ ಸ್ವರೂಪವಾದ ಶರೀರವುಳ್ಳವನೇ, ವಿಗತಗುಣೇತರ=ಹೋಗಲ್ಪಟ್ಟ ದೋಷಗಳುಳ್ಳವನೇ, (ದೋಷರಹಿತನೇ) ಹೇ ಶುಭತಮ....॥ 3 ॥

**ಮೂಲ ॥ ಅಪರಿಮಿತ (ಅಗಣಿತ) ಸುಖನಿಧಿವಿಮಲಸುದೇಹ**
**ಹೇ ವಿಗತಸುಖೇತರ ಭವ ಮಮ ಶರಣಂ ॥**
**ಶುಭ.........ರಮಣ ॥ ೪ ॥**

**ಅರ್ಥ ॥** ಅಪರಿಮಿತ=ನಿರವಧಿಕವಾದ, ಸುಖ=ಆನಂದಕ್ಕೆ, ನಿಧಿ=ಆಶ್ರಯವಾದ, ವಿಮಲ=ನಿರ್ಮಲವಾದ, ಸುದೇಹ=ಶೋಭನವಾದ ಶರೀರವುಳ್ಳವನೇ, ವಿಗತಸುಖೇತರ=ಕಾಲತ್ರಯದಲ್ಲಿಯೂ, ದುಃಖಲೇಶರಹಿತನೇ, ಶುಭತಮ.....ರಮಾರಮಣ ॥ 4 ॥

**ಮೂಲ ॥ ಪ್ರಚಲಿತಲಯಜಲ ವಿಹರಣ ಶಾಶ್ವತ**
**ಸುಖಮಯ ಮೀನ ಹೇ ಭವ ಮಮ ಶರಣಂ ॥**
**ಶುಭ................ರಮಣ ॥ ೫ ॥**

**ಅರ್ಥ ॥** ಪ್ರಚಲಿತ=ಪ್ರಲಯಕಾಲದಲ್ಲಿ ಮಹಾವಾಯುವಿನ ಸಂಬಂಧದಿಂದ ಚೂರ್ಣೀಕರಿಸಲ್ಪಟ್ಟ, ಲಯಜಲ=ಪ್ರಲಯಜಲದಲ್ಲಿ, ವಿಹರಣ=ಕ್ರೀಡೆಯುಳ್ಳವನೇ, ಶಾಶ್ವತ=ಶಶ್ವದೇಕಪ್ರಕಾರನೇ, ಸುಖಮಯ=ಆನಂದಮಯನೇ, ಶುಭತಮಕಥಾ......ರಮಾರಮಣ- ಹೇ ಮೀನ=ಎಲೋ ಮತ್ಸ್ಯಾವತಾರನೇ, ಮಮ ಶರಣಂ ಭವ--- ॥ 5 ॥

**ಮೂಲ ॥ ಸುರದಿತಿಜ ಸುಬಲವಿಲುಲಿತ ಮಂದರಧರ**
**ಪರಕೂರ್ಮ ಹೇ ಭವ ಮಮ ಶರಣಂ ॥**
**ಶುಭ.............ರಮಣ ॥ ೬ ॥**

**ಅರ್ಥ ॥** ಸುರ=ಇಂದ್ರಾದಿದೇವತೆಗಳು, ದಿತಿಜ=ಬಲ್ಯಾದಿ ದೈತ್ಯರೂ ಇವರ, ಸುಬಲ=ಅತಿಶಯಿತಬಲದಿಂದ, ವಿಲುಲಿತ=ಪರಿವರ್ತಿಸಲ್ಪಟ್ಟ ಮಂದರ=ಮಂದರಪರ್ವತವನ್ನು, ಧರ=ಧರಿಸಿದವನೇ, ಶುಭತಮ.....ರಮಣ, ಹೇ ಪರಕೂರ್ಮ=(ವರಕೂರ್ಮ) ಉತ್ಕೃಷ್ಟನಾದ ಕೂರ್ಮಾವತಾರನೇ, ಮಮ ಶರಣಂ ಭವ..- ॥ 6 ॥

**ಮೂಲ ॥ ಸಗಿರಿವರಧರಾತಲವಹ ಸುಸೂಕರ**
**ಪರಮ ವಿಬೋಧ ಹೇ ಭವ ಮಮ ಶರಣಂ ॥**
**ಶುಭ ..........ರಮಣ ॥ ೭ ॥**

**ಅರ್ಥ ॥** ಸಗಿರಿವರಧರಾತಲವಹ=ಮೇರ್ವಾದಿಪರ್ವತಶ್ರೇಷ್ಠಗಳಿಂದ ಸಹಿತವಾದ ಭೂಮಿಯನ್ನುದ್ಧರಿಸಿದವನೇ, ಪರಮವಿಬೋಧ=ಉತ್ಕೃಷ್ಟವಾದ ಜ್ಞಾನವುಳ್ಳವನೇ ಅಥವಾ ಉತ್ತಮ ಜ್ಞಾನಸ್ವರೂಪನೇ, ಶುಭ....ರಮಣ, ಹೇ ಸುಸೂಕರ=ಶೋಭನವರಾಹರೂಪನೇ, ತ್ವಂ ಮಮ ಶರಣಂ ಭವ. ॥ 7 ॥

**ಮೂಲ ॥ ಅತಿಬಲ ದಿತಿಸುತ ಹೃದಯ ವಿಭೇದನ**
**ಜಯ ನೃಹರೇಽಮಲ ಭವ ಮಮ ಶರಣಂ ।**
**ಶುಭ.............ರಮಣ ॥ ೮ ॥**

**ಅರ್ಥ ॥** ಅತಿಬಲ=ಅತಿಸಾಮರ್ಥ್ಯವುಳ್ಳ, ದಿತಿಸುತ=ಹಿರಣ್ಯಕಶಿಪುವಿನ, ಹೃದಯ=ವಕ್ಷಸ್ಥಳವನ್ನು, ವಿಭೇದನ=ಶೀಳಿಸಿದವನೇ, ಅಮಲ=ನಿರ್ಮಲನೇ, ಸ್ತಂಭದಿಂದಾವಿರ್ಭೂತನಾದುದರಿಂದ ಶುಕ್ಲಶೋಣಿತಾದಿಮಲಸಂಬಂಧದ ಶಂಕಾರಹಿತನೇ, ಶುಭ.....ರಮಣ, ನೃಹರೇ= ನರಸಿಂಹಾವತಾರನೇ, ತ್ವಂ=ನೀನು, ಜಯ=ಉತ್ಕೃಷ್ಟನಾಗಿರು, ಮಮ ಶರಣಂ ಭವ – ॥ 8 ॥

**ಮೂಲ ॥ ಬಲಿ ಮುಖ ದಿತಿಸುತ ವಿಜಯ ವಿನಾಶನ**
**ಜಗದವನಾಜಿತ ಭವ ಮಮ ಶರಣಂ ॥**
**ಶುಭತಮ..........ರಮಣ ॥ ೯ ॥**

**ಅರ್ಥ ॥** ಬಲಿಮುಖ ದಿತಿಸುತ ವಿಜಯವಿನಾಶನ, ಬಲಿ=ಮಹಾಬಲಿಯೇ, ಮುಖ= ಪ್ರಧಾನವಾಗಿಉಳ್ಳ, ದಿತಿಸುತ=ದೈತ್ಯರ, ವಿಜಯ= ಅಭ್ಯುದಯವನ್ನು, ಇಂದ್ರಾದಿಗಳ ವಿಜಯವನ್ನು, ವಿನಾಶನ=ವಿನಾಶಮಾಡಿದವನೇ, ಜಗದವನ=ಪ್ರಪಂಚವನ್ನು ರಕ್ಷಿಸತಕ್ಕವನೇ, ಅಜಿತ=ಯಾರಿಂದಲೂ ತಿರಸ್ಕರಿಸಲ್ಪಡದಿರುವವನೇ, ಮಮ ಶರಣಂ ಭವ – ॥ 9 ॥

**ಮೂಲ ॥ ಅವಿಜಿತ ಕುನೃಪತಿಸಮಿತಿವಿಖಂಡನ**
**ರಮಾವರ ವೀರಪ ಭವ ಮಮ ಶರಣಂ ॥**
**ಶುಭತಮ...........ರಮಣ ॥ ೧೦ ॥**

**ಅರ್ಥ ॥** ಅವಿಜಿತ=ಇತರರಿಂದ ತಿರಸ್ಕರಿಸಲ್ಪಡದಿರುವ, ಕುನೃಪತಿ=ದುಷ್ಟರಾದ ಕಾರ್ತವೀರ್ಯಾಜುನ ಮೊದಲಾದ ರಾಜರ, ಸಮಿತಿ=ಸಮೂಹವನ್ನು, ಯುದ್ಧವನ್ನು, ವಿಖಂಡನ=ಅನೇಕ ರೀತಿಯಾಗಿ ನಾಶಮಾಡತಕ್ಕವನೇ, ರಮಾವರ=ಲಕ್ಷ್ಮೀಪತಿಯೇ, ವೀರ=ಪರಾಕ್ರಮಶಾಲಿಗಳಾದ ಭೀಷ್ಮಾದಿಗಳನ್ನು ರಕ್ಷಿಸತಕ್ಕವನೇ, ಶುಭತಮ........ರಮಣ=ಲಕ್ಷ್ಮೀಪತಿಯೇ, ರಾಮ=ಪರಶುರಾಮನೇ, ತ್ವಂ ಮಮ ಶರಣಂ ಭವ. ॥ 10 ॥

**ಮೂಲ ॥ ಖರತರ ನಿಶಿಚರ ದಹನ ಪರಾಮೃತ**
**ರಘುವರ ಮಾನದ ಭವ ಮಮ ಶರಣಂ ॥**
**ಶುಭತಮ......ರಮಾರಮಣ** ॥ ೧೧ ॥

**ಅರ್ಥ ॥** ಖರತರ ನಿಶಿಚರ ದಹನ, ಖರತರ=ಅತ್ಯುಲ್ಬಣರಾದ, ಅತಿನಿಷ್ಠುರರಾದ, ನಿಶಿಚರ=ರಾವಣ ಕುಂಭಕರ್ಣಾದಿ ರಾಕ್ಷಸರನ್ನು, ದಹನ=ಭಸ್ಮೀಕರಿಸಿದವನೇ, ಪರ=ಉತ್ಕೃಷ್ಟನೇ, ಸರ್ವಪಾಲಕನೇ, ಅಮೃತ=ಮರಣರಹಿತನೇ, ಅಥವಾ ಪರಾಮೃತ=ನಿತ್ಯಮುಕ್ತನೇ, ಮಾನದ= ಹನುಮದಾದಿಗೋಸ್ಕರ ಮಾನವನ್ನೂ, ಜ್ಞಾನವನ್ನೂ ಕೊಟ್ಟವನೇ, ಶುಭತಮ.....ರಮಣ- ಹೇ ರಘುವರ=ರಘುಕುಲದಲ್ಲಿ ಅವತರಿಸಿದವನೇ, ರಘುಕುಲ ತಿಲಕನೇ, ತ್ವಂ ಮಮ ಶರಣಂ ಭವ - ॥ 11 ॥

**ಮೂಲ ॥ ಸುಲಲಿತತನುವರ ವರದ ಮಹಾಬಲ**
**ಯದುವರ ಪಾರ್ಥಪ ಮಮ ಶರಣಂ ಭವ ॥**
**ಶುಭತಮ.......ರಮಣ** ॥ ೧೨ ॥

**ಅರ್ಥ ॥** ಸುಲಲಿತ ತನುವರ=ಅತಿ ಕೋಮಲವಾದ ಶ್ರೇಷ್ಠದೇಹವುಳ್ಳವನೇ, ವರದ= ಅಕ್ರೂರಾದಿಗಳಿಗೆ ವರವನ್ನು ದಯಪಾಲಿಸಿದವನೇ, ಮಹಾಬಲ=ಉತ್ಕೃಷ್ಟ ಸಾಮರ್ಥ್ಯವುಳ್ಳವನೇ, ಪಾರ್ಥಪ=ಯುಧಿಷ್ಠಿರಾದಿಗಳನ್ನು ಪಾಲಿಸಿದವನೇ, ಅಥವಾ ಯುದ್ಧದಲ್ಲಿ ವಿಶೇಷಾಕಾರವಾಗಿ ಅರ್ಜುನನನ್ನು ರಕ್ಷಿಸಿದವನೇ, ಶುಭತಮ... ರಮಣ- ಯದುವರ=ಯದುವಂಶಕ್ಕೆ ತಿಲಕನಾದ ಶ್ರೀಕೃಷ್ಣನೇ, ಭವ ಮಮ ಶರಣಂ ॥ 12 ॥

**ಮೂಲ ॥ ದಿತಿಸುತವಿಮೋಹನ ವಿಮಲ ವಿಬೋಧನ**
**ಪರಗುಣ ಬುದ್ಧ ಹೇ ಮಮ ಶರಣಂ ಭವ ॥**
**ಶುಭತಮ......ರಮಾರಮಣ** ॥ ೧೩ ॥

**ಅರ್ಥ ॥** ದಿತಿಸುತವಿಮೋಹನ= ದೈತ್ಯರನ್ನು ಮೋಹಿಸಿದವನೇ, ವಿಮಲ=ಮಿಥ್ಯಾಜ್ಞಾನ ಮೊದಲಾದ ದೋಷರಹಿತರಾದ ಬ್ರಹ್ಮಾದಿಗಳನ್ನು, ವಿಬೋಧನ= ವಿಶೇಷಾಕಾರವಾಗಿ ಬೋಧಿಸಿದವನೇ, ಪರಗುಣ=ಉತ್ಕೃಷ್ಟ ಗುಣಗಳುಳ್ಳವನೇ, ಶುಭತಮ.....ರಮಣ- ಹೇ ಬುದ್ಧ= ಬುದ್ಧಾವತಾರನೇ, ಭವ ಮಮ ಶರಣಂ ..- ॥ 13 ॥

**ಮೂಲ ॥ ಕಲಿಮಲಹುತವಹ ಸುಭಗ ಮಹೋತ್ಸವ**
**ಶರಣದ ಕಲ್ಕೀಶ ಭವ ಮಮ ಶರಣಂ ॥**
**ಶುಭತಮ...........ರಮಾರಮಣ** ॥ ೧೪ ॥

**ಅರ್ಥ ॥** ಕಲಿಮಲಹುತವಹ=ಕಲಿಯಿಂದ ಪ್ರಾಪ್ತವಾಗುವ ದೋಷಕ್ಕೆ ಅಗ್ನಿಯಂತಿರುವವನೇ, (ಕಲಿ ಕಾಲೀನವಾದ ದೋಷಗಳನ್ನು ಭಸ್ಮೀಕರಿಸಿದವನೇ) ಸುಭಗ=ಸುಂದರನೇ, ಮಹೋತ್ಸವ=

ಮಹತ್ತಾದ ಮನೋವಿಲಾಸವುಳ್ಳವನೇ, ಅಥವಾ ಸುಭಗ=ಶೋಭನವಾದ ಭಾಗ್ಯವುಳ್ಳ ಕೃತಯುಗ ದಲ್ಲಿರುವ ಜನರಿಗೆ, ಮಹೋತ್ಸವ=ಮಹೋತ್ಸವವುಳ್ಳವನೇ, (ಮಹೋತ್ಸವವನ್ನು ಮಾಡಿದವನೇ) ಶರಣದ=ಆಶ್ರಯವನ್ನು ಕೊಡತಕ್ಕವನೇ, ಶುಭತಮ....ರಮಣ— ಹೇ ಕಲ್ಕೀಶ=ಕಲ್ಕಿರೂಪನಾದ ಶ್ರೀಪ್ರಭುವೇ, ಮಮ ಶರಣಂ ಭವ— ॥ 14 ॥

**ಮೂಲ ॥ ಅಖಿಲ ಜನಿ ವಿಲಯ ಪರಸುಖಕಾರಣ**
**ಪರ ಪುರುಷೋತ್ತಮ ಭವ ಮಮ ಶರಣಂ ॥**
**ಶುಭತಮ.....ರಮಾರಮಣ ॥ ೧೫ ॥**

**ಅರ್ಥ ॥** ಅಖಿಲ ಜನಿವಿಲಯ ಪರಸುಖಕಾರಣ,ಅಖಿಲ=ಸರ್ವಪ್ರಪಂಚದ, ಜನಿ= ಉತ್ಪತ್ತಿಯೂ, ವಿಲಯ=ಪ್ರಲಯವೂ, ಪರಸುಖ=ಉತ್ಕೃಷ್ಟಸುಖವೂ, ಇವುಗಳಿಗೆ, ಕಾರಣ= ಹೇತುಭೂತನಾದವನೇ, ಪರ=ಲೋಕವಿಲಕ್ಷಣನೇ, ಪರಿಪೂರ್ಣನೇ, ಶುಭತಮಕಥಾಶಯ ಪರಮ ಸದೋದಿತ ಜಗದೇಕಕಾರಣ ರಾಮರಾಮಾರಮಣ— ಪುರುಷೋತ್ತಮ=ಕ್ಷರಾಕ್ಷರ ಪುರುಷರಿಂದುತ್ತಮ ನಾದವನೇ, ಮಮ ಶರಣಂ ಭವ— ॥ 15 ॥

**ಮೂಲ ॥ ಇತಿ ತವ ನುತಿವರ ಸತತರತೇರ್ಭವ**
**ಸುಶರಣಮುರು ಸುಖತೀರ್ಥಮುನೇರ್ಭಗವನ್ ॥ ೧೬ ॥**

ಅ ॥ ಶುಭತಮಕಥಾಶಯ ಪರಮ ಸದೋದಿತ ಜಗದೇಕಕಾರಣ ರಾಮ ರಮಾರಮಣ= ಹೇ ಭಗವನ್=ಎಲೋ ಭಗವಂತನೇ, ಇತಿ=ಪೂರ್ವೋಕ್ತ ಪ್ರಕಾರದಿಂದ, ಉರು=ಅಧಿಕ ಹೇಗೆ ಆದೀತೋ ಹಾಗೆ, ತವ= ನಿನ್ನ, ನುತಿವರ=ಶ್ರೇಷ್ಠವಾದ ಸ್ತೋತ್ರದಲ್ಲಿ, ಸತತ=ಯಾವಾಗಲೂ, ರತೇಃ=ಆಸಕ್ತಿಯುಳ್ಳ, ಸುಖತೀರ್ಥಮುನೇಃ=ಆನಂದತೀರ್ಥರೆಂಬ ಮುನಿಯಾದ, ಮಮ=ನನಗೆ, ಸುಶರಣಂ=ಚೆನ್ನಾಗಿ ರಕ್ಷಕನು, ಭವ--॥ 16 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ದ್ವಾದಶಸ್ತೋತ್ರೇ ನವಮೋಽಧ್ಯಾಯಃ ॥ ೯ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಒಂಭತ್ತನೇ ಅಧ್ಯಾಯವು ಸಮಾಪ್ತವಾಯಿತು.॥ ೯ ॥**

## ಹತ್ತನೇ ಅಧ್ಯಾಯವು

ಪುನಃ ಗಾಥಾ ರೂಪದಿಂದ ಭಗವಂತನ ಗುಣಗಳ ಜ್ಞಾನಕ್ಕಾಗಿ ಭಗವಂತನನ್ನೇ ವಿಜ್ಞಾಪಿಸಿ ಕೊಳ್ಳಬೇಕೆಂಬ ಅಭಿಪ್ರಾಯದಿಂದ ಸ್ತೋತ್ರಮಾಡುತ್ತಾರೆ-

**ಮೂಲ ॥ ಅವನ ಶ್ರೀಪತಿರಪ್ರತಿರಧಿಕೇಶಾದಿ ಭವಾದೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧ ॥**

**ಅರ್ಥ ॥** ಅವನ=ಸರ್ವರಕ್ಷಕನೇ, ಅಧಿಕ=ಸರ್ವೋತ್ಕೃಷ್ಟನೇ, ಈಶಾದಿ=ಬ್ರಹ್ಮಾದಿಗಳ, ಭವ=ಉತ್ಪತ್ತಿಗೆ, ಅಭ್ಯುದಯಕ್ಕೆ, ಆದೇ=ಕಾರಣಭೂತನೇ, ಕರುಣಾಪೂರ್ಣ=ದಯಾಸಮುದ್ರನೇ, ವರಪ್ರದ=ಅಭೀಷ್ಟವನ್ನು ಕೊಡತಕ್ಕವನೇ, ಅಪ್ರತೀ=ಸದೃಶರಹಿತನಾದ, ಶ್ರೀಪತೀ=ಲಕ್ಷ್ಮೀಪತಿಯಾದ, ತ್ವಂ=ನೀನು, ಮೇ =ನನಗೆ, ತೇ=ನಿನ್ನ, ಚರಿತಂ=ಚರಿತ್ರೆಯನ್ನು, ಜ್ಞಾಪಯ=ತಿಳಿಸಿಕೊಡು. ॥ 1 ॥

**ಮೂಲ ॥ ಸುರವಂದ್ಯಾಧಿಪ ಸದ್ವರ ಭರಿತಾಶೇಷಗುಣಾಲಂ ।**
**ಕರುಣಾ.............ಮೇ ತೇ ॥ ೨ ॥**

**ಅರ್ಥ ॥** ಸುರವಂದ್ಯ=ಬ್ರಹ್ಮಾದಿಗಳಿಂದ ಸ್ತುತ್ಯನಾದವನೇ, ಅಧಿಪ=ಸರ್ವರಿಗೂ ಸ್ವಾಮಿಯಾದವನೇ, ಸದ್ವರ=ಮುಕ್ತರಾದ ಬ್ರಹ್ಮಾದಿಗಳಿಂದ ಶ್ರೇಷ್ಠನೇ, ಅಥವಾ ಸುರವರವಂದ್ಯಾಧಿಪ=ರುದ್ರಾದಿಗಳಿಂದ ಸ್ತುತ್ಯನಾದ ಚತುರ್ಮುಖನಿಗೆ ಸ್ವಾಮಿಯಾದವನೇ, ಸದ್ವರ=ಭಕ್ತರಿಗೋಸ್ಕರ ಕೊಡಲ್ಪಡತಕ್ಕ ವರವುಳ್ಳವನೇ, ಅಲಂ=ಚೆನ್ನಾಗಿ, ಭರಿತ=ಪ್ರತ್ಯೇಕ ಪರಿಪೂರ್ಣಗಳಾದ, ಅಶೇಷ=ಸಮಸ್ತಗಳಾದ, ಗುಣ=ಗುಣಗಳುಳ್ಳವನೇ, ಕರುಣಾ.... ॥ 2 ॥

**ಮೂಲ ॥ ಸಕಲ ಧ್ವಾಂತ ವಿನಾಶಕ (ನ) ಪರಮಾನಂದಸುಧಾಹೋ ।**
**ಕರುಣಾ............ಮೇತೇ ॥ ೩ ॥**

**ಅರ್ಥ ॥**ಸಕಲಧ್ವಾಂತವಿನಾಶಕ(ನ), ಸಕಲ=ಸಮಸ್ತ ಸಜ್ಜನರ, ಧ್ವಾಂತ=ಅಜ್ಞಾನಾಂಧಕಾರವನ್ನು, ವಿನಾಶಕ (ನ)=ನಾಶ ಮಾಡತಕ್ಕವನೇ, ಪರಮಾನಂದಸುಧ=ಅಲೌಕಿಕವಾದ ಆನಂದವನ್ನು ಚೆನ್ನಾಗಿ ಧರಿಸಿದವನೇ, ಕರುಣಾ....ಜ್ಞಾಪಯಃ- ಅಹೋ=ಪರಮಾತ್ಮನ ಗುಣಗಳು ಆಶ್ಚರ್ಯಕರಗಳು. ॥3॥

**ಮೂಲ ॥ ತ್ರಿಜಗತ್ಪೋತ ಸದಾರ್ಚಿತಚರಣಾಶಾಪತಿಧಾತೋ**
**ಕರುಣಾ.......ಮೇ ತೇ ॥ ೪ ॥**

**ಅರ್ಥ ॥** ತ್ರಿಜಗತ್ಪೋತ=ಮೂರು ಲೋಕಗಳಿಗೆ ದೋಣಿಯಂತಿರುವವನೇ, (ಸಂಸಾರ ಸಮುದ್ರವನ್ನು ದಾಟಲಿಕ್ಕೆ ದೋಣಿಯಂತಿರುವವನೇ) ಸದಾ=ಯಾವಾಗಲೂ, ಅರ್ಚಿತಚರಣ=ಭಕ್ತರಿಂದ ಆರಾಧಿಸಲ್ಪಟ್ಟ ಪಾದಕಮಲಗಳುಳ್ಳವನೇ, ಅಥವಾ ಸದಾರ್ಚಿತಚರಣ=ಸಜ್ಜನರಿಂದ ಚೆನ್ನಾಗಿ ಪೂಜಿಸಲ್ಪಟ್ಟ ಪಾದಕಮಲಗಳುಳ್ಳವನೇ, ಆಶಾ=ಪುರುಷಾರ್ಥಚತುಷ್ಟಯದಲ್ಲಿ ಆಶಾರೂಪವಾದ ಮನೋವೃತ್ತಿಯನ್ನು ಪ್ರವರ್ತಿಸಿಕೊಡುವುದರಿಂದ ಆಶಾ ನಾಮಕಳಾದ ಸರಸ್ವತಿಗೆ, ಪತಿ=ಸ್ವಾಮಿಯಾದ ಬ್ರಹ್ಮನಿಗೆ, ಧಾತೋ=ಧಾರಕನೇ, ಪೋಷಕನೇ, ಕರುಣಾ....ಜ್ಞಾಪಯ.. ॥ 4 ॥

**ಮೂಲ ॥ ತ್ರಿಗುಣಾತೀತ ವಿಧಾರಕ ಪರಿತೋ ದೇಹಿ ಸುಭಕ್ತಿಂ ।**
**ಕರುಣಾ.............ಮೇ ತೇ ॥ ೫ ॥**

**ಅರ್ಥ ॥** ತ್ರಿಗುಣಾತೀತ=ಸತ್ವರಜಸ್ತಮೋಗುಣಗಳನ್ನತಿಕ್ರಮಿಸಿದವನೇ, ವಿಧಾರಕ=ವಿಶೇಷಾಕಾರವಾಗಿ ಸರ್ವವನ್ನೂ ಧರಿಸತಕ್ಕವನೇ, ಪರಿತಃ=ಸರ್ವಕಾಲದಲ್ಲಿಯೂ, ಸುಭಕ್ತಿಂ=ಶೋಭನ ಭಕ್ತಿಯನ್ನು, ದೇಹಿ=ಕೊಡು, ಕರುಣಾ......ಜ್ಞಾಪಯ ॥ 5 ॥

**ಮೂಲ ॥ ಶರಣಂ ಕಾರಣ ಭಾವನ ಭವ ಮೇ ತಾತ ಸದಾಲಂ ।**
**ಕರುಣಾ............ಮೇ ತೇ ॥ ೬ ॥**

**ಅರ್ಥ ॥** ಕಾರಣ=ಸ್ವತಂತ್ರಕಾರಣನಾದವನೇ, ಭಾವನ=ಯೋಗಿಗಳಿಂದ ತನ್ನನ್ನು ಅನುಸಂಧಾನ ಮಾಡಿಸುವವನೇ, ಸಜ್ಜನರಿಗೆ ಸರ್ವಾಭೀಷ್ಟವನ್ನು ಕೊಡುವವನೇ, ಭಕ್ತರ ಯೋಗಕ್ಷೇಮವನ್ನು ಆಲೋಚಿಸುವವನೇ, ಜಗತ್ತನ್ನು ರಕ್ಷಿಸುವವನೇ, ಅಥವಾ ಕಾರಣಭಾವನ=ಮಹತ್ತತ್ವ ಮೊದಲಾದ ಕಾರಣಗಳನ್ನು ಜಗತ್ತನ್ನು ಸೃಷ್ಟಿಮಾಡುವ ವಿಷಯದಲ್ಲಿ ಸಮರ್ಥಗಳನ್ನಾಗಿ ಮಾಡುವವನೇ, ಹೇ ತಾತ=ಜನಕನೇ, ಸದಾ=ಯಾವಾಗಲೂ, ಮೇ=ನನಗೆ, ಅಲಂ=ಚೆನ್ನಾಗಿ, ಶರಣಂ=ರಕ್ಷಕನು, ಭವ=ಆಗು, ಕರುಣಾ........ಜ್ಞಾಪಯ ॥ 6 ॥

**ಮೂಲ ॥ ಮರಣಪ್ರಾಣದ ಪಾಲಕ ಜಗದೀಶಾವ ಸುಭಕ್ತಿಂ ।**
**ಕರುಣಾ............ಮೇ ತೇ ॥ ೭ ॥**

**ಅರ್ಥ ॥** ಮರಣಪ್ರಾಣದ=ಮರಣವನ್ನೂ, ಜೀವನವನ್ನೂ ಕೊಡುವವನೇ, ಪಾಲಕ=ರಕ್ಷಕನೇ, ಜಗದೀಶ=ಜಗನ್ನಿಯಾಮಕನೇ, ಸುಭಕ್ತಿಂ=ಶೋಭನ ಭಕ್ತಿಯನ್ನು, ಅವ=ಅನಿಷ್ಟಗಳಿಂದ ರಕ್ಷಿಸು. ಕರುಣಾ.... ಜ್ಞಾಪಯ–॥ 7 ॥

**ಮೂಲ ॥ ತರುಣಾದಿತ್ಯ ಸವರ್ಣಕ ಚರಣಾಬ್ಜಾಮಲಕೀರ್ತೇ ।**
**ಕರುಣಾ..........ಮೇ ತೇ ॥ ೮ ॥**

**ಅರ್ಥ ॥** ತರುಣಾದಿತ್ಯ=ಬಾಲಸೂರ್ಯನಿಂದ, ಸವರ್ಣಕ=ಸಮಾನವರ್ಣವುಳ್ಳ, ಚರಣಾಬ್ಜ=ಕಮಲದಂತಿರುವ ಪಾದಗಳುಳ್ಳವನೇ, ಅಮಲಕೀರ್ತೇ=ಪವಿತ್ರವಾದ ಯಶಸ್ಸುಳ್ಳವನೇ, ಕರುಣಾ.... ಜ್ಞಾಪಯ .. ॥ 8 ॥

**ಮೂಲ ॥ ಸಲಿಲ ಪ್ರೋತ್ಥ ಸರಾಗಕ ಮಣಿ ವರ್ಣೋಚ್ಚನಖಾದೇ ।**
**ಕರುಣಾ............ ಮೇ ತೇ ॥ ೯ ॥**

**ಅರ್ಥ ॥** ಸಲಿಲಪ್ರೋತ್ಥ ಸರಾಗಕಮಣಿವರ್ಣೋಚ್ಚನಖಾದೇ, ಸಲಿಲ=ನೀರಿನಲ್ಲಿ, ಪ್ರೋತ್ಥ=ಹುಟ್ಟಿದ ರಕ್ತಕಮಲದಿಂದ, ಸರಾಗಕ=ಸಮಾನವಾದ ಕೆಂಪುಬಣ್ಣವುಳ್ಳ, ಅಥವಾ ರಕ್ತಕಮಲದಂತೆ ರಕ್ತದಿಂದೊಡಗೂಡಿದ, ಮಣಿ=ಪದ್ಮರಾಗಮಣಿಗಳ, ವರ್ಣ=ಬಣ್ಣದಂತೆ ಬಣ್ಣವುಳ್ಳ, ಉಚ್ಚ=ಉನ್ನತಗಳಾದ, ನಖ=ಉಗುರುಗಳೇ, ಆದೇ=ಮೊದಲಾಗಿ ವುಳ್ಳ ನೇತ್ರಾಂತಾದಿ ಅವಯವಗಳುಳ್ಳವನೇ, ಅಥವಾ ಸಲಿಲಪ್ರೋತ್ಥಸರಾಗಕ=ನೀಲೋತ್ಪಲದಿಂದ ಸಮಾನವಾದ ದೇಹಕಾಂತಿಯುಳ್ಳವನೇ, ಮಣಿವರ್ಣ=ಪದ್ಮರಾಗಮಣಿಯ ಬಣ್ಣಗಳುಳ್ಳ, ಉಚ್ಚನಖ=ಚಿದಾನಂದಾತ್ಮಕಗಳಾದುದರಿಂದ ಅತಿಶ್ರೇಷ್ಠಗಳಾದ ನಖರಗಳ, ಆದೇ=ಆದಿಭಾಗಗಳಾಗಿ ಉಳ್ಳವನೇ, ಕರುಣಾ.. .....ಜ್ಞಾಪಯ ॥ 9 ॥

**ಮೂಲ ॥ ಖ(ಕ)ಜ ತೂಣೀ ನಿಭ ಪಾವನ ವರ ಜಂಘಾಮಿತಶಕ್ತೇ ।**
**ಕರುಣಾ............ಮೇ ತೇ ॥ ೧೦ ॥**

**ಅರ್ಥ ॥** ಖಜತೂಣೀನಿಭಪಾವನವರಜಂಘ, ಖ=ಆಕಾಶದಲ್ಲಿ, ಜ=ಹುಟ್ಟಿದ, ಇಂದ್ರಧನುಸ್ಸುಗಳು, ತೂಣೀ=ಬತ್ತಳಿಕೆಗಳಂತಿರುವವುಗಳು, ಅಂದರೆ ಬತ್ತಳಿಕೆಗಳಂತಿರುವ ಇಂದ್ರನ ಧನುಸ್ಸುಗಳಿಂದ, ನಿಭ=ಸದೃಶಗಳಾದ, ಪಾವನ=ಪವಿತ್ರಗಳಾದ, ವರ=ಶ್ರೇಷ್ಠಗಳಾದ, ಜಂಘ=ಮೊಳಕಾಲುಗಳುಳ್ಳವನೇ, ಅಥವಾ ಖಜ=ಆಕಾಶದಲ್ಲಿ ಜಾತನೇ, ಅಂದರೆ ಭಕ್ತರಿಗೆ ವರವನ್ನು ಕೊಡುವುದಕ್ಕಾಗಿ ಪ್ರಾದುರ್ಭವಿಸಿದವನೇ, ಅಥವಾ ಖಜ=ಮನೋರೂಪವಾದ ಇಂದ್ರಿಯದಿಂದ ಹುಟ್ಟಿದ ಮನ್ಮಥನ, ತೂಣೀ=ಬತ್ತಳಿಕೆಗಳಿಂದ, ನಿಭ=ಸದೃಶವಾದ, ಪಾವನ ವರ ಜಂಘ – ಅಮಿತಶಕ್ತೇ=ಅಪರಿಮಿತ ಶಕ್ತಿಯುಳ್ಳವನೇ, ಕರುಣಾ......ಜ್ಞಾಪಯ ॥ 10 ॥

**ಮೂಲ ॥ ಇಭ ಹಸ್ತ ಪ್ರಭ ಶೋಭನ ಪರಮೋರಸ್ಥಲಮಾಲೇ ।**
**(ಪರಮೋರುಸ್ಥ ರಮಾಲೇ)**
**ಕರುಣಾ............ಮೇ ತೇ ॥ ೧೧ ॥**

**ಅರ್ಥ ॥** ಇಭ ಹಸ್ತ ಪ್ರಭ ಶೋಭನ ಪರಮೋರುಸ್ಥರಮಾಲೇ, ಇಭ=ಆನೆಯ, ಹಸ್ತ=ಶುಂಡಾದಂಡದ, ಪ್ರಭ=ಕಾಂತಿಯಂತೆ ಕಾಂತಿಯುಳ್ಳ, ಶೋಭನ=ಸುಂದರವಾದ, ಪರಮ=ಉತ್ಕೃಷ್ಟವಾದ, ಉರಸ್ಥಲ=ವಕ್ಷಸ್ಥಲದಲ್ಲಿರುವ, ಮಾ=ಲಕ್ಷ್ಮೀ ದೇವಿಯೇ (ಊರು=ತೊಡೆಯಲ್ಲಿ ಸ್ಥ=ಇರುವ, ರಮಾ=ಲಕ್ಷ್ಮೀದೇವಿಯೇ) ಆಲೇ=ಭ್ರಮರದಂತೆ ಇರುವವನೇ, ಕರುಣಾ— ಜ್ಞಾಪಯ ॥ 11 ॥

**ಮೂಲ ॥ ಅಸನೋತ್ಫುಲ್ಲ ಸುಪುಷ್ಪಕ ಸಮವರ್ಣಾವರಣಾಂತೇ ।**
**ಕರುಣಾ........ಮೇ ತೇ ॥ ೧೨ ॥**

**ಅರ್ಥ ॥** ಅಂತೇ=ಅಂತಭಾಗದಲ್ಲಿ ಅಸನ=ಹೊನ್ನೆ ಮರದ, ಉತ್ಫುಲ್ಲ=ವಿಕಸಿತವಾದ, ಸುಪುಷ್ಪಕ=ಶೋಭನಪುಷ್ಪದಿಂದ, ಸಮವರ್ಣ=ಸದೃಶವಾದ ವರ್ಣವುಳ್ಳ, ಆವರಣ=ಆಚ್ಛಾದನವಾದ ಉತ್ತರೀಯವಸ್ತ್ರವುಳ್ಳವನೇ, ಕರುಣಾ .... ಜ್ಞಾಪಯ ॥ 12 ॥

**ಮೂಲ ॥ ಶತಮೋದೋದ್ಭವ ಸುಂದರ ವರ ಪದ್ಮೋತ್ಥಿತ ನಾಭೇ ।**
**ಕರುಣಾ..............ಮೇ ತೇ ॥ ೧೩ ॥**

**ಅರ್ಥ ॥** ಶತಮೋದೋದ್ಭವ ಸುಂದರವರಪದ್ಮೋತ್ಥಿತನಾಭೇ, ಶತಮೋದ=ಶತಾನಂದನಾದ ಬ್ರಹ್ಮನಿಗೆ, ಉದ್ಭವ=ಉತ್ಪತ್ತಿಕಾರಣವಾದ, ಸುಂದರ=ಮನೋಹರವಾದ, ವರ=ಶ್ರೇಷ್ಠವಾದ, ಪದ್ಮ=ಕಮಲಕ್ಕೆ, ಉತ್ಥಿತ=ಉತ್ಪತ್ತಿಕಾರಣವಾದ, ನಾಭೇ=ಹೊಕ್ಕಳುಳ್ಳವನೇ, (ಅಂದರೆ ಶ್ರೀಹರಿಯ ನಾಭಿಯಲ್ಲಿರುವ ಕಮಲದಲ್ಲಿ ಚತುರ್ಮುಖನು ಜನಿಸಿರುವನು.) ಅಥವಾ ಶತಮೋದೋದ್ಭವ=ಶತಾನಂದಗಳುಳ್ಳ ಚತುರ್ಮುಖನಿಗೆ ಉತ್ಪಾದಕನೇ, ಸುಂದರವರ=ಸುಂದರ ಶ್ರೇಷ್ಠನೇ, ಪದ್ಮೋತ್ಥಿತನಾಭೇ=ಕಮಲವು ಹುಟ್ಟಿದ ನಾಭಿಯುಳ್ಳವನೇ, ಕರುಣಾ.....ಜ್ಞಾಪಯ ॥ 13 ॥

**ಮೂಲ ॥ ಜಗದಾಗೂಹಕ ಪಲ್ಲವಸಮಕುಕ್ಷೇ ಶರಣಾದೇ ।**
**ಕರುಣಾ....... ಮೇ ತೇ ॥ ೧೪ ॥**

**ಅರ್ಥ ॥** ಜಗದಾಗೂಹಕಪಲ್ಲವಸಮಕುಕ್ಷೇ, ಜಗತ್=ಪ್ರಪಂಚಕ್ಕೆ, ಆಗೂಹಕ=ಪ್ರಳಯ ಕಾಲದಲ್ಲಿ ಆಚ್ಛಾದಕವಾದ, ಪಲ್ಲವಸಮಕುಕ್ಷೇ=ಚಿಗುರು ಎಲೆಗಳಿಂದ ಸದೃಶವಾದ ಹೊಟ್ಟೆಯುಳ್ಳವನೇ, ಶರಣಾದೇ= ಜಗದ್ರಕ್ಷಕರಾದ ಬ್ರಹ್ಮಾದಿಗಳಿಗೂ ಕಾರಣಭೂತನಾದವನೇ, ಜಗದಾಶ್ರಯರಾದ ಶೇಷಾದಿಗಳಿಗೂ ಕಾರಣಭೂತನಾದವನೇ, ಕರುಣಾ.... ಜ್ಞಾಪಯ— ॥ 14 ॥

**ಮೂಲ ॥ ಜಗದಂಬಾಮಲ ಸುಂದರ (ರಿ) ಗೃಹ ವಕ್ಷೋವರಯೋಗಿನ್ ।**
**ಕರುಣಾ............ ಮೇ ತೇ ॥ ೧೫ ॥**

**ಅರ್ಥ ॥** ಜಗದಂಬಾಮಲ ಸುಂದರಗೃಹವಕ್ಷೋವರಯೋಗಿನ್, ಜಗತ್=ಪ್ರಪಂಚಕ್ಕೆ, ಅಂಬಾ=ತಾಯಿಯಾದ ಲಕ್ಷ್ಮೀದೇವಿಯ, ಅಮಲ=ಬಾಹ್ಯಾಂತರ ದೋಷರಹಿತವಾದ, ಸುಂದರ=ಮನೋಹರವಾದ, ಗೃಹ=ಆವಾಸಮಂದಿರಭೂತವಾದ, ವಕ್ಷೋವರ=ವಕ್ಷಃ ಶ್ರೇಷ್ಠದ, ಯೋಗಿನ್=ಸಂಬಂಧವುಳ್ಳವನೇ, ಕರುಣಾ .......ಜ್ಞಾಪಯ— ॥ 15 ॥

**ಮೂಲ ॥ ದಿತಿಜಾಂತಪ್ರದ ಚಕ್ರ ದರ ಗದಾ ಯುಗ್ವರ ಬಾಹೋ ।**
**ಕರುಣಾ............ ಮೇ ತೇ ॥ ೧೬ ॥**

**ಅರ್ಥ ॥** ದಿತಿಜಾಂತಪ್ರದಚಕ್ರದರಗದಾಯುಗ್ವರಬಾಹೋ, ದಿತಿಜ=ದೈತ್ಯರಿಗೆ, ಅಂತಪ್ರದ= ವಿನಾಶವನ್ನು ಕೊಡತಕ್ಕ, ಚಕ್ರ=ಸುದರ್ಶನವು, ದರ=ಪಾಂಚಜನ್ಯವು, ಗದಾ=ಕೌಮೋದಕಿಯೂ ಇವುಗಳಿಂದ, ಯುಕ್=ಯುಕ್ತಗಳಾದ, ವರ=ಶ್ರೇಷ್ಠಗಳಾದ, ಬಾಹೋ=ಭುಜಗಳುಳ್ಳವನೇ, ಕರುಣಾ ಪೂರ್ಣ ವರಪ್ರದ ತೇ ಚರಿತಂ ಮೇ ಜ್ಞಾಪಯ— ॥ 16 ॥

**ಮೂಲ ॥ ಪರಮಜ್ಞಾನಮಹಾನಿಧಿವದನ ಶ್ರೀರಮಣೇಂದೋ ।**
**ಕರುಣಾ............ ಮೇ ತೇ ॥ ೧೭ ॥**

**ಅರ್ಥ ॥** ಪರಮಜ್ಞಾನ ಮಹಾನಿಧಿವದನ=ಉತ್ಕೃಷ್ಟಜ್ಞಾನಕ್ಕೆ ಮಹಾಶ್ರಯಭೂತವಾದ ಮುಖವುಳ್ಳವನೇ, ಶ್ರೀರಮಣೇಂದೋ=ಲಕ್ಷ್ಮೀದೇವಿಗೆ ದರ್ಶನ ಸುಖದಲ್ಲಿ ಪೂರ್ಣಚಂದ್ರನಂತಿರು ವವನೇ, ಅಥವಾ ಚಂದ್ರನಂತಿರುವ ಲಕ್ಷ್ಮೀಪತಿಯೇ, ಕರುಣಾ..... ಜ್ಞಾಪಯ ॥ 17 ॥

**ಮೂಲ ॥ ನಿಖಿಲಾಘೌಘ ವಿನಾಶಕ ಪರಸೌಖ್ಯಪ್ರದ ದೃಷ್ಟೇ ।**
**ಕರುಣಾ............ ಮೇ ತೇ ॥ ೧೮ ॥**

**ಅರ್ಥ ॥** ನಿಖಿಲಾಘೌಘ ವಿನಾಶಕ ಪರಸೌಖ್ಯಪ್ರದದೃಷ್ಟೇ, ನಿಖಿಲ=ಸಮಸ್ತಗಳಾದ, ಅಘೌಘ=ಪಾಪಸಮೂಹಗಳ, ವಿನಾಶಕ= ನಾಶಕಾರಣವಾದ, ಪರಸೌಖ್ಯಪ್ರದ=ಉತ್ಕೃಷ್ಟಸುಖವನ್ನು ಕೊಡುವ, ದೃಷ್ಟೇ=ದರ್ಶನವುಳ್ಳವನೇ, ಕರುಣಾ...... ಜ್ಞಾಪಯ ॥ 18 ॥

**ಮೂಲ ॥ ಪರಮಾನಂದ ಸುತೀರ್ಥ ಸುಮುನಿರಾಜೋ ಹರಿಗಾಥಾಂ ।**
**ಕೃತವಾನ್ನಿತ್ಯಸುಪೂರ್ಣಕ ಪರಮಾನಂದಪದೈಷೀ ॥ ೧೯ ॥**

**ಅರ್ಥ ॥** ನಿತ್ಯಸುಪೂರ್ಣಕಪರಮಾನಂದಪದೈಷೀ, ನಿತ್ಯ=ಅನಾದಿ ನಿತ್ಯನಾದ, ಸುಪೂರ್ಣಕ=

ಅತಿಪೂರ್ಣನಾದ, ಪರಮಾನಂದ= ಉತ್ಕೃಷ್ಟ ಆನಂದಸ್ವರೂಪಿಯಾದ ಶ್ರೀಹರಿಯ, ಪದ= ಸ್ವರೂಪವನ್ನು, ಏಷೀ=ಇಚ್ಛಿಸುವ, ಪರಮಾನಂದ=ಉತ್ಕೃಷ್ಟವಾದ ಸ್ವರೂಪಾನಂದವನ್ನು ಕೊಡುವ, ಸುತೀರ್ಥ=ಸಚ್ಛಾಸ್ತ್ರವುಳ್ಳ, ಮುನಿರಾಜಃ=ಮುನಿಶ್ರೇಷ್ಠರಾದ ಮಧ್ವಾಚಾರ್ಯರು, ಹರಿಗಾಥಾಂ=ಶ್ರೀ ಪರಮಾತ್ಮನ ಗಾಥಾರೂಪವಾದ ಸ್ತುತಿಯನ್ನು, ಕೃತವಾನ್=ಮಾಡಿದರು. ॥ 19 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ**
**ದ್ವಾದಶಸ್ತೋತ್ರೇ ದಶಮೋಽಧ್ಯಾಯಃ ॥ ೧೦ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಹತ್ತನೇ ಅಧ್ಯಾಯವು ಸಮಾಪ್ತವಾಯಿತು. ॥ ೧೦ ॥**

# ಹನ್ನೊಂದನೇ ಅಧ್ಯಾಯವು

ಮತ್ತೂ ಮತ್ತು ಭಕ್ತಿಯಿಂದ ಶ್ರೀಹರಿಯ ನಮಸ್ಕಾರವೇ ಆತನ ಅನುಗ್ರಹಕ್ಕೆ ಸಾಧನವಾದುದು. ಆದಕಾರಣ ಭಕ್ತರೆಲ್ಲರೂ ಅದೇ ರೀತಿಯಾಗಿ ಮಾಡತಕ್ಕದೆಂಬ ಅಭಿಪ್ರಾಯದಿಂದ ಸ್ತುತಿಸುತ್ತಾರೆ–

**ಮೂಲ ॥ ಉದೀರ್ಣಮಜರಂ ದಿವ್ಯಮಮೃತಸ್ಯಂದ್ಯಧೀಶಿತುಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೧ ॥**

**ಅರ್ಥ ॥** ಉದೀರ್ಣಂ=ಉತ್ಕೃಷ್ಟವಾದ, ಅಜರಂ=ಜರಾದಿದೋಷರಹಿತವಾದ, ದಿವ್ಯಂ= ಕ್ರೀಡಾದಿಗುಣಗಳ ಸಂಬಂಧಕ್ಕೆ ಯೋಗ್ಯವಾದ, ಅಲೌಕಿಕವಾದ, ಅಮೃತ =ಕೈವಲ್ಯಾನಂದರಸವನ್ನು, ಸ್ಯಂದಿ=ಭಕ್ತರಿಗೆ ಕೊಡುವ ಶೀಲವುಳ್ಳ, ಬ್ರಹ್ಮೇಂದ್ರಾದ್ಯಭಿವಂದಿತಂ=ಬ್ರಹ್ಮನು ಇಂದ್ರನು ಇವರೇ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ, ಅಧೀಶಿತುಃ=ಸ್ವಾಮಿಯಾದ, ಆನಂದಸ್ಯ=ಸುಖರೂಪ ನಾದ ಶ್ರೀಹರಿಯ, ಪದಂ=ಸ್ವರೂಪವನ್ನು, ಚರಣಾರವಿಂದವನ್ನು, ವಂದೇ=(ನಾನು ಭಕ್ತಿಪೂರ್ವಕ ವಾಗಿ) ನಮಸ್ಕರಿಸುತ್ತೇನೆ. ॥ 1 ॥

**ಮೂಲ ॥ ಸರ್ವವೇದಪದೋದ್ಗೀತಮಿಂದಿರಾಧಾರಮುತ್ತಮಂ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೨ ॥**

**ಅರ್ಥ ॥** ಸರ್ವವೇದಪದೋದ್ಗೀತಂ, ಸರ್ವ=ಸಮಸ್ತಗಳಾದ, ವೇದಪದ=ವೇದವಾಕ್ಯ ಗಳಿಂದ, ಉದ್ಗೀತಂ= ಉತ್ತಮನೆಂದು ಪ್ರತಿಪಾದಿಸಲ್ಪಟ್ಟ, ಇಂದಿರಾಧಾರಂ=ಲಕ್ಷ್ಮೀದೇವಿಗೆ ಆಶ್ರಯಭೂತನಾದ, (ಲಕ್ಷ್ಮೀದೇವಿಗೆ ಆವಾಸಭೂತನಾದ) ಉತ್ತಮಂ=ನಿರತಿಶಯ ಶ್ರೇಷ್ಠವಾದ, ಬ್ರಹ್ಮೇಂದ್ರಾದ್ಯಭಿವಂದಿತಂ ಆನಂದಸ್ಯ ಪದಂ ವಂದೇ (ಹಿಂದಿನಂತೆ ಅರ್ಥವು) ॥ 2 ॥

**ಮೂಲ ॥ ಸರ್ವದೇವಾದಿ ದೇವಸ್ಯ ವಿದಾರಿತ ಮಹತ್ತಮಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೩ ॥**

**ಅರ್ಥ ॥** ವಿದಾರಿತಮಹತ್ತಮಃ=ನಾಶಮಾಡಲ್ಪಟ್ಟ ಮಹತ್ತಾದ ಅಜ್ಞಾನವುಳ್ಳ, ಸರ್ವದೇವಾದಿ= ಸಮಸ್ತದೇವತೆಗಳಿಗೂ ಕಾರಣಭೂತವಾದ, ದೇವಸ್ಯ=ದೇವನಾದ, ಆನಂದಸ್ಯ=ಶ್ರೀಹರಿಯ, ಅಥವಾ ಸರ್ವದೇವಾದಿ ದೇವಸ್ಯ=ಎಲ್ಲಾ ದೇವತೆಗಳಿಗೂ ಆದಿದೇವನಾದ, ಆನಂದಸ್ಯ ......ವಂದೇ. ॥ 3 ॥

**ಮೂಲ ॥ ಉದಾರಮಾದರಾನ್ನಿತ್ಯಮನಿಂದ್ಯಂ ಸುಂದರೀಪತೇಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೪ ॥**

**ಅರ್ಥ ॥** ಉದಾರಂ=ಅತಿಶ್ರೇಷ್ಠವಾದ, ನಿತ್ಯಂ=ಯಾವಾಗಲೂ, ಅನಿಂದ್ಯಂ=ಸ್ತುತಿಗೆ ಯೋಗ್ಯ ವಾದ, ಸುಂದರೀಪತೇಃ=ಲಕ್ಷ್ಮೀಪತಿಯಾದ, ಆನಂದಸ್ಯ.....ಪದಂ ಆದರಾತ್=ಭಕ್ತಿಯಿಂದ, ವಂದೇ=ನಮಸ್ಕರಿಸುತ್ತೇನೆ.॥ 4 ॥

**ಮೂಲ ॥ ಇಂದೀವರೋದರನಿಭಂ ಸುಪೂರ್ಣಂ ವಾದಿಮೋಹದಂ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೫ ॥**

**ಅರ್ಥ ॥** ಇಂದೀವರ=ನೀಲೋತ್ಪಲದ, ಉದರ=ಮಧ್ಯಭಾಗದಿಂದ, ನಿಭಂ=ಸದೃಶವಾದ, ಸುಪೂರ್ಣಂ=ಗುಣಪರಿಪೂರ್ಣವಾದ, ವಾದಿಮೋಹದಂ=ದುರ್ವಾದಿಗಳಿಗೆ ಮಿಥ್ಯಾಜ್ಞಾನವನ್ನು ಕೊಡುವ, ಅಥವಾ ವಾದಿ=ವೇದವುಳ್ಳ, ಅಥವಾ ತತ್ತ್ವವನ್ನು ತಿಳಿಯಬೇಕೆಂದಿಚ್ಛಿಸುವ ಕಥೆಯುಳ್ಳ ಸಜ್ಜನರ, ಮೋಹ=ಮಿಥ್ಯಾಜ್ಞಾನವನ್ನು, ದಂ=ಖಂಡಿಸುವ, ಆನಂದಸ್ಯ....ವಂದೇ ॥ 5 ॥

**ಮೂಲ ॥ ದಾತೃ ಸರ್ವಾಮರೈಶ್ವರ್ಯ ವಿಮುಕ್ತ್ಯಾದೇರಹೋ ವರಂ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೬ ॥**

**ಅರ್ಥ ॥** ಸರ್ವಾಮರೈಶ್ವರ್ಯವಿಮುಕ್ತ್ಯಾದೇಃ, ಸರ್ವ=ಸಮಸ್ತರಾದ, ಅಮರ=ದೇವತೆಗಳ, ಐಶ್ವರ್ಯ=ಐಶ್ವರ್ಯವು, ವಿಮುಕ್ತಿ= ಮೋಕ್ಷವೂ ಇವುಗಳು, ಆದೇಃ=ಆದಿಗಳಾಗಿವುಳ್ಳ ಸತ್ತಾ ಪ್ರತೀತಿ ಪ್ರವೃತ್ತ್ಯಾದಿಗಳನ್ನು, ದಾತೃ=ಕೊಡುವ ಶೀಲವುಳ್ಳದ್ದು, ಅಹೋ=ಆಶ್ಚರ್ಯವು, ವರಂ=ಶ್ರೇಷ್ಠವಾದ, ಬ್ರಹ್ಮೇಂದ್ರಾದ್ಯಭಿವಂದಿತಂ ಆನಂದಸ್ಯ ಪದಂ ವಂದೇ ॥ 6 ॥

**ಮೂಲ ॥ ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೭ ॥**

**ಅರ್ಥ ॥** ಯತ್ತು=ಯಾವ ಸ್ವರೂಪವು, (ಅಭಕ್ತರಿಗೆ) ದೂರಾದ್ದೂರತರಂ=ಅತ್ಯಂತ ದೂರವೋ, (ಯಾವಾಗಲೂ ಅನುಗ್ರಹಮಾಡಲಿಕ್ಕೆ ಉದ್ಯುಕ್ತವಾಗುವುದಿಲ್ಲವೋ), ತದೇವ=ಆ ಸ್ವರೂಪವೇ, (ಭಕ್ತರಿಗೆ) ಅಂತಿಕಾತ್ ಅಂತಿಕಂ=ಅತಿಸಮೀಪದಲ್ಲಿಯೇ ಇರತಕ್ಕುದು. (ಯಾವಾಗಲೂ ಅನುಗ್ರಹೋದ್ಯುಕ್ತವೇ ಆಗಿರುತ್ತದೆ.) ಬ್ರಹ್ಮೇಂದ್ರಾದ್ಯಭಿವಂದಿತಂ ಆನಂದಸ್ಯ ಪದಂ ವಂದೇ ... ॥7॥

**ಮೂಲ ॥ ಪೂರ್ಣ ಸರ್ವಗುಣೈಕಾರ್ಣಮನಾದ್ಯಂತಂ ಸುರೇಶಿತುಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ ॥ ೮ ॥**

**ಅರ್ಥ ॥** ಪೂರ್ಣಸರ್ವಗುಣೈಕಾರ್ಣಂ, ಪೂರ್ಣ=ಪ್ರತ್ಯೇಕವಾಗಿ ಪರಿಭಿನ್ನಗಳಾದ,

ಸರ್ವಗುಣ=ಸಮಸ್ತ ಗುಣಗಳಿಗೆ, ಏಕಾರ್ಣಂ =ಮುಖ್ಯಸಮುದ್ರವಾದ, ಮುಖ್ಯಾಶ್ರಯವಾದ, ಅನಾದ್ಯಂತಂ=ಉತ್ಪತ್ತಿನಾಶಗಳಿಲ್ಲದಿರುವ, ಸುರೇಶಿತುಃ=ದೇವತೆಗಳಿಗೆ ಸ್ವಾಮಿಯಾದ, ಆನಂದಸ್ಯ... ವಂದೇ- ।। 8 ।।

**ಮೂಲ ।। ಆನಂದತೀರ್ಥಮುನಿನಾ ಹರೇರಾನಂದರೂಪಿಣಃ ।**
**ಕೃತಂ ಸ್ತೋತ್ರಮಿದಂ ಪುಣ್ಯಂ ಪಠನ್ನಾನಂದತಾಮಿಯಾತ್ ।। ೯ ।।**

**ಅರ್ಥ ।।** ಆನಂದತೀರ್ಥಮುನಿನಾ=ಆನಂದತೀರ್ಥರೆಂಬ ಮುನಿಗಳಿಂದ, ಕೃತಂ= ಮಾಡಲ್ಪಟ್ಟ, ಪುಣ್ಯ=ಪುಣ್ಯಸಾಧನವಾದ, ಆನಂದರೂಪಿಣಃ=ಆನಂದಸ್ವರೂಪಿಯಾದ, ಹರೇಃ= ಶ್ರೀಪರಮಾತ್ಮನ, ಇದಂ ಸ್ತೋತ್ರಂ=ಈ ಸ್ತೋತ್ರವನ್ನು, ಪಠನ್=ಪಠನಮಾಡುವ ಭಕ್ತನು, ಆನಂದತಾಂ= ಆನಂದಾಭಿವ್ಯಕ್ತಿರೂಪವಾದ ಮುಕ್ತಿಯನ್ನು, ಇಯಾತ್=ಹೊಂದುವನು. ।। 9 ।।

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ದ್ವಾದಶಸ್ತೋತ್ರೇ ಏಕಾದಶೋಽಧ್ಯಾಯಃ ।। ೧೧ ।।**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಹನ್ನೊಂದನೇ ಅಧ್ಯಾಯವು ಸಮಾಪ್ತವಾಯಿತು.।। ೧೧ ।।**

## ಹನ್ನೆರಡನೇ ಅಧ್ಯಾಯವು

ಈಗ ಶ್ರೀಮದಾನಂದತೀರ್ಥಾಚಾರ್ಯರು ಗೋವಿಂದಾನುಗ್ರಹವು ತನ್ನಲ್ಲಿದೆ ಎಂದು ತೋರಿಸುತ್ತಾ ಸ್ತುತಿಸುವರು.

**ಮೂಲ ।। ಆನಂದ ಮುಕುಂದ ಅರವಿಂದಶಯನ ।**
**ಆನಂದತೀರ್ಥ ಪರಾನಂದವರದ ।। ೧ ।।**

**ಅರ್ಥ ।।** ಆನಂದ=ಸುಖಾತ್ಮಕನೇ, ಮುಕುಂದ=ಮೋಕ್ಷಪ್ರದನೇ, ಅರವಿಂದನಯನ= ಕಮಲಾಕ್ಷನೇ, ಆನಂದತೀರ್ಥ= ಆನಂದತೀರ್ಥನಾಮಕನಾದ ನನಗೋಸ್ಕರ, ಪರಾನಂದವರದ= ಉತ್ಕೃಷ್ಟ ಆನಂದಸ್ವರೂಪವಾದ ವರವನ್ನು (ಅಭೀಷ್ಟವನ್ನು) ಕೊಟ್ಟವನೇ, ಹೇಕೃಷ್ಣ=ಎಲೋ ಕೃಷ್ಣನೇ, ತ್ವಾಂ=ನಿನ್ನನ್ನು, ಅಹಂ=ನಾನು, ವಂದೇ=ನಮಸ್ಕರಿಸುತ್ತೇನೆ. ।। 1 ।।

**ಮೂಲ ।। ಸುಂದರೀಮಂದಿರ ಗೋವಿಂದ ವಂದೇ ।**
**ಆನಂದತೀರ್ಥ ಪರಾನಂದವರದ ।। ೨ ।।**

**ಅರ್ಥ ।।** ಸುಂದರೀಮಂದಿರ=ಲಕ್ಷ್ಮಿಗೂ ಆವಾಸಭೂತನೇ, ಆನಂದತೀರ್ಥ ಪರಾನಂದ ವರದ - ಗೋವಿಂದ=ಶ್ರೀಕೃಷ್ಣನೇ, ತ್ವಾಂ=ನಿನ್ನನ್ನು, ವಂದೇ=ನಮಸ್ಕರಿಸುತ್ತೇನೆ. ।। 2 ।।

**ಮೂಲ ।। ಚಂದ್ರಸುರೇಂದ್ರಸುವಂದಿತ ವಂದೇ**
**ಆನಂದತೀರ್ಥ ಪರಾನಂದವರದ ।। ೩ ।।**

**ಅರ್ಥ ॥** ಚಂದ್ರಸುರೇಂದ್ರ ಸುವಂದಿತ=ಚಂದ್ರನೂ ದೇವೇಂದ್ರನೂ ಇವರಿಂದ ಚೆನ್ನಾಗಿ ನಮಸ್ಕರಿಸಲ್ಪಟ್ಟವನೇ, ಆನಂದತೀರ್ಥಪರಾನಂದವರದ ತ್ವಾಂ ವಂದೇ— ॥ 3 ॥

**ಮೂಲ ॥ ಚಂದ್ರಕಮಂದಿರನಂದಕ ವಂದೇ ।**
**ಆನಂದತೀರ್ಥ ಪರಾನಂದವರದ ॥ ೪ ॥**

**ಅರ್ಥ ॥** ಚಂದ್ರಕಮಂದಿರನಂದಕ=ಚಂದ್ರಾಕಾರಗಳಾದ ಮಯೂರದ ಗರಿಗಳ ಮುಕುಟದಿಂದ ಸಂತುಷ್ಟನಾದವನೇ, ಅಥವಾ ಚಂದ್ರಾಕಾರಗಳಾದ ಮಯೂರಗಳಿಗೆ ಆವಾಸಭೂತವಾದ ಖಡ್ಗವುಳ್ಳವನೇ, ಅಥವಾ ಸುವರ್ಣದ ಮಂದಿರದಲ್ಲಿ ಸಂತೋಷಪಡುವವನೇ, ಅಥವಾ ಚಂದ್ರಕ=ಆಹ್ಲಾದಕನೇ, ಮಂದಿರ=ಸುಖಾಶ್ರಯನೇ, ನಂದಕ=ಭಕ್ತರಿಗೆ ಆನಂದವನ್ನು ಕೊಡತಕ್ಕವನೇ, ಆನಂದತೀರ್ಥ....ವರದ ತ್ವಾಂ ವಂದೇ ॥ 4 ॥

**ಮೂಲ ॥ ವೃಂದಾರಕವೃಂದಸುವಂದಿತ ವಂದೇ ।**
**ಆನಂದತೀರ್ಥ ಪರಾನಂದವರದ ॥ ೫ ॥**

**ಅರ್ಥ ॥** ವೃಂದಾರಕವೃಂದಸುವಂದಿತ=ಬ್ರಹ್ಮಾದಿ ದೇವತೆಗಳ ಸಮೂಹದಿಂದ ಚೆನ್ನಾಗಿ ನಮಸ್ಕರಿಸಲ್ಪಟ್ಟವನೇ, ಆನಂದತೀರ್ಥಪರಾನಂದವರದ ತ್ವಾಂ ವಂದೇ. ॥ 5 ॥

**ಮೂಲ ॥ ಮಂದಾರಸೂನು ಸುಚರ್ಚಿತ ವಂದೇ ।**
**(ಮಂದಾರಸ್ಯಂದಿತ ಮಂದಿರ ವಂದೇ)**
**ಆನಂದತೀರ್ಥ ಪರಾನಂದವರದ ॥ ೬ ॥**

**ಅರ್ಥ ॥** ಮಂದಾರಸೂನು ಸುಚರ್ಚಿತ=(ದೇವತೆಗಳಿಂದ) ಪಾರಿಜಾತ ಪುಷ್ಪಗಳಿಂದ ಚೆನ್ನಾಗಿ ಪೂಜಿಸಲ್ಪಟ್ಟವನೇ, (ಮಂದಾರಸ್ಯಂದಿತಮಂದಿರ=ಮಂದಾರ ಕುಸುಮಗಳಿಂದ ಸೇವಿಸಲ್ಪಟ್ಟ ಮನೆಯುಳ್ಳವನೇ) ಆನಂದತೀರ್ಥಪರಾನಂದವರದ ತ್ವಾಂ ವಂದೇ ॥ 6 ॥

**ಮೂಲ ॥ ಇಂದಿರಾನಂದಕ ಸುಂದರ ವಂದೇ**
**ಆನಂದ........... ವರದ ॥ ೭ ॥**

**ಅರ್ಥ ॥** ಇಂದಿರಾನಂದಕ=ಲಕ್ಷ್ಮೀದೇವಿಗೆ ಸಂತೋಷವನ್ನುಂಟು ಮಾಡುವವನೇ, ಸುಂದರ=ಮನೋಹರನೇ, ಆನಂದ.....ವರದ ತ್ವಾಂ ವಂದೇ ॥ 7 ॥

**ಮೂಲ ॥ ಮಂದಿರಸ್ಯಂದನ (ಸ್ಯಂದಿತ) ಸ್ಯಂದಕ ವಂದೇ ।**
**ಆನಂದ.......... ವರದ ॥ ೮ ॥**

**ಅರ್ಥ ॥** ಮಂದಿರಸ್ಯಂದಿತಸ್ಯಂದಕ,ಮಂದಿರ=ನಿನ್ನ ಮನೆಯಲ್ಲಿ ಸ್ಯಂದಿತ=ಸೇಚನ ಮೊದಲಾದ ಕರ್ಮದಲ್ಲಿ ಪ್ರವರ್ತಿಸಿದ ಬ್ರಹ್ಮಾದಿಗಳಲ್ಲಿ ಸ್ಯಂದಕ=ಕರುಣಾಮೃತವನ್ನು ಸೇಚಿಸುವವನೇ, ಆನಂದ.....ವರದ ತ್ವಾಂ ವಂದೇ - ॥ 8 ॥

**ಮೂಲ ॥ ಆನಂದ ಚಂದ್ರಿಕಾಸ್ಯಂದಕ ವಂದೇ ।**
**ಆನಂದತೀರ್ಥ ಪರಾನಂದವರದ ॥ ೯ ॥**

**ಅರ್ಥ ॥** ಆನಂದಚಂದ್ರಿಕಾಸ್ಯಂದಕ, ಆನಂದ=ಉತ್ಕೃಷ್ಟ ಆನಂದವೆಂಬುವ, ಚಂದ್ರಿಕಾ= ಬೆಳದಿಂಗಳನ್ನು, ಸ್ಯಂದಕ= ಪ್ರವರ್ತಿಸುವವನೇ, ಆನಂದತೀರ್ಥ ಪರಾನಂದ ವರದ ತ್ವಾಂ ವಂದೇ ॥

**ತಾತ್ಪರ್ಯ ॥** ಆದಕಾರಣ ಶ್ರೀಪರಮಾತ್ಮನೇ ಭಕ್ತರಿಗೆ ಅಲೌಕಿಕ ಆನಂದವನ್ನು ಕೊಡತಕ್ಕವ ನಾದುದರಿಂದ ಮೋಕ್ಷವನ್ನು ಇಚ್ಛಿಸುವವರು ಆತನನ್ನೇ ಸರ್ವದಾ ಸ್ತುತಿಸಬೇಕು. ಆತನ ಪ್ರೀತಿಯೇ ಸರ್ವ ಶ್ರೇಯಸ್ಸಿಗೂ ಕಾರಣವು ಎಂದು ಸಿದ್ಧವಾಯಿತು. ॥ 9 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ದ್ವಾದಶಸ್ತೋತ್ರೇ ದ್ವಾದಶೋಽಧ್ಯಾಯಃ ॥ ೧೨ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ**
**ದ್ವಾದಶಸ್ತೋತ್ರದಲ್ಲಿ ಹನ್ನೆರಡನೇ ಅಧ್ಯಾಯವು ಸಮಾಪ್ತವಾಯಿತು. ॥ ೧೨ ॥**

## ಒಂದನೇ ಅಧ್ಯಾಯವು

**★ಮೂಲ ॥ ಶಂಖ ಚಕ್ರ ಗದಾ ಪದ್ಮ ಶಾರ್ಙ್ಗ ಖಡ್ಗಧರಂ ಸದಾ ।**
**ನಮಾಮಿ ಪಿತರಂ ನಿತ್ಯಂ ರಮಾನಾಥಂ ಜಗತ್ಪತಿಂ ॥ ೧ ॥**

(ಈ 15 ಶ್ಲೋಕಗಳು ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಲ್ಲಿ ಮೊದಲೇ ಮುದ್ರಿತಗಳಾಗಿವೆ.)

**ಅರ್ಥ ॥** ಪಾಂಚಜನ್ಯ, ಸುದರ್ಶನ, ಕೌಮೋದಕಿ, ಪದ್ಮ, ಶಾಂರ್ಗ, ಖಡ್ಗ (ನಂದಕ)ಗಳನ್ನು ಧರಿಸಿದವನು, ಸರ್ವರನ್ನೂ ರಕ್ಷಿಸುವವನು, ನಿತ್ಯನು, ಜಗತ್ತಿಗೆ ಒಡೆಯನು, ಇಂತಹ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಯಾವಾಗಲೂ ನಮಸ್ಕರಿಸುತ್ತೇನೆ. ॥ 1 ॥

**ಮೂಲ ॥ ಸಚ್ಚಿದಾನಂದರೂಪಂ ತಮನಾಮಯಮನಂತರಂ ।**
**ಏಕಮೇಕಾಂತಮಭಯಂ ವಿಷ್ಣುಂ ವಿಶ್ವಹೃದಿ ಸ್ಥಿತಂ ॥ ೨ ॥**

**ಅರ್ಥ ॥** ಸಚ್ಚಿದಾನಂದ ಸ್ವರೂಪನು, ಸರ್ವದೋಷವಿವರ್ಜಿತನು, ತನ್ನ ಅವಯವಾದಿ ಗಳಿಂದ ಭೇದರಹಿತನು, ಸರ್ವೋತ್ತಮನು, ಮುಖ್ಯವಾಗಿ ಸರ್ವಸಂಹಾರಕನು, ಅಥವಾ ಒಬ್ಬನೇ ಅಂತ್ಯದಲ್ಲಿರುವವನು, ಅಂದರೆ ಸರ್ವೋತ್ತಮನು, ಭಯವಿಲ್ಲದಿರುವವನು, ಸರ್ವರ ಹೃದಯದಲ್ಲಿ ನಿಯಾಮಕನಾಗಿರುವವನು, ಇಂತಹ ವ್ಯಾಪ್ತನಾದ ಶ್ರೀಹರಿಯನ್ನು (ನಮಸ್ಕರಿಸುತ್ತೇನೆ.) ॥ 2 ॥

---

★( ) ಶ್ರೀಹೃಷೀಕೇಶತೀರ್ಥಲಿಖಿತ ಸರ್ವಮೂಲಪುಸ್ತಕದಲ್ಲಿ ''ಯದ್ಗುಣಾನಾಮಜಾದಯಃ'' (ಒಂದನೇ ಅಧ್ಯಾಯದ ಅಂತ್ಯಭಾಗವು) ಎಂದು ಮುಗಿದೊಡನೆಯೇ ಈ ೧೫ ಶ್ಲೋಕಗಳು ಹೆಚ್ಚು ಕಾಣುತ್ತವೆ. ಶ್ರೀಸೋದಾ ವಾದಿರಾಜಮಠದ ಪ್ರಾಚೀನ ತುಳುಪುಸ್ತಕದಲ್ಲಿಯೂ ಇರುತ್ತವೆ.

**ಮೂಲ ॥ ನಾನಾಸ್ವಭಾವಮತ್ಯಂತ ಸ್ವಭಾವೇನ ವಿಚಾರಿತಂ ।**
**ಅವಿಶೇಷಮನಾದ್ಯಂತಂ ಪ್ರಣಮಾಮಿ ಸನಾತನಂ ॥ ೩ ॥**

**ಅರ್ಥ ॥** ಅನೇಕ ಸ್ವಭಾವಗಳಿರುವವನು, ಅಥವಾ ಅಪರಿಮಿತಗಳಾದ ತನ್ನ ಅವತಾರಗಳುಳ್ಳವನು, ಅತ್ಯಂತವಾಗಿ ತನ್ನಲ್ಲಿಯೇ ಭಾವನೆಯನ್ನು ಇಟ್ಟ ಜ್ಞಾನಿಯಿಂದ ಅಥವಾ ಹೆಚ್ಚು ಯೋಗ್ಯತೆಯಿರುವ ಚತುರ್ಮುಖನಿಂದ ವಿಚಾರಿಸಲ್ಪಡುವವನು, ಅಥವಾ ಅತ್ಯಂತ ವಿವೇಕದಿಂದ ವಿಚಾರಣೀಯನು, ಮೂಲರೂಪಕ್ಕೂ ಅವತಾರರೂಪಗಳಿಗೂ ವಿಶೇಷವಿಲ್ಲದಿರುವವನು, ಆದ್ಯಂತಗಳಿಲ್ಲದಿರುವವನು, ಅಥವಾ ಸರ್ವಚೇಷ್ಟಕನಾದ ಮುಖ್ಯಪ್ರಾಣನಿಗೂ ಆದ್ಯಂತಗಳನ್ನು ಕೊಡುವವನು, ಶಶ್ವದೇಕ ಪ್ರಕಾರನು, ಇಂತಹ ಶ್ರೀಹರಿಯನ್ನು ನಮಸ್ಕರಿಸುತ್ತೇನೆ. ॥ 3 ॥

**ಮೂಲ ॥ ಕುಂದೇಂದು ಸನ್ನಿಭಂ ವಂದೇ★ಸುಧಾರಸ ನಿ...**
**(ಜ್ಞಾನಮುದ್ರಾ.....ರಿಣಂ)**
**ಆನಂದಮಜರಂ ನಿತ್ಯಮಾತ್ಮೇಶಮಮಿತದ್ಯುತಿಂ ॥ ೪ ॥**

**ಅರ್ಥ ॥** ಕುಂದಪುಷ್ಪಕ್ಕೂ ಚಂದ್ರನಿಗೂ ಸಮಾನಿಕನು. (ಭಕ್ತರಿಗೆ) ಅಮೃತರಸವನ್ನು ಹೊಂದಿಸಿಕೊಡುವವನು, ಅಥವಾ ಸುಧಾರೂಪರಸವುಳ್ಳ ದೇವತೆಗಳಿಂದ ಸೇವಿಸಲ್ಪಡುವವನು, ಅಥವಾ ಜ್ಞಾನಮುದ್ರಾದಿಗಳನ್ನು ಧರಿಸಿರುವವನು, ಆನಂದಸ್ವರೂಪನು, ವಾರ್ಧಕ್ಯಾವಸ್ಥೆಯಿಲ್ಲದವನು, ನಿತ್ಯನು, ಸರ್ವಜೀವರಿಗೂ ನಿಯಾಮಕನು, ಅಪರಿಮಿತವಾದ ಕಾಂತಿಯುಳ್ಳವನು, (ಇಂತಹ ಶ್ರೀಹರಿಯನ್ನು ನಮಸ್ಕರಿಸುತ್ತೇನೆ.) ॥ 4 ॥

**ಮೂ॥ ವಂದೇ ವಿಶ್ವಸ್ಯ ಪಿತರಂ ವಿಷ್ಣುಂ ವಿಶ್ವೇಶ್ವರಂ ಸದಾ ।**
**ಅಮಂದಾನಂದಸಂದೋಹ ಸಂತೋಷಿತ ಜಗತ್ತ್ರಯಂ ॥ ೫ ॥**

**ಅರ್ಥ ॥** ಸರ್ವಜಗತ್ತಿಗೂ ಜನಕನು, ಯಾವಾಗಲೂ ಸರ್ವಜಗತ್ತಿಗೂ ನಿಯಾಮಕನು, ಅನಂತ ಆನಂದಗಳ ಸಮೂಹದಿಂದ ಸಂತೋಷಿಸಲ್ಪಟ್ಟ ಮೂರು ಲೋಕಗಳುಳ್ಳವನು, ಅಂದರೆ ಮೂರು ಲೋಕಗಳಲ್ಲಿರುವ ಭಕ್ತರಿಗೂ ಆನಂದವನ್ನು ಕೊಟ್ಟು ಸಂತೋಷಪಡಿಸುತ್ತಾ ಇರುವವನು, ಇಂತಹ ವ್ಯಾಪ್ತನಾದ ಶ್ರೀವಿಷ್ಣುವನ್ನು ನಮಸ್ಕರಿಸುತ್ತೇನೆ. ॥ 5 ॥

**ಮೂಲ ॥ ನಾರಾಯಣಮಣೀಯಾಂಸಂ ವಂದೇ ದೇವಂ ಸ (ನಾ)ದಾತನಂ ।**
**ಸೂರ್ಯಮಂಡಲ ಮಧ್ಯಸ್ಥಂ ವರಾಭಯ ಕರೋದ್ಯತಂ ॥ ೬ ॥**

**ಅರ್ಥ ॥** ಅತ್ಯಣುವಾದವನು, ಅಂದರೆ ಚಿಕ್ಕ ವಸ್ತುವಿನಿಂದಲೂ ಅತಿಚಿಕ್ಕವನು, ಶಶ್ವದೇಕಪ್ರಕಾರನು, ಸೂರ್ಯಮಂಡಲದ ಮಧ್ಯದಲ್ಲಿರುವವನು, ವರ ಅಭಯಗಳನ್ನು ಕೊಡುವ ಕೈಗಳಿಂದ ಸನ್ನದ್ಧನು, ಇಂತಹ ನಾರಾಯಣದೇವರನ್ನು ನಮಸ್ಕರಿಸುತ್ತೇನೆ. ॥ 6 ॥

**ಮೂಲ ॥ ಸೂರ್ಯಾಮಿತದ್ಯುತಿಂ ವಂದೇ ನಾರಾಯಣಮನಾಮಯಂ ।**
**ವಿಶ್ವಂ ವಿಶ್ವಾಕರಂ ವಂದೇ ವಿಶ್ವಸ್ಯ ಪ್ರಪಿತಾಮಹಂ ॥ ೭ ॥**

---

★ ''ಸುಧಾರಸನಿಷೇವಿತಂ'' ಎಂದೂ ''ಜ್ಞಾನಮುದ್ರಾರಿಧಾರಿಣಂ'' ಎಂದು ಇರಬಹುದೆಂದು ಊಹಿಸುತ್ತೇವೆ.

**ಅರ್ಥ ॥** ಅನಂತಾನಂತ ಸೂರ್ಯರಂತೆ ಕಾಂತಿಯಿರುವವನು, ದೋಷಲೇಶರಹಿತನು, ಸರ್ವಗುಣಪರಿಪೂರ್ಣನು, ಸರ್ವಜಗತ್ತಿಗೆ ಆಶ್ರಯನು, ಸರ್ವಪ್ರಪಂಚಕ್ಕೆ ಪ್ರಪಿತಾಮಹನು, ಇಂತಹ ನಾರಾಯಣನನ್ನು ನಮಸ್ಕರಿಸುತ್ತೇನೆ. ॥ 7 ॥

**ಮೂಲ ॥ ನಾನಾರೂಪಮಜಂ ನಿತ್ಯಂ ವಿಶ್ವಾತ್ಮಾನಂ ಪ್ರಜಾಪತಿಂ ।**
**ಕಾಲಾಕಾಲವಿಚಾರಾದಿ ಪ್ರಕಾಲಿತ ಸದಾತನಂ ॥ ೮ ॥**

**ಅರ್ಥ ॥** ಅನೇಕ ರೂಪಗಳುಳ್ಳವನು, ಉತ್ಪತ್ತಿರಹಿತನು, ನಿತ್ಯನು, ಸರ್ವಸ್ವಾಮಿಯು, ಪ್ರಜೆಗಳಿಗೆಲ್ಲಾ ಅಧಿಪತಿಯು, ಈ ಕರ್ಮಕ್ಕೆ ಇದು ಯೋಗ್ಯಕಾಲವು ಇದು ಯೋಗ್ಯಕಾಲವಲ್ಲ ಇತ್ಯಾದಿ ವಿಚಾರಗಳಿಗೆ ಕಾರಣನು, ನಿತ್ಯವಾದ ಕಾಲಕ್ಕೂ ನಿಯಾಮಕನಾದವನು, ಸನಾತನನು, ಅಥವಾ ಕಾಲಾಕಾಲ ವಿಚಾರಾದಿಗಳಿಲ್ಲದಿರುವವನು, ಮತ್ತು ಶಶ್ವದೇಕಪ್ರಕಾರನು, ಅಥವಾ ಸನಾತನನಾದುದರಿಂದ ಈ ಕಾಲದಲ್ಲಿರುವವನು, ಈ ಕಾಲದಲ್ಲಿಲ್ಲದಿರುವವನು, ಈ ಕಾಲದಲ್ಲಿ ಪೂಜ್ಯನು, ಈ ಕಾಲದಲ್ಲಿ ಪೂಜ್ಯನಲ್ಲ ಇತ್ಯಾದಿ ವಿಚಾರಕ್ಕೆ ಅವಿಷಯನು (ಇಂತಹ ಶ್ರೀಹರಿಯನ್ನು ನಮಸ್ಕರಿಸುತ್ತೇನೆ.) ॥ 8 ॥

**ಮೂಲ ॥ ಪುರುಷಂ ಪ್ರಕೃತಿಸ್ಥಂ ಚ ವಂದೇ ವಿಷ್ಣುಮಜೋತ್ತಮಂ ।**
**ಬ್ರಹ್ಮಣಃ ಪಿತರಂ ವಂದೇ ಶಂಕರಸ್ಯ ಪಿತಾಮಹಂ ॥ ೯ ॥**

**ಅರ್ಥ ॥** ಸರ್ವರ ಶರೀರದಲ್ಲಿ ನಿಯಾಮಕನಾಗಿರುವವನು, ಅಥವಾ ಷಡ್ಗುಣಪರಿಪೂರ್ಣನು, ಪ್ರಕೃತಿಯಲ್ಲಿಯೂ ನಿಯಾಮಕನಾಗಿರುವವನು, ಉತ್ಪತ್ತಿಶೂನ್ಯನು, ಸರ್ವೋತ್ತಮನು, ಚತುರ್ಮುಖ ನಿಗೆ ಜನಕನು, ರುದ್ರನಿಗೆ ಪಿತಾಮಹನು, ಇಂತಹ ಶ್ರೀವಿಷ್ಣುವನ್ನು ನಮಸ್ಕರಿಸುತ್ತೇನೆ. ॥ 9 ॥

**ಮೂಲ ॥ ಶ್ರಿಯಃ ಪತಿಮಜಂ ನಿತ್ಯಂ ಇಂದ್ರಾದಿ ಪ್ರಪಿತಾಮಹಂ ।**
**ಪ್ರತಿಪ್ರತಿ ಸ್ಥಿತಂ ವಿಷ್ಣುಂ ನಿತ್ಯಾಮೃತಮನಾಮಯಂ ॥ ೧೦ ॥**

**ಅರ್ಥ ॥** ಲಕ್ಷ್ಮೀಪತಿಯು, ಉತ್ಪತ್ತಿಯಿಲ್ಲದಿರುವವನು, ನಿತ್ಯನು, ಇಂದ್ರಾದಿದೇವತೆಗಳಿಗೆ ಪ್ರಪಿತಾಮಹನು, ಪ್ರತಿವಸ್ತುಗಳಲ್ಲಿಯೂ ಪ್ರತ್ಯೇಕವಾಗಿ ನಿಯಾಮಕನಾಗಿರುವವನು, ಸದಾ ಮರಣವಿಲ್ಲದಿರುವವನು, ದೋಷಲೇಶರಹಿತನು, ಇಂತಹ ಶ್ರೀವಿಷ್ಣುವನ್ನು ನಮಸ್ಕರಿಸುತ್ತೇನೆ. ॥ 10 ॥

**ಮೂಲ ॥ ಶಂಖಚಕ್ರಧರಂ ವಂದೇ ವರಾಭಯಕರೋದ್ಯತಂ ।**
**ಪ್ರತಾಪಪ್ರವಿಶೇಷೇಣ ದೂರೀಕೃತ ವಿದೂಷಣಂ ॥ ೧೧ ॥**

**ಅರ್ಥ ॥** ಶಂಖಚಕ್ರಗಳನ್ನು ಧರಿಸಿರುವನು, ವರ ಅಭಯಗಳನ್ನು ಕೊಡುವ ಉದ್ಯತ ಕೈಗಳುಳ್ಳವನು, ತನ್ನಲ್ಲಿರುವ ಪ್ರತಾಪದ ಅತ್ಯಾಧಿಕ್ಯದಿಂದ ವಿಶೇಷಾಕಾರವಾಗಿ ದೂಷಕರಾದ ದೈತ್ಯಾದಿಗಳನ್ನು ದೂರೀಕರಿಸಿದವನು, ಅಥವಾ ತನ್ನಲ್ಲಿರುವ ಪ್ರತಾಪಾಖ್ಯ ಗುಣದ ಅತಿವಿಶೇಷದಿಂದ ದೂರೀಕರಿಸಲ್ಪಟ್ಟ ದೋಷಸಮೂಹವುಳ್ಳವನು, ಅಂದರೆ ದೋಷಾತ್ಯಂತಾಭಾವವುಳ್ಳವನು, ಇಂತಹ ಶ್ರೀಹರಿಯನ್ನು ನಮಸ್ಕರಿಸುತ್ತೇನೆ. ॥ 11 ॥

**ಮೂಲ ॥ ವಿದಾರಿತಾರಿಮತ್ಯಂತ ಪ್ರಸನ್ನಂ ಪ್ರಣಮಾಮ್ಯಹಂ ।**
**ಅಪ್ರಮೇಯಮಜಂ ನಿತ್ಯಂ ವಿಶಾಲಮಮೃತಂ ಪರಂ ॥ ೧೨ ॥**

**ಅರ್ಥ ॥** ನಾಶಮಾಡಲ್ಪಟ್ಟ ಶತ್ರುಗಳುಳ್ಳವನು, ಅತ್ಯಂತವಾಗಿ ಸಂತುಷ್ಟನಾದವನು, ಸಾಕಲ್ಯವಾಗಿ ಯಾರಿಂದಲೂ ತಿಳಿಯಲಶಕ್ಯನು, ಉತ್ಪತ್ತಿಯಿಲ್ಲದಿರುವವನು, ನಿತ್ಯನು, ವ್ಯಾಪ್ತನು, ಮರಣವಿಲ್ಲದಿರು ವವನು, ಸರ್ವೋತ್ತಮನು, ಇಂತಹ ಶ್ರೀಹರಿಯನ್ನು ನಾನು ನಮಸ್ಕರಿಸುತ್ತೇನೆ. ॥ 12 ॥

**ಮೂಲ ॥ ಕೃತನಿತ್ಯಾಲಯಾಲೋಕೇ ನಮಸ್ಯಾಮಿ ಜಗತ್ಪತಿಂ ।**
**ಸುನಿತ್ಯ ಸುಖಮಕ್ಷಯ್ಯಂ ಶುದ್ಧಂ ಶಾಂತಂ ನಿರಂಜನಂ ॥ ೧೩ ॥**

**ಅರ್ಥ ॥** ಅತ್ಯಂತವಾಗಿ ನಿತ್ಯವಾದ ಆನಂದಸ್ವರೂಪನು, ವೃದ್ಧಿಹ್ರಾಸಗಳಿಲ್ಲದಿರುವವನು, ಶುದ್ಧನು, ರಾಗಾದಿದೋಷವಿರಹಿತನು, ಮುಕ್ತರಿಂದ ಮಾಡಲ್ಪಡತಕ್ಕ ಕರ್ಮವುಳ್ಳದ್ದು ನಿತ್ಯವಾದುದು ನಾಶವಿಲ್ಲದಿರುವುದು ಪ್ರಕಾಶರೂಪವಾದುದೂ ಆದ ಮುಕ್ತಿಯಲ್ಲಿರುವ ಇಂತಹ ಜಗತ್ಪತಿಯನ್ನು ನಮಸ್ಕರಿಸುವೆನು. ॥ 13 ॥

**ಮೂಲ ॥ ಲೋಕಾಲೋಕ ವಿಚಾರಾಢ್ಯಂ ನಮಸ್ಯಾಮಿ ಶ್ರಿಯಃ ಪತಿಂ ।**
**ಅಮಂದಾನಂದಸಂದೋಹ ಸಾಂದ್ರಮಿಂದ್ರಾನುಜಂ ಪರಂ ॥ ೧೪ ॥**

**ಅರ್ಥ ॥** 14 ಲೋಕಗಳು (ಬ್ರಹ್ಮಾಂಡದ ಒಳಗೂ) ಬ್ರಹ್ಮಾಂಡದಿಂದ ಹೊರಗೆ ಇರುವ ವಸ್ತುಗಳೂ ಇವುಗಳ ವಿಚಾರದಿಂದೊಡಗೂಡಿದವನು, ಅಥವಾ ಸೂರ್ಯಪ್ರಕಾಶವಿರುವುದು ಲೋಕವು, ಸೂರ್ಯಪ್ರಕಾಶವಿಲ್ಲದಿರುವುದು ಅಲೋಕವು, ಇವುಗಳಿಗೂ ನಿಯಾಮಕನಾಗಿ ವಿಚಾರಮಾಡಿಕೊಂಡಿರುವವನು, ಅಪರಿಮಿತಗಳಾದ ಆನಂದಗಳ ಸಮುದಾಯದಿಂದ ನಿಬಿಡನು, ಇಂದ್ರನ ಅನುಜನು, ಸರ್ವೋತ್ತಮನು, ಇಂತಹ ಲಕ್ಷ್ಮೀಪತಿಯನ್ನು ನಮಸ್ಕರಿಸುವೆನು. ॥ 14 ॥

**ಮೂಲ ॥ ನಿತ್ಯಾವದಾತಮೇಕಾಂತಂ ಪ್ರಣಮಾಮಿ ತಮಕ್ಷಯಂ ।**
**ಲೋಕಾಲೋಕಪತಿಂ ದಿವ್ಯಂ ನಮಸ್ಯಾಮಿ ರಮಾಪತಿಂ ॥ ೧೫ ॥**

**ಅರ್ಥ ॥** ನಿತ್ಯದಲ್ಲಿಯೂ ಶುಭ್ರನು, ದೋಷಗಂಧವಿದೂರನು, ಸರ್ವಸಂಹಾರಕನು, ನಾಶರಹಿತನು, ಇಂತಹ ಶ್ರೀಹರಿಯನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ. ಬ್ರಹ್ಮಾಂಡದ ಒಳಗೂ ಹೊರಗೂ ಸರ್ವಕ್ಕೂ ನಿಯಾಮಕನು, ಕ್ರೀಡಾದಿಗುಣವಿಶಿಷ್ಟನು, ಇಂತಹ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ನಮಸ್ಕರಿಸುವೆನು. ॥ 15 ॥

**ಇಂತು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ದ್ವಾದಶಸ್ತೋತ್ರದ ಕನ್ನಡ ವ್ಯಾಖ್ಯಾನವು ಸಮಾಪ್ತವಾಯಿತು. ॥ ಶ್ರೀಃ ॥**

**ತಂತ್ರನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ ।**
**ಭೂಯಾತ್ಕುಸುಮಮಾಲೇವ ಮುದೇ ಮಾಧವ ಮಧ್ವಯೋಃ ॥ ಶ್ರೀಃ ॥ ಶ್ರೀಃ ॥**

॥ ಶ್ರೀಃ ॥

# ಜಯಂತೀ ನಿರ್ಣಯವು

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**ಮೂಲ ॥ ರೋಹಿಣ್ಯಾಮರ್ಧರಾತ್ರೇ ತು ಯದಾ ಕಾಲಾಷ್ಟಮೀ ಭವೇತ್ ।**
**ಜಯಂತೀನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶ (ನಂ)ನೀ ॥ ೧ ॥**

**ಅರ್ಥ ॥** ಯದಾ=ಯಾವಾಗ, ಕಾಲಾಷ್ಟಮೀ=ಕೃಷ್ಣಪಕ್ಷದ ಅಷ್ಟಮಿಯು, ಅಂದರೆ ಸಿಂಹಮಾಸದ ಕೃಷ್ಣಪಕ್ಷದ ಅಷ್ಟಮಿಯು, ಅಥವಾ ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮಿಯು, ಅರ್ಧ ರಾತ್ರೇ ತು=ಅರ್ಧರಾತ್ರಿಕಾಲದಲ್ಲಿ ಆದರೂ, ರೋಹಿಣ್ಯಾಂ=ರೋಹಿಣೀ ನಕ್ಷತ್ರದಿಂದ ವ್ಯಾಪ್ತವಾದುದಾಗಿ, ಅಥವಾ ರೋಹಿಣಿ ನಕ್ಷತ್ರವಿರಲು, ಭವೇತ್=ಆಗುವುದೋ, ಸರ್ವಪಾಪಪ್ರಣಾಶಿನೀ=ಎಲ್ಲಾ ಪಾಪ ಗಳನ್ನೂ, ಚೆನ್ನಾಗಿ ನಾಶಮಾಡತಕ್ಕ, ಸಾ=ಆ ಕೃಷ್ಣಾಷ್ಟಮಿಯು, ಜಯಂತೀ ನಾಮ= ಜಯಂತಿಯೆಂದು, ಪ್ರೋಕ್ತಾ=ಹೇಳಲ್ಪಟ್ಟಿದೆ. ॥ 1 ॥

**ಮೂಲ ॥ ಯಸ್ಯಾಂ ಜಾತೋ ಹರಿಃ ಸಾಕ್ಷಾನ್ನಿಶೀಥೇ ಭಗವಾನಜಃ ।**
**ತಸ್ಮಾತ್ತದ್ದಿನಮತ್ಯಂತಂ(ತ್ಯರ್ಥಂ) ಪುಣ್ಯಂ ಪಾಪಹರಂ ಪರಂ ॥ ೨ ॥**

**ಅರ್ಥ ॥** ಯಸ್ಯಾಂ=ಯಾವ ಕೃಷ್ಣಾಷ್ಟಮೀ ತಿಥಿಯಲ್ಲಿ, ಅಜಃ=ಉತ್ಪತ್ತ್ಯಾದಿಗಳಿಲ್ಲದಿರುವ, ಸಾಕ್ಷಾತ್=ಮುಖ್ಯವಾಗಿ, ಹರಿಃ=ಶತ್ರು ಸಂಹಾರಕನಾದ ಶ್ರೀಕೃಷ್ಣನು, ನಿಶೀಥೇ=ಅರ್ಧರಾತ್ರಿಕಾಲದಲ್ಲಿ ಜಾತಃ=ಅವತರಿಸಿರುವನೋ, ತಸ್ಮಾತ್=ಆದಕಾರಣ, ತತ್=ಆ, ದಿನಂ=ದಿವಸವು, ಅತ್ಯಂತಂ (ಅತ್ಯರ್ಥಂ)=ಅತಿಶಯವಾಗಿ, ಪುಣ್ಯಂ=ಪುಣ್ಯಪ್ರದವಾದುದು, ಪಾಪಹರಂ=ಸರ್ವಪಾಪ ಪರಿಹಾರಕವು, ಪರಂ=ಸರ್ವೋತ್ಕೃಷ್ಟವು. ॥ 2 ॥

**ಮೂಲ ॥ ತಸ್ಮಾತ್ಸರ್ವೈರುಪೋಷ್ಯಾ ಸಾ ಜಯಂತೀನಾಮ ವೈ ಸದಾ ।**
**ದ್ವಿಜಾತಿಭಿರ್ವಿಶೇಷೇಣ ತದ್ಭಕ್ತೈಶ್ಚ ವಿಶೇಷತಃ (ವಿಧಾನತಃ) ॥ ೩ ॥**

**ಅರ್ಥ ॥** ತಸ್ಮಾತ್=ಆದುದರಿಂದ, ಸರ್ವೈಃ=ಸಮಸ್ತರಿಂದಲೂ, ಜಯಂತೀ ನಾಮ=ಜಯಂತಿ ಯೆಂದು ಪ್ರಸಿದ್ಧವಾದ, ಸಾ=ಆ ಕೃಷ್ಣಾಷ್ಟಮಿಯು, ಸದಾ=ಯಾವಾಗಲೂ, ವೈ=ನಿಶ್ಚಯವಾಗಿಯೂ, ಉಪೋಷ್ಯಾ=ಉಪವಾಸ ಮಾಡಲ್ಪಡಬೇಕು. ದ್ವಿಜಾತಿಭಿಃ=ಬ್ರಾಹ್ಮಣರಿಂದ, ವಿಶೇಷೇಣ=ವಿಶೇಷಾಕಾರ ವಾಗಿ, ಉಪೋಷ್ಯಾ=ಉಪವಾಸಮಾಡಲ್ಪಡಬೇಕು. ತದ್ಭಕ್ತೈಶ್ಚ=ವಿಷ್ಣುಭಕ್ತರಿಂದಲಾದರೂ, ವಿಶೇಷತಃ= ಅತಿವಿಶೇಷವಾಗಿ, (ವಿಧಾನತಃ=ವಿಧಿಪೂರ್ವಕವಾಗಿ) ಉಪೋಷ್ಯಾ=ಉಪವಾಸಮಾಡಲ್ಪಡಲೇಬೇಕು. ॥ 3 ॥

**ಮೂಲ ॥ ಯೋ ಭುಂಕ್ತೇ ತದ್ದಿನೇ ಮೋಹಾ (ಲೋಭಾ) ತ್ಪೂಯಶೋಣಿತಮತ್ತಿ ಸಃ ।**
**ತಸ್ಮಾದುಪವಸೇತ್ಪುಣ್ಯಂ ತದ್ದಿನಂ ಶ್ರದ್ಧಯಾನ್ವಿತಃ ॥ ೪ ॥**

**ಅರ್ಥ ॥** ತದ್ದಿನೇ=ಆ ದಿವಸದಲ್ಲಿ, ಯಃ=ಯಾವಾತನು, ಮೋಹಾತ್=ಅಜ್ಞಾನದಿಂದ, ಭುಂಕ್ತೇ=ಭೋಜನಮಾಡುತ್ತಾನೋ, ಸಃ=ಆತನು, ಪೂಯ=ರೆಸಿಗೆ, ಶೋಣಿತಂ=ರಕ್ತವೂ ಇವುಗಳನ್ನು, ಅತ್ತಿ=ತಿನ್ನುತ್ತಾನೆ. (ರೆಸಿಗೆ ರಕ್ತ ಇವುಗಳ ಭಕ್ಷಣದಂತೆಯೇ ಆದಿನ ಭೋಜನವೂ ಅತಿಗರ್ಹ್ಯವು. ಆದಕಾರಣ ಎಷ್ಟು ಮಾತ್ರಕ್ಕೂ ಆ ದಿನ ಭೋಜನಮಾಡಬಾರದು.) ತಸ್ಮಾತ್= ಆದಪ್ರಯುಕ್ತ, ಶ್ರದ್ಧಯಾ= ಆಸ್ತಿಕ್ಯಬುದ್ಧಿಯಿಂದ, ಅನ್ವಿತಃ=ಕೂಡಿದವನಾಗಿ, ಪುಣ್ಯಂ= ಪುಣ್ಯಪ್ರದವಾದ, ತತ್=ಆ, ದಿನಂ= ದಿವಸದಲ್ಲಿ ಉಪವಸೇತ್=ಉಪವಾಸಮಾಡತಕ್ಕುದು. (ನಿರಾಹಾರಿಯಾಗಿರಬೇಕು) ॥ 4 ॥

**ಮೂಲ ॥ ಕೃತ್ವಾ ಶೌಚಂ ಯಥಾನ್ಯಾಯಂ ಸ್ನಾನಂ ಕುರ್ಯಾದತಂದ್ರಿತಃ ।**
**ಪ್ರಭಾತಕಾಲೇ ಮೇಧಾವೀ ಯೋಗಾಯೇತಿ ಯಥಾವಿಧಿಃ ॥ ೫ ॥**

**ಅರ್ಥ ॥** ಮೇಧಾವೀ=ಜ್ಞಾನಿಯಾದವನು, ಪ್ರಭಾತಕಾಲೇ=ಬೆಳಗಿನ ಜಾಮದಲ್ಲಿ, ಯಥಾ ನ್ಯಾಯಂ=ಶಾಸ್ತ್ರಾನುಸಾರವಾಗಿ, ಶೌಚಂ=ಶೌಚಾಚಮನಾದಿಗಳನ್ನು, ಕೃತ್ವಾ=ಮಾಡಿ, ಯೋಗಾಯೇತಿ= 'ಯೋಗಾಯ ಯೋಗಪತಯೇ ಯೋಗೇಶ್ವರಾಯ ಯೋಗಸಂಭವಾಯ ಶ್ರೀಗೋವಿಂದಾಯ ನಮೋ ನಮಃ' ಎಂಬೀ ಮಂತ್ರವನ್ನು ಹೇಳಿ, ಯಥಾವಿಧಿ=ಶಾಸ್ತ್ರದಲ್ಲಿ ಹೇಳಿದ ಪ್ರಕಾರ, ಅತಂದ್ರಿತಃ= ಆಲಸ್ಯರಹಿತನಾದವನಾಗಿ, ಸ್ನಾನಂ=ಅವಗಾಹನ ಸ್ನಾನವನ್ನು, ಕುರ್ಯಾತ್=ಮಾಡಬೇಕು ॥ 5 ॥

**ಮೂಲ ॥ ನಿತ್ಯಾಹ್ನಿಕಂ ಪ್ರಕುರ್ವೀತ ಭಗವಂತಮನುಸ್ಮರನ್ ।**
**★ಯೋಗಾಯ ಯೋಗಪತಯೇ ಯೋಗೇಶ್ವರಾಯ.**
**ಯೋಗಸಂಭವಾಯ, ಶ್ರೀಗೋವಿಂದಾಯ ನಮೋನಮಃ ॥ ೬ ॥**

**ಅರ್ಥ ॥** ಭಗವಂತಂ=ಶ್ರೀಕೃಷ್ಣನನ್ನು, ಅನುಸ್ಮರನ್=ಸ್ಮರಿಸುವವನಾಗಿ, ನಿತ್ಯಾಹ್ನಿಕಂ=ನಿತ್ಯಕರ್ಮ ಗಳನ್ನು, ಪ್ರಕುರ್ವೀತ=ಮಾಡಬೇಕು. (ಯೋಗಾಯ=ಮೋಕ್ಷಸಾಧನನಾದ, ಯೋಗಪತಯೇ= ಯೋಗಗಳಿಗೂ ನಿಯಾಮಕನಾದ, ಯೋಗೇಶ್ವರಾಯ=ಸಮಾಧಿ ಯೋಗವುಳ್ಳ ಯೋಗಿಗಳಿಗೆ ನಿಯಾಮಕನಾದ, ಯೋಗಸಂಭವಾಯ - ಯೋಗಗಳಿಗೆ ಉತ್ಪಾದಕನಾದ, ಶ್ರೀಗೋವಿಂದಾಯ= ಶ್ರೀಗೋಪಾಲಕೃಷ್ಣನಿಗೋಸ್ಕರ, ನಮೋ ನಮಃ=ನಮಸ್ಕಾರವು) ॥ 6 ॥

**ಮೂಲ ॥ ಮಧ್ಯಾಹ್ನಕಾಲೇ ಚ ಪುಮಾನ್ಸಾಯಂಕಾಲೇ ತ್ವತಂದ್ರಿತಃ ।**
**ಸ್ನಾಯೀತ ಪೂರ್ವಮಂತ್ರೇಣ ವಾಸುದೇವಮನುಸ್ಮರನ್ ॥ ೭ ॥**

**ಅರ್ಥ ॥** ಪುಮಾನ್=ಪುರುಷನು, ಮಧ್ಯಾಹ್ನಕಾಲೇ ಚ=ಮಧ್ಯಾಹ್ನ ಕಾಲದಲ್ಲಿಯೂ, ಅತಂದ್ರಿತಃ=ಆಲಸ್ಯ ರಹಿತನಾದವನಾಗಿ, ವಾಸುದೇವಂ=ವಸುದೇವ ಪುತ್ರನಾದ ಶ್ರೀಕೃಷ್ಣನನ್ನು, ಅನುಸ್ಮರನ್=ಸ್ಮರಿಸುವವನಾಗಿ, ಪೂರ್ವಮಂತ್ರೇಣ=''ಯೋಗಾಯೇತಿ'' ಎಂದು ಹಿಂದೆ ಹೇಳಿದ ಮಂತ್ರದಿಂದಲೇ ಸ್ನಾಯೀತ=ಸ್ನಾನಮಾಡತಕ್ಕದು. ॥ 7 ॥

---

★ ಈ ಚಿಹ್ನೆಗೊಳಗಿನ ಪಾಠವು ಶ್ರೀಹೃಷೀಕೇಶತೀರ್ಥ ಲಿಖಿತ ಸರ್ವಮೂಲ ಪುಸ್ತಕದಲ್ಲಿಯೂ ಶ್ರೀಸೋದಾ ವಾದಿರಾಜಮಠದ ಪ್ರಾಚೀನ ಸರ್ವಮೂಲ ಪುಸ್ತಕದಲ್ಲಿಯೂ ಕಾಣುವುದಿಲ್ಲ.

**ಮೂಲ ॥ ತತಃ ಪೂಜಾಂ ಪ್ರಕುರ್ವೀತ ವಿಧಿವತ್ಸುಸಮಾಹಿತಃ ।**
**ಯಜ್ಞಾಯೇತಿ ಚ ಮಂತ್ರೇಣ ಶ್ರದ್ಧಾಭಕ್ತಿಯುತಃ ಪುಮಾನ್ ॥ ೮ ॥**

**ಅರ್ಥ ॥** ತತಃ=ಆಮೇಲೆ, ಪುಮಾನ್=ಪುರುಷನು, ವಿಧಿವತ್=ಶಾಸ್ತ್ರದಲ್ಲಿ ಹೇಳಿದ ಪ್ರಕಾರ, ಸುಸಮಾಹಿತಃ=ಚೆನ್ನಾಗಿ ಸಮಾಧಾನಯುಕ್ತನಾಗಿ, ಶ್ರೀಹರಿಯಲ್ಲೇ ಮನಸ್ಸನ್ನು ಇಟ್ಟವನಾಗಿ, ಶ್ರದ್ಧಾಭಕ್ತಿಯುತಃ=ಆಸ್ತಿಕ್ಯಬುದ್ಧಿಯೂ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವೂ ಇವುಗಳಿಂದೊಡಗೂಡಿದವನಾಗಿ, ಯಜ್ಞಾಯೇತಿ ಚ ಮಂತ್ರೇಣ='★ಯಜ್ಞಾಯ ಯಜ್ಞಪತಯೇ, ಯಜ್ಞೇಶ್ವರಾಯ ಯಜ್ಞಸಂಭವಾಯ ಶ್ರೀಗೋವಿಂದಾಯ ನಮೋ ನಮಃ ' ಎಂಬ ಮಂತ್ರದಿಂದ, ವಿಧಿವತ್=ವಿಧಿ ಪ್ರಕಾರ, ಪೂಜಾಂ=ಪೂಜೆಯನ್ನು, ಪ್ರಕುರ್ವೀತ=ಮಾಡಬೇಕು ॥ 8 ॥

**ಮೂಲ ॥ ಕೃಷ್ಣಂ ಚ ಬಲಭದ್ರಂ ಚ ವಸುದೇವಂ ಚ ದೇವಕೀಂ ।**
**ನಂದಗೋಪಂ ಯಶೋದಾಂ ಚ ಸುಭದ್ರಾಂ ತತ್ರ ಪೂಜಯೇತ್ ॥ ೯ ॥**

**ಅರ್ಥ ॥** ಕೃಷ್ಣಂ ಚ=ಶ್ರೀಕೃಷ್ಣನನ್ನು, ಬಲಭದ್ರಂ ಚ=ಬಲರಾಮನನ್ನು, ವಸುದೇವಂ ಚ= ವಸುದೇವನನ್ನು, ದೇವಕೀಂ=ದೇವಕೀದೇವಿಯನ್ನು, ನಂದಗೋಪಂ=ನಂದಗೋಪನನ್ನು, ಯಶೋದಾಂ=ಯಶೋದೆಯನ್ನು, ಸುಭದ್ರಾಂ ಚ=ಸುಭದ್ರಾದೇವಿಯನ್ನೂ ಕೂಡ, ತತ್ರ=ಅಲ್ಲಿ, ಪೂಜಯೇತ್=(ವಿಧಿಪ್ರಕಾರ ಭಕ್ತಿಯಿಂದ) ಪೂಜಿಸಬೇಕು. ॥ 9 ॥

**ಮೂಲ ॥ ಅರ್ಘ್ಯಂ ದತ್ವಾ ಸಮಭ್ಯರ್ಚ್ಯಾಭ್ಯುತ್ಥಿತೇ ಶಶಿಮಂಡಲೇ।**
**(ಅರ್ಘ್ಯಂ ದದ್ಯಾತ್ಸಮರ್ಚ್ಯಾಥಾಭ್ಯುದಿತೇ ಶಶಿ (ಸಮ)ಮಂಡಲೇ ॥**
**(ಜಾತಃ ಕಂಸವಧಾರ್ಥಾಯ ಭೂಭಾರೋತ್ತಾರಣಾಯ ಚ ।**
**ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ॥ ೧೦ ॥**

**ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾಯ ಚ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೊ ಹರೇ ॥ ೧೧ ॥**

**ಅರ್ಥ ॥** ಶಶಿಮಂಡಲೇ=ಚಂದ್ರಮಂಡಲವು, ಅಭ್ಯುತ್ಥಿತೇ ಸತಿ=ಉದಯಿಸುವಾಗ, ಸಮಭ್ಯರ್ಚ್ಯ=ಭಕ್ತಿಪೂರ್ವಕವಾಗಿ ಪೂಜಿಸಿ, ಅರ್ಘ್ಯಂ=ಅರ್ಘ್ಯವನ್ನು, ದತ್ವಾ=ಕೊಟ್ಟು, (ಧ್ಯಾನಿಸಬೇಕು) (ಶಶಿಮಂಡಲೇ=ಚಂದ್ರಮಂಡಲವು, ಅಭ್ಯುದಿತೇ ಸತಿ=ಉದಯಿಸಿಕೊಂಡು ಬರುವಾಗ, ಸಮರ್ಚ್ಯ=ಭಕ್ತಿಪೂರ್ವಕವಾಗಿ ಪೂಜಿಸಿ, ಅರ್ಘ್ಯಂ=ಅರ್ಘ್ಯವನ್ನು, ದದ್ಯಾತ್=ಕೊಡಬೇಕು.) (ಹರೇ=ಶತ್ರುಗಳನ್ನು ಸಂಹರಿಸಿ ಭಕ್ತರನ್ನುದ್ಧರಿಸುವ ಶ್ರೀಕೃಷ್ಣನೇ, ಕಂಸವಧಾರ್ಥಾಯ=ಕಂಸನನ್ನು ಕೊಲ್ಲುವುದೆಂಬುವ ಪ್ರಯೋಜನಕ್ಕೋಸ್ಕರವೂ, ಭೂಭಾರೋತ್ತಾರಣಾಯ ಚ=ಭೂಮಿಯ ಭಾರವನ್ನು ಕಳೆಯುವುದಕ್ಕೋಸ್ಕರವೂ, ಪಾಂಡವಾನಾಂ=ಪಾಂಡವರಿಗೆ, ಹಿತಾರ್ಥಾಯ=ಹಿತರೂಪ ಪ್ರಯೋಜನಕ್ಕೋಸ್ಕರವೂ, ಧರ್ಮಸಂಸ್ಥಾಪನಾಯ ಚ=ಸದ್ಧರ್ಮಗಳನ್ನು ಸ್ಥಾಪಿಸುವುದ

★ ಬ್ರಹ್ಮಾದಿಗಳಿಂದಲೂ ಯಾಗಮಾಡಲ್ಪಡತಕ್ಕವನು, ಯಾಗಗಳಿಗೆ ಪಾಲಕನು, ಯಾಗಗಳ ಸತ್ತಾದಿಗಳಿಗೂ ನಿಯಾಮಕನು,ಯಾಗಗಳಿಗೆ ಉತ್ಪಾದಕನೂ ಆದ ಶ್ರೀಕೃಷ್ಣನಿಗೋಸ್ಕರ ನಮಸ್ಕಾರವು.

ಕ್ಕೋಸ್ಕರವೂ, ಜಾತಃ=ಅವತರಿಸಿರುವಿ, ದೇವಕ್ಯಾ=ದೇವಕೀದೇವಿಯಿಂದ, ಸಹಿತಃ=ಕೂಡಿದವನಾಗಿ, ತ್ವಂ=ನೀನು, ಮಯಾ=ನನ್ನಿಂದ, ದತ್ತಂ=ಕೊಡಲ್ಪಡತಕ್ಕ, ಅರ್ಘ್ಯಂ=ಅರ್ಘ್ಯವನ್ನು, ಗೃಹಾಣ=ಸ್ವೀಕರಿಸು) ॥ 10 ॥ 11॥

**ಮೂಲ ॥ ಕ್ಷೀರೋದಾರ್ಣವಸಂಭೂತ ಅತ್ರಿಗೋ (ನೇ)ತ್ರಸಮುದ್ಭವ ।**
**ಗೃಹಾಣಾರ್ಘ್ಯಂ ಮಯಾ ದತ್ತಂ (ಶಶಾಂಕೇದಂ) ರೋಹಿಣ್ಯಾ ಸಹಿತಃ ।**
**ಶಶಿನ್ (ಸಹಿತೋ ಮಮ) ॥ ೧೨ ॥**

**ಅರ್ಥ ॥** (ಈ ಪ್ರಕಾರ ಶ್ರೀಕೃಷ್ಣನಿಗೆ ಅರ್ಘ್ಯವನ್ನು ಕೊಟ್ಟ ಮೇಲೆ ತುಲಸೀಕಟ್ಟೆಯ ಎದುರಿನಲ್ಲಿ ಚಂದ್ರನಿಗೂ ಅರ್ಘ್ಯವನ್ನು ಕೊಡಬೇಕು.) ಕ್ಷೀರೋದಾರ್ಣವಸಂಭೂತ=ಕ್ಷೀರಸಮುದ್ರದಲ್ಲಿ ಹುಟ್ಟಿದವನೇ, ಅತ್ರಿಗೋತ್ರ ಸಮುದ್ಭವ=ಅತ್ರಿ ಋಷಿಯ ಗೋತ್ರದಲ್ಲಿ ಹುಟ್ಟಿದವನೇ, (ಅತ್ರಿನೇತ್ರ ಸಮುದ್ಭವ=ಅತ್ರಿ ಋಷಿಯ ನೇತ್ರದಿಂದ ಹುಟ್ಟಿದವನೇ) ಶಶಿನ್=ಚಂದ್ರನೇ=(ಶಶಾಂಕ=ಶಶ (ಮೊಲ)ದ ಚಿಹ್ನೆಯಿರುವವನೇ, ರೋಹಿಣ್ಯಾ=ರೋಹಿಣೀ ದೇವಿಯಿಂದ, ಸಹಿತಃ=ಕೂಡಿದವನಾಗಿ, ತ್ವಂ=ನೀನು, ಮಯಾ=ನನ್ನಿಂದ, (ಇದಂ=ಈ) ದತ್ತಂ=ಕೊಡಲ್ಪಡತಕ್ಕ, ಅರ್ಘ್ಯಂ=ಅರ್ಘ್ಯವನ್ನು, ಗೃಹಾಣ=ಸ್ವೀಕರಿಸು. ॥ 12 ॥

**ಮೂಲ ॥ ದತ್ವಾರ್ಘ್ಯಂ ಮನುನಾನೇನ ಹ್ಯು(ಉ)ಪಸ್ಥಾಯ ವಿಧುಂ ಬುಧಃ ।**
**ಶಶಿನೇ ಚಂದ್ರದೇವಾಯ ಸೋಮದೇವಾಯ ಚೇಂದವೇ ॥ ೧೩ ॥**

**ಮೃಗಿಣೇ ಶೀತಬಿಂಬಾಯ ಲೋಕದೀಪಾಯ ದೀಪಿನೇ ।**
**ಶೀತದೀಧಿತಿಬಿಂಬಾಯ ತಾರಕಾಪತಯೇ ನಮಃ ॥ ೧೪ ॥**

**ಅರ್ಥ ॥** ಬುಧಃ=ಜ್ಞಾನಿಯಾದವನು, ವಿಧುಂ=ಚಂದ್ರನನ್ನು, ಉಪಸ್ಥಾಯ ಹಿ=ಆರಾಧಿಸಿಯೇ. ಅನೇನ ಮನುನಾ=ಈ ಹಿಂದೆ ಹೇಳಿದ ಮಂತ್ರದಿಂದಲೇ, ಅರ್ಘ್ಯಂ=ಅರ್ಘ್ಯವನ್ನು, ದತ್ವಾ=ಕೊಟ್ಟು (ಪ್ರಾರ್ಥಿಸತಕ್ಕುದು) ಮೃಗಿಣೇ=ಮೃಗಚಿಹ್ನೆಯುಳ್ಳವನೂ, ಶೀತಬಿಂಬಾಯ=ಶೀತಲವಾದ ಮಂಡಲವುಳ್ಳವನೂ, ಲೋಕದೀಪಾಯ=ಲೋಕಗಳನ್ನು ಪ್ರಕಾಶಪಡಿಸುವವನೂ, ದೀಪಿನೇ=ಪ್ರಕಾಶಸ್ವರೂಪನೂ, ಶೀತದೀಧಿತಿಬಿಂಬಾಯ=ಶೀತಗಳಾದ ಕಿರಣಗಳುಳ್ಳ ಮಂಡಲವುಳ್ಳವನೂ, ತಾರಕಾಪತಯೇ=ನಕ್ಷತ್ರಗಳಿಗೆ ಅಧಿಪತಿಯೂ, ಶಶಿನೇ=ಮೊಲವನ್ನು ಧರಿಸಿದವನೂ, ಚಂದ್ರದೇವಾಯ=ಆಹ್ಲಾದಕರನಾದ ದೇವನೂ, ಸೋಮದೇವಾಯ ಚ=ಅಮೃತವನ್ನು ಸುರಿಸುವ ದೇವನೂ ಆದ, ಇಂದವೇ=ಚಂದ್ರನಾದ ನಿನಗೋಸ್ಕರ, ನಮಃ=ನಮಸ್ಕಾರವು. ॥ 13 ॥ 14 ॥

**ಮೂಲ ॥ ಉಪಸಂಹೃತ್ಯ ತತ್ಸರ್ವಂ ಬ್ರಹ್ಮಚಾರೀ ಜಿತೇಂದ್ರಿಯಃ ।**
**ವಿಶ್ವಾಯೇತಿ ಚ ಮಂತ್ರೇಣ ತತಃ ಸ್ವಾಪಂ ಸಮಾಚರೇತ್ ॥ ೧೫ ॥**

**ತತೋ ನಿತ್ಯಾಹ್ನಿಕಂ ಕೃತ್ವಾ ಶಕ್ತಿತೋ ದೀಯತಾಂ ಧನಂ ।**
**ಸರ್ವಾಯೇತಿ ಚ ಮಂತ್ರೇಣ ತತಃ ಪಾರಣಮಾಚರೇತ್ ॥ ೧೬ ॥**
**ಧರ್ಮಾಯೇತಿ ತತಃ ಸ್ವಸ್ಥೋಮುಚ್ಯತೇ ಸರ್ವಕಿಲ್ಬಿಷೈಃ ॥ ೧೭ ॥**

**ಅರ್ಥ ॥** ತತ್ಸರ್ವಂ=ಅವೆಲ್ಲವನ್ನೂ, (ಪೂಜಾದಿಗಳನ್ನು) ಉಪಸಂಹೃತ್ಯ=ಉಪಸಂಹಾರಮಾಡಿ (ಸಮಾಪಿಸಿ) ಬ್ರಹ್ಮಚಾರೀ=ಬ್ರಹ್ಮಚರ್ಯ ವ್ರತವುಳ್ಳವನಾಗಿ, ಜಿತೇಂದ್ರಿಯಃ=ಸರ್ವೇಂದ್ರಿಯಗಳನ್ನೂ ನಿಗ್ರಹಿಸಿದವನಾಗಿ, (ಇಂದ್ರಿಯಗಳಿಗೆ ವಶನಾಗದೆ ಶ್ರೀಕೃಷ್ಣನನ್ನೇ ಚಿಂತಿಸಿಕೊಂಡು,) ತತಃ=ಆ ಮೇಲೆ, ವಿಶ್ವಾಯೇತಿ ಚ ಮಂತ್ರೇಣ='ವಿಶ್ವಾಯ ವಿಶ್ವಪತಯೇ ವಿಶ್ವೇಶ್ವರಾಯ ವಿಶ್ವಸಂಭವಾಯ ಶ್ರೀಗೋವಿಂದಾಯ ನಮೋ ನಮಃ' ಎಂಬ ಮಂತ್ರದಿಂದ (ಈ ಮಂತ್ರವನ್ನುಚ್ಚರಿಸುತ್ತಾ) ಸ್ವಾಪಂ=ನಿದ್ರೆಯನ್ನು, ಸಮಾಚರೇತ್=ಮಾಡಬೇಕು. ತತಃ=ಆಮೇಲೆ, ಬೆಳಗಿನ ಜಾಮದಲ್ಲಿ ಎದ್ದು ಮುಖಪ್ರಕ್ಷಾಲನ ಸ್ನಾನಾದಿಗಳನ್ನು ಮಾಡಿದ ಮೇಲೆ, ನಿತ್ಯಾಹ್ನಿಕಂ=ಸಂಧ್ಯಾವಂದನ ಜಪ ತರ್ಪಣ ಪೂಜಾದಿಗಳನ್ನು, ಕೃತ್ವಾ=ಮಾಡಿ, ಶಕ್ತಿತಃ=ತಮ್ಮ ತಮ್ಮ ಶಕ್ಯನುಸಾರವಾಗಿ, ಧನಂ=ದಕ್ಷಿಣಾದಿಗಳು, ದೀಯತಾಂ=(ಭಕ್ತರಿಂದ) ದಾನಮಾಡಲ್ಪಡಬೇಕು, ತತಃ=ಆಮೇಲೆ, ಬ್ರಾಹ್ಮಣರಿಗೆ ಭೋಜನಾದಿಗಳನ್ನು ಮಾಡಿಸಿದಮೇಲೆ, ಸರ್ವಾಯೇತಿ ಚ ಮಂತ್ರೇಣ='ಸರ್ವಾಯ ಸರ್ವಪತಯೇ ಸರ್ವೇಶ್ವರಾಯ ಸರ್ವಸಂಭವಾಯ ಶ್ರೀಗೋವಿಂದಾಯ ನಮೋ ನಮಃ' ಎಂಬ ಮಂತ್ರದಿಂದ, ಪಾರಣಂ= ಭೋಜನವನ್ನು, ಆಚರೇತ್=ಮಾಡಬೇಕು. ತತಃ=ಆಮೇಲೆ, ಧರ್ಮಾಯೇತಿ= 'ಧರ್ಮಾಯ ಧರ್ಮಪತಯೇ ಧರ್ಮೇಶ್ವರಾಯ ಧರ್ಮಸಂಭವಾಯ ಶ್ರೀಗೋವಿಂದಾಯ ನಮೋ ನಮಃ' ಎಂಬ ಮಂತ್ರದಿಂದ, ಸ್ವಸ್ಥಃ=ಸ್ವಸ್ಥಚಿತ್ತನೂ, (ಅಂದರೆ ಇತರತ್ರ ಮನಸ್ಸು ಇಡದೆ ಶ್ರೀಕೃಷ್ಣನನ್ನೇ ಧ್ಯಾನಿಸುತ್ತಾ ಇದ್ದವನಾಗಿ ಕೃಷ್ಣಾರ್ಪಣ ಬಿಟ್ಟು) ಸರ್ವಕಿಲ್ಬಿಷೈಃ=ಎಲ್ಲಾ ಪಾಪಗಳಿಂದಲೂ, ಮುಚ್ಯತೇ=ಬಿಡಲ್ಪಡುತ್ತಾನೆ. ಸಂಪೂರ್ಣ ದುಃಖಗಳು ನಿವೃತ್ತಗಳಾಗಿ ಸ್ವರೂಪಾನಂದಾವಿರ್ಭಾವ ರೂಪವಾದ ಮುಕ್ತಿಯನ್ನು ಕ್ರಮದಿಂದ ಹೊಂದುವರು. ॥ 15 ॥ 16 ॥ 17 ॥

**ತಾತ್ಪರ್ಯ ॥** (1) ಮಾಧ್ವರಲ್ಲಿ ಕೆಲವರು (ಮತತ್ರಯದವರು) ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮಿಯನ್ನು ಜನ್ಮಾಷ್ಟಮಿಯೆಂದಂಗೀಕರಿಸಿರುವರು. ಈ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. '' ಶ್ರಾವಣೇ ಬಹುಲೇ ಪಕ್ಷೇ ಕೃಷ್ಣ ಜನ್ಮಾಷ್ಟಮೀ ವ್ರತಂ । ನ ಕರೋತಿ ನರೋ ಯಸ್ತು ಭವತಿ ಕ್ರೂರರಾಕ್ಷಸಃ ॥ ಕೃಷ್ಣಾಷ್ಟಮೀ ದಿನೇ ಪ್ರಾಪ್ತೇ ಯೇನ ಭುಕ್ತಂ ದ್ವಿಜೋತ್ತಮ । ತ್ರೈಲೋಕ್ಯಸಂಭವಂ ಪಾಪಂ ತೇನ ಭುಕ್ತಂ ನ ಸಂಶಯಃ ''॥ ಶ್ರಾವಣ ಮಾಸದ ಕೃಷ್ಣಪಕ್ಷದಲ್ಲಿ ಕೃಷ್ಣಜನ್ಮಾಷ್ಟಮಿ ವ್ರತವನ್ನು ಯಾರು ಮಾಡುವುದಿಲ್ಲವೋ, ಅವರು ಕ್ರೂರರಾಕ್ಷಸರು ಆಗುತ್ತಾರೆ. ಆ ದಿವಸದಲ್ಲಿ ಯಾರು ಭೋಜನಮಾಡುತ್ತಾರೋ ಅಂತಹವರಿಗೆ ಮೂರು ಲೋಕಗಳಲ್ಲಿ ಮಾಡಿದ ಪಾಪವೂ ಸಂಭವಿಸುತ್ತದೆ; ಇತ್ಯಾದ್ಯನೇಕ ಪ್ರಮಾಣಗಳು ಇರುವುದರಿಂದ ಶ್ರಾವಣ ಕೃಷ್ಣಾಷ್ಟಮಿಯಲ್ಲಿ ಜನ್ಮಾಷ್ಟಮೀ ವ್ರತವನ್ನಾಚರಿಸುವರು. 'ಯಸ್ಮಿನ್ನಬ್ದೇ ಭಾದ್ರಪದೇಽಥಮಾಸೇ' ಎಂದು ಶ್ರೀಮದಾಚಾರ್ಯರು ಹೇಳಿದ್ದಾಗ್ಯೂ ಪೂರ್ಣಿಮಾಂತಮಾಸವನ್ನು ಇಟ್ಟುಕೊಂಡರೆ ಭಾದ್ರಪದ ಮಾಸವೆಂದು ಹೇಳಿದ್ದೂ ಯುಕ್ತವಾಗುವುದು, ಅಂತೂ ಆಚಾರ್ಯರು ಪೂರ್ಣಿಮಾಂತ ಮಾಸವನ್ನು ಇಟ್ಟುಕೊಂಡು ಹೇಳಿದ್ದಾಗಿರುತ್ತದೆ. ಆದಕಾರಣ ಪರಸ್ಪರ ವಿರೋಧವಿಲ್ಲವು ಎಂದು ಉಪಪತ್ತಿಮಾಡಿಕೊಂಡು ಶ್ರಾವಣ ಬಹುಳದಲ್ಲಿಯೇ ಜನ್ಮಾಷ್ಟಮಿಯನ್ನಾಚರಿಸುವರು.

(2) ಇನ್ನು ಕೆಲವರು (ತೌಳವರಲ್ಲಿರುವ ಮಾಧ್ವಮತದವರೆಲ್ಲರೂ) ಸಿಂಹಮಾಸದ ಕೃಷ್ಣಪಕ್ಷದ ಅಷ್ಟಮಿಯನ್ನು ಜನ್ಮಾಷ್ಟಮಿಯೆಂದುಪಪಾದಿಸುತ್ತಾ ಆಚರಿಸುತ್ತಾರೆ. ಏಕೆಂದರೆ- ''ತಥಾ ಭಾದ್ರಪದೇ ಮಾಸಿ ಕೃಷ್ಣಾಷ್ಟಮ್ಯಾಂ ಕಲೌಯುಗೇ । ಅಷ್ಟಾವಿಂಶತಿಮೇ ಜಾತಃ ಕೃಷ್ಣೋಽಸೌ ದೇವಕೀಸುತಃ''॥

ಭಾದ್ರಪದಮಾಸದಲ್ಲಿ 28ನೇ ಕಲಿಯುಗದಲ್ಲಿ ಕೃಷ್ಣಪಕ್ಷದ ಅಷ್ಟಮಿಯಲ್ಲಿ ಕೃಷ್ಣನು ಅವತರಿಸಿರುವನು, ಎಂದು ಬ್ರಾಹ್ಮಪುರಾಣದಲ್ಲಿದೆ. ಹೀಗೆಯೇ ಅನೇಕ ಪ್ರಮಾಣಗಳು ಸಾರುತ್ತಿವೆ. ಮತ್ತು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ''ಯಸ್ಮಿನ್ನಬ್ದೇ ಭಾದ್ರಪದೇಽಥಮಾಸ ಸಿಂಹಸ್ಥಯೋರ್ಗುರುರವ್ಯೋಃ ಪರೇಶಃ । ಉದೈತ್''॥ ಎಂದು ಹೇಳಿರುವರು. ಇದಕ್ಕೆ ಭಾವಿಸಮೀರ ಶ್ರೀಮದ್ವಾದಿರಾಜ ಶ್ರೀಮಚ್ಚರಣರು ''ಯಸ್ಮಿನ್ ಸಂವತ್ಸರೇ ಅಧಿಮಾಸಪ್ರಾಪ್ತೌ ಸತ್ಯಾಂ ಭಾದ್ರಪದೇ ಮಾಸಿ ರವಿಃ ಸಿಂಹರಾಶಿಂ ಗತೋ ಭವತಿ'' ಇತ್ಯಾದಿ, ಯಾವ ಸಂವತ್ಸರದಲ್ಲಿ ಅಧಿಕಮಾಸವು ಪ್ರಾಪ್ತಿಯಾಗಲು ಭಾದ್ರಪದಮಾಸದಲ್ಲಿ ಸೂರ್ಯನು ಸಿಂಹರಾಶಿಯಲ್ಲಿ ಹೋಗುವನೋ, ಕೃಷ್ಣಾವತಾರ ಸಮಯದಲ್ಲಿ ಬೃಹಸ್ಪತ್ಯಾಚಾರ್ಯರೂ ಕೂಡ ಸಿಂಹರಾಶಿಯಲ್ಲಿದ್ದರು. ಆಗ ದರ್ಶಮಾಸರೀತಿಯಾಗಿ ಭಾದ್ರಪದ ಮಾಸವೂ ಸೌರಮಾಸರೀತಿಯಾಗಿ ಶ್ರಾವಣಮಾಸವೂ ಅಂದರೆ ಸಿಂಹಮಾಸವೂ ಆಗುವುದು. ಆ ಸಂವತ್ಸರದಲ್ಲಿ ಕೃಷ್ಣಾವತಾರವು ಎಂಬ ಅಭಿಪ್ರಾಯದಿಂದ 'ಯಸ್ಮಿನ್ನಬ್ದೇ' ಎಂದು ಹೇಳಿರುವರು. ಹೀಗೆ ದ್ವಿವಿಧಮಾಸದ ಯೋಗವು ಆಗಿಂದಾಗ್ಗೆ ಸಂಭವಿಸುವುದು. ಸರ್ವದಾ ಸಂಭವಿಸಲಾರದು, ಇಂತಹ ಯೋಗವು ಸಿಗದಿದ್ದರೆ ಕೇವಲ ಸಿಂಹಮಾಸದಲ್ಲಿಯೂ ಮಾಡಲ್ಪಡುತ್ತದೆ, ಎಂದು ವ್ಯಾಖ್ಯಾನಮಾಡಿರುವರು. ಆದಕಾರಣ ಸಿಂಹ ಬಹುಳ ಅಷ್ಟಮಿಯೇ ಜನ್ಮಾಷ್ಟಮಿಯು. ಭಾದ್ರಮಾಸಯೋಗವಿದ್ದರೆ ಪ್ರಶಸ್ತವು, ಬಹುಪ್ರಮಾಣಗಳಲ್ಲಿ ತೋರುವ ಶ್ರಾವಣಶಬ್ದವು ಸಿಂಹಪರವೆಂದೂ ಹೇಳುವರು. (3) ಇಂತಹ ಅಷ್ಟಮಿಯು 2 ವಿಧವು. 1 ಕೇವಲ ಜನ್ಮಾಷ್ಟಮಿಯು, 2ನೇದ್ದು 'ಜಯಂತೀ' ಇವುಗಳಲ್ಲಿ ಶ್ರೀಮದಾಚಾರ್ಯರು ಜಯಂತೀನಿರ್ಣಯವನ್ನು ಮಾಡಿರುವರು. ಕೃಷ್ಣಜನ್ಮಾಷ್ಟಮಿಯೇ ಅರ್ಧರಾತ್ರಿಯಲ್ಲಿ ರೋಹಿಣೀ ನಕ್ಷತ್ರದಿಂದೊಡಗೂಡಿರುವ ಪಕ್ಷದಲ್ಲಿ 'ಜಯಂತೀ,' ಎನ್ನಿಸುತ್ತದೆ. ಇದು ಮಾಡದೆ ಇದ್ದರೆ ಪ್ರತ್ಯವಾಯವೂ ಮಾಡಿದರೆ ಫಲವಿಶೇಷವೂ ಶ್ರುತವಾದುದರಿಂದ ನಿತ್ಯಕಾಮ್ಯವೆನ್ನಿಸುತ್ತದೆ. ''ಅಷ್ಟಮೀ ಕೃಷ್ಣಪಕ್ಷಸ್ಯ ರೋಹಿಣೀ ಋಕ್ಷಸಂಯುತಾ। ಭವೇತ್ ಪ್ರೌಷ್ಠಪದೇ ಮಾಸಿ ಜಯಂತೀ ನಾಮ ಸಾ ಸ್ಮೃತಾ''॥ ಭಾದ್ರಪದ ಮಾಸದಲ್ಲಿ ಕೃಷ್ಣಪಕ್ಷದ ಅಷ್ಟಮಿಯು ರೋಹಿಣೀ ನಕ್ಷತ್ರದಿಂದೊಡಗೂಡಿದರೆ 'ಜಯಂತೀ' ಎನ್ನಿಸುತ್ತದೆ. ಎಂದು ವಿಷ್ಣುರಹಸ್ಯಾದಿಗಳಲ್ಲಿರುವುದರಿಂದ ಜನ್ಮಾಷ್ಟಮಿಯೇ ರೋಹಿಣೀ ನಕ್ಷತ್ರದಿಂದ ಯುಕ್ತವಾದರೆ 'ಜಯಂತೀ' ಎನ್ನಿಸುತ್ತದೆ. ''ಅಷ್ಟಮೀ ರೋಹಿಣೀಯುಕ್ತಾ ನಿಶ್ಯರ್ಧೇ ದೃಶ್ಯತೇ ಯದಾ। ಮುಖ್ಯಕಾಲಸ್ಸ ವಿಜ್ಞೇಯಸ್ತತ್ರ ಜಾತೋ ಹರಿಃ ಸ್ವಯಂ''॥ ಹಗಲುರಾತ್ರಿ ರೋಹಿಣೀ ಯೋಗವಿದ್ದರೆ ಅದು ಮುಖ್ಯಕಾಲವು. ''ಅರ್ಧರಾತ್ರೇ ತು ಯೋಗೋಽಯಂ ತಾರಾಪತ್ಯುದಯೇ ಸತಿ । ನಿಯತಾತ್ಮಾ ಶುಚಿಃಸ್ನಾತಃ ಪೂಜಾಂ ತತ್ರ ಪ್ರವರ್ತಯೇತ್ '' ॥ ಅರ್ಧರಾತ್ರಿಕಾಲದಲ್ಲಿ ಚಂದ್ರೋದಯವಾಗುವಾಗ ಸ್ನಾನಾದಿಗಳನ್ನು ಮಾಡಿ ಪೂಜೆಯನ್ನು ಮಾಡಬೇಕು. ಎಂದು ವಿಷ್ಣುಧರ್ಮದಲ್ಲಿ ಹೇಳಿರುತ್ತದೆ. (4) ''ವಾಸರೇ ವಾ ನಿಶಾಯಾಂ ವಾ ಯತ್ರ ಸ್ವಲ್ಪಾಪಿ ರೋಹಿಣೀ । ವಿಶೇಷೇಣ ನಭೋ ಮಾಸೇ ಸೈವೋಪೋಷ್ಯಾ ಮನೀಷಿಭಿಃ'' ಎಂದು ವಸಿಷ್ಠ ಸ್ಮೃತಿಯಿದ್ದುದರಿಂದ ಆ ದಿನವೂ ಮುಖ್ಯವಾಗಿಯೇ ಉಪವಾಸಮಾಡಬೇಕು. (5) ''ಕೃಷ್ಣಾಷ್ಟಮ್ಯಾಂ ಭವೇದ್ಯತ್ರ ಕಲೈಕಾ ರೋಹಿಣೀ ನೃಪ । ಜಯಂತೀ ನಾಮ ಸಾ ಜ್ಞೇಯಾ ಉಪೋಷ್ಯಾ ಸಾ ಪ್ರಯತ್ನತಃ ''। ಎಂದಿರುವುದರಿಂದ ರಾತ್ರಿಯಲ್ಲಿ ಮಾತ್ರ ರೋಹಿಣೀಯೋಗವಿದ್ದರೆ ಮಧ್ಯಮವೆಂದೂ ಹಗಲಿನಲ್ಲಿ ಮಾತ್ರವಿದ್ದರೆ ಅಧಮವೆಂದೂ ತಿಳಿಯಬೇಕು. (6) ಜನ್ಮಾಷ್ಟಮೀದಿನ ಸರ್ವರೂ ಉಪವಾಸ ಮಾಡಬೇಕೆಂದು ಶಿವಪುರಾಣದಲ್ಲಿಯೂ ಹೇಳಿರುತ್ತದೆ. ''ವಿಹಿತಃ ಸರ್ವಜಾತೀನಾಮು-

ಪೋಷಣವಿಧಿಃ ಪರಃ'' ಎಂದು. ''ವಾಲಖಿಲ್ಯಾದಿಭಿರ್ವಿಪ್ರೈ ಸನಕಾದ್ಯೈರ್ಮುನೀಶ್ವರೈಃ। ಕೃತಂ ಧರ್ಮವಿವೃದ್ಧ್ಯರ್ಥಂ ಜಯಂತೀ ಸಮುಪೋಷಣಂ'' ॥ ಎಂದು ಭವಿಷ್ಯೋತ್ತರದಲ್ಲಿ, ಅಂದರೆ ವಾಲಖಿಲ್ಯ ಮೊದಲಾದ ಬ್ರಾಹ್ಮಣರು, ಸನಕಾದಿ ಋಷಿಗಳು ಎಲ್ಲರೂ ಧರ್ಮವು ಅಭಿವೃದ್ಧಿಯಾಗುವುದಕ್ಕಾಗಿ ಜಯಂತಿಯಲ್ಲಿ ಉಪವಾಸಮಾಡುತ್ತಿರುವರು. ''ದ್ವಿಜಾತಿಭಿರ್ವಿಶೇಷೇಣ ತದ್ಭಕ್ತೈಶ್ಚ ವಿಧಾನತಃ'' ॥ ಬ್ರಾಹ್ಮಣರು ವಿಶೇಷತಃ ಮಾಡಬೇಕು. ವಿಷ್ಣುವಿನ ಭಕ್ತರು ವಿಶೇಷತಃ ವಿಧಿ ಪ್ರಕಾರ ಉಪವಾಸಮಾಡಬೇಕು. ಎಂದು ವಿಷ್ಣುತೀರ್ಥೀಯದಲ್ಲಿದೆ. ಅಲ್ಲದೆ ಕ್ಷತ್ರಿಯರ ವಿಷಯದಲ್ಲಿ ಭವಿಷ್ಯೋತ್ತರದಲ್ಲಿ ''ಅಂಬರೀಷೇಣ ಶೂರೇಣ ಧುಂಧುಮಾರೇಣ ಗಾಧಿನಾ। ಸಗರೇಣ ಕಕುತ್ಸ್ಥೇನ ದಿಲೀಪೇನ ಮಹಾತ್ಮನಾ । ಮಾಂಧಾತ್ರಾ ಚ ಸುಹೋತ್ರೇಣ ಜನಕೇನ ಯಶಸ್ವಿನಾ । ಶತಧನ್ವನಾ ಜಯಂತೇನೋತ್ತರೇಣ ಸುಮಂತುನಾ ॥ ಏತೈರನ್ಯೈಶ್ಚ ರಾಜೇಂದ್ರೈರ್ಧರ್ಮಜ್ಞೈಃ ಸತ್ಯವಾದಿಭಿಃ । ತುಷ್ಟ್ಯರ್ಥಂ ದೇವಕೀ ಸೂನೋರ್ಜಯಂತೀ ಸಮುಪೋಷಿತಾ'' ॥ ಅಂಬರೀಷಾದಿ ರಾಜರೂ ಶ್ರೀಕೃಷ್ಣನಿಗೆ ತುಷ್ಟಿಯಾಗುವುದಕ್ಕಾಗಿ ಜಯಂತೀದಿನ ಉಪವಾಸಮಾಡಿರುವರು.

(7) ಸ್ತ್ರೀಯರ ವಿಷಯದಲ್ಲಿ ಭವಿಷ್ಯೋತ್ತರದಲ್ಲಿ ''ವರ್ಷೇ ವರ್ಷೇ ತು ಯಾ ನಾರೀ ಕೃಷ್ಣಜನ್ಮಾಷ್ಟಮೀ ವ್ರತಂ । ನ ಕರೋತಿ ಮಹಾಭಾಗ ವ್ಯಾಲೀಭವತಿ ಕಾನನೇ'' ಯಾವ ಸ್ತ್ರೀಯರು ಪ್ರತಿವರ್ಷವೂ ಕೃಷ್ಣಜನ್ಮಾಷ್ಟಮೀ ವ್ರತವನ್ನು ಮಾಡುವುದಿಲ್ಲವೋ ಅವರು ಸರ್ಪರಾಗಿ ಹುಟ್ಟುತ್ತಾರೆ.

(8) ಬ್ರಹ್ಮಾ॥ ''ಶೃಣು ವತ್ಸ ಪ್ರವಕ್ಷ್ಯಾಮಿ ಪ್ರಭಾವಂ ಚಾಷ್ಟಮೀ ವ್ರತೇ । ಜಯಂ ಪುಣ್ಯಸ್ಯ ಕುರುತೇ ಕ್ಷಯಂ ಪಾಪಸ್ಯ ಕರ್ಮಣಃ ॥ ಸ್ಮರಣಾತ್ ಕೀರ್ತನಾತ್ಪಾಪಂ ಸಪ್ತಜನ್ಮಾರ್ಜಿತಂ ಮುನೇ । ಜಯಂತೀ ದಹತೇ ಪಾಪಂ ಕಿಂ ಪುನಶ್ಚೋಪವಾಸಿನಾಂ ॥'' ಬ್ರಹ್ಮನು ನಾರದನ ಹತ್ತಿರ ಹೇಳುವನು. ಅಷ್ಟಮೀ ವ್ರತದ ಪ್ರಭಾವವನ್ನು ಕೇಳು. ಹೇಳುವೆನು. ಪುಣ್ಯಾಭಿವೃದ್ಧಿಯೂ ಪಾಪಗಳಿಗೆ ನಾಶವೂ ಆಗುವುದು; ಸ್ಮರಣಸಂಕೀರ್ತನೆಗಳನ್ನು ಮಾಡೋಣದರಿಂದಲೇ ಏಳು ಜನ್ಮಗಳಲ್ಲಿ ಆರ್ಜಿತವಾದ ಪಾಪವನ್ನು ಜಯಂತಿಯು ಸುಟ್ಟುಬಿಡುತ್ತದೆ; ಉಪವಾಸಮಾಡಿದವರ ಪಾಪವು ನಾಶವಾಗುತ್ತದೆಂದು ಏನು ಹೇಳಬೇಕಾಗಿದೆ? ಆದಕಾರಣ ಸರ್ವರೂ ಉಪವಾಸ ಮಾಡಲೇಬೇಕು.

(9) ತಥಾ ಚ ಶ್ರಾವಣ ಬಹುಳ ಅಷ್ಟಮಿಯು ಅಥವಾ ಸಿಂಹ ಬಹುಳ ಅಷ್ಟಮಿಯು ಜನ್ಮಾಷ್ಟಮಿಯೆಂದೂ ರೋಹಿಣೀ ನಕ್ಷತ್ರದಿಂದೊಡಗೂಡಿದರೆ 'ಜಯಂತೀ' ಎಂದೂ ಪ್ರಸಿದ್ಧವಾಯಿತು. ಈ ನಿತ್ಯ ಮತ್ತು ನಿತ್ಯಕಾಮ್ಯಗಳಾದ 2 ವ್ರತಗಳನ್ನು ಸರ್ವರೂ ಮಾಡಬೇಕು. ಭಕ್ತರಂತೂ ಮಾಡಲೇಬೇಕು. ಹಿಂದೆ ಹೇಳಿದ ರೀತಿಯಾಗಿ ಮಹಾಭಕ್ತಿಪುರಸ್ಸರವಾಗಿ ಮಾಡಿದರೆ ಐಹಿಕದಲ್ಲಿಯೂ ಸುಖಿಗಳಾಗಿಯೇ ಇದ್ದು ಮೋಕ್ಷಾದಿಪುರುಷಾರ್ಥಗಳನ್ನು ಹೊಂದುವರು. ॥ 15 ॥ 16 ॥ 17 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೋ ಜಯಂತೀನಿರ್ಣಯಃ ಸಂಪೂರ್ಣಃ ॥ ಶ್ರೀಃ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಜಯಂತೀನಿರ್ಣಯವು ಸಮಾಪ್ತವಾಯಿತು. ॥ ಶ್ರೀಃ ॥**

॥ ಶ್ರೀಃ ॥

# ಶ್ರೀಕೃಷ್ಣಸ್ತುತಿಯು

ಶ್ರೀಮದ್ಹನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**★ ಮೂಲ ॥ ಅಂಬರಗಂಗಾ ಚುಂಬಿತ ಪಾದಃ;**
**ಪದತಲ ವಿದಲಿತ ಗುರುತರ ಶಕಟಃ ।**
**ಕಾಲಿಯನಾಗ ಕ್ಷ್ವೇಲನಿಹಂತಾ**
**ಸರಸಿಜ ನವ ದಲ ವಿಕಸಿತ ನಯನಃ ॥ ೧ ॥**

**ಕಾಲಘನಾಲೀ ಕರ್ಬುರ ಕಾಯಃ**
**ಶರಶತ ಶಕಲಿತ ಸುರರಿಪು ನಿವಹಃ ।**
**ಸಂತತಮಸ್ಮಾನ್ಪಾತು ಮುರಾರಿಃ**
**ಸತತಗ ಸಮಜವ ಖಗಪತಿ ನಿರತಃ ॥ ೨ ॥**

**ಅರ್ಥ ॥** ಅಂಬರಗಂಗಾ ಚುಂಬಿತಪಾದಃ=ಆಕಾಶಗಂಗೆಯಿಂದ ಚೆನ್ನಾಗಿ ಸಂಬದ್ಧಗಳಾದ ಚರಣಗಳುಳ್ಳ, ಪದತಲವಿದಲಿತಗುರುತರಶಕಟಃ=ಪಾದತಲದಿಂದ ನಾಶಮಾಡಲ್ಪಟ್ಟ ಅತಿ ದೊಡ್ಡ ಬಂಡಿಯುಳ್ಳ (ಹೆಚ್ಚು ಪರಾಕ್ರಮಶಾಲಿಯಾದ ಶಕಟಾಸುರನುಳ್ಳ), ಕಾಲಿಯನಾಗಕ್ಷ್ವೇಲ ನಿಹಂತಾ=ಕಾಳಿಂಗ ಸರ್ಪನ ವಿಷವನ್ನು ನಾಶಮಾಡಿದವನೂ, ಸರಸಿಜ ನವ ದಲ ವಿಕಸಿತ ನಯನಃ=ಕಮಲದ ನೂತನವಾದ ದಳದಂತೆ ಅರಳಿದ ಕಣ್ಣುಗಳುಳ್ಳವನು, ಕಾಲಘನಾಲೀಕರ್ಬುರಕಾಯಃ=ಶ್ಯಾಮವಾದ ಮೇಘಗಳ ಪಙ್ಕ್ತಿಯಂತೆ ಮಿಶ್ರವಾದ ಶರೀರವುಳ್ಳವನು, ಶರಶತಶಕಲಿತಸುರರಿಪುನಿವಹಃ=ಬಾಣಗಳ ಸಮೂಹದಿಂದ ನಾಶಮಾಡಲ್ಪಟ್ಟ ದೇವದ್ವೇಷಿಗಳಾದ ದೈತ್ಯರ ಸಮೂಹಗಳುಳ್ಳವನು, ಸತತಗ ಸಮಜವ ಖಗಪತಿನಿರತಃ=ಸದಾಗಮನವುಳ್ಳ ವಾಯು ದೇವರಿಗೆ ಸದೃಶವಾದ ವೇಗವುಳ್ಳ ಹಕ್ಕಿಗಳಿಗೆ ಅಧಿಪತಿಯಾದ ಗರುಡನಲ್ಲಿ ಆಸಕ್ತನಾದ, ಮುರಾರಿಃ=

---

★ "ಶ್ರೀವ್ಯಾಸರಾಜ ಶ್ರೀಮಚ್ಚರಣರು ಗ್ರಂಥಮಾಲಿಕಾ ಸ್ತೋತ್ರದಲ್ಲಿ 'ಗ್ರಂಥಾನ್ಮಧ್ವಶ್ಚಕಾರಾಸೌ ಸಪ್ತತ್ರಿಂಶದಮಂದಧೀಃ । ಗೀತಾಭಾಷ್ಯಂ ವಿಧಾಯಾಸೌ ಪ್ರಥಮಂ ತುಷ್ಟಿದಂ ಹರೇಃ ॥" ಇತ್ಯಾದಿ. ಶ್ರೀಮದಾಚಾರ್ಯರು ಗೀತಾಭಾಷ್ಯ ಮೊದಲಾದ (೩೭) ಮೂವತ್ತೇಳು ಗ್ರಂಥಗಳನ್ನು ಮಾಡಿರುವರು" ಎಂದು ಹೇಳಿರುವರು. ಆ ಮೂವತ್ತೇಳು ಗ್ರಂಥಗಳಲ್ಲಿ ಈ ಕೃಷ್ಣಸ್ತುತಿಯು ಸೇರಲಿಲ್ಲ, ಆದರೂ ಶ್ರೀಮದಾಚಾರ್ಯರು ಬಾಲ್ಯಾವಸ್ಥೆಯಲ್ಲಿ ವಯಸ್ಕರೊಡನೆ ಚೆಂಡು ಆಟ ವಗೈರೆ ಮಾಡುವಾಗ ಈ ಗ್ರಂಥವನ್ನು ಮಾಡಿದ್ದಾರೆಂದು ಐತಿಹ್ಯವಿದ್ದುದರಿಂದಲೂ, ಕುಂಭಕೋಣ ಬೆಳಗಾಮ್‌ಗಳಲ್ಲಿ ಸರ್ವಮೂಲದೊಂದಿಗೆ ಮೊದಲೇ ಮುದ್ರಿತವಾಗಿರುವುದರಿಂದಲೂ ನಾವು ಇದರೊಂದಿಗೆ ಸೇರಿಸಿರುತ್ತೇವೆ. ಈ ಕೃಷ್ಣಸ್ತುತಿಯನ್ನು ಕಂದುಕಸ್ತುತಿಯೆಂದೂ ಕೆಲವರು ಅನ್ನುವರು. ಆದಕಾರಣ ಶ್ರೀಮದಾಚಾರ್ಯರು (೩೭) ಮೂವತ್ತೇಳು ಗ್ರಂಥಗಳನ್ನು ಮಾಡಿದ್ದಲ್ಲ, ಇನ್ನೂ ಅನೇಕ ಗ್ರಂಥಗಳನ್ನು ಮಾಡಿದ್ದಿರಬಹುದು. ಅತ್ಯಂತ ಪ್ರಧಾನ ಗ್ರಂಥಗಳನ್ನು ಮಾತ್ರ ಶ್ರೀವ್ಯಾಸರಾಜ ಶ್ರೀಮಚ್ಚರಣರು ಗಣನಮಾಡಿ ಹೇಳಿರುವರು. ಎಂದೂ ಊಹಿಸುತ್ತೇವೆ.

ಮುರಾಸುರನಿಗೆ ಶತ್ರುವಾದ ಶ್ರೀಕೃಷ್ಣನು, ಸತತಂ=ಯಾವಾಗಲೂ, ಅಸ್ಮಾನ್=ನಮ್ಮನ್ನು, ಪಾತು= ರಕ್ಷಿಸಲಿ. ॥ 1 ॥ 2 ॥

**ತಾತ್ಪರ್ಯ ॥** ವಾಮನರೂಪಿಯಾದ ಶ್ರೀಹರಿಯು ಬಲಿಚಕ್ರವರ್ತಿಯ ಹತ್ತಿರ ಮೂರು ಪಾದಗಳನ್ನು ಇಡುವುದಕ್ಕಾಗಿ ಭೂಮಿಯನ್ನು ಬೇಡಿದನು; ಬಲಿಚಕ್ರವರ್ತಿಯು ಒಪ್ಪಿದೊಡನೆಯೆ ವಾಮನನು ತ್ರಿವಿಕ್ರಮಾವತಾರವನ್ನು ತಾಳಿ 1 ಪಾದದಿಂದ ಇಡೀ ಭೂಮಂಡಲವನ್ನೂ, ಮತ್ತೊಂದು ಪಾದದಿಂದ ಇಡೀ ಆಕಾಶವನ್ನೂ ವ್ಯಾಪಿಸಿದನು. ಆಗ ಬ್ರಹ್ಮಾಂಡ ಭಾಂಡಕಟಾಹವು ಒಡೆದು ಸ್ವರ್ಗಂಗೆಯು ಪಾದತಲವನ್ನು ವ್ಯಾಪಿಸಿತು. ಈ ಪ್ರಕಾರ ವಾಮನ ತ್ರಿವಿಕ್ರಮಾವತಾರಗಳನ್ನು ಮಾಡಿರುವವನೂ, ಹೆಚ್ಚು ಪರಾಕ್ರಮವುಳ್ಳ ಶಕಟಾಸುರನನ್ನು ಸಂಹರಿಸಿದವನೂ, ಕಾಲಿಂಗಸರ್ಪವನ್ನು ನಿಗ್ರಹಿಸಿದವನೂ, ಕಮಲದಳದಂತೆ ಕಣ್ಣುಗಳುಳ್ಳವನೂ, ಅತಿ ನೀಲವಾದ ಮೇಘದಂತೆ ಶ್ಯಾಮವರ್ಣದವನೂ, ಶತ್ರುಗಳನ್ನು ಸಂಹರಿಸಿದವನೂ, ವಾಯುವಿಗೆ ಸಮಾನವಾದ ವೇಗವುಳ್ಳ ಗರುಡವಾಹನನೂ ಆದ ಶ್ರೀಕೃಷ್ಣನು ನಮ್ಮನ್ನು ರಕ್ಷಿಸಲಿ! ಎಂದು ಶ್ರೀಮದಾಚಾರ್ಯರು ಪ್ರಾರ್ಥಿಸಿದರು ॥ 1 ॥ 2 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತಾ ಶ್ರೀಕೃಷ್ಣಸ್ತುತಿಃ ಸಂಪೂರ್ಣಾ ॥**

**॥ ಶ್ರೀಃ ॥**

**ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಶ್ರೀಕೃಷ್ಣಸ್ತುತಿಯು ಸಮಾಪ್ತವಾಯಿತು ॥ ಶ್ರೀಃ ॥**

**ಸಂಜೀವ ಪರ್ವತೋದ್ಧಾರ ಮಮ ದುಃಖಾನ್ನಿವಾರಯಃ।**
**ಘೋರಾನುಪದ್ರವಾನ್ಸರ್ವಾನ್ ನಾಶಯಾಕ್ಷಾಸುರಾಂತಕ ॥**
**ಮರ್ಕಟೇಶ ಮಹೋತ್ಸಾಹ ಸರ್ವಶೋಕವಿನಾಶಕ ।**
**ಶತ್ರೂನ್ಸಂಹರ ಮಾಂ ರಕ್ಷ ಶ್ರಿಯಂ ದತ್ವಾ ಚ ಮಾಂ ಭರ ॥**

॥ ಶ್ರೀಃ ॥

# ಶ್ರೀಕೃಷ್ಣಾಮೃತ ಮಹಾರ್ಣವವು

**ಶ್ರೀಕೃಷ್ಣಂ ರುಗ್ಮಿಣೀಸತ್ಯಾಸಹಿತಂ ಪಾಂಡವಪ್ರಿಯಂ ।**
**ನತ್ವಾ ಶ್ರೀಪೂರ್ಣ ಬೋಧಾರ್ಯಾನ್ ಗುರೂನಪಿ ಭಜೇಽನಿಶಂ ॥**
**ಪೂರ್ವವ್ಯಾಖ್ಯಾ ಕೃತೋ ನತ್ವಾ ಬಾಲಬೋಧಾಯ ಸಾದರಂ ।**
**ವ್ಯಾಖ್ಯಾಸ್ವಾಮಿ ಯಥಾಬೋಧಂ ಕೃಷ್ಣಾಮೃತ ಮಹಾರ್ಣವಂ ॥**

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**ಮೂಲ ॥ ಓಂ ॥ ಅರ್ಚಿತಃ ಸಂಸ್ಮೃತೊ ಧ್ಯಾತಃ ಕೀರ್ತಿತಃ ಕಥಿತಃ ಶ್ರುತಃ ।**
**ಯೋ ದದಾತ್ಯಮೃತತ್ವಂ ಹಿ ಸ ಮಾಂ ರಕ್ಷತು ಕೇಶವಃ ॥ ೧ ॥**

**ಅರ್ಥ ॥** ಪೂಜಿಸಲ್ಪಟ್ಟವನು, ಚೆನ್ನಾಗಿ ಸ್ಮರಿಸಲ್ಪಟ್ಟವನು, ಧ್ಯಾನಿಸಲ್ಪಟ್ಟವನು, ಉಚ್ಚರಿಸಲ್ಪಟ್ಟವನು, ಉಪದೇಶಿಸಲ್ಪಟ್ಟವನು, ಶಾಸ್ತ್ರದಲ್ಲಿ ಹೇಳಲ್ಪಟ್ಟವನು, (ಆಗಿರುವ) ಯಾವನು ಮುಕ್ತಿಯನ್ನು ಕೊಡುತ್ತಾನೋ, ಅಂತಹ ಕೇಶವನು ನನ್ನನ್ನು ರಕ್ಷಿಸಲಿ!

**ತಾತ್ಪರ್ಯ ॥** ತಾಪತ್ರಯದಲ್ಲಿ ಮುಳುಗಿದ ಸಜ್ಜನರಿಗೆ ಮುಕ್ತಿಯನ್ನು ಕೊಟ್ಟು ರಕ್ಷಿಸಲಿಚ್ಛಿಸಿದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಕೃಷ್ಣಾಮೃತಮಹಾರ್ಣವಾಖ್ಯ ಗ್ರಂಥವನ್ನು ಮಾಡಬೇಕೆಂದಿಚ್ಛಿಸಿ ಅಧಿಕಾರಿಗಳಿಗೆ ಅರ್ಚನ ಧ್ಯಾನಾದಿಗಳಿಂದ ಮೋಕ್ಷಪ್ರದನಾದ ಶ್ರೀಕೇಶವನಲ್ಲಿ ಭಕ್ತ ವರ್ಗವನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದರು ॥ 1 ॥

**ಮೂಲ ॥ ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।**
**ವಕ್ಷ್ಯಾಮಿ ಶಾಂತಯೇ ತ(ಹ್ಯ)ಸ್ಯ ಕೃಷ್ಣಾಮೃತಮಹಾರ್ಣವಂ ॥ ೨ ॥**

**ಅರ್ಥ ॥** ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ಮೂರು ತಾಪಗಳಿಂದ ವಿಶೇಷವಾಗಿ

---

( ) ಈ ಗುರುತಿನ ಒಳಗಡೆ ಕೊಟ್ಟಿರುವ ಪಾಠವು ಶ್ರೀಮನ್ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರಾದ ಫಲಿಮಾರುಮಠದ ಮೂಲಪುರುಷರಾದ ಶ್ರೀಹೃಷೀಕೇಶತೀರ್ಥರು ಸ್ವಹಸ್ತದಿಂದ ಬರೆದ ತಾಳ ಪತ್ರದ ತೌಳವ ಲಿಪಿಯ ಸರ್ವಮೂಲ ಗ್ರಂಥದಲ್ಲೂ, ಶ್ರೀಸೋದಾ ವಾದಿರಾಜ ಮಠದ ಅತಿಪ್ರಾಚೀನ ತೌಳವ ಲಿಪಿಯ ತಾಳಪತ್ರ ಪುಸ್ತಕದ ಸರ್ವಮೂಲ ಗ್ರಂಥದಲ್ಲೂ ಇರತಕ್ಕುದಾಗಿದೆ.

(★) ಈ ಗುರುತಿನ ಒಳಗೆ ಕೊಟ್ಟಿರುವ ಪಾಠವು ಈ ಮೇಲಿನ ಪುಸ್ತಕಗಳಲ್ಲಿ ಇರುವುದಿಲ್ಲ.

( ) ಈ ಗುರುತಿನ ಒಳಗೆ ಕೊಟ್ಟಿರುವ ಪಾಠವು ಸ್ಮೃತಿಮುಕ್ತಾವಳಿ ಕರ್ತರಾದ ಕೃಷ್ಣಾಚಾರ್ಯರು ಇದೇ ಗ್ರಂಥಕ್ಕೆ ರಚಿಸಿರುವ ವ್ಯಾಖ್ಯಾದಲ್ಲಿರುವ ಪಾಠವಾಗಿರುತ್ತದೆ.

ಬೆಂದುಹೋದ ಯಾವ ಈ ಸಾಂಸಾರಿಕ ಜನರಿದ್ದಾರೋ, ಅಂತಹವರ ಸುಖಕ್ಕಾಗಿ (ತಾಪತ್ರಯದ ನಿವೃತ್ತಿಗಾಗಿ) ಕೃಷ್ಣಾಮೃತಮಹಾರ್ಣವಾಖ್ಯ ಗ್ರಂಥವನ್ನು (ಅಂದರೆ ತಾಪತ್ರಯವನ್ನು ಪರಿಹರಿಸುವುದರಲ್ಲಿ ಅಮೃತದ ಸಮುದ್ರದಂತಿರುವ, ಶ್ರೀಕೃಷ್ಣನನ್ನು ಬೋಧಿಸುವ ಈ ಗ್ರಂಥವನ್ನು) ಹೇಳುವೆನು ।। 2 ।।

**ಮೂಲ ।। ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಂ ।**
**ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ।। ೩ ।।**

**ಅರ್ಥ ।।** ಯಾರಿಂದ ಶ್ರೀಹರಿಯ (ತಪ್ತಮುದ್ರಾಧಾರಣಾದಿ ರೂಪವಾದ) ★ದೀಕ್ಷೆಯು ಹೊಂದಲ್ಪಡಲಿಲ್ಲವೋ, ಮತ್ತು ಜನಾರ್ದನನು ಪೂಜಿಸಲ್ಪಡಲಿಲ್ಲವೋ, ಅಂತಹ ಮನುಷ್ಯರು ಲೋಕದಲ್ಲಿ ಪಶುಪ್ರಾಯರು. ಅಂತಹ ಜನರ ಜೀವಿಸುವ ವಿಷಯದಲ್ಲಿ ಫಲವೇನು. ।। 3 ।।

**ಮೂಲ ।। ಸಂಸಾರೇಽಸ್ಮಿನ್ಮಹಾಘೋರೇ ಜನ್ಮ ರೋಗ ಭಯಾಕುಲೇ ।**
**ಅಯಮೇಕೋ ಮಹಾಭಾಗಃ ಪೂಜ್ಯತೇ ಯದಧೋಕ್ಷಜಃ ।। ೪ ।।**

**ಅರ್ಥ ।।** ಹುಟ್ಟುವಿಕೆ, ರೋಗ, ಭಯ ಇವುಗಳಿಂದ ಪೀಡಿತವಾದ ಈ ಮಹಾಭಯಂಕರ ವಾದ ಸಂಸಾರದಲ್ಲಿ ಶ್ರೀ ಅಧೋಕ್ಷಜನು ಪೂಜಿಸಲ್ಪಡುತ್ತಾನೆ ಎನ್ನುವುದು ಯಾವುದೋ, ಇದೊಂದೇ ಮುಖ್ಯಲಾಭವು. ಅಥವಾ ಯಾರಿಂದ ಪೂಜಿಸಲ್ಪಡುತ್ತಾನೋ, ಪೂಜಕನಾದ ಇವನು ಮನುಷ್ಯರಲ್ಲಿ ಮುಖ್ಯನೂ, ಮಹಾಭಾಗ್ಯಯುಕ್ತನೂ ಆಗಿರುತ್ತಾನೆ. ।। 4 ।।

**ಮೂಲ ।। ಸ ನಾಮ ಸುಕೃತೀ ಲೋಕೇ ಕುಲಂ ತೇನಾಭ್ಯ(ತ್ಯ)ಲಂಕೃತಂ ।**
**ಆಧಾರಃ ಸರ್ವಭೂತಾನಾಂ ಯೇನ ವಿಷ್ಣುಃ ಪ್ರಸಾದಿತಃ ।। ೫ ।।**

**ಅರ್ಥ ।।** ಸರ್ವಪ್ರಾಣಿಗಳಿಗೂ ಆಶ್ರಯನಾದ ಶ್ರೀಹರಿಯು ಯಾವ ಪುರುಷನಿಂದ ಸಂತೋಷಿಸಲ್ಪಡುತ್ತಾನೋ, ಆತನೇ ಲೋಕದಲ್ಲಿ ಪುಣ್ಯವಂತನು, ಆತನಿಂದ ತನ್ನ ಕುಲವು ಚೆನ್ನಾಗಿ ಅಲಂಕರಿಸಲ್ಪಡುತ್ತದೆ. (ಆತನೇ ಕೃತಾರ್ಥನೂ ತನ್ನ ಸಂಬಂಧಿಗಳಾದ ಎಲ್ಲಾ ಪ್ರಾಣಿಗಳಿಗೆ ಆಶ್ರಯನೂ ಆಗುತ್ತಾನೆ.) ಅಂದರೆ ನರಕಾದಿಗಳಿಂದ 21 ಕುಲಗಳನ್ನುದ್ಧರಿಸುವ ಪ್ರಯುಕ್ತ ಸರ್ವಾಧಾರನಾಗುತ್ತಾನೆ ।। 5 ।।

**ಮೂಲ ।। ಯಜ್ಞಾನಾಂ ತಪಸಾಂ ಚೈವ ಶುಭಾನಾಂ ಚೈವ ಕರ್ಮಣಾಂ ।**
**ತದ್ವಿಶಿಷ್ಟಫಲಂ ನೄಣಾಂ ಸದೈವಾರಾಧನಂ ಹರೇಃ ।। ೬ ।।**

---

★ ''ಅಧೃತ್ವಾ ವಿಧಿವಚ್ಚಕ್ರಂ ಯದಿ ಕರ್ಮ ಸಮಾಚರೇತ್ । ನಿಷ್ಫಲಂ ತದ್ಭವೇತ್ಸರ್ವಮಿಷ್ಟಾಪೂರ್ತಂ ದ್ವಿಜೋತ್ತಮ।।'' ಅಂದರೆ ಚಕ್ರ ಶಂಖ ಧಾರಣಮಾಡದೆ ಮಾಡಿದ ಕರ್ಮವೆಲ್ಲವೂ, ನಿಷ್ಫಲವು ಇದು ಮೊದಲಾದ ವಾಕ್ಯಗಳಿಂದ ಶ್ರೀಹರಿಯ ಪೂಜಾರೂಪ ಕರ್ಮಕ್ಕೆ ''ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಶ್ಚ ಪಂಚಮಃ ।।'' ಅಂದರೆ ತಪ್ತಮುದ್ರಾಧಾರಣ, ಊರ್ಧ್ವಪುಂಡ್ರಧಾರಣ, ಕೃಷ್ಣರಾಮಾದಿ ಹರಿನಾಮುಗಳನ್ನಿಟ್ಟುಕೊಳ್ಳುವುದು, ಅಷ್ಟಾಕ್ಷರಾದಿ ಜಪ, ವಿಷ್ಣುಪೂಜೆ ಎಂದು ಹೇಳಿದ ವೈಷ್ಣವ ದೀಕ್ಷೆಯು ಅಂಗವು.

**ಅರ್ಥ ॥** ಯಾಗಗಳೂ, ವ್ರತಗಳೂ ನಿತ್ಯನೈಮಿತ್ತಿಕಗಳಾದ ಮಂಗಲಪ್ರದಗಳಾದ ಕರ್ಮಗಳಿಗಿಂತ ಶ್ರೀಹರಿಯನ್ನು ಯಾವಾಗಲೂ ಪೂಜಿಸುವುದೇ ಮನುಷ್ಯರಿಗೆ ಮೋಕ್ಷಾದಿ ಫಲವನ್ನು ಕೊಡತಕ್ಕ ಮುಖ್ಯಕರ್ಮವು. ಅಥವಾ ಯಜ್ಞಾದಿ ಸಕಲ ಕರ್ಮಗಳಿಗೂ ಭಗವತ್ಪೂಜೆಯೇ ಫಲ. ಅಂದರೆ ಶುದ್ಧ ಭಾಗವತರು ಭಗವತ್ಪ್ರೀತಿ ವ್ಯತಿರಿಕ್ತ ಫಲವನ್ನಾಕಾಂಕ್ಷಿಸದೆ ಕರ್ಮವನ್ನು ಮಾತ್ರ ಮಾಡುತ್ತಾರೆ. ॥ 6 ॥

ಅತಿ ದುರ್ಘಟವಾದ ಕಲಿಯುಗದಲ್ಲಿ ಭಗವತ್ಪೂಜೆಯು ಆವಶ್ಯಕವೆಂದು ತೋರಿಸುತ್ತಾ ಪೂಜಿಸುವವನನ್ನು ಸ್ತುತಿಸುತ್ತಾರೆ–

**ಮೂಲ ॥ ಕಲೌ ಕಲಿಮಲಧ್ವಂಸಿ ಸರ್ವಪಾಪಹರಂ ಹರಿಂ ।**
**ಯೇಽರ್ಚಯಂತಿ ನರಾ ನಿತ್ಯಂ ತೇಽಪಿ ವಂದ್ಯಾ ಯಥಾ ಹರಿಃ ॥ ೭ ॥**

**ಅರ್ಥ ॥** ಕಲಿಕೃತ ರಾಗ, ದ್ವೇಷ ಮೊದಲಾದ ಅರಿ ಷಡ್ವರ್ಗಗಳಿಂದ ಪ್ರಾಪ್ತವಾದ ಮಲವನ್ನು ನಾಶಗೊಳಿಸುವವನೂ, ಎಲ್ಲಾ ಪಾಪಗಳನ್ನು ಪರಿಹರಿಸುವವನೂ ಆದ ಶ್ರೀಹರಿಯನ್ನು ಯಾವ ಪುಣ್ಯವಂತರು ನಿತ್ಯದಲ್ಲಿಯೂ ಪೂಜಿಸುತ್ತಾರೋ, ಅವರೂ ಕೂಡ ತಮಗಿಂತ ಅವರರಾದವ ರಿಂದ ನಮಸ್ಕರಿಸಲ್ಪಡುತ್ತಾರೆ. (ಶ್ರೀಹರಿಯು ಹೇಗೆ ಬ್ರಹ್ಮಾದಿಗಳಿಂದ ವಂದ್ಯನಾಗುತ್ತಾನೋ, ಹಾಗೆಯೇ ಭಗವದರ್ಚಕರು ಸರ್ವರಿಂದಲೂ ಮಾನ್ಯರಾಗುತ್ತಾರೆ.) ॥ 7 ॥

**ಮೂಲ ॥ ನಾಸ್ತಿ ಶ್ರೇಯಸ್ತಮಂ(ಸ್ಕರಂ) ನೃಣಾಂ ವಿಷ್ಣೋರಾರಾಧನಾನ್ಮುನೇ ।**
**ಯುಗೇಽಸ್ಮಿಂಸ್ತಾಮಸೇ ಲೋಕೇ ಸತತಂ ಪೂಜ್ಯತೇ ನೃಭಿಃ (ಹರಿಃ) ॥ ೮ ॥**

**ಅರ್ಥ ॥** ಎಲೋ ಮುನಿಯೇ! ಧರ್ಮಗಳಿಗೆ ವಿಘ್ನವನ್ನುಂಟುಮಾಡುವ ತಾಮಸ ಜನರೇ ಹೆಚ್ಚಿಗೆಯಾಗಿರುವ ಈ ಕಲಿಯುಗದಲ್ಲಿ ಅಥವಾ ತಮೋಗುಣಪ್ರಚುರವಾದ ಈ ಯುಗದಲ್ಲಿ, ಲೋಕದಲ್ಲಿ ಮನುಷ್ಯರಿಂದ ಶ್ರೀಹರಿಯು ಯಾವಾಗಲೂ ಪೂಜಿಲಸ್ಪಡುತ್ತಾನೆನ್ನುವುದು ಯಾವುದಿದೆಯೋ, ಶ್ರೀಹರಿಯ ಅಂತಹ ಪೂಜೆಯಿಂದ ವ್ಯತಿರಿಕ್ತವಾದದ್ದು ಶ್ರೇಯಸ್ಸಾಧನವಾದದ್ದು, ಮನುಷ್ಯರಿಗೆ ಯಾವುದೂ ಇರುವುದಿಲ್ಲ, ಅಂದರೆ ಹರಿಪೂಜೆಯೇ ಮುಖ್ಯಶ್ರೇಯಸ್ಸಿಗೆ ಕಾರಣವು ॥ 8 ॥

**ಮೂಲ ॥ ಅರ್ಚಿತೇ ಸರ್ವ(ದೇವ) ದೇವೇಶೇ ಶಂಖ ಚಕ್ರಗದಾಧರೇ ।**
**ಅರ್ಚಿತಾಃ ಸರ್ವದೇವಾಃ ಸ್ಯುರ್ಯತಃ ಸರ್ವಗತೋ ಹರಿಃ ॥ ೯ ॥**

**ಅರ್ಥ ॥** ಯಾವ ಕಾರಣದಿಂದ ಶ್ರೀಹರಿಯು ಎಲ್ಲಾ ದೇವತೆಗಳಲ್ಲಿ ಅಂತರ್ಗತನಾಗಿಯೇ ಪೂಜಿಸಿಕೊಳ್ಳಲು ಯೋಗ್ಯನೋ, ಅಥವಾ ಎಲ್ಲಾ ದೇವತೆಗಳಿಗೆ ನಿಯಾಮಕನೂ, ಸರ್ವಾಂತರ್ಯಾಮಿಯೂ ಆಗಿ ಸರ್ವತ್ರ ವ್ಯಾಪ್ತನೋ, ಆದಕಾರಣ (ಆ ದೇವತೆಗಳಿಗೆ ಅಧಿಷ್ಠಾನಭೂತನೂ) ಇಂದ್ರಾದಿಗಳಿಗೆ ನಿಯಾಮಕರಾದ ಬ್ರಹ್ಮಾದಿಗಳಿಗೆ ನಿಯಾಮಕನೂ, ಪಾಂಚಜನ್ಯ, ಸುದರ್ಶನ, ಕೌಮೋದಕಿಗಳನ್ನು ಧರಿಸಿದವನೂ ಆದ ಶ್ರೀಹರಿಯು ಪೂಜಿಸಲ್ಪಡುತ್ತಿರಲು ಎಲ್ಲಾ ದೇವತೆಗಳೂ ಪೂಜಿತರಾಗುವರು. ॥ 9 ॥

**ಮೂಲ ॥ ಸ್ವರ್ಚಿತೇ ಸರ್ವಲೋಕೇಶೇ ಸುರಾಸುರ ನಮಸ್ಕೃತೇ ।**
**ಕೇಶವೇ ಕಂಸ ಕೇಶಿಘ್ನೇ ನ ಯಾತಿ ನರಕಂ ನರಃ ॥ ೧೦ ॥**

**ಅರ್ಥ ॥** ಎಲ್ಲಾ ಲೋಕಗಳಿಗೆ ಒಡೆಯನೂ, ಸಂಸಾರಿಗಳಾದ ಬ್ರಹ್ಮಾದಿದೇವತೆಗಳಿಂದಲೂ ಮುಕ್ತರಾದ ಬ್ರಹ್ಮಾದಿಗಳಿಂದಲೂ ನಮಸ್ಕರಿಸಲ್ಪಡುತ್ತಿರುವವನೂ, ಕಂಸ, ಕೇಶಿಗಳನ್ನು ಸಂಹರಿಸಿದವನೂ, ಬ್ರಹ್ಮರುದ್ರಾದಿಗಳಿಗೆ ನಿಯಾಮಕನೂ ಆದ ಶ್ರೀಹರಿಯು ಇತರರಿಗಿಂತ ವಿಶೇಷಾಕಾರವಾಗಿ ಪೂಜಿಸಲ್ಪಟ್ಟಲ್ಲಿ ಭಕ್ತನು ಯಾವ ನರಕಗಳನ್ನೂ ಹೊಂದುವುದಿಲ್ಲ.

**ತಾತ್ಪರ್ಯ ॥** 'ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲಲೋಕ ನಮಸ್ಕೃತಂ ಚ । ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ ವಂದೇ ಭವಘ್ನಮಮರಾಸುರ ಸಿದ್ಧವಂದ್ಯಂ' ॥ ಎಂಬ ಭಾರತದ ಮಂಗಲಾಚರಣ ಶ್ಲೋಕದಲ್ಲಿರುವ 'ಅಮರಾಸುರಸಿದ್ಧವಂದ್ಯ' ಎನ್ನುವುದಕ್ಕೆ ಶ್ರೀಮದಾಚಾರ್ಯರು 'ಮೋಕ್ಷೈಕಹೇತುರಸುರೂಪಸುರೈಶ್ಚ ಮುಕ್ತೈರ್ವಂದ್ಯಃ ಸ ಏಕಃ' (ತಾತ್ಪರ್ಯನಿರ್ಣಯ, ಅಧ್ಯಾ 2 ಶ್ಲೋ. 60) ಎಂದು ವ್ಯಾಖ್ಯಾನಮಾಡಿರುವರು. 'ಅಸವಃ ರೂಪಂ ಪ್ರತಿಮಾ ಅಥವಾ ಸ್ವರೂಪಂ ಯೇಷಾಂ ತೇ ಅಸುರೂಪಾಃ' ಅಂದರೆ – ಸ್ವರೂಪಭೂತವಾದ ಚಿದಾನಂದಾತ್ಮಕ ಇಂದ್ರಿಯವುಳ್ಳವರು, ಮುಕ್ತರಾದ ಬ್ರಹ್ಮಾದಿಗಳು. ಆದಕಾರಣ 'ಅಸೂನ್= ಇಂದ್ರಿಯಾಣಿ, ರಮಯಂತಿ=ಹರ್ಷಯಂತಿ' ಎನ್ನುವ ವ್ಯುತ್ಪತ್ತಿಯಿಂದ ಅಸುರಾಃ=ತತ್ತ್ವಾಭಿಮಾನಿಗಳಾದ ಮುಕ್ತರಾದ ಬ್ರಹ್ಮಾದಿಗಳು, ಸುರಾಃ=ಸಿದ್ಧರಾದ ಬ್ರಹ್ಮಾದಿಗಳು, ಅಥವಾ 'ನ ವಿದ್ಯತೇ ಸುಷ್ಠುರೂಪಂ ವಪುರ್ಯೇಷಾಂ ತೇ' ಎನ್ನುವ ವ್ಯುತ್ಪತ್ತಿಯಿಂದ ಅಸುರಾಃ=ಪ್ರಹ್ಲಾದಾದಿಗಳು. 'ಸು=ಶೋಭನೇ ರಮಂತೇ, ಅಥವಾ ಸುಷ್ಠುರಾಂತಿ' ಎನ್ನುವ ವ್ಯುತ್ಪತ್ತಿಯಿಂದ ಸುರಾಃ=ಸಿದ್ಧರೂ ಮುಕ್ತರೂ ಆದ ಬ್ರಹ್ಮಾದಿಗಳು ಆದಕಾರಣ 'ಸುರಾಸುರ ನಮಸ್ಕೃತೇ' ಎನ್ನುವುದಕ್ಕೆ ಸಿದ್ಧರಾದ ಬ್ರಹ್ಮಾದಿಗಳಿಂದಲೂ, ಮುಕ್ತರಾದ ಬ್ರಹ್ಮಾದಿಗಳಿಂದಲೂ, ನಮಸ್ಕರಿಸಲ್ಪಡುತ್ತಿರುವವನು; ಅಥವಾ ಸಿದ್ಧರೂ ಮುಕ್ತರೂ ಆದ ಬ್ರಹ್ಮಾದಿಗಳಿಂದಲೂ, ಪ್ರಹ್ಲಾದಾದಿಗಳಿಂದಲೂ ನಮಸ್ಕರಿಸಲ್ಪಡುತ್ತಿರುವವನು, ಎಂದರ್ಥವನ್ನು ಮಾಡಬೇಕು. ॥ 10 ॥

**ಮೂಲ ॥ (★ಶಂಕರಃ) ॥ ''ಸಕೃದಭ್ಯರ್ಚ್ಯ ಗೋವಿಂದಂ ಬಿಲ್ವಪತ್ರೇಣ ಮಾನವಃ ।**
**ಮುಕ್ತಿಭಾಗೀ ನಿರಾತಂಕೀ ವಿಷ್ಣುಲೋಕೇ ಚಿರಂ ವಸೇತ್''॥ ೧೧ ॥**

**ಅರ್ಥ ॥** ರುದ್ರನು ಹೇಳುತ್ತಾನೆ:- ಸರ್ವದಾ ಪೂಜಿಸಲಿಕ್ಕೆ ಅಶಕ್ತನಾದ ಭಕ್ತನು ಒಂದು ಕಾಲದಲ್ಲಾದರೂ, ಗೋವರ್ಧನಧಾರಿಯಾದ, ಸರ್ವವೇದಪ್ರತಿಪಾದ್ಯನಾದ ಗೋವಿಂದನನ್ನು ಒಂದು ಬಿಲ್ವಪತ್ರದಿಂದಲಾದರೂ ಪೂಜಿಸಿ ಸಕಲ ಕರ್ಮಕ್ಷಯರೂಪವಾದ ಫಲವುಳ್ಳವನಾಗುತ್ತಾನೆ. ಆಮೇಲೆ ಮೋಕ್ಷಪರ್ಯಂತ ಆಧ್ಯಾತ್ಮಿಕಾದಿ ವ್ಯಥೆಗಳಿಂದ ವಿರಹಿತನಾಗಿ (ಆಮೇಲೆ ವಿರಜಾನದೀ ಸ್ನಾನದಿಂದ ಲಿಂಗ ದೇಹವನ್ನು ಬಿಟ್ಟು) ವೈಕುಂಠಾದಿ ಲೋಕದಲ್ಲಿ ಸರ್ವದಾ ಆನಂದಾದಿಗಳನ್ನನುಭವಿಸುತ್ತಾ ಇರುತ್ತಾನೆ. ॥ 11 ॥

**★ಮೂಲ ॥ ಶಂಕರಃ ॥ ''ಸಕೃದಭ್ಯರ್ಚಿತೋ ಯೇನ ದೇವದೇವೋ ಜನಾರ್ದನಃ ।**
**ಯತ್ಕೃತಂ ತತ್ಕೃತಂ ತೇನ ಸಂಪ್ರಾಪ್ತಂ ಪರಮಂ ಪದಂ '' ॥ ೧೨ ॥**

**ಅರ್ಥ ॥** ಮತ್ತು ರುದ್ರನು ಹೇಳುತ್ತಾನೆ:- ಬ್ರಹ್ಮಾದಿ ದೇವತೆಗಳಿಗೆ ಸ್ವಾಮಿಯಾದ ಜನಾರ್ದನನನ್ನು, ಯಾರು ಒಂದಾವರ್ತಿಯಾದರೂ ಪೂಜಿಸುತ್ತಾರೋ, ಆತನಿಂದ ಯಾವುದು

ಮಾಡಲ್ಪಡತಕ್ಕುದೋ, ಅದು ಮಾಡಲ್ಪಟ್ಟಿತು; ಮೋಕ್ಷಸ್ಥಾನವು ಹೊಂದಲ್ಪಟ್ಟಿತು. (ಅಂದರೆ ಆತನೇ ಕೃತಕೃತ್ಯನು. ಮುಕ್ತಿಯನ್ನು ಹೊಂದುತ್ತಾನೆ.) ।। 12 ।।

**ಮೂಲ ।। ಸಕೃದಭ್ಯರ್ಚಿತೋ ಯೇನ ಹೇಲಯಾಽಪಿ ನಮಸ್ಕೃತಃ ।**
**ಸ ಯಾತಿ ಪರಮಂ ಸ್ಥಾನಂ ಯತ್ಸುರೈರಪಿ ದುರ್ಲಭಂ ।। ೧೩ ।।**

**ಅರ್ಥ ।।** ಯಾವ ಅಶಕ್ತನಿಂದ (ಭಕ್ತಿಪೂರ್ವಕವಾಗಿ) ಒಂದಾವರ್ತಿಯಾದರೂ ಶ್ರೀಹರಿಯು ಪೂಜಿಸಲ್ಪಡುತ್ತಾನೋ, ಯಾರಿಂದ ಹಾಸಪೂರ್ವಕವಾಗಿಯಾಗಲೀ ನಮಸ್ಕರಿಸಲ್ಪಡುತ್ತಾನೋ, ಆತನು ಯಾವ ಮೋಕ್ಷಸ್ಥಾನವು ದೇವತೆಗಳಿಂದಲೂ ಹೊಂದಲಸಾಧ್ಯವೋ, ಅಂತಹ ಉತ್ಕೃಷ್ಟ ಸ್ಥಾನವನ್ನು ಹೊಂದುತ್ತಾನೆ. (ಅಂದರೆ ಭಕ್ತರಿಗೆ ಶ್ರೀಹರಿಯು ವೈಕುಂಠವನ್ನು ಹೊಂದಿಸಿಕೊಡುತ್ತಾನೆ.) ।। 13 ।।

**ಮೂಲ ।। ನಾರದಃ ।। ''ಸಮಸ್ತಲೋಕನಾಥಸ್ಯ ದೇವದೇವಸ್ಯ ಶಾರ್ಙ್ಗಿಣಃ ।**
**ಸಾಕ್ಷಾದ್ಭಗವತೋ ವಿಷ್ಣೋಃ ಪೂಜನಂ ಜನ್ಮನಃ ಫಲಂ '' ।। ೧೪ ।।**

**ಅರ್ಥ ।।** ನಾರದರು ಹೇಳುತ್ತಾರೆ:- ''ಸರ್ವ ಲೋಕಗಳಿಗೆ ಒಡೆಯನೂ, ಬ್ರಹ್ಮಾದಿಗಳಿಗೆ ದೇವನೂ, ಶಾರ್ಙ್ಗಧಾರಿಯೂ, ಸರ್ವತ್ರವ್ಯಾಪ್ತನೂ ಆದ ಸಾಕ್ಷಾತ್ ಭಗವಂತನ ಪೂಜೆಯೇ ಹುಟ್ಟಿದ್ದಕ್ಕೆ ಫಲವು.'' ।। 14 ।।

**ಮೂಲ ।। ಪುಲಸ್ತ್ಯಃ(ಹಃ) ।। ''ಭಕ್ತ್ಯಾ ದೂರ್ವಾಂಕುರೈಃ ಪುಂಭಿಃ**
**ಪೂಜಿತಃ ಪುರುಷೋತ್ತಮಃ ।**
**ಹರಿರ್ದದಾತಿ ಹಿ ಫಲಂ ಸರ್ವಯಜ್ಞೈಶ್ಚ ದುರ್ಲಭಂ '' ।। ೧೫ ।।**

**ಅರ್ಥ ।।** ಪುಲಸ್ತ್ಯರು ಹೇಳುತ್ತಾರೆ:- ''ಪುರುಷೋತ್ತಮನಾದ ಶ್ರೀಹರಿಯು ಮನುಷ್ಯರಿಂದ ಭಕ್ತಿಪೂರ್ವಕವಾಗಿ ದೂರ್ವಾಂಕುರ, ತುಳಸೀ, ಪುಷ್ಪಾದಿಗಳಿಂದ ಪೂಜಿಸಲ್ಪಟ್ಟವನಾಗಿಯೇ ಸರ್ವ ಯಾಗಗಳಿಂದಲೂ ಸಿಗದಿರುವ ಮೋಕ್ಷಾಖ್ಯ ಫಲವನ್ನು ಹೊಂದಿಸಿಕೊಡುತ್ತಾನೆ.'' ।। 15 ।।

**ಮೂಲ ।। ವಿಧಿನಾ ದೇವದೇವೇಶಃ ಶಂಖಚಕ್ರಧರೋ ಹರಿಃ ।(ಗದಾಧರಃ) ।**
**ಫಲಂ ದದಾತಿ ಸುಲಭಂ ಸಲಿಲೇನಾಪಿ ಪೂಜಿತಃ ।। ೧೬ ।।**

**ಅರ್ಥ ।।** ಬ್ರಹ್ಮಾದಿಗಳಿಗೆ ಅಧಿಪತಿಯೂ, ಶಂಖ ಚಕ್ರ ಗದಾಧಾರಿಯೂ ಆದ ಶ್ರೀಹರಿಯು ತಂತ್ರಸಾರಾದಿಗಳಲ್ಲಿ ಹೇಳಲ್ಪಟ್ಟ ಪೂಜಾವಿಧಿಯಿಂದ (ದರಿದ್ರನಿಂದ ಭಕ್ತಿಯಿಂದ ಅನ್ನ ಮೊದಲಾದ ಅನೇಕ ನೈವೇದ್ಯಾದಿಗಳಿಲ್ಲದಿದ್ದರೂ ಸುಲಭವಾಗಿ ಲಭ್ಯವಾದ) ಕೇವಲ ನೀರಿನಿಂದಲೂ ಪೂಜಿಸಲ್ಪಟ್ಟವನಾಗಿ ಮುಕ್ತ್ಯಾದಿ ಫಲವನ್ನು ಕೊಡುತ್ತಾನೆ. ।। 16 ।।

**ಮೂಲ ।। (''ಧರ್ಮಃ) ।। ''ನರಕೇ ಪಚ್ಯಮಾನಸ್ತು ಯಮೇನ ಪರಿಭಾಷಿತಃ।**
**ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ '' ।। ೧೭ ।।**

**ಅರ್ಥ ।।** ಯಮಧರ್ಮರಾಜನು ಹೇಳುತ್ತಾನೆ:- ''ನಿಮ್ಮಿಂದ ಸರ್ವ ದುಃಖಗಳನ್ನು ಪರಿಹರಿಸುವವನೂ, ಬ್ರಹ್ಮರುದ್ರಾದಿಗಳಿಗೆ ಅಧಿಪತಿಯೂ ಆದ ದೇವನು (ಕೇಶವನು) ಏನು ಕಾರಣ

ಪೂಜಿಸಲ್ಪಡಲಿಲ್ಲ?'' ಎಂದು ನರಕದಲ್ಲಿ ದುಃಖವನ್ನನುಭವಿಸುತ್ತಲಿರುವ ಪಾಪಕರ್ಮಿಯಾದ ಜೀವರು ಯಮನಿಂದ ಕೇಳಲ್ಪಟ್ಟರು ॥ 17 ॥

**ಮೂಲ ॥ ಧರ್ಮಃ (ಯಮಃ)॥ ''ನ(ನಾ)ರಸಿಂಹೋ ಹೃಷೀಕೇಶಃ।**
**ಪುಂಡರೀಕ ನಿಭೇಕ್ಷಣಃ।**
**ಸ್ಮರಣಾನ್ಮುಕ್ತಿದೋ ನೃಣಾಂ ಸ ತ್ವಯಾ ಕಿಂ ನ ಪೂಜಿತಃ'' ॥ ೧೮ ॥**

**ಅರ್ಥ ॥** ಮತ್ತು ಯಮನು ಹೇಳುತ್ತಾನೆ:- (ನರಕದಲ್ಲಿರತಕ್ಕ ಜೀವರಿಗೆ) ''ನರಸಿಂಹನೂ, ಹೃಷೀಕೇಶನೂ, ಪುಂಡರೀಕಾಕ್ಷನೂ,ಮನುಷ್ಯರಿಗೆ ಸ್ಮರಣಮಾತ್ರದಿಂದ ಮುಕ್ತಿಯನ್ನು ಕೊಡುವವನು. ಅಂತಹ ಹರಿಯು ನಿಮ್ಮಿಂದ ಏಕೆ ಪೂಜಿಸಲ್ಪಡಲಿಲ್ಲ? '' ॥ 18 ॥

**ಮೂಲ ॥ ''ದ್ರವ್ಯಾಣಾಮಪ್ಯಭಾವೇ ತು ಸಲಿಲೇನಾಪಿ ಪೂಜಿತಃ ।**
**ಯೋ ದದಾತಿ ಸ್ವಕಂ ಸ್ಥಾನಂ ಸ ತ್ವಯಾ ಕಿಂ ನ ಪೂಜಿತಃ'' ॥ ೧೯ ॥**

**ಅರ್ಥ ॥** ಮತ್ತು ಪೂಜಾಸಾಧನಗಳಾದ ದ್ರವ್ಯಾದಿಗಳಿಲ್ಲದಿದ್ದರೂ, ನೀರಿನಿಂದಲಾಗಲೀ ಪೂಜಿಸಲ್ಪಟ್ಟ ಯಾವ ಶ್ರೀಹರಿಯು ಮುಕ್ತಿಸ್ಥಾನವನ್ನೇ ಕೊಡುತ್ತಾನೋ, ಅಂತಹ ಶ್ರೀಹರಿಯು ನಿಮ್ಮಿಂದ ಏಕೆ ಪೂಜಿಸಲ್ಪಡಲಿಲ್ಲ? '' ॥ 19 ॥

**ಮೂಲ ॥ (ಬ್ರಹ್ಮಾ) ॥ ''ಗರ್ಭಸ್ಥಿತಾ ಮೃತಾ ವಾಽಪಿ**
**ಮುಷಿತಾಸ್ತೇ ಸುದೂಷಿತಾಃ ।**
**ನ ಪ್ರಾಪ್ತಾ ಯೈರ್ಹರೇರ್ದೀಕ್ಷಾ ಸರ್ವದುಃಖವಿಮೋಚನೀ'' ॥ ೨೦ ॥**

**ಅರ್ಥ ॥** ಬ್ರಹ್ಮದೇವರು ಹೇಳುತ್ತಾರೆ:- ''ಸರ್ವದುಃಖಗಳನ್ನು ಪರಿಹರಿಸುವ ಶ್ರೀವೈಷ್ಣವ ದೀಕ್ಷೆಯು ಯಾರಿಂದ ಹೊಂದಲ್ಪಡಲಿಲ್ಲವೋ ಅವರು ಸದಾ ಗರ್ಭವಾಸಿಗಳಾಗಿ ಸದಾ ಮರಣ ಶೀಲರಾಗಿ ಸ್ತೇಯರಾಗಿರುತ್ತಾರೆ. (ಮತ್ತು ವಿಷ್ಣುಭಕ್ತರಿಂದ) ಚೆನ್ನಾಗಿ ದೂಷಿತರೂ ಆಗುತ್ತಾರೆ.'' (ಆದಕಾರಣ ವೈಷ್ಣವ ದೀಕ್ಷೆಯು ಆವಶ್ಯಕವು.) ॥ 20 ॥

**ಮೂಲ ॥ ಮಾರ್ಕಂಡೇಯಃ ॥ ''ಸಕೃದಭ್ಯರ್ಚಿತೋ ಯೇನ**
**ದೇವದೇವೋ ಜನಾರ್ದನಃ ।**
**ಯತ್ಕೃತಂ ತತ್ಕೃತಂ ತೇನ ಸಂಪ್ರಾಪ್ತಂ ಪರಮಂ ಪದಂ'' ॥ ೨೧ ॥**

**ಅರ್ಥ ॥** ಮಾರ್ಕಂಡೇಯರು ಹೇಳುತ್ತಾರೆ:- '' ಬ್ರಹ್ಮಾದಿದೇವತೆಗಳಿಗೆ ಸ್ವಾಮಿಯಾದ ಜನಾರ್ದನನು ಯಾರಿಂದ ಒಂದಾವರ್ತಿಯಾದರೂ ಪೂಜಿಸಲ್ಪಡುತ್ತಾನೋ, ಆತನಿಂದ ಯಾವ್ಯಾವುದು ಮಾಡಲು ಯೋಗ್ಯವಾದ ಸಾಧನಸಮುದಾಯವಿದೆಯೋ, ಆ ಎಲ್ಲಾ ಮೋಕ್ಷಸಾಧನವು ಚೆನ್ನಾಗಿ ಮಾಡಲ್ಪಟ್ಟಿತು. ಆತನಿಂದ ಅತ್ಯುತ್ಕೃಷ್ಟವಾದ ಮುಕ್ತಿಸ್ಥಾನವೇ ಹೊಂದಲ್ಪಟ್ಟಿತು.'' ॥ 21 ॥

**ಮೂಲ ॥ ''ಧರ್ಮಾರ್ಥಕಾಮ ಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ ।**
**ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ'' ॥ ೨೨ ॥**

**ಅರ್ಥ ॥** ''ಹೇ ದೇವೇಶನೇ (ಎಲೋ ರುದ್ರನೇ)! ಧರ್ಮಸಾಧ್ಯವಾದ ಸ್ವರ್ಗಾದಿಯೂ, ಅರ್ಥವೂ, ಸ್ರಕ್ ಚಂದನ ಮೊದಲಾದ ಕಾಮ್ಯವೂ, ಮುಕ್ತಿಯೂ ಇವುಗಳಿಗೆ ಶ್ರೀಹರಿಯ ಪೂಜೆಯ ಹೊರತು ಬೇರೆ ಉಪಾಯವು ಕಾಣುವುದಿಲ್ಲವು. ಸತ್ಯವಾಗಿ ಹೇಳುತ್ತೇನೆ. ಅಥವಾ ನಿವೃತ್ತ ಧರ್ಮವೂ, ಭಗವತ್ಪೂಜಾಸಾಧನಭೂತವಾದ ಅರ್ಥವೂ, ವಿಷ್ಣುಭಕ್ತಿ ಮೊದಲಾದುವೂ, ಕರ್ಮಕ್ಷಯವಾಗಿ ಸ್ವರೂಪಾನಂದಾವಿರ್ಭಾವವೂ, ಈ ನಾಲ್ಕಕ್ಕೂ ಸರ್ವೇಂದ್ರಿಯ ನಿಯಾಮಕನಾದ ಶ್ರೀಹರಿಯ ಭಕ್ತ್ಯಾದಿ ಯುಕ್ತವಾದ ಭಗವಂತನಿಗೆ ಪ್ರೀತಿಯನ್ನುಂಟು ಮಾಡುವುದರಲ್ಲಿ ಅತ್ಯುತ್ತಮವಾದ ಪೂಜೆ ಹೊರತು ಬೇರೆ ಮುಖ್ಯ ಸಾಧನವಿಲ್ಲವು. (ಇದೂ ರುದ್ರದೇವರನ್ನು ಕುರಿತು ಮಾರ್ಕಂಡೇಯರು ಹೇಳಿದ ಮಾತು) ॥ 22 ॥

**ಮೂಲ ॥ (ರುದ್ರಃ) ॥ ''ತಸ್ಯ ಯಜ್ಞ ವರಾಹಸ್ಯ ವಿಷ್ಣೋರಮಿತತೇಜಸಃ ।**
**ಪ್ರಣಾಮಂ ಯೇಽಪಿ (ಚ) ಕುರ್ವಂತಿ ತೇಷಾಮಪಿ**
**ನಮೋನಮಃ'' ॥೨೩॥**

**ಅರ್ಥ ॥** ರುದ್ರದೇವರು ಹೇಳುತ್ತಾರೆ:- '' ನಿರವಧಿಕ ತೇಜಸ್ಸುಳ್ಳವನೂ, ಯಜ್ಞಾಂಗಗಳಾದ ಸ್ರುಕ್ ಸ್ರುವ ದರ್ಭಾದಿಗಳನ್ನು ಹುಟ್ಟಿಸಿದವನೂ, ಯಜ್ಞಾಶ್ರಯನೂ, ಯಜ್ಞಪೂಜ್ಯನೂ ಆದ ಆ ವರಾಹರೂಪಿಯಾದ ಶ್ರೀವಿಷ್ಣುವಿಗೆ ಯಾರು ನಮಸ್ಕಾರವನ್ನು ಮಾಡುತ್ತಾರೋ ಅವರಿಗೂ ನಮಸ್ಕಾರ, ನಮಸ್ಕಾರವು.

**ತಾತ್ಪರ್ಯ ॥** 'ಏಕೋಽಪಿ ಕೃಷ್ಣಸ್ಯ ಕೃತಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ। ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣ ಪ್ರಣಾಮೀ ನ ಪುನರ್ಭವಾಯ'' ॥ ಆದಕಾರಣ ಭಗವಂತನ ನಮಸ್ಕಾರಕ್ಕೆ ಅತಿಮಾಹಾತ್ಮ್ಯೆಯಿದ್ದುದರಿಂದ ಆತನಿಗೆ ನಮಸ್ಕರಿಸುತ್ತಾ ಇರಬೇಕು''. ॥ 23 ॥

**ಮೂಲ ॥ ಮರೀಚಿಃ ॥ ''ಅನಾರಾಧಿತಗೋವಿಂದೈರ್ನರೈಃ ಸ್ಥಾನಂ ನೃಪಾತ್ಮಜ ।**
**ನ ಹಿ ಸಂಪ್ರಾಪ್ಯತೇ ಶ್ರೇಷ್ಠಂ ತಸ್ಮಾದಾರಾಧಯಾಚ್ಯುತಂ '' ॥ ೨೪ ॥**

**ಅರ್ಥ ॥** ಮರೀಚಿ ಋಷಿಗಳು ಹೇಳುತ್ತಾರೆ:- ''ವಿಷ್ಣುವನ್ನು ಪೂಜಿಸದಿರುವ ಮನುಷ್ಯರಿಂದ ವೈಕುಂಠ ಮೊದಲಾದ ಶ್ರೇಷ್ಠಸ್ಥಾನವು ಹೊಂದಲ್ಪಡುವುದಿಲ್ಲ, ಆದಕಾರಣ ರಾಜಪುತ್ರನೇ! ಅಚ್ಯುತನನ್ನು ಆರಾಧಿಸು, ಪೂಜಿಸು. (ಹಾಗಾದರೆ ಸ್ವಯೋಗ್ಯಸ್ಥಾನವು ಪ್ರಾಪ್ತವಾಗುವುದು.)'' ॥24॥

**ಮೂಲ ॥ ಅತ್ರಿಃ ॥ ''ಪರಃ ಪರಾಣಾಂ ಪುರುಷಸ್ತುಷ್ಟೋ ಯಸ್ಯ ಜನಾರ್ದನಃ।**
**ಸ ಚಾಪ್ನೋತ್ಯಕ್ಷಯಂ ಸ್ಥಾನಮೇತತ್ಸತ್ಯಂ ಮಯೋದಿತಂ '' ॥ ೨೫ ॥**

**ಅರ್ಥ ॥** ಅತ್ರಿ ಋಷಿಗಳು ಹೇಳುತ್ತಾರೆ:- ''ಯಾವ ಅಧಿಕಾರಿಗಳಿಗೆ, ಉತ್ತಮರಿಗೂ ಉತ್ತಮನಾಗ, ಗುಣಪರಿಪೂರ್ಣನಾದ ಜನಾರ್ದನನು (ಪೂಜೆಯಿಂದ) ಸಂತುಷ್ಟನಾಗುತ್ತಾನೋ, ಆ ಅಧಿಕಾರಿಯು ಅಕ್ಷಯಗಳಾದ ವೈಕುಂಠಾದಿ ಸ್ಥಾನಗಳನ್ನು ಹೊಂದುತ್ತಾನೆ. ನನ್ನಿಂದ ಹೇಳಲ್ಪಟ್ಟ ಈ ವಚನವು ಸತ್ಯವೇ'' ॥ 25 ॥

**ಮೂಲ ॥ ಅಂಗಿರಾಃ ॥ ''ಯಸ್ಯಾಂತಃ ಸರ್ವಮೇವೇದ-**
**ಮಚ್ಯುತಸ್ಯಾವ್ಯಯಾತ್ಮನಃ ।**
**ತಮಾರಾಧಯ ಗೋವಿಂದಂ**
**ಸ್ಥಾನಮಗ್ರ್ಯಂ ಯದೀಚ್ಛಸಿ'' ॥ ೨೬ ॥**

**ಅರ್ಥ ॥** ಅಂಗಿರ ಋಷಿಗಳು ಹೇಳುತ್ತಾರೆ:- ''ಈ ಸರ್ವ ಜಗತ್ತು, ಅಚ್ಯುತನೂ, ಅವ್ಯಯನೂ, (ನಾಶರಹಿತನೂ) ಆದ ಯಾವ ಶ್ರೀಹರಿಯ (ಅಧೀನವಾಗಿಯೇ) ಉದರದಲ್ಲಿದೆಯೋ, ಶ್ರೇಷ್ಠವಾದ ವೈಕುಂಠಾದಿ ಸ್ಥಾನವನ್ನು ಇಚ್ಛಿಸುವುದಾದರೆ ಇಂತಹ ಗೋವಿಂದನನ್ನು ಭಕ್ತಿಶ್ರದ್ಧಾಪೂರ್ವಕವಾಗಿ ಪೂಜಿಸು.'' ॥ 26 ॥

**ಮೂಲ ॥ ಪುಲಹಃ (ಸ್ತ್ಯಃ) ॥ ''ಪರಂ ಬ್ರಹ್ಮ ಪರಂ ಧಾಮ**
**ಯೋಽಸೌ ಬ್ರಹ್ಮ ಸನಾತನಂ ।**
**ತಮಾರಾಧ್ಯ ಹರಿಂ ಯಾಂತಿ (ಯಾತಿ)**
**ಮುಕ್ತಿಮಪ್ಯತಿ (ಥ) ದುರ್ಲಭಾಂ'' ॥ ೨೭ ॥**

**ಅರ್ಥ ॥** ಪುಲಹರು (ಪುಲಸ್ತ್ಯರು) ಹೇಳುತ್ತಾರೆ:- ''ಸರ್ವೋತ್ತಮನೂ, ಸರ್ವಗುಣ ಪರಿಪೂರ್ಣನೂ, ವೈಕುಂಠಾದಿಗಳಿಗೆ ಆಶ್ರಯನೂ, ಅಪ್ರಾಕೃತ ಮುಕ್ತರಿಗೆ ಆಶ್ರಯನೂ, ಬ್ರಹ್ಮನಿಗೂ ಸನಾತನನೂ, (ಅಂದರೆ, ಅನಾದ್ಯನಂತ ಕಾಲದಲ್ಲಿರುವವನೂ) ಆದ ಯಾವ ಶ್ರೀಹರಿಯಿರುವನೋ, ಅಂತಹ ಶ್ರೀಹರಿಯನ್ನಾರಾಧಿಸಿ ಅತಿದುರ್ಬಲವಾದ ಮುಕ್ತಿಯನ್ನು ಹೊಂದುತ್ತಾರೆ.'' (ಹೊಂದುತ್ತಾನೆ)॥ 27 ॥

**ಮೂಲ ॥ (ಪುಲಹಃ) ॥ ''ಐಂದ್ರಮಿಂದ್ರಃ ಪರಂ ಸ್ಥಾನಂ**
**ಯಮಾರಾಧ್ಯ ಜಗತ್ಪತಿಂ ।**
**ಪ್ರಾಪ ಯಜ್ಞಪತಿಂ ವಿಷ್ಣುಂ**
**ತಮಾರಾಧಯ ಸುವ್ರತ'' ॥ ೨೮ ॥**

**ಅರ್ಥ ॥** ಪುಲಹರು ಹೇಳುತ್ತಾರೆ:- ''ಸನ್ಮಾರ್ಗದಲ್ಲಿರತಕ್ಕವರೇ! ದೇವೇಂದ್ರನು ಉತ್ಕೃಷ್ಟವಾದ ಇಂದ್ರರಿಗೆ ಕ್ಲೃಪ್ತವಾದ ಸ್ವರ್ಗಸ್ಥಾನವನ್ನು ರಮಾ-ಬ್ರಹ್ಮಾದಿಗಳಿಗೆ ಸ್ವಾಮಿಯೂ, ಯಜ್ಞಗಳಿಗೆ ಅಧಿಪತಿಯೂ ಆದ ಯಾವ ಶ್ರೀಹರಿಯನ್ನು (ನೂರು (100) ಯಾಗಗಳಿಂದ) ಆರಾಧಿಸಿ ಹೊಂದಿರುವನೋ ಅಂತಹ ಶ್ರೀವಿಷ್ಣುವನ್ನು ಪೂಜಿಸಿರಿ.'' ॥ 28 ॥

**ಮೂಲ ॥ ಪ್ರಾಪ್ನೋತ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛತಿ ।**
**ತ್ರೈಲೋಕ್ಯಾಂತರ್ಗತಂ ಸ್ಥಾನಂ**
**ಕಿಮು ಲೋಕೋತ್ತರೋತ್ತರಂ (ರಾನ್) ॥ ೨೯ ॥**

**ಅರ್ಥ ॥** (ಪೂಜಾಸಾಧನ ದ್ರವ್ಯಗಳಿಂದ ಪ್ರವೃತ್ತಕರ್ಮದಿಂದ) ಶ್ರೀಹರಿಯು ಚೆನ್ನಾಗಿ

ಪೂಜಿಸಲ್ಪಡುತ್ತಿರಲು ಮನಸ್ಸಿನಿಂದ ಯಾವ್ಯಾವುದನ್ನು ಅಧಿಕಾರಿಯು ಇಚ್ಛಿಸುತ್ತಾನೋ, ಆ ಸ್ವರ್ಗ ಮರ್ತ್ಯ ಪಾತಾಲಾಂತರ್ಗತವಾದ ಅವರವರ ಮನಸ್ಸಿಗೆ ಇಷ್ಟವಾದ ಸ್ವಯೋಗ್ಯ ಪದವಿಯನ್ನು ಹೊಂದುತ್ತಾನೆ. (ನಿವೃತ್ತಕರ್ಮದಿಂದ ಭಕ್ತ್ಯಾದ್ಯತಿಶಯವಾಗಿ) ಶ್ರೀಹರಿಯು ಆರಾಧಿಸಲ್ಪಡುತ್ತಿರಲು ಸ್ವರ್ಗಾದಿ ಲೋಕಕ್ಕಿಂತ ಉತ್ತಮೋತ್ತಮವಾದ ವೈಕುಂಠಾದಿ ಲೋಕವನ್ನು, ಭಗವಂತನನ್ನು ಪೂಜಿಸತಕ್ಕ ಅಧಿಕಾರಿಯು ಹೊಂದುತ್ತಾನೆ ಎಂದು ಏನು ಹೇಳಬೇಕಾಗಿದೆ? ಅಥವಾ ಶ್ರೀಹರಿಯು ಪೂಜಿಸಲ್ಪಟ್ಟರೆ ಅದರಿಂದ ವೈಕುಂಠವನ್ನೇ ಹೊಂದುತ್ತಾನೆ. ತ್ರೈಲೋಕ್ಯಾಂತರ್ಗತವಾದ ಸ್ಥಾನವನ್ನು ಹೊಂದುತ್ತಾನೆಂದು ಏನು ಹೇಳಬೇಕಾಗಿದೆ? ॥ 29 ॥

**ಮೂಲ ॥ ಯೇ ಸ್ಮರಂತಿ (ऽರ್ಚಯಂತಿ) ಸದಾ ವಿಷ್ಣುಂ ಶಂಖಚಕ್ರಗದಾಧರಂ ।**
**ಸರ್ವಪಾಪ ವಿನಿರ್ಮುಕ್ತಾಃ ಪರಂ ಬ್ರಹ್ಮ ವಿಶಂತಿ ತೇ ॥ ೩೦ ॥**

**ಅರ್ಥ ॥** ಯಾರು ಶಂಖ ಚಕ್ರ ಗದೆಗಳನ್ನು ಧರಿಸಿದ ಶ್ರೀವಿಷ್ಣುವನ್ನು ಯಾವಾಗಲೂ ಪೂಜಿಸುವರೋ ಅವರೆಲ್ಲರೂ (ಭಗವಂತನ ಪೂಜಾಮಹಿಮೆಯಿಂದ) ಎಲ್ಲಾ ಕಾಯಿಕ ವಾಚಿಕ ಮಾನಸಿಕ ಪಾಪಗಳಿಂದ (ಅಪರೋಕ್ಷ ಜ್ಞಾನವಾದೊಡನೆಯೇ) ಬಿಡಲ್ಪಡುತ್ತಾರೆ. (ಆಮೇಲೆ) ಸರ್ವೋತ್ತಮನೂ, ಸರ್ವ ಗುಣಪರಿಪೂರ್ಣನೂ ಆದ ಶ್ರೀಹರಿಯನ್ನು ಪ್ರವೇಶಿಸುತ್ತಾರೆ. (ಅಂದರೆ ವೈಕುಂಠವನ್ನು ಹೊಂದುತ್ತಾರೆ.) ॥ 30 ॥

**ಮೂಲ ॥ ತತೋऽನಿರುದ್ಧಂ ದೇವೇಶಂ ಪ್ರದ್ಯುಮ್ನಂ ಚ ತತಃ ಪರಂ ।**
**ತತಃ ಸಂಕರ್ಷಣಂ ದೇವಂ ವಾಸುದೇವಂ ಪರಾತ್ಪರಂ ॥ ೩೧ ॥**

**ಅರ್ಥ ॥** (ಮುಕ್ತರಾದ ಅಧಿಕಾರಿಗಳು ಶ್ರೀಪರಬ್ರಹ್ಮನ ವಾಸುದೇವಾದಿ ನಾಲ್ಕು ರೂಪಗಳ ಮಧ್ಯದಲ್ಲಿ) ಸರ್ವದೇವ ನಿಯಾಮಕನಾದ ಅನಿರುದ್ಧನನ್ನು ಪ್ರವೇಶಮಾಡುತ್ತಾರೆ. ಆಮೇಲೆ ಸರ್ವೋತ್ತಮನಾದ ಪ್ರದ್ಯುಮ್ನನನ್ನೂ, ಆಮೇಲೆ ಸಂಕರ್ಷಣನನ್ನೂ, ಆಮೇಲೆ ರಮಾಬ್ರಹ್ಮಾದ್ಯುತ್ತಮನಾದ ವಾಸುದೇವನನ್ನೂ ಪ್ರವೇಶಮಾಡುತ್ತಾರೆ. ॥ 31 ॥

**ಮೂಲ ॥ ವಾಸುದೇವಾತ್ಪರಂ ನಾಸ್ತಿ ಇತಿ ವೇದಾಂತನಿಶ್ಚಯಃ ।**
**ವಾಸುದೇವಂ ಪ್ರವಿಷ್ಟಾನಾಂ ಪುನರಾವರ್ತನಂ ಕುತಃ ॥ ೩೨ ॥**

**ಅರ್ಥ ॥** ವಾಸುದೇವನಿಂದುತ್ತಮದೇವತೆಯಿಲ್ಲವು. ಹೀಗೆ ವೇದಾಂತದ ನಿರ್ಣಯವು. ವಾಸುದೇವನನ್ನು ಹೊಂದಿದವರಿಗೆ ಪುನರಾವೃತ್ತಿಯು ಹೇಗೆ ಕೂಡುವುದು. ॥ 32 ॥

**ಮೂಲ ॥ ಆತ್ರೇಯಃ ((ಅತ್ರಿಃ)) ॥ ಯೋ ಯಾನಿಚ್ಛೇನ್ನರಃ ಕಾಮಾನ್**
**ನಾರೀ ವಾ ವರವರ್ಣಿನೀ ।**
**ತಾನ್ಸಮಾಪ್ನೋತಿ ವಿಪುಲಾನ್**
**ಸಮಾರಾಧ್ಯ ಜನಾರ್ದನಂ ॥ ೩೩ ॥**

**ಅರ್ಥ ॥** ಆತ್ರೇಯರು (ಅತ್ರಿ ಋಷಿಗಳು) ಹೇಳುತ್ತಾರೆ:- ಯಾವ ಅಧಿಕಾರಿ ಪುರುಷನು

ಅಥವಾ ಬ್ರಾಹ್ಮಣಾದಿ ಶ್ರೇಷ್ಠವರ್ಣದಲ್ಲಿರುವ ಪತಿವ್ರತಾದಿ ಲಕ್ಷಣಗಳಿಂದೊಡಗೂಡಿದ ಸ್ತ್ರೀಯಾಗಲೀ ಜನಾರ್ದನನನ್ನೂ ಚೆನ್ನಾಗಿ ಪೂಜಿಸಿ ಮನಸ್ಸಿಗೆ ಅಭೀಷ್ಟಗಳಾದ ಮನೋರಥಗಳನ್ನು ಇಚ್ಛಿಸುತ್ತಾರೋ, ಅವರೆಲ್ಲರೂ ಆ ಎಲ್ಲಾ ಧರ್ಮ, ಅರ್ಥ, ಕಾಮ, ಮೋಕ್ಷಗ್ಗಳನ್ನು ಹೊಂದುತ್ತಾರೆ. ॥ 33 ॥

**ಮೂಲ ॥ ಬ್ರಹ್ಮಾ ॥ ಬಾಹುಭ್ಯಾಂ ಸಾಗರಂ ತರ್ತುಂ ಕ ಇಚ್ಛೇತ ಪುಮಾನ್ಭುವಿ ।**
**ವಾಸುದೇವಮನಾರಾಧ್ಯ ಕೋ ಮೋಕ್ಷಂ ಗಂತುಮಿಚ್ಛತಿ ॥ ೩೪(೩೫) ॥**

**ಅರ್ಥ ॥** ಚತುರ್ಮುಖನು ಹೇಳುತ್ತಾನೆ:- ಯಾವ ಪುರುಷನು ಭೂಲೋಕದಲ್ಲಿ ಸಮುದ್ರವನ್ನು ಬಾಹುಗಳಿಂದಲೇ ಈಜಾಡುತ್ತಾ ದಾಟಿಹೋಗಲಿಕ್ಕೆ ಇಚ್ಛಿಸುವನು? (ಅಸಾಧ್ಯವಾದುದರಿಂದ ಯಾರೂ ಇಚ್ಛಿಸಲಾರರು ಎಂದರ್ಥ) ಹಾಗೆಯೇ ವಾಸುದೇವನನ್ನು ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಪೂಜಿಸದೆ ಯಾರು ಮುಕ್ತಿಗೆ ಹೋಗಲಿಕ್ಕೆ ಇಚ್ಛಿಸುವರು? (ಯಾರೂ ಇಚ್ಛಿಸಲಾರರು. ಇಚ್ಛಿಸಿದರೂ ಈ ಕಾರ್ಯವು ಅಸಾಧ್ಯವು) ॥ 34 (35) ॥

**ಮೂಲ ॥ ಕೌಶಿಕಃ ॥ ಅನಾರಾಧಿತ ಗೋವಿಂದಾ**
**ಯೇ(ಸ್ತೇ)ನರಾ ದುಃಖಭಾಗಿನಃ ।**
**ಆರಾಧ್ಯ ವಾಸುದೇವಂ ಸ್ಯು-**
**ರ್ನಿತ್ಯಾನಂದೈಕ ಭಾಗಿ (ಜಿ)ನಃ ॥ ೩೫ (೩೪) ॥**

**ಅರ್ಥ ॥** ಕೌಶಿಕರು ಹೇಳುತ್ತಾರೆ:- ಯಾವ ಮನುಷ್ಯರು ಗೋವಿಂದನನ್ನು ಪೂಜಿಸಲಾರರೋ, ಅವರು ದುಃಖವನ್ನು ಅನುಭವಿಸುವರು. ಅವರೇ ವಾಸುದೇವನನ್ನು ಪೂಜಿಸಿದರೆ ಪೂರ್ಣಾನಂದವನ್ನು ಅನುಭವಿಸುತ್ತಾರೆ. ॥ 35 (34) ॥

**ಮೂಲ ॥ ಶಂಕರಃ (ಪರಾಶರ) ॥ ಕೃತೇ ಪಾಪೇಽನುತಾಪೋ ವೈ**
**ಯಸ್ಯ ಪುಂಸಃ ಪ್ರಜಾಯತೇ ।**
**ಪ್ರಾಯಶ್ಚಿತ್ತಂ ತು ತಸ್ಯೋಕ್ತಂ**
**ಹರಿ ಸಂಸ್ಮರಣಂ ಪರಂ ॥ ೩೬ ॥**

**ಅರ್ಥ ॥** ಶಂಕರನು (ಪರಾಶರರು) ಹೇಳುತ್ತಾನೆ(ರೆ) :- ಯಾವ ಪುರುಷನಿಗೆ ಅನೇಕ ವಿಧವಾದ ಪಾಪವು ತನ್ನಿಂದ ಮಾಡಲ್ಪಡುತ್ತಿರಲು ಪಶ್ಚಾತ್ತಾಪವು ಹುಟ್ಟುತ್ತದೋ ಆತನಿಗೆ (ತಾನು ಮಾಡಿದ ಪಾಪ ಪರಿಹಾರಕ್ಕಾಗಿ) ಪಾಪಗಳಿಗೆ ಪ್ರಾಯಶ್ಚಿತ್ತರೂಪವಾದ ಕರ್ಮವು ಸರ್ವಕ್ಕಿಂತಲೂ ಅತ್ಯುತ್ಕೃಷ್ಟವಾದ ಹರಿಸಂಸ್ಮರಣವೇ ಉಕ್ತವಾಗಿದೆ. (ಆದಕಾರಣ ಎಲ್ಲಾ ಪಾಪಗಳನ್ನು ನಿವೃತ್ತಿಪಡಿಸಿ, ಮುಕ್ತ್ಯಾದಿ ಫಲಗಳನ್ನು ಹುಟ್ಟಿಸುವುದರಿಂದ ಭಗವಂತನ ಸ್ಮೃತಿಯನ್ನು ಸರ್ವರೂ ಯಾವಾಗಲೂ ಮಾಡಬೇಕು.) ॥ 36 ॥

**ಮೂಲ ॥ ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।**
**ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥ ೩೭ ॥**

**ಅರ್ಥ ॥** ಪಾಪಗಳನ್ನು ಪರಿಹರಿಸುವ ವಿಷಯದಲ್ಲಿ ಶ್ರೀಹರಿಯ ನಾಮಧೇಯಕ್ಕೆ ಎಂತಹ ಶಕ್ತಿಯಿದೆಯೋ, ಅಂತಹ ಪಾಪವನ್ನು ಮಾಡಲು ಪಾತಕೀ ಜನರು ಸಹ ಶಕ್ತರಾಗಲಾರರು. ॥ 37 ॥

**ಮೂಲ ॥ ಬ್ರಹ್ಮಾ ॥ ನಹ್ಯಪುಣ್ಯವತಾಂ ಲೋಕೇ**
**ಮೂಢಾನಾಂ ಕುಟಿಲಾತ್ಮನಾಂ ।**
**ಭಕ್ತಿರ್ಭವತಿ ಗೋವಿಂದೇ**
**ಸ್ಮರಣಂ ಕೀರ್ತನಂ ತಥಾ ॥ ೩೮ ॥**

**ಅರ್ಥ ॥** ಚತುರ್ಮುಖ ಬ್ರಹ್ಮನು ಹೇಳುತ್ತಾನೆ:- ಬಹು ಜನ್ಮಗಳಿಂದ ಪುಣ್ಯಕರ್ಮವನ್ನೇ ಮಾಡದಿರುವವರೂ, ಭಗವದ್ವಿಷಯಕ ಮಾಹಾತ್ಮ್ಯಜ್ಞಾನ ಶೂನ್ಯರೂ ಆದ ಮಿಥ್ಯಾಜ್ಞಾನಿಗಳಿಗೆ ಲೋಕದಲ್ಲಿ ಶ್ರೀಗೋವಿಂದನಲ್ಲಿ ಭಕ್ತಿಯೂ, ಸ್ಮೃತಿಯೂ, ಹಾಗೆಯೇ ಸ್ತುತಿಯೂ ಹುಟ್ಟಲಾರದು. (ಆದಕಾರಣ ಮುಕ್ತಿಗಾಗಿ ಸರ್ವದಾ ಸ್ಮರಣಾದಿಗಳನ್ನು ಮಾಡುತ್ತಿರಬೇಕು.) ॥ 38 ॥

**ಮೂಲ ॥ ತದೈವ ಪುರುಷೋ ಮುಕ್ತೋ ಜನ್ಮದುಃಖ ಜರಾದಿ (ಧಿ) ಭಿಃ ।**
**ಜಿತೇಂದ್ರಿಯೋ ವಿಶುದ್ಧಾತ್ಮಾ ಯದೈವ ಸ್ಮರತೇ ಹರಿಂ ॥ ೩೯ ॥**

**ಅರ್ಥ ॥** ಅಧಿಕಾರಿಯು ಸರ್ವೇಂದ್ರಿಯಗಳನ್ನು ಜಯಿಸಿದವನಾಗಿ, ಶುದ್ಧಾಂತಃಕರಣನಾಗಿ ಯಾವ ಕಾಲದಲ್ಲಿಯೇ ಪರಮಾತ್ಮನನ್ನು ಸ್ಮರಿಸುತ್ತಾನೋ, (ಭಕ್ತಿ ಸ್ತುತಿಗಳನ್ನು ಮಾಡುತ್ತಾನೋ) ಆಗಲೇ ಈ ಪುರುಷನು ದುಃಖ, ಮುಪ್ಪು ಮೊದಲಾದ (ಮನೋವ್ಯಥೆಗಳೆಂಬ) ಸಾಂಸಾರಿಕ ದುಃಖಗಳಿಂದ ಬಿಡಲ್ಪಡುತ್ತಾನೆ. ॥ 39 ॥

**ಮೂಲ ॥ ಪ್ರಾಪ್ತೇ ಕಲಿಯುಗೇ ಘೋರೇ ಧರ್ಮಜ್ಞಾನ ವಿವರ್ಜಿತೇ ।**
**ನ ಕಶ್ಚಿತ್ಸ್ಮರತೇ ದೇವಂ ಕೃಷ್ಣಂ (ವಿಷ್ಣುಂ) ಕಲಿಮಲಾಪಹಂ ॥ ೪೦ ॥**

**ಅರ್ಥ ॥** ಭಯಂಕರವಾಗಿಯೂ ಧರ್ಮ ಜ್ಞಾನಗಳಿಂದ ವಿರಹಿತವಾಗಿಯೂ ಇರುವ ಕಲಿಯುಗವು ಪ್ರಾಪ್ತವಾಗಲು ಯಾರೊಬ್ಬನೂ ಕಲಿಕೃತರಾಗಾದಿಗಳನ್ನು ಪರಿಹರಿಸುವ ಶ್ರೀಕೃಷ್ಣನನ್ನು ಸ್ಮರಿಸುವುದಿಲ್ಲ. ॥ 40 ॥

**ಮೂಲ ॥ ನ ಕಲೌ ದೇವದೇವಸ್ಯ ಜನ್ಮ(ಸರ್ವ) ದುಃಖಾಪಹಾರಿಣಃ ।**
**ಕರೋತಿ ಮರ್ತ್ಯೋ ಮೂಢಾತ್ಮಾ ಸ್ಮರಣಂ ಕೀರ್ತನಂ ॥ ೪೧ ॥**

**ಅರ್ಥ ॥** ಬ್ರಹ್ಮಾದಿಗಳಿಗೆ ನಿಯಾಮಕನೂ, ಜನ್ಮ(ಎಲ್ಲಾ) ದುಃಖಾದಿಗಳನ್ನು ಪರಿಹರಿಸುವವನೂ ಆದ ಶ್ರೀಹರಿಯ ಸ್ಮರಣವನ್ನೂ ಸಂಕೀರ್ತನೆಯನ್ನೂ, ಮೂಢಸ್ವಭಾವವುಳ್ಳ ಯಾರೊಬ್ಬ ಮನುಷ್ಯನೂ ಕಲಿಯುಗದಲ್ಲಿ ಮಾಡಲಾರನು. ॥ 41 ॥

**ಮೂಲ ॥ ಯೇ ಸ್ಮರಂತಿ ಸದಾ ವಿಷ್ಣುಂ**
**ವಿಶುದ್ಧೇನಾಂತರಾತ್ಮನಾ ।**

**ತೇ ಪ್ರಯಾಂತಿ ಭಯಂ (ವಂ)ತ್ಯಕ್ತ್ವಾ**
**ವಿಷ್ಣುಲೋಕಮನಾಮಯಂ ॥ ೪೨ ॥**

**ಅರ್ಥ ॥** ಯಾವ ಭಕ್ತರು (ಕಲಿಕಾಲದಲ್ಲಿಯೂ) ಶುದ್ಧಾಂತಃಕರಣದಿಂದ ಯಾವಾಗಲೂ ವಿಷ್ಣುವನ್ನು ಸ್ಮರಿಸುತ್ತಾ ಇರುತ್ತಾರೋ, ಅವರು ಸಂಸಾರ ಭಯವನ್ನು ಬಿಟ್ಟು ಸರ್ವದುಃಖ ವಿರಹಿತವಾದ ವೈಕುಂಠಲೋಕವನ್ನು ಹೊಂದುತ್ತಾರೆ. ॥ 42 ॥

**ಮೂಲ ॥ ಗರ್ಭ ಜನ್ಮ ಜರಾ ರೋಗ (ಮೃತ್ಯು)**
**ದುಃಖಸಂಸಾರ ಬಂಧನೈಃ ।**
**ನ ಬಾಧ್ಯತೇ ನರೋ ನಿತ್ಯಂ (ಯಸ್ತು)**
**ವಾಸುದೇವ (ನಾರಾಯಣ) ಮನುಸ್ಮರನ್ ॥ ೪೩ ॥**

**ಅರ್ಥ ॥** ನಿತ್ಯದಲ್ಲಿಯೂ ವಾಸುದೇವನನ್ನು ಸ್ಮರಿಸಿಕೊಂಡು ಇರುವ ಮನುಷ್ಯನು ಗರ್ಭವಾಸ, ಭೂಮಿಯಲ್ಲಿ ಹುಟ್ಟುವಿಕೆ, ಮುಪ್ಪು, ರೋಗ(ಮರಣ), ದುಃಖ ಇವುಗಳಿಂದೊಡಗೂಡಿದ ಸಂಸಾರ ಬಂಧನಗಳಿಂದ ಪೀಡಿಸಲ್ಪಡುವುದಿಲ್ಲ. ॥ 43 ॥

**ಮೂಲ ॥ ಯಮಮಾರ್ಗಂ ಮಹಾಘೋರಂ ನರಕಾಣಿ ಯಮಂ ತಥಾ ।**
**ಸ್ವಪ್ನೇಽಪಿ ನೈವ ಪಶ್ಯೇತ ಯಃ ಸ್ಮರೇದ್ಗರುಡಧ್ವಜಂ ॥ ೪೪ ॥**

**ಅರ್ಥ ॥** ಯಾವ ಅಧಿಕಾರಿಯು ಗರುಡಧ್ವಜನಾದ ವಾಸುದೇವನನ್ನು ಸ್ಮರಿಸುತ್ತಾನೋ, ಆತನು ಮಹಾಭಯಂಕರವಾದ ಯಮಮಾರ್ಗವನ್ನೂ, ಘೋರರೂಪಗಳಾದ ನರಕಗಳನ್ನೂ, ಹಾಗೆಯೇ ಪ್ರಾಣಿಗಳಿಗೆ ಭಯಂಕರನಾದ ಯಮನನ್ನು ಸ್ವಪ್ನದಲ್ಲಿ ಸಹ ನೋಡಲಾರನು. (ಆದಕಾರಣ ಸರ್ವದುಃಖಗಳನ್ನು ನಾಶಗೊಳಿಸುವುದರಿಂದ ಭಗವಂತನ ಸ್ಮೃತಿಯನ್ನು ಸರ್ವದಾ ಮಾಡಿಕೊಂಡಿರಬೇಕು.) ॥ 44 ॥

**ಮೂಲ ॥ ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ ।**
**ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ ॥ ೪೫ ॥**

**ಅರ್ಥ ॥** ಯಾವ ಭಕ್ತನ ಹೃದಯದಲ್ಲಿ ಧ್ಯೇಯವಾದ ಭಗವದ್ರೂಪವಿದೆಯೋ, (ಅಂದರೆ ಸರ್ವದಾ ಭಗವತ್ಸ್ಮರಣಧ್ಯಾನವುಳ್ಳವರೋ) ಯಾರ ವದನದಲ್ಲಿ ರಾಮಕೃಷ್ಣಾದಿ ನಾಮವಿದೆಯೋ, (ಅಂದರೆ, ಯಾರು ಸರ್ವದಾ ಭಗವಂತನ ನಾಮವನ್ನುಚ್ಚರಿಸುತ್ತಿದ್ದಾರೋ,) ಯಾರ ಹೊಟ್ಟೆಯಲ್ಲಿ ಹರಿಗೆ ಸಮರ್ಪಿತವಾದ ನೈವೇದ್ಯವಿದೆಯೋ, ತೀರ್ಥವೂ, ನಿರ್ಮಾಲ್ಯವೂ ಯಾರ ಶಿರಸ್ಸಿನಲ್ಲಿದೆಯೋ, ನಿತ್ಯದಲ್ಲಿಯೂ ಆ ಭಕ್ತನು ಚ್ಯುತಿರಹಿತನಾಗಿ, ಸಂಸಾರದುಃಖಗಳಿಂದ ವಿರಹಿತನಾಗಿ ಮುಕ್ತನಾಗುತ್ತಾನೆ. (ಇಂತಹ ಭಕ್ತನು ಮಾಡಿದ ಸ್ಮರಣಾದಿಗಳೇ ಮೋಕ್ಷಸಾಧನಗಳಾದುದರಿಂದ ಭಗವಂತನ ಸ್ಮರಣಾದಿಗಳನ್ನು ಯಾವಾಗಲೂ ಭಕ್ತಿಪೂರ್ವಕವಾಗಿ ಮಾಡಿಕೊಂಡಿರಬೇಕು). ॥ 45 ॥

**ಮೂಲ ॥ ಗೋವಿಂದಸ್ಮರಣಂ ಪುಂಸಾಂ ಪಾಪರಾಶಿ (ಶಿಂ) ಮಹಾಚಲಂ ।**
**ಅಸಂಶಯಂ ದಹತ್ಯಾಶು ತೂಲರಾಶಿಮಿವಾನಲಃ ॥ ೪೬ ॥**

**ಅರ್ಥ ||** ಗೋವಿಂದನ ಸ್ಮರಣೆಯು ಭಕ್ತರಾದ ಪುರುಷರು ಮಾಡಿದ ದೊಡ್ಡ ಬೆಟ್ಟದಂತಿರುವ ಪಾಪಗಳ ಸಮುದಾಯವನ್ನು ಬೆಂಕಿಯು ಹತ್ತಿಯ ರಾಶಿಯನ್ನೆಂಬಂತೆ ನಿಸ್ಸಂಶಯವಾಗಿಯೂ ಶೀಘ್ರವಾಗಿಯೇ ಸುಡುತ್ತದೆ. || 46 ||

**ಮೂಲ || ಅಗಸ್ತ್ಯಃ || ಸ್ಮರಣಾದೇವ ಕೃಷ್ಣಸ್ಯ ಪಾಪಸಂಘಾತ ಪಂಜರಃ(ರಂ) |**
**ಶತಧಾ ಭೇದಮಾಯಾತಿ ಗಿರಿರ್ವಜ್ರಹತೋ ಯಥಾ || ೪೭ ||**

**ಅರ್ಥ ||** ಅಗಸ್ತ್ಯರು ಹೇಳುತ್ತಾರೆ :- ಶ್ರೀಕೃಷ್ಣನ ಸ್ಮರಣಮಾತ್ರದಿಂದಲೇ ಪಾಪಸಮುದಾಯಗಳಿಗೆ ಆಶ್ರಯಭೂತಗಳಾದ ಪಾಂಚಭೌತಿಕ ಸ್ಥೂಲ, ಸೂಕ್ಷ್ಮ ಶರೀರಾದಿಗಳು ಸಂಪೂರ್ಣ ನಾಶವಾಗುತ್ತವೆ. ವಜ್ರ (ಇಂದ್ರಾಯುಧ) ದಿಂದ ಹೊಡೆಯಲ್ಪಟ್ಟ ಪರ್ವತವು ಹೇಗೆ ಪುಡಿ ಪುಡಿ ಆಗುತ್ತದೆಯೋ ಹಾಗೆಯೇ || 47 ||

**ಮೂಲ || ಕೃಷ್ಣೇ ರತಾಃ ಕೃಷ್ಣಮನುಸ್ಮರಂತಿ (ತಃ)**
**ತದ್ಭಾವಿತಾಸ್ತದ್ಗತಮಾನಸಾಶ್ಚ |**
**ಭಿನ್ನೇಽಪಿ ದೇಹೇ (ತೇ ಭಿನ್ನದೇಹಾಃ) ಪ್ರವಿಶಂತಿ ಕೃಷ್ಣಂ (ವಿಷ್ಣುಂ)**
**ಹವಿರ್ಯಥಾ ಮಂತ್ರಹುತಂ ಹುತಾಶೇ || ೪೮ ||**

**ಅರ್ಥ ||** ಶ್ರೀಕೃಷ್ಣನಲ್ಲಿಯೇ ಆಸಕ್ತರಾದವರು, ಭಕ್ತಿಪೂರ್ವಕವಾಗಿ ಚೆನ್ನಾಗಿ ಭಗವಂತನನ್ನು ಸ್ಮರಿಸಿಕೊಂಡು ಇರುವವರು, ಶ್ರೀಕೃಷ್ಣನಲ್ಲಿಯೇ ಭಕ್ತಿಯುಕ್ತರು, ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಇಟ್ಟವರು ಯಾರಿರುವರೋ, ಇಂತಹ ಭಕ್ತರು ಭಿನ್ನವಾದ ಶರೀರವುಳ್ಳವರಾಗಿ (ಪಂಚಭೂತಾತ್ಮಕ ಸ್ಥೂಲ ಶರೀರವು ನಷ್ಟವಾಗೋಣ) ವೈಕುಂಠದಲ್ಲಿರುವ ವಾಸುದೇವನನ್ನು ಮುಕ್ತವಾಗಿ ಪ್ರವೇಶಮಾಡುತ್ತಾರೆ. ಹೇಗೆಂದರೆ- ಯಜ್ಞದಲ್ಲಿ ಕೊಡಲ್ಪಟ್ಟ ತತ್ತದ್ದೇವತಾಕಮಂತ್ರಗಳಿಂದ ಹೋಮಿಸಲ್ಪಟ್ಟ ಪುರೋಡಾಶ ಮೊದಲಾದುದು ಆಹವನೀಯಾದಿ ಸಂಸ್ಕೃತಾಗ್ನಿಯಲ್ಲಿ ಹೇಗೆ ಪ್ರವೇಶಿಸುತ್ತದೋ, ಹಾಗೆಯೇ ಭಗವಂತನನ್ನು ಸ್ಮರಿಸುವವರು ವಿಷ್ಣುವನ್ನು ಪ್ರವೇಶಿಸುತ್ತಾರೆ. ಆದಕಾರಣ ಭಗವಂತನನ್ನು ಭಕ್ತಿಪೂರ್ವಕವಾಗಿ ಸರ್ವದಾ ಸ್ಮರಿಸುತ್ತಾ ಇರಬೇಕು. || 48 ||

**ಮೂಲ || ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಚಾಂಧ ಜಡ ಮೂಕತಾ |**
**ಯನ್ಮುಹೂರ್ತಂ ಕ್ಷಣಂ ವಾಽಪಿ ವಾಸುದೇವೋ ನ ಚಿಂತ್ಯತೇ || ೪೯ ||**

**ಅರ್ಥ ||** ಯಾವ ಅಧಿಕಾರಿಯಾದ ಸಂಸಾರಿಯಿಂದ ಒಂದು ಮುಹೂರ್ತವಾಗಲಿ, ಕ್ಷಣವಾಗಲೀ ವಾಸುದೇವನು ಸ್ಮರಿಸಲ್ಪಡುವುದಿಲ್ಲವೋ, ಆತನಿಗೆ ಭಗವಂತನನ್ನು ಧ್ಯಾನಿಸದಿರುವುದು, ಆಯುಷ್ಯ ಪ್ರಜ್ಞಾದಿಗಳನ್ನು ನಾಶಗೊಳಿಸುವುದು, ದೋಷವನ್ನೂ ಕೊಡುವುದು, ಧ್ಯಾನಿಸದಿರುವುದೇ ಅಂಧತ್ವ, ಜಡತ್ವ, ಮೂಖತ್ವಗಳು || 49 ||

**ಮೂಲ || ನಾರಾಯಣೋ ನಾಮ ನರೋ ನರಾಣಾಂ**
**ಪ್ರಸಿದ್ಧ (ಪ್ರಸಂಹ್ಯ) ಚೋರಃ ಕಥಿತಃ ಪೃಥಿವ್ಯಾಂ |**

**ಅನೇಕಜನ್ಮಾರ್ಜಿತಪಾಪ ಸಂಚಯಂ**
**ಹರ (ದಹ) ತ್ಯಶೇಷಂ ಸ್ಮೃತ(ತಿ) ಮಾತ್ರ ಏವ ॥ ೫೦ ॥**

**ಅರ್ಥ ॥** ನಾರಾಯಣನು ಪ್ರಪಂಚದಲ್ಲಿ ಪ್ರಸಿದ್ಧ ಚೋರನೆಂದೇ ಹೇಳಲ್ಪಟ್ಟಿದ್ದಾನೆ. ಏಕೆಂದರೆ ತನ್ನ ಭಕ್ತರ ಅನೇಕ ಜನ್ಮಗಳಿಂದ ಸಂಚಿತಗಳಾದ ಎಲ್ಲಾ ಪಾಪಗಳ ಸಮೂಹಗಳನ್ನು ಕೇವಲ ಸ್ಮರಣದಿಂದಲೇ ನಿಶ್ಶೇಷವಾಗಿ ಅಪಹರಿಸುತ್ತಾನೆ. (ನಾಶಗೊಳಿಸುತ್ತಾನೆ) ಆದಕಾರಣ ಆತನನ್ನು ಸರ್ವದಾ ಸ್ಮರಿಸುತ್ತಿರಬೇಕು. ॥ 50 ॥

**ಮೂಲ ॥ ಯಸ್ಯ ಸಂಸ್ಮರಣಾದೇವ ವಾಸುದೇವಸ್ಯ ಚಕ್ರಿಣಃ ।**
**ಕೋಟಿಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೫೧ ॥**

**ಅರ್ಥ ॥** ಯಾವ ಚಕ್ರಧರನಾದ ವಾಸುದೇವನ ಮಹಾಭಕ್ತ್ಯಾದಿಗಳಿಂದೊಡಗೂಡಿದ ಸಮೀಚೀನ ಸ್ಮರಣದಿಂದಲೇ ಭಕ್ತರ ಅನೇಕ ಜನ್ಮಗಳಿಂದ ಸಂಪಾದಿತಗಳಾದ ಪಾಪಗಳು ತತ್ಕ್ಷಣವೇ ನಷ್ಟವಾಗುವುವು. ॥ 51 ॥

**ಮೂಲ ॥ ಕಿಂ ತಸ್ಯ ಬಹುಭಿಸ್ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ।**
**ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣಮನನ್ಯಧೀಃ ॥ ೫೨ ॥**

**ಅರ್ಥ ॥** ಯಾವ ಅಧಿಕಾರಿಯು ನಿತ್ಯದಲ್ಲಿಯೂ ಏಕಾಗ್ರಚಿತ್ತನಾಗಿ ನಾರಾಯಣದೇವರನ್ನು ಧ್ಯಾನಿಸುತ್ತಾನೋ, ಅಂತಹ ಭಕ್ತನಿಗೆ ತೀರ್ಥಸ್ನಾನಗಳಿಂದ ಏನು ಫಲವಿದೆ? ತಪಸ್ಸುಗಳಿಂದ ಏನು ಫಲವು? ಅಗ್ನಿಷ್ಟೋಮ ಮೊದಲಾದ ಯಾಗಗಳಿಂದಲೂ ಏನು ಪ್ರಯೋಜನವು? (ಇವುಗಳಿಂದ ಭಗವದ್ಧ್ಯಾನದಲ್ಲಿಯೇ ಹೆಚ್ಚು ಫಲವಿದ್ದುದರಿಂದ ಮೋಕ್ಷಕ್ಕಾಗಿ ಸರ್ವದಾ ಭಗವದ್ಧ್ಯಾನವನ್ನು ಮಾಡುತ್ತಿರಬೇಕು. ॥ 52 ॥

**ಮೂಲ ॥ ಯೇ ಮಾನವಾ ವಿಗತರಾಗ ಪರಾವರಜ್ಞಾ**
**ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।**
**ಧ್ಯಾನೇನ ತೇನ ಹತಕಿಲ್ಬಿಷ ಚೇತನಾಸ್ತೇ**
**ಮಾತುಃ ಪಯೋಧರರಸಂ ನ ಪುನಃ ಪಿಬಂತಿ ॥ ೫೩ ॥**

**ಅರ್ಥ ॥** ವಿಶೇಷಾಕಾರವಾಗಿ ವಿಷಯಾದಿಗಳಲ್ಲಿ ಅನುರಾಗರಹಿತರೂ, ಪರಾಪರತತ್ತ್ವ ಜ್ಞಾನವುಳ್ಳವರೂ ಆದ ಯಾವ ಜ್ಞಾನಿಗಳಾದ ಭಕ್ತರು ದೇವತೆಗಳಿಗೆ ಗುರುವಾದ ನಾರಾಯಣನನ್ನು ಸರ್ವದಾ ಸ್ಮರಿಸುತ್ತಾರೋ, (ಧ್ಯಾನಿಸುತ್ತಾರೋ) ಆ ನಿರಂತರ ಸ್ಮರಣರೂಪವಾದ ಭಗವದ್ಧ್ಯಾನದಿಂದ ನಷ್ಟವಾದ ಪಾಪಮನಸ್ಸುಳ್ಳವರಾಗಿ ತಾಯಿಯ ಸ್ತನ ಕ್ಷೀರವನ್ನು ಪುನಃ ಪಾನ ಮಾಡುವುದಿಲ್ಲ (ಜನನ ಮರಣಾದಿಗಳಿಂದ ವಿರಹಿತರಾಗುತ್ತಾರೆ. ಆದಕಾರಣ ಮುಕ್ತಿಗಾಗಿ ಭಗವದ್ಧ್ಯಾನವನ್ನು ಸರ್ವದಾ ಮಾಡಬೇಕು.) ॥ 53 ॥

**ಮೂಲ ॥ ಹೇ ಚಿತ್ತ ಚಿಂತಯಸ್ವೇಹ ವಾಸುದೇವಮಹರ್ನಿಶಂ ।**
**ನೂನಂ ಯಶ್ಚಿಂತಿತಃ ಪುಂಸಾಂ ಹಂತಿ ಸಂಸಾರಬಂಧನಂ ॥ ೫೪ ॥**

**ಅರ್ಥ** ।। ಎಲೋ ಮನಸ್ಸೇ! ವಾಸುದೇವನನ್ನು ಹಗಲು ರಾತ್ರಿ ಸರ್ವದಾ ಧ್ಯಾನಿಸು. ನಿನ್ನಿಂದ ಧ್ಯಾನಿಸಲ್ಪಟ್ಟ ಯಾವ ವಾಸುದೇವನು ಪುರುಷರಿಗೆ ಅನಾದಿಕಾಲವನ್ನಾರಂಭಿಸಿರುವ ಸಂಸಾರಬಂಧನ ವನ್ನು ನಿಶ್ಚಯವಾಗಿಯೂ ನಾಶಗೊಳಿಸುತ್ತಾನೆ. ।। 54 ।।

**ಮೂಲ ।। ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ।। ೫೫ ।।**

**ಅರ್ಥ** ।। ಎಲ್ಲಾ ಶಾಸ್ತ್ರಗಳನ್ನು ಮಥನ ಮಾಡಿ, ಮತ್ತೂ ಮತ್ತೂ ವಿಚಾರಮಾಡಿ (ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದ ಸರ್ವ ಶಾಸ್ತ್ರಗಳನ್ನಾರಂಭಿಸಿ ವಿಚಾರ ಮಾಡೋಣದರಿಂದ) ನಾರಾಯಣನೇ ಸರ್ವದಾ ಮುಕ್ತಿಗಾಗಿ ಧ್ಯೇಯನೆಂಬುವುದೊಂದೇ ಮುಖ್ಯಾರ್ಥವು ನಿಶ್ಚಯಿಸಲ್ಪಟ್ಟಿತು. (ಅಂತೂ ಭಗವಂತನನ್ನು ಸರ್ವದಾ ಧ್ಯಾನಿಸಬೇಕೆನ್ನುವುದೇ ಸರ್ವಶಾಸ್ತ್ರಾರ್ಥವು) ।। 55 ।।

**ಮೂಲ ।। ಸ್ಮೃತೇ ಸಕಲ ಕಲ್ಯಾಣಂ ಭಾಜನಂ ಯತ್ರ ಜಾಯತೇ ।**
**ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಂ ।। ೫೬ ।।**

**ಅರ್ಥ** ।। ಯಾವ ಪುರುಷನಿಂದ ಯಾವ ಶ್ರೀಹರಿಯ ಜ್ಞಾನಪೂರ್ವಕವಾಗಿ ಸ್ಮರಿಸಲ್ಪಡುತ್ತಿರಲು, ಆ ಭಗವದ್ಭಕ್ತನು ಸರ್ವಮಂಗಳ ರೂಪಗಳಾದ ಅಭೀಷ್ಟಗಳಿಗೆ ಪಾತ್ರನಾಗುತ್ತಾನೋ, ಅಂತಹ ಉತ್ಪತ್ತಿರಹಿತನಾದ ಶ್ರೀಹರಿಯನ್ನು ನಿತ್ಯದಲ್ಲಿಯೂ ರಕ್ಷಕನನ್ನಾಗಿ ಹೊಂದುತ್ತಾನೆ. ।। 56 ।।

**ಮೂಲ ।। ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ತೀರ್ಥೇಷು ವ್ರತೇಷು ಯಚ್ಚ ।**
**ಇಷ್ಟೇಷು ಪೂರ್ತೇಷು ಚ ಯತ್ಪ್ರದಿಷ್ಟಂ**
**ಪುಣ್ಯಂ(ಪುಂಸಾಂ) ಸ್ಮೃತೇ ತತ್ಫಲು ವಾಸುದೇವೇ ।। ೫೭ ।।**

**ಅರ್ಥ** ।। ವೇದೋಕ್ತ ಕರ್ಮಗಳೂ, ಜ್ಯೋತಿಷ್ಟೋಮಾಯಾದಿ ಯಾಗಗಳೂ, ತಪಸ್ಸುಗಳೂ. ಷೋಡಶ ಮಹಾದಾನಗಳೂ, ಸರ್ವತೀರ್ಥ ಸ್ನಾನಗಳೂ, ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳೂ, ಅಗ್ನಿಹೋತ್ರಾದಿ ಇಷ್ಟಗಳೂ, ('ಅಗ್ನಿಹೋತ್ರಂ ತಪಸ್ಸತ್ಯಂ ವೇದಾನಾಂ ಚಾನುಪಾಲನಂ । ಆತಿಥ್ಯಂ ವೈಶ್ವದೇವಂ ಚ ಇಷ್ಟಮಿತ್ಯಭಿಧೀಯತೇ।।') ತಟಾಕಾದಿ ನಿರ್ಮಾಣಗಳೂ ಮಾಡಲ್ಪಡುತ್ತಿರಲು ಇವುಗಳಿಂದೆಲ್ಲಾ ಉಂಟಾಗತಕ್ಕ ಯಾವ ಪುಣ್ಯ ಫಲವು (ಭಕ್ತರಾದ ಪುರುಷರಿಗೆ) ಶಾಸ್ತ್ರಗಳಲ್ಲಿ ನಿರ್ದೇಶಮಾಡಲ್ಪಟ್ಟದೋ, ಅವೆಲ್ಲಾ ವಾಸುದೇವನನ್ನು ಸ್ಮರಿಸುತ್ತಿರಲು ಅಧಿಕಾರಿಗೆ ಲಭಿಸುವುದು. ।। 57 ।।

**ಮೂಲ ।। ಆರಾಧ್ಯೈವ ನರೋ ವಿಷ್ಣುಂ (ನಿತ್ಯಂ)**
**ಮನಸಾ ಯದ್ಯದಿಚ್ಛತಿ ।**
**ಫಲಂ ಪ್ರಾಪ್ನೋತಿ ವಿಪುಲಂ (ತ್ಯವಿಕಲಂ)**
**ಭೂರಿ ಸ್ವಲ್ಪಮಥಾಪಿ ವಾ ।। ೫೮ ।।**

**ಅರ್ಥ ॥** ಪುರುಷನು ಶ್ರೀಹರಿಯನ್ನು ಪೂಜಿಸಿ ಯಾವ ಯಾವುದನ್ನು ಮನಸ್ಸಿನಿಂದ ಇಚ್ಛಿಸುತ್ತಾನೋ ಅಂತಹ ಯಥೇಷ್ಟ ಫಲಗಳು ದೊಡ್ಡದಾಗಲೀ, ಚಿಕ್ಕದಾಗಲೀ ಅವುಗಳನ್ನು ಹೊಂದುತ್ತಾನೆ. (ಆದಕಾರಣ ಅನೇಕ ಫಲಗಳಿಗೆ ಸಾಧನವಾದ ಪ್ರಯುಕ್ತ ಭಗವಂತನನ್ನು ಸರ್ವದಾ ಆರಾಧಿಸುತ್ತಿರಬೇಕು.) ॥ 58 ॥

**ಮೂಲ ॥ ಯನ್ನಾಮ ಕೀರ್ತನಂ ಭಕ್ತ್ಯಾ ವಿಲಾಪನಮನುತ್ತಮಂ ।**
**ಮೈತ್ರೇಯಾಶೇಷ ಪಾಪಾನಾಂ ಧಾತೂನಾಮಿವ ಪಾವಕಃ ॥ ೫೯ ॥**

**ಅರ್ಥ ॥** ಮೈತ್ರೇಯನೇ! ಭಕ್ತಿಪೂರ್ವಕವಾಗಿ ಶ್ರೀಹರಿಯ ನಾಮಗಳ ಮಾಹಾತ್ಮ್ಯಜ್ಞಾನಪೂರ್ವಕವಾಗಿ ಉಚ್ಚಾರಣವು ಮನೋವಾಕ್ಕಾಯ ಕರ್ಮಗಳಿಂದ ಮಾಡಲ್ಪಟ್ಟ ಜನ್ಮಾಂತರ ಪಾಪಗಳಿಗೂ ಸಂಪೂರ್ತಿ ನಾಶವನ್ನುಂಟು ಮಾಡುತ್ತದೆ. ಸ್ವರ್ಣಾದಿ ಲೋಹಗಳಿಗೆ ಬೆಂಕಿಯು ಹೇಗೆ ನಾಶವಾಗುವುದೋ ಹಾಗೆಯೇ, ಅಂದರೆ- ಭಕ್ತಿ ಪೂರ್ವಕವಾಗಿ ಭಗವನ್ನಾಮಸಂಕೀರ್ತನವು ಎಲ್ಲಾ ಪಾಪಗಳನ್ನು ನಾಶಗೊಳಿಸುವುದರಿಂದ ಸರ್ವದಾ ಮಾಡುತ್ತಾ ಇರಬೇಕು ॥ 59 ॥

**ಮೂಲ ॥ ಕಲಿಕಲ್ಮಷಮತ್ಯುಗ್ರಂ ನರಕಾರ್ತಿಪ್ರದಂ ನೃಣಾಂ ।**
**ಪ್ರಯಾತಿ ವಿಲಯಂ ಸದ್ಯಃ ಸಕೃತ್ಸಂಕೀರ್ತಿತೇಽಚ್ಯುತೇ ॥ ೬೦ ॥**

**ಅರ್ಥ ॥** ಅತ್ಯಂತವಾಗಿ ಸಹಿಸಲಸಾಧ್ಯವಾದುದೂ, ಮನುಷ್ಯರನ್ನು ಅನೇಕ ವಿಧ ನರಕಗಳಲ್ಲಿ ಬೀಳಿಸುವುದರಿಂದ ಅನೇಕ ದುಃಖಗಳನ್ನು ಕೊಡತಕ್ಕುದೂ ಆದ ಕಲ್ಯಾದಿದೈತ್ಯರ ಪ್ರೇರಣೆಯಿಂದ ಪ್ರಾಪ್ತವಾದ ಅನೇಕವಿಧ ಪಾಪಗಳು ಒಂದಾವರ್ತಿ ಶ್ರೀಅಚ್ಯುತನ ನಾಮಗಳ ಸಂಕೀರ್ತನ (ಮಾಹಾತ್ಮ್ಯಜ್ಞಾನಪೂರ್ವಕವಾಗಿ ಸಮ್ಯಕ್ ಕೀರ್ತನ)ವು ಭಕ್ತಿಯಿಂದ ಮಾಡಲ್ಪಡುತ್ತಿರಲು, ತತ್ಕ್ಷಣದಲ್ಲಿಯೇ ಆ ಪಾಪರಾಶಿಯು ಸಂಪೂರ್ತಿನಾಶವನ್ನು ಹೊಂದುತ್ತದೆ. ॥ 60 ॥

**ಮೂಲ ॥ ಅನಾಯಾಸೇನ ಚಾ (ವೈ) ಯಾಂತಿ ಮುಕ್ತಿಂ ಕೇಶವಸಂಶ್ರಿತಾಃ ।**
**ತದ್ವಿಘಾತಾಯ ಜಾಯಂತೇ ಶಕ್ರಾದ್ಯಾಃ ಪರಿಪಂಥಿನಃ ॥ ೬೧ ॥**

**ಅರ್ಥ ॥** ಯದ್ಯಪಿ ಕಲ್ಯಾದಿದೈತ್ಯರು ದೇವತೆಗಳನ್ನಾರಂಭಿಸಿ ಮನುಷ್ಯಪರ್ಯಂತ ಅಧಿಕಾರಿಗಳ ಮುಕ್ತಿಗೆ ವಿಘಾತಕ್ಕಾಗಿ ಹುಟ್ಟುತ್ತಾರೆ. (ಅಂದರೆ ಮುಕ್ತಿಗೆ ವಿಘ್ನವನ್ನುಂಟು ಮಾಡುತ್ತಾರೆ.) ಆದರೂ ಶ್ರೀಹರಿಯನ್ನಾಶ್ರಯಿಸಿಕೊಂಡಿರುವ ಇಂದ್ರಾದಿ ದೇವತೆಗಳು (ಭಗವತ್ಪೂಜಾದಿ ಸಾಧನಗಳಿಂದ) ಅನಾಯಾಸದಿಂದಲೇ ಅನಿಷ್ಟ ನಿವೃತ್ತಿಪೂರ್ವಕವಾಗಿ ಇಷ್ಟಪ್ರಾಪ್ತಿರೂಪವಾದ ಮೋಕ್ಷವನ್ನೇ ಹೊಂದುತ್ತಾರೆ ॥ 61 ॥

**ಮೂಲ ॥ ಚತುಸ್ಸಾಗರಮಾಸಾದ್ಯ ಜಂಬೂದ್ವೀಪೋತ್ತಮೇ ಕ್ವಚಿತ್ ।**
**ನ ಪುಮಾನ್ಕೇಶವಾದನ್ಯಃ ಸರ್ವಪಾಪ ಚಿಕಿತ್ಸಕಃ ॥ ೬೨ ॥**

**ಅರ್ಥ ॥** ಚತುಸ್ಸಮುದ್ರಗಳನ್ನು ಹೊಂದಿಕೊಂಡಿರತಕ್ಕ ಜಂಬೂದ್ವೀಪನಾಮಕನಾದ ಈ ಭೂಮಿಯಲ್ಲಿ ಕೇಶವನಿಂದ ಇತರನಾದ ಪುರುಷನು ಮನುಷ್ಯರಿಂದ ಮಾಡಲ್ಪಡತಕ್ಕ ಅನೇಕ ವಿಧ ಪಾಪಗಳನ್ನು ತನ್ನ ಕೀರ್ತನಾದಿಗಳಿಂದ ನಾಶಗೊಳಿಸುವವನು ಮತ್ತೊಬ್ಬನು ಇಲ್ಲವು. (ಆದಕಾರಣ

ಸರ್ವ ಪಾಪಗಳನ್ನು ಪರಿಹರಿಸತಕ್ಕವನಾದುದರಿಂದ, ಸರ್ವದಾ ಆತನನ್ನು ಸಂಕೀರ್ತನೆ ಮಾಡುತ್ತಾ ಇರಬೇಕು.) ॥ 62 ॥

**ಮೂಲ ॥ ಯದಭ್ಯರ್ಚ್ಯ ಹರಿಂ ಭಕ್ತ್ಯಾ ಕೃತೇ ವರ್ಷಶತೈರಪಿ ।**
**ಫಲಂ ಪ್ರಾಪ್ನೋತಿ ವಿಪುಲಂ (ಪ್ರಾಪ್ನೋತ್ಯವಿಕಲಂ)**
**(ಸಂಪ್ರಾಪ್ಯತೇ ಸರ್ವಂ) ಕಲೌ ಸಂಕೀರ್ತ್ಯ ಕೇಶವಂ ॥ ೬೩ ॥**

ಅ ॥ ಕೃತಯುಗದಲ್ಲಿ 100 ವರ್ಷಗಳಿಂದ ಶ್ರೀಹರಿಗೆ ಭಕ್ತಿಯಿಂದ ಚೆನ್ನಾಗಿ ಪೂಜಾದಿಗಳನ್ನು ಮಾಡಿ ಯಾವ ಪುಣ್ಯಫಲವನ್ನು ಪುರುಷನು ಹೊಂದುತ್ತಾನೋ, ಅದಕ್ಕಿಂತ ಅಧಿಕಫಲವನ್ನು ಕಲಿಯುಗದಲ್ಲಿ ಭಕ್ತ್ಯಾದ್ಯತಿಶಯದಿಂದ ಭಗವನ್ನಾಮಾದಿಗಳನ್ನು ಸಂಕೀರ್ತನ ಮಾಡೋಣದರಿಂದಲೇ ಹೊಂದುತ್ತಾರೆ (ಅಂತೂ ಹೆಚ್ಚು ಫಲವನ್ನು ಹೊಂದುವುದರಿಂದ ಅವಶ್ಯವಾಗಿ ಭಗವನ್ನಾಮ ಸಂಕೀರ್ತನಾದಿಗಳನ್ನು ಮಾಡಲೇಬೇಕು.) ॥ 63 ॥

**ಮೂಲ ॥ ಕ್ಷೀಯತೇ ತು(ಚ) ಯದಾ ಧರ್ಮಃ**
**ಪ್ರಾಪ್ತೇ ಘೋರೇ ಕಲೌ ಯುಗೇ ।**
**ತದಾ ನ ಕೀರ್ತಯೇತ್ಕಶ್ಚಿತ್**
**ಮುಕ್ತಿದಂ ದೇವಮಚ್ಯುತಂ ॥ ೬೪ ॥**

ಅರ್ಥ ॥ ಭಯಂಕರವಾದ ಕಲಿಯುಗವು ಪ್ರಾಪ್ತವಾಗೋಣ ನಿವೃತ್ತಧರ್ಮವೂ, ಭಗವತ್ಪೂಜಾದಿರೂಪ ಧರ್ಮವೂ ಕೂಡ ಯಾವ ಕಾಲವಿಶೇಷದಲ್ಲಿ (ಅಧರ್ಮಾದಿಗಳನ್ನು ಮಾಡುವ ಪಾಷಂಡರಿಂದ) ವಿನಾಶಗೊಳಿಸಲ್ಪಡುತ್ತದೋ, ಆ ಕಾಲದಲ್ಲಿ ನಾಶರಹಿತನೂ ಮೋಕ್ಷಪ್ರದನೂ ಆದ ದೇವನನ್ನು ಯಾರೊಬ್ಬ ಅಧಿಕಾರಿಯೂ (ಕಾಲದೋಷದಿಂದ) ಸ್ಮರಿಸುವುದಿಲ್ಲ; ಅಂದರೆ—ಭಗವನ್ನಾಮ ಸಂಕೀರ್ತನಾದಿಗಳನ್ನು ಮಾಡುವುದಿಲ್ಲ, (ಆದಕಾರಣ ಕಲಿಯುಗದಲ್ಲಿ ಭಗವನ್ನಾಮ ಸಂಕೀರ್ತನಾದಿಗಳನ್ನು ಮಾಡುವವನೇ, ದುರ್ಲಭನಾದುದರಿಂದ ಸತ್ಸಹವಾಸಾದಿಗಳಿಂದ ಭಗವನ್ನಾಮ ಸಂಕೀರ್ತನಾದಿಗಳನ್ನು ಮುಕ್ತಿಗಾಗಿ ಮಾಡಬೇಕು.) ॥ 64 ॥

**ಮೂಲ ॥ ಅವಶೇನಾಪಿ ಯನ್ನಾಮ್ನಿ(ಮ)**
**ಕೀರ್ತಿತೇ (ರ್ತ್ಯತೇ) ಸರ್ವಪಾತಕೈಃ।**
**ಪುಮಾನ್ವಿಮುಚ್ಯತೇ ಸದ್ಯಃ**
**ಸಿಂಹತ್ರಸ್ತೈರ್ಮೃಗೈರಿವ (ಸಿಂಹತ್ರಸ್ತಾ ಮೃಗಾ ಇವ) ॥ ೬೫ ॥**

**ಅರ್ಥ ॥** ಸಂಸಾರವಿಮೋಚಕನಾದ ಯಾವ ಶ್ರೀಹರಿಯ ನಾಮವು ಯಾರಿಂದಲಾದರೂ ವಿಷಯಾದ್ಯಾಸಕ್ತವಾದ ಮನಸ್ಸಿನಿಂದಾಗಲೀ ಚೆನ್ನಾಗಿ ಉಚ್ಚರಿಸಲ್ಪಡುತ್ತಿರಲು, ಅಂತಹ ಪುರುಷನು ಬ್ರಹ್ಮಹತ್ಯೆ ಮೊದಲಾದ ಸರ್ವ ಪಾಪಗಳಿಂದಲೂ ವಿಶೇಷಾಕಾರವಾಗಿ ಬಿಡಲ್ಪಡುತ್ತಾನೆ; ಸಿಂಹದ ಗರ್ಜನೆಗಳಿಂದ ಹೆದರಿದ ಹುಲಿ ಮೊದಲಾದ ಅರಣ್ಯದಲ್ಲಿರುವ ಮೃಗಗಳಿಂದ ಕಾಡಿನಲ್ಲಿರುವ ಮನುಷ್ಯನು ಹೇಗೆ ಬಿಡಲ್ಪಡುತ್ತಾನೋ? ಹಾಗೆಯೇ ಬಿಡಲ್ಪಡುತ್ತಾನೆ. (ಸಿಂಹದಿಂದ ಹೆದರಿದ ಹುಲಿ

ಮೊದಲಾದ ಮೃಗಗಳು ನರಿ ಮೊದಲಾದವುಗಳನ್ನು ಹೇಗೆ ಬಿಡುತ್ತವೋ ಹಾಗೆಯೇ ಪಾಪಗಳೂ ಹರಿನಾಮವನ್ನು ಸಂಕೀರ್ತನೆ ಮಾಡಿದವನನ್ನು ಬಿಡುತ್ತವೆ.) (ಆದಕಾರಣ ಪರವಶನಾಗಿ ಆಗಲೀ ಭಗವಂತನನ್ನು ಸಂಕೀರ್ತನೆಮಾಡಿದರೆ ಸರ್ವ ಪಾಪಗಳೂ ನಾಶಹೊಂದುವುದರಿಂದ ಅವಶ್ಯವಾಗಿ ಸಂಕೀರ್ತನೆಮಾಡಲೇಬೇಕು.) ॥ 65 ॥

**ಮೂಲ ॥ (ಬ್ರಹ್ಮಾ) ನಾರಾಯಣೇತಿ ಮಂತ್ರೋಽಸ್ತಿ**
**ವಾಗಸ್ತಿ ವಶವರ್ತಿನೀ ।**
**ತಥಾಽಪಿ ನರಕೇ ಘೋರೇ**
**ಪತಂತೀತ್ಯೇತದದ್ಭುತಂ ॥ ೬೬ ॥**

**ಅರ್ಥ ॥** ಯದ್ಯಪಿ ನಾರಾಯಣ ಎಂಬೀ ಮಂತ್ರವಿದೆ. (ಜಪ್ಯಗಳಾದ ಮಂತ್ರಕೀರ್ತನಾದಿ ಗಳಿವೆ) ವಾಗಿಂದ್ರಿಯವೂ ಕೂಡ ತನ್ನ ಅಧೀನವಾಗಿಯೇ ಇದೆ. ಆದರೂ ಅವರು ಅತಿದುಸ್ಸಹಗಳಾದ ನಾನಾವಿಧ ನರಕಗಳಲ್ಲಿ ಬೀಳುತ್ತಾರೆ; ಮುಳುಗುತ್ತಾರೆ. ಇದಲ್ಲದೆ ಅತ್ಯಾಶ್ಚರ್ಯವು! ಅಂದರೆ, ಸ್ವಾಧೀನ ವಾದ ವಾಗಿಂದ್ರಿಯದಿಂದ ಭಗವನ್ಮಂತ್ರ ಜಪಾದಿಗಳನ್ನು ಮಾಡದೆ ನರಕದಲ್ಲಿ ಬೀಳುತ್ತಾರೆ ಎನ್ನುವುದು ಅತ್ಯಾಶ್ಚರ್ಯವು. ಆದಕಾರಣ ಅತ್ಯಂತ ಸುಲಭವಾದ ಭಗವನ್ನಾಮ ಜಪಾದಿಗಳಲ್ಲಿ ಮೋಕ್ಷವನ್ನು ಬಯಸುವ ಭಕ್ತನು ಪ್ರಯತ್ನಿಸಲೇಬೇಕು.॥ 66 ॥

**ಮೂಲ ॥ ಆರ್ತಾ ವಿಷಣ್ಣಾಶ್ಶಿಥಿಲಾಶ್ಚ ಭೀತಾಃ**
**ಘೋರೇಷು ಚ ವ್ಯಾಧಿಷು ವರ್ತಮಾನಾಃ।**
**ಸಂಕೀರ್ತ್ಯ ನಾರಾಯಣಶಬ್ದಮಾತ್ರಂ**
**ವಿಮುಕ್ತದುಃಖಾ ಸುಖಿನೋ ಭವಂತಿ ॥ ೬೭ ॥**

**ಅರ್ಥ ॥** ನಾನಾವಿಧದುಃಖಗಳಿಂದೊಡಗೂಡಿದವರೂ, ಆಧ್ಯಾತ್ಮಿಕ ಮೊದಲಾದ ತಾಪತ್ರಯ ದಿಂದ ಸಂತಪ್ತರೂ, ಜ್ವರಾದಿಗಳಿಂದ ದೇಹಾದಿಗಳಲ್ಲಿ ಶೈಥಿಲ್ಯಯುಕ್ತರೂ ರಾಜ ಚೋರಾದಿಗಳಿಂದ ಹೆದರಿದವರೂ, ಅತಿ ಭಯಂಕರಗಳಾದ ಕ್ಷಯ ಪಾಂಡುರಾದಿ ನಾನಾವಿಧರೋಗಗಳಲ್ಲಿರುವವರೂ (ತಮ್ಮ ಶರೀರಾದಿಗಳಲ್ಲಿ ವ್ಯಾಧಿಯನ್ನನುಭವಿಸುವವರೂ), ಆದ ಮನುಷ್ಯರು ನಾರಾಯಣ ಮೊದಲಾದ ಶಬ್ದಗಳನ್ನು ಮಾತ್ರ ಭಕ್ತ್ಯಾದ್ಯತಿಶಯ ಪೂರ್ವಕವಾಗಿ ಚೆನ್ನಾಗಿ ಸಂಕೀರ್ತನೆ ಮಾಡಿ, ವಿಶೇಷಾಕಾರವಾಗಿ ನಾನಾ ವಿಧಗಳಾದ ಸಾಂಸಾರಿಕ ದುಃಖಗಳಿಂದ ಬಿಡಲ್ಪಟ್ಟವರಾಗಿ ಭಗವತ್ಪ್ರಸಾದ ದಿಂದ ಮೋಕ್ಷಸುಖವುಳ್ಳವರಾಗುತ್ತಾರೆ. (ಅಂತೂ ಅನೇಕವಿಧ ಪಾಪ ಕರ್ಮಗಳಿಂದ ದುಃಖಾದಿ ಗಳನ್ನು ಹೊಂದಿದ ಮನುಷ್ಯರಿಗೆ ಭಗವನ್ನಾಮ ಸಂಕೀರ್ತನದಿಂದಲೇ ಸರ್ವದುಃಖಗಳ ರಾಹಿತ್ಯವೂ, ಸೌಖ್ಯವೂ ಪ್ರಾಪ್ತವಾಗುತ್ತದೆಂದು ಶ್ರುತವಾದುದರಿಂದ ಭಗವನ್ನಾಮ ಸಂಕೀರ್ತನಾದಿಗಳನ್ನು ಮಾಡಲೇಬೇಕೆಂದು ನಾರದನ ಮಾತು.) ॥ 67 ॥

**ಮೂಲ ॥ ಕೌಶಿಕಃ ॥ ಸಕೃದುಚ್ಚಾರಿತಂ (ಸಕೃದಭ್ಯಸ್ಥಿತಂ)ಯೈಸ್ತು**
**ಕೃಷ್ಣೇತಿ ನ ವಿಶಂತಿ ತೇ ।**

**ಗರ್ಭಾಗಾರಗೃಹಂ ಮಾತುಃ**
**ಯಮಲೋಕಂ ಚ ದುಃಸಹಂ ॥ ೬೮ ॥**

**ಅರ್ಥ ॥** ಕೌಶಿಕರು ಹೇಳುತ್ತಾರೆ:- ಯಾವ ಅಧಿಕಾರಿಗಳಿಂದ ಹೇ ಕೃಷ್ಣ! ಇದು ಮೊದಲಾದ ಭಗವನ್ನಾಮಗಳ ಸಂಕೀರ್ತನವು ಒಂದಾವರ್ತಿಯಾಗಿ ಆಗಲೀ ಉಚ್ಚರಿಸಲ್ಪಡುತ್ತದೋ, ಅವರು ಕರ್ಮದೋಷದಿಂದ ಪ್ರಾಪ್ತವಾಗುವ ತಮ್ಮ ತಾಯಿಯ ಗರ್ಭಾಖ್ಯ ಬಂಧನಗೃಹವನ್ನು, ಅತ್ಯಂತಾಸಹ್ಯಗಳಾದ ಯಮಲೋಕಗಳನ್ನು, (ನರಕಾದಿಗಳನ್ನು) ಪ್ರವೇಶಿಸುವುದಿಲ್ಲ. (ಕೃಷ್ಣ ಎಂದು ಒಂದಾವರ್ತಿ ಉಚ್ಚರಿಸಿದುದರಿಂದಲೇ ಗರ್ಭಪ್ರವೇಶ, ಯಮಲೋಕ ಪ್ರವೇಶಾದಿಗಳು ಇಲ್ಲದಿರುವುದರಿಂದ ಭಗವನ್ನಾಮಸಂಕೀರ್ತನಾದಿಗಳನ್ನು ಸರ್ವದುಃಖಗಳ ಪರಿಹಾರಕ್ಕಾಗಿ ಮಾಡಲೇಬೇಕು.) ॥ 68 ॥

**ಮೂಲ ॥ ಕ್ವ ನಾಕಪೃಷ್ಠಗಮನಂ ಪುನರಾವೃತ್ತಿಲಕ್ಷಣಂ ।**
**ಕ್ವ ಜಪೋ ವಾಸುದೇವೇತಿ ಮುಕ್ತಿಬೀಜಮನುತ್ತಮಂ ॥ ೬೯ ॥**

**ಅರ್ಥ ॥** ಮುಕ್ತಿಗೆ ಕಾರಣವಾದ ವಾಸುದೇವ ಎಂಬೀ ಸರ್ವಸಾಧನಗಳಿಂದುತ್ತಮವಾದ ಜಪವೆಲ್ಲಿ? ಪುಣ್ಯಕರ್ಮವು ನಾಶವಾಗೋಣ ಪುನರಾವೃತ್ತಿಯುಳ್ಳ ಸ್ವರ್ಗದಲ್ಲಿ ಅವಸ್ಥಿತಿಯೆಲ್ಲಿ? (ಕರ್ಮಾದಿ ಸಾಧ್ಯವಾದ ಸ್ವರ್ಗವೇ ವಾಸುದೇವಮಂತ್ರ ಜಪದಿಂದ ಸಾಧ್ಯವೆಂದು ತಿಳಿಯಕೂಡದು. ಆ ಜಪವು ಕೇವಲ ಮೋಕ್ಷಕ್ಕೂ ಸಾಧನವಾಗಿದೆ. ಅಂತೂ ವಾಸುದೇವಮಂತ್ರ ಜಪವು ಸ್ವರ್ಗಾದಿಗಳಕ್ಕಿಂತ ಉತ್ತಮವಾದ ಮುಕ್ತಿಗೆ ಸಾಧನವಾದುದರಿಂದ ಮುಕ್ತಿಯನ್ನು ಬಯಸುವವನು ವಾಸುದೇವ ಮಂತ್ರವನ್ನು ಜಪಿಸಲೇಬೇಕು) ॥ 69 ॥

**ಮೂಲ ॥ ಬುದ್ಧ್ವಾ ಬುದ್ಧ್ವಾಭ್ಯಸೇದೇತತ್ (ವದಸ್ವೈನಂ) ಹರಿರಿತ್ಯಕ್ಷರದ್ವಯಂ ।**
**ಸ್ಮರಣಾತ್ಕೀರ್ತನಾದ್ಯಸ್ಯ ನ ಪುನರ್ಜಾಯ ತೇ ಭುವಿ (ಕ್ವಚಿತ್) ॥ ೭೦ ॥**

**ಅರ್ಥ ॥** (ಎಲೈ ಶಿಷ್ಯನೇ ನಾನು ಹೇಳಿದ ರೀತಿಯಿಂದ) ಈ ಹರಿಯನ್ನು ಮಾಹಾತ್ಮ್ಯಜ್ಞಾನ ಪೂರ್ವಕವಾಗಿ ತಿಳಿದು 'ಹರಿಃ' ಇದು ಮೊದಲಾದ ಎರಡು ಅಕ್ಷರಗಳನ್ನು ಹೇಳು. ಯಾವ ಶ್ರೀಹರಿಯ ಮಾಹಾತ್ಮ್ಯ ಜ್ಞಾನ ಪೂರ್ವಕವಾಗಿ ಹರಿಸ್ಮರಣ ಕೀರ್ತನಾದಿಗಳಿಂದ ಎಲ್ಲಿಯೂ ಪುನಃ ಹುಟ್ಟುವುದಿಲ್ಲ. (ಮುಕ್ತನೇ ಆಗುತ್ತಾನೆ. ಭಗವಂತನ ಸ್ಮರಣಾದಿಗಳಿಗೆ ಜನನ ಮರಣಾದಿಗಳ ರಾಹಿತ್ಯಾದಿ ರೂಪವಾದ ಫಲವು ಶ್ರುತವಾದುದರಿಂದ 'ಹರಿಃ' ಎನ್ನುವುದೇ ಮೊದಲಾದ ಭಗವನ್ನಾಮಗಳನ್ನು ಸಂಕೀರ್ತನೆ ಮಾಡುತ್ತಾ ಇರಬೇಕು.) ॥ 70 ॥

**ಮೂಲ ॥ ಹೇ ಜಿಹ್ವೇ ಮಮ ನಿಸ್ನೇಹೇ ಹರಿಂ ಕಿಂ ನಾನುಭಾಷಸೇ ।**
**ಹರಿಂ ವದಸ್ವ ಕಲ್ಯಾಣಿ ಸಂಸಾರೋದಧಿ ನೌರ್ಹರಿಃ ॥ ೭೧ ॥**

**ಅರ್ಥ ॥** ಎಲೈ ಸ್ನೇಹರಹಿತವಾದ ನನ್ನ ನಾಲಿಗೆಯೇ! ಶ್ರೀಹರಿನಾಮವನ್ನು ಯಾವುದಕ್ಕಾಗಿ ಹೇಳುವುದಿಲ್ಲ? (ಪುರುಷಾರ್ಥವನ್ನು ಕೊಡುವ ಸಂಭಾಷಣವನ್ನು ಮಾಡುವುದಿಲ್ಲ; ಆದರಿಂದ ನಿನಗೆ ನನ್ನಲ್ಲಿ ಸ್ನೇಹವಿಲ್ಲ; ಅಂತಹ ನಿನ್ನಿಂದ ಏನು ಪ್ರಯೋಜನವು?) ಸಂಕೀರ್ತನದಿಂದ ಮಂಗಳರೂಪಳೇ ಸರ್ವ ದುರಿತಗಳನ್ನು ಪರಿಹರಿಸುವ ಶ್ರೀಹರಿನಾಮವನ್ನು ಹೇಳು. ಶ್ರೀಹರಿಯು ಅಪಾರಸಂಸಾರ ಸಾಗರವನ್ನು ದಾಟಿಸುವ ವಿಷಯದಲ್ಲಿ ನಾವೆಯಂತೆ ದಾಟಿಸುವವನು. ॥ 71 ॥

**ಮೂಲ ॥ ಅಸಾರೇ ಖಲು ಸಂಸಾರೇ ಸಾರಾತ್ಸಾರತರೋ ಹರಿಃ ।**
**ಪುಣ್ಯಹೀನಾ ನ ವಿಂದಂತಿ ಸಾರಂಗಾಶ್ಚ ಯಥಾ ಜಲಂ ॥ ೭೨ ॥**

**ಅರ್ಥ ॥** ಕೇವಲ ಸಾರರಹಿತವಾದ ಈ ಸಂಸಾರದಲ್ಲಿ ಶ್ರೀಹರಿಯೊಬ್ಬನೇ ರಮಾಬ್ರಹ್ಮಾದಿ ಸಾರವಸ್ತುಗಳಿಂದ ಸಾರವಂತನು. (ಅಂದರೆ ಸರ್ವರಿಂದ ಉತ್ತಮನು. ಮತ್ತು ಸರ್ವರಿಂದ ಅಪೇಕ್ಷಣೀಯನು.)ಜಿಂಕೆಗಳು ಹೇಗೆ ಬಿಸಲುಕುದುರೆಯನ್ನು ನೋಡಿ ತಿರುಗಿದರೂ ಜಲವನ್ನು ಹೊಂದಲಾರದೋ ಹಾಗೆಯೇ ಪಾಪಿಗಳು ಹರಿಯನ್ನು ಹೊಂದಲಾರರು. ॥ 72 ॥

**ಮೂಲ ॥ ಕುರುಕ್ಷೇತ್ರೇಣ ಕಿಂ ತಸ್ಯ ಕಿಂ ಕಾಶ್ಯಾ ಪುಷ್ಕರೇಣ ಕಿಂ ।**
**ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಂ ॥ ೭೩ ॥**

**ಅರ್ಥ ॥** ಯಾವ ಅಧಿಕಾರಿಯ ನಾಲಿಗೆಯ ತುದಿಯಲ್ಲಿ 'ಹರಿಃ' ಎಂಬೀ ಎರಡು ಅಕ್ಷರಗಳು ಇರುತ್ತವೋ (ಅಂದರೆ ಯಾವ ಅಧಿಕಾರಿಯು ಶ್ರೀ'ಹರಿ' ಎಂಬ ನಾಮವನ್ನು ಉಚ್ಚರಿಸುತ್ತಾನೋ) ಅಂತಹ ಅಧಿಕಾರಿಗೆ ಕುರುಕ್ಷೇತ್ರದಿಂದ (ಕುರುಕ್ಷೇತ್ರಕ್ಕೆ ಹೋದುದರಿಂದ) ಆಗಲೀ, ಕಾಶಿಗೆ ಹೋಗೋಣದರಿಂದಲಾಗಲೀ, ಪುಷ್ಕರಕ್ಷೇತ್ರಕ್ಕೆ ಹೋಗೋಣದರಿಂದಲಾಗಲೀ ಏನು ಪ್ರಯೋಜನವು? (ಅಂದರೆ ಕಾಶ್ಯಾದಿಗಳಿಗೆ ಹೋಗಿ ಅಲ್ಲಿ ಸ್ನಾನಾದಿಗಳಿಂದುಂಟಾದ ಫಲಕ್ಕಿಂತ 'ಹರಿ' ಎಂಬೀ ಎರಡು ಅಕ್ಷರಗಳನ್ನು ಮಾತ್ರ ಉಚ್ಚರಿಸುವುದಕ್ಕಿಂತ ಹೆಚ್ಚು ಫಲವಿದ್ದುದರಿಂದ ಯಾವಾಗಲೂ ಸಂಕೀರ್ತನವನ್ನು ಮಾಡುತ್ತಿರಬೇಕು.) ॥ 73 ॥

**ಮೂಲ ॥ ಬ್ರಹ್ಮಾ ॥ ಅಸಾರೇ ಖಲು ಸಂಸಾರೇ ಸಾರಮೇಕಂ ನಿರೂಪಿತಂ ।**
**ಸಮಸ್ತಲೋಕನಾಥಸ್ಯ ಸಾರಮಾರಾಧನಂ ಹರೇಃ ॥ ೭೪ ॥**

**ಅರ್ಥ ॥** ಚತುರ್ಮುಖ ಬ್ರಹ್ಮನು ಹೇಳುತ್ತಾನೆ:- ಸುಖರಹಿತವಾದ ಸಂಸಾರದಲ್ಲಿ (ದುಃಖಿಸು ತ್ತಿರುವ ಅಧಿಕಾರಿಗಳಿಗೆ) ಮುಖ್ಯಶ್ರೇಷ್ಠವಾದ ಮೋಕ್ಷಸಾಧನವು ನಿರೂಪಿಸಲ್ಪಟ್ಟಿದೆ. ಎಲ್ಲಾ ಲೋಕಗಳಿಗೆ ಸ್ವಾಮಿಯಾದ ಶ್ರೀಹರಿಯ ಆರಾಧನವು ಶ್ರೇಷ್ಠವಾದ ಫಲವನ್ನು ಕೊಡುತ್ತದೆ. ॥ 74 ॥

**ಮೂಲ ॥ ಸಾ ಜಿಹ್ವಾ ಯಾ ಹರಿಂ ಸ್ತೌತಿ ತಚ್ಚಿತ್ತಂ ಯತ್ತದರ್ಪಣಂ(ರ್ಪಿತಂ) ।**
**ತಾವೇವ ಕೇವಲೌ ಶ್ಲಾಘ್ಯೌ ಯೌ ತತ್ಪೂಜಾಕರೌ ಕರೌ ॥ ೭೫ ॥**

**ಅರ್ಥ ॥** ಯಾವ ಜಿಹ್ವೇಂದ್ರಿಯವು ಹರಿಯನ್ನು ಸ್ತುತಿಸುತ್ತದೋ ಅದೇ ನಾಲಿಗೆಯು (ಅಂದರೆ ಭಗವದ್ವಿಷಯಕವಾದುದರಿಂದ ಅದೇ ಸಾರ್ಥಕವು) ಯಾವ ಮನಸ್ಸು ಭಗವಂತನಲ್ಲಿಯೇ ಅರ್ಪಿತವಾಗಿದೆಯೋ ಅದೇ ಮನಸ್ಸು (ಅಂದರೆ ಅದೇ ಮನಸ್ಸು ಸಾರ್ಥಕವು) ಯಾವ ಕೈಗಳು ಭಗವಂತನ ಪೂಜಾದಿಗಳನ್ನು ಮಾಡತಕ್ಕವುಗಳೋ ಆ ಕೈಗಳೇ ಶ್ಲಾಘ್ಯಗಳು. ॥ 75 ॥

**ಮೂಲ ॥ ಯಸ್ತು ವಿಷ್ಣುಪರೋ ನಿತ್ಯಂ ದೃಢಭಕ್ತಿರ್ಜಿತೇಂದ್ರಿಯಃ ।**
**ಸ್ವಗೃಹೇಽಪಿ ವಸನ್ಯಾತಿ ತದ್ವಿಷ್ಣೋಃ ಪರಮಂ ಪದಂ ॥ ೭೬ ॥**

**ಅರ್ಥ ॥** ಯಾವನು ಸದಾ ವಿಷ್ಣುಪೂಜಾದಿಗಳಲ್ಲಿ ಆಸಕ್ತನೂ ವಿಷ್ಣುಸರ್ವೋತ್ತಮತ್ವ

ಜ್ಞಾನವುಳ್ಳವನು ಆಗಿರುತ್ತಾನೋ, ವಿಷ್ಣುವಿನಲ್ಲಿಯೂ ದೃಢವಾದ ನವವಿಧಭಕ್ತಿಯುಳ್ಳವನೋ, ಇಂದ್ರಿಯಗಳನ್ನು ಜಯಿಸಿಕೊಂಡಿರುವನೋ, ಅವನು ತನ್ನ ಮನೆಯಲ್ಲಿಯೇ ಆವಾಸ ಮಾಡುತ್ತಾ ಇರುವವನಾದರೂ ವಿಷ್ಣುವಿನ ಉತ್ತಮವಾದ ವೈಕುಂಠಾದಿಸ್ಥಾನವನ್ನು ಹೊಂದುತ್ತಾನೆ.।। 76 ।।

**ಮೂಲ ।। ಶಂಕರಃ ।। ಸಾಧು ಸಾಧು ಮಹಾಭಾಗ ಸಾಧು ದಾನವನಾಶನ ।**
**ಯನ್ಮಾಂ ಪೃಚ್ಛಸಿ ಧರ್ಮಜ್ಞ ಕೇಶವಾರಾಧನಂ ಪ್ರತಿ ।। ೭೭ ।।**

**ಅರ್ಥ ।।** ರುದ್ರದೇವರು ಹೇಳುತ್ತಾರೆ:- ಧರ್ಮಜ್ಞನೇ! (ಶ್ರೀಹರಿಯ ಪೂಜಾದಿಧರ್ಮಗಳನ್ನು ತಿಳಿದ ಭಕ್ತನೇ ನೀನು) ನನ್ನನ್ನು ಕುರಿತು ಕೇಶವನ ಪೂಜಾದ್ಯಾರಾಧನ ವಿಷಯದಲ್ಲಿಯೇ ಯಾವ ಸಾಧನಜ್ಞಾನವನ್ನು ಪ್ರಶ್ನೆಮಾಡುತ್ತೀಯೋ (ಅದಾದರೂ) ಅತ್ಯಂತ ಮಂಗಲಫಲವನ್ನು ಕೊಡತಕ್ಕದ್ದು. ಮಹಾಭಾಗ್ಯಶಾಲಿಯೇ, ದಾನವನಾಶಕನೇ! ನೀನು ಕೇಳಿದ್ದು ಬಹು ಪ್ರಶಸ್ತವು. (ಅಂತೂ ಕೇಶವನ ಆರಾಧನಾದಿಗಳನ್ನು ವಿಷಯೀಕರಿಸಿಕೊಂಡಿರುವ ಪ್ರಶ್ನೆಗೂ ಪ್ರಶಸ್ತಫಲವನ್ನು ಹೇಳಿರುವುದರಿಂದ ಶ್ರೀಹರಿಯ ಆರಾಧನಾದಿಗಳನ್ನು ಭಕ್ತನು ಅವಶ್ಯವಾಗಿ ಮಾಡಬೇಕೆಂದು ತನ್ನ ಭಕ್ತನೊಡನೆ ಶಂಕರನ ಸ್ತುತಿವಾಕ್ಯವು ।। 77 ।।

**ಮೂಲ ।। ನಿಮಿಷಂ ನಿಮಿಷಾರ್ಧಂ ವಾ ಮುಹೂರ್ತಮಪಿ ಭಾರ್ಗವ ।**
**ನಾದಗ್ಧಾಶೇಷ ಪಾಪಾನಾಂ ಭಕ್ತಿರ್ಭವತಿ ಕೇಶವೇ ।। ೭೮ ।।**

**ಅರ್ಥ ।।** ಎಲೋ ಭಾರ್ಗವನೇ (ತೀರ್ಥಸ್ನಾನ ಪ್ರಾಯಶ್ಚಿತ್ತಾದಿಗಳಿಂದ) ಪಾಪವನ್ನು ಪರಿಹರಿಸಿ ಕೊಳ್ಳದೆ ಇದ್ದ ಮನುಷ್ಯರಿಗೆ ನಿಮಿಷಕಾಲದಲ್ಲಿ ಆಗಲೀ, ಅರ್ಧನಿಮಿಷದಲ್ಲಿ ಆಗಲೀ, ಮುಹೂರ್ತ (2 ಘಳಿಗೆ) ಕಾಲದಲ್ಲಿ ಆಗಲೀ ಶ್ರೀಹರಿಯಲ್ಲಿ ಭಕ್ತಿಯು ಹುಟ್ಟುವುದಿಲ್ಲ, ಪಾಪವನ್ನು ಪರಿಹರಿಸಿ ಕೊಂಡವರಿಗೇನೇ ಭಕ್ತಿಯು ಹುಟ್ಟುತ್ತದೆ. (ಆದಕಾರಣ ಭಕ್ತಿಯು ಅತಿ ದುರ್ಲಭವಾದುದರಿಂದ ಪಾಪವನ್ನು ಪರಿಹರಿಸಿಕೊಂಡು, ಸರ್ವದಾ ಆತನ ಭಕ್ತಿಯನ್ನು ಮಾಡುತ್ತಾ ಇರಬೇಕು.) ।। 78 ।।

**ಮೂಲ ।। ಕಿಂ ತೇನ ಮನಸಾ ಕಾರ್ಯಂ**
**ಯನ್ನ ತಿಷ್ಠತಿ ಕೇಶವೇ ।**
**ಮನೋ ಮುಕ್ತಿಫಲಾವಾಪ್ತೌ (ಪ್ತ್ಯೈ) (ಫಲಪ್ರಾಪ್ತಿ)**
**ಕಾರಣಂ ಸುಪ್ರಯೋಜಿತಂ (ಸಪ್ರಯೋಜನಂ) ।। ೭೯ ।।**

**ಅರ್ಥ ।।** ಯಾವ ಮನಸ್ಸು ಕೇಶವನಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲವೋ ಆದರಿಂದ ಆಗತಕ್ಕ ಕಾರ್ಯವೇನಿದೆ? ಏಕೆಂದರೆ- ಯಾವ ಮನಸ್ಸು ಚೆನ್ನಾಗಿ ಕೇಶವನಲ್ಲಿ ಹೊಂದಿಸಲ್ಪಡುತ್ತದೋ, ಅಂದರೆ- ಭಗವಂತನನ್ನೇ ವಿಷಯೀಕರಿಸಿಕೊಂಡಿರುತ್ತದೋ ಅದೇ ಮುಕ್ತಿಯೆಂಬ ಫಲವನ್ನು ಹೊಂದುವುದಕ್ಕೆ ಕಾರಣವಾಗುತ್ತದೆ. (ಮನಸ್ಸು ಮುಕ್ತಿಯೆಂಬ ಫಲವನ್ನು ಹೊಂದುವುದಕ್ಕೆ ಕಾರಣವಾದರೇನೇ ಪ್ರಯೋಜನದಿಂದ ಕೂಡಿದ್ದು, ಇಲ್ಲದಿದ್ದರೆ ವ್ಯರ್ಥವು.) ।। 79 ।।

**ಮೂಲ ।। ರೋಗೋ ನಾಮ ನ ಸಾ ಜಿಹ್ವಾ ಯಯಾ ನ ಸ್ತೂಯತೇ ಹರಿಃ ।**
**ಗರ್ತೌ ನಾಮ ನ ತೌ ಕರ್ಣೌ ಯಾಭ್ಯಾಂ ತತ್ಕರ್ಮ ನ ಶ್ರುತಂ।। ೮೦ ।।**

**ಅರ್ಥ ||** ಪುರುಷನ ಯಾವ ನಾಲಿಗೆಯಿಂದ ಶ್ರೀಹರಿಯ ಸ್ತುತಿಸಲ್ಪಡುವುದಿಲ್ಲವೋ, ಅದು ನಾಲಿಗೆಯೇ ಆಗುವುದಿಲ್ಲ; ಮುಖದಲ್ಲಿರುವ ರೋಗವೇ. ಯಾವ ಕಿವಿಗಳಿಂದ ಭಗವತ್ಕರ್ಮವು (ಚರಿತ್ರೆಯು) ಕೇಳಲ್ಪಡುವುದಿಲ್ಲವೋ, ಅವುಗಳು ಪುರುಷನಿಗೆ ಕಿವಿಗಳೇ ಆಗುವುದಿಲ್ಲ; ಹೊಂಡಪ್ರಾಯವು. ದುಃಖವನ್ನೇ ಕೊಡುವವುಗಳು. (ಆದುದರಿಂದ ಮುಕ್ತಿಗಾಗಿ ಜಿಹ್ವೇಂದ್ರಿಯಾದಿಗಳನ್ನು ಭಗವದ್ವಿಷಯಕಗಳನ್ನಾಗಿಯೇ ಮಾಡಬೇಕು.) || 80 ||

**ಮೂಲ || ನೂನಂ ತತ್ಕಂಠ ಶಾಲೂಕ (ತತ್ಕರ್ಣ ತಾಲೂಕ)**
**ಮಥವಾಽಪ್ಯುಪಜಿಹ್ವಿಕಾ ।**
**ರೋಗೋ ನಾಮ ನ ಸಾ ಜಿಹ್ವಾ**
**ಯ ನ ವಕ್ತಿ ಹರೇರ್ಗುಣಾನ್ || ೮೧ ||**

**ಅರ್ಥ ||** ಮನುಷ್ಯನ ಯಾವ ನಾಲಿಗೆಯು ಶ್ರೀಹರಿಯ ಗುಣಗಳನ್ನು ಹೇಳುವುದಿಲ್ಲವೋ ಅದು ನಾಲಿಗೆಯೇ ಅಲ್ಲ, ಮತ್ತೆ ಕಂಠ (ಕರ್ಣ) ತಾಲುಗಳ ಮಧ್ಯದಲ್ಲಿರತಕ್ಕ ಮಾಂಸಖಂಡವು. ಅಥವಾ ಕಿರಿನಾಲಿಗೆಯಂತೆ ಅಪ್ರಯೋಜಕವು. || 81 ||

**ಮೂಲ || ಭಾರಭೂತೈಃ ಕರೈಃ (ಪದ್ಯೈಃ) ಕಾರ್ಯಂ (ಕಾರ್ಯಮೇಭಿಃ)**
**ಕಿಂ ತಸ್ಯ (ಕಿಮೇಭಿಃ) ನೃಪಶೋರ್ದ್ವಿಜ ।**
**ಯೈರ್ಹಿ (ಯೈಸ್ತು) ನ ಕ್ರಿಯತೇ ವಿಷ್ಣೋಃ**
**ಗೃಹಸಂಮಾರ್ಜನಾದಿಕಂ || ೮೨ ||**

**ಅರ್ಥ ||** ಎಲೋ ದ್ವಿಜನೇ! (ಮನುಷ್ಯನ) ಯಾವ ಕೈಗಳಿಂದ ಶ್ರೀಹರಿಯ ದೇವಾಲಯ ಸಮ್ಮಾರ್ಜನಾದಿಗಳು ಮಾಡಲ್ಪಡುವುದಿಲ್ಲವೋ, ಅಂತಹ ಪಶುತುಲ್ಯನಾದ ಮನುಷ್ಯನಿಗೆ ಭಾರಭೂತಗಳಾದ ಈ ಕೈಗಳಿಂದ (ಕಾಲುಗಳಿಂದ) ಏನು ಪ್ರಯೋಜನವು? || 82 ||

**ಮೂಲ || ಚರಣೌ ತೌ ತು ಸಫಲೌ ಕೇಶವಾಲಯಗಾಮಿನೌ ।**
**ತೇ ಚ ನೇತ್ರೇ ಮಹಾಭಾಗ(ಗೇ)ಯಾಭ್ಯಾಂ ಸಂದೃಶ್ಯತೇ ಹರಿಃ || ೮೩ ||**

**ಅರ್ಥ ||** ಎಲೇ ಮಹಾಭಾಗ! ಯಾವ ಪಾದಗಳು ಕೇಶವಾಲಯವನ್ನು ಕುರಿತು (ಶ್ರೀಹರಿಯ ದರ್ಶನಾರ್ಥವಾಗಿ) ಹೋಗುವವುಗಳೋ, (ಭಕ್ತನ) ಅಂತಹ ಪಾದಗಳೇ ಸಫಲಗಳು. ಯಾವ ಕಣ್ಣುಗಳಿಂದ ಶ್ರೀಹರಿಯ (ಶ್ರೀಹರಿಯ ಪ್ರತಿಮಾದಿಗಳು) ಕಾಣಲ್ಪಡುತ್ತಾನೋ, (ತ್ತವೋ) ಅಂತಹವುಗಳೇ ಕಣ್ಣುಗಳು. (ಮಹಾಭಾಗ್ಯವುಳ್ಳವುಗಳು) (ಅಂದರೆ ಸಾರ್ಥಕಗಳವುಗಳೇ ಸರಿ) || 83 ||

**ಮೂಲ || ಕಿಂ ತಸ್ಯ ಚರಣೈಃ ಕಾರ್ಯಂ ವೃಥಾ ಸಂಚರಣೈರ್ದ್ವಿಜ ।**
**ಯೈರ್ಹಿ ನ ವ್ರಜತೇ ಜಂತುಃ ಕೇಶವಾಲಯದರ್ಶನೇ || ೮೪ ||**

**ಅರ್ಥ ||** ಮನುಷ್ಯನು ಯಾವ ಪಾದಗಳಿಂದ ದೇವಾಲಯದಲ್ಲಿದ್ದ ಶ್ರೀಹರಿಯನ್ನು ನೋಡುವುದಕ್ಕಾಗಿ ಹೋಗುವುದಿಲ್ಲವೋ, ಎಲೋ ದ್ವಿಜನೇ! ಅಂತಹ ಪಶುತುಲ್ಯನಾದ ಮನುಷ್ಯನಿಗೆ ದೇವಾಲಯಕ್ಕೆ ಹೋಗದೆ ವ್ಯರ್ಥವಾಗಿ ಸಂಚರಿಸುವ ಪಾದಗಳಿಂದ ಏನು ಪ್ರಯೋಜನವು? || 84 ||

**ಮೂಲ ॥ ವೇದವೇದಾಂಗ ವಿದುಷಾಂ ಮುನೀನಾಂ ಭಾವಿತಾತ್ಮನಾಂ ।**
**ಋಷಿತ್ವಮಪಿ ಧರ್ಮಜ್ಞ ವಿಜ್ಞೇಯಂ ತತ್ಪ್ರಸಾದಜಂ ॥ ೮೫ ॥**

**ಅರ್ಥ ॥** ಎಲೋ ಧರ್ಮಜ್ಞನೇ! ಋಗಾದಿ ವೇದಗಳೂ, ಶಿಕ್ಷಾದಿ ವೇದಾಂಗಗಳೂ ಇವುಗಳನ್ನು ತಿಳಿದವರೂ, ಶ್ರೀಹರಿಯಲ್ಲಿಯೇ ಮನಸ್ಸನ್ನಿಟ್ಟವರೂ, ಮನನಶೀಲರೂ ಆದ ಋಷಿಗಳಿಗೆ ಋಷಿತ್ವವೂ ಕೂಡ (ಸ್ವಾಧೀನವಾದ ಭಗವನ್ನಿಮಿತ್ತವಾದ ಮನಸ್ಸುಳ್ಳವರಿಗೆ ಇಂದ್ರಿಯ ಪ್ರಸಾದ ದಿಂದುಂಟಾದ) ಭಗವತ್ಪ್ರಸಾದದಿಂದ ಹುಟ್ಟಿದ್ದೆಂದು ತಿಳಿಯತಕ್ಕುದು. (ಆದುದರಿಂದ ಭಕ್ತರು ಮುಕ್ತಿಗಾಗಿ ಪ್ರಸನ್ನವಾದ ಇಂದ್ರಿಯದಿಂದ ಮುಕ್ತಿಸಾಧನಗಳಿಂದ ಭಗವತ್ಪ್ರಸಾದವನ್ನು ಸಂಪಾದಿಸಬೇಕು. ॥85॥

**ಮೂಲ ॥ ವಿಚಿತ್ರ ರತ್ನ ಪರ್ಯಂಕೇ (ತೇ)**
**ಮಹಾಭೋಗೇ ಚ ಭೋಗಿನಃ**
**ರಮಂತೇ ನಾಕಿರಾಮಾಭಿಃ (ನಾಕನಾರೀಭಿಃ)**
**ಕೇಶವಸ್ಮರಣಾತ್ಫಲಂ ॥ ೮೬ ॥**

**ಅರ್ಥ ॥** (ಭಕ್ತರು) ಮಹಾ ಭೋಗಯುಕ್ತವಾದ ವಿಚಿತ್ರರತ್ನಗಳಿಂದ ಖಚಿತವಾದ ಮಂಚದಲ್ಲಿ ಭೋಗಯುಕ್ತರಾಗಿ, ದುಃಖಾದಿ ರಹಿತವಾದ ವೈಕುಂಠದಲ್ಲಿರತಕ್ಕ ಸ್ತ್ರೀಯರಿಂದೊಡಗೂಡಿ (ವೈಕುಂಠ ದಲ್ಲಿ) ಕ್ರೀಡಿಸುತ್ತಾರೆ. ಇದು ಕೇಶವನ ಸ್ಮರಣೆಗೆ ಫಲವು. ॥ 86 ॥

**ಮೂಲ ॥ ಅಶ್ವಮೇಧ ಸಹಸ್ರಾಣಾಂ**
**ಯಸ್ಸಹಸ್ರಂ (ಸಹಸ್ರಂ ಯಃ) ಸಮಾಚರೇತ್ ।**
**ನಾಸೌ ತತ್ಫಲಮಾಪ್ನೋತಿ**
**ತದ್ಭಕ್ತೈರ್ಯದವಾಪ್ಯತೇ (ಕೇಶವಸ್ಮರಣಾತ್ಫಲಂ) ॥ ೮೭ ॥**

**ಅರ್ಥ ॥** ಯಾವಾತನು ಅಶ್ವಮೇಧಯಾಗಗಳ ಸಹಸ್ರಗಳ ಸಹಸ್ರವನ್ನೂ ಹತ್ತುಲಕ್ಷ ಅಶ್ವಮೇಧ ಯಾಗಗಳನ್ನೂ (ಅಂದರೆ ಅನಂತಾನಂತ ಅಶ್ವಮೇಧ ಯಾಗಗಳನ್ನು) ಚೆನ್ನಾಗಿ (ವಿಧಿಪೂರ್ವಕವಾಗಿ) ಮಾಡುವನೋ, ಇಂತಹ ಅಧಿಕಾರಿಯೂ ಕೂಡ ವಿಷ್ಣುಭಕ್ತರಿಂದ ಉತ್ತಮವಾದ ಯಾವ ಫಲವು ಹೊಂದಲ್ಪಡುತ್ತದೋ ಅಂತಹ ಫಲವನ್ನು ಹೊಂದುವುದಿಲ್ಲ. ॥ 87 ॥

**ಮೂಲ ॥ ರೇ ರೇ ಮನುಷ್ಯಾಃ ಪುರುಷೋತ್ತಮಸ್ಯ**
**ಕರೌ ನ ಕಸ್ಮಾನ್ಮುಕುಲೀ ಕುರುಧ್ವಂ (ಧ್ವೇ) ।**
**ಕ್ರಿಯಾಜುಷಾಂ ಕೋ ಭವತಾಂ ಪ್ರಯಾಸಃ**
**ಫಲಂ ಹಿ ಯತ್ತತ್ಪದಮಚ್ಯುತಸ್ಯ ॥ ೮೮ ॥**

**ಅರ್ಥ ॥** ಎಲೋ ಯಾಗಾದಿಗಳನ್ನು ಮಾಡುವವರೇ! (ನೀವು) ಸರ್ವೋತ್ತಮನಾದ ಶ್ರೀಹರಿಗೆ ಕೈಗಳನ್ನು ಏಕೆ ಮುಗಿಯುವುದಿಲ್ಲ? (ಅಂದರೆ ನಮಸ್ಕರಿಸುವುದಿಲ್ಲ) ಯಾಜ್ಞಿಕರಾದ ನಿಮಗೆ

ಭಗವಂತನನ್ನು ನಮಸ್ಕರಿಸುವುದರಲ್ಲಿ ಏನು ಪ್ರಯಾಸವು? ಅಚ್ಯುತನ ಯಾವ ವೈಕುಂಠಾದಿ ಸ್ಥಾನವಿದೆಯೋ ಅದೇ ಆ ನಮಸ್ಕಾರಕ್ಕೆ ಸಾಧ್ಯವಾದ ಫಲವಿದೆ ॥ 88 ॥

**ಮೂಲ ॥ ವಿಷ್ಣೋರ್ವಿಮಾನಂ ಯಃ ಕುರ್ಯಾತ್ಸಕೃದ್ಭಕ್ತ್ಯಾ ಪ್ರದಕ್ಷಿಣಂ ।**
**ಅಶ್ವಮೇಧಃ ಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೮೯ ॥**

**ಅರ್ಥ ॥** ಯಾವ ಅಧಿಕಾರಿಯು ಶ್ರೀವಿಷ್ಣುವಿನ ವಿಮಾನಕ್ಕೆ ಪ್ರದಕ್ಷಿಣೆಯನ್ನು ಭಕ್ತಿಪೂರ್ವಕವಾಗಿ ಒಂದಾವರ್ತಿಯಾದರೂ ಮಾಡುವನೋ, ಅಂತಹ ಮನುಷ್ಯನು ಅಶ್ವಮೇಧ ಸಹಸ್ರಗಳನ್ನು (ಮಾಡಿದರೆ ಯಾವ ಫಲವು ಸಿಗುವುದೋ ಅಂತಹ) ಫಲವನ್ನು ಹೊಂದುತ್ತಾನೆ. ॥ 89 ॥

**ಮೂಲ ॥ ಪ್ರದಕ್ಷಿಣಂ ತು ಯಃ ಕುರ್ಯಾದ್ಧರಿಂ**
**ಭಕ್ತಿ (ಭಕ್ತ್ಯಾ) ಸಮನ್ವಿತಃ ।**
**ಹಂಸಯುಕ್ತ ವಿಮಾನೇನ**
**ವಿಷ್ಣೋರ್ಲೋಕಂ (ವಿಷ್ಣುಲೋಕಂ) ಸ ಗಚ್ಛತಿ ॥ ೯೦ ॥**

**ಅರ್ಥ ॥** ಯಾವ ಅಧಿಕಾರಿಯು ವಿಶೇಷಾಕಾರವಾಗಿ ಹರಿಭಕ್ತಿಯುಕ್ತನಾಗಿ ಪ್ರದಕ್ಷಿಣೆ ಮಾಡುತ್ತಾನೋ, ಆ ಅಧಿಕಾರಿಯು ಹಂಸಯುಕ್ತವಾದ ವಿಮಾನದಿಂದ ವೈಕುಂಠಕ್ಕೆ ಹೋಗುತ್ತಾನೆ.॥ 90 ॥

**ಮೂಲ ॥ ತೀರ್ಥಕೋಟಿ ಸಹಸ್ರಾಣಿ ವ್ರತಕೋಟಿ ಶತಾನಿ ಚ ।**
**ನಾರಾಯಣ ಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೯೧ ॥**

**ಅರ್ಥ ॥** ತೀರ್ಥಗಳ ಕೋಟಿ ಸಹಸ್ರಗಳೂ (ಕೋಟಿ ಸಹಸ್ರತೀರ್ಥ ಸ್ನಾನಾದಿಗಳೂ) ಕೃಚ್ಛ್ರ ಚಾಂದ್ರಾಯಣಾದಿಗಳ ನೂರಾರು ಕೋಟಿಗಳೂ (ಪುರುಷರಿಂದ ಮಾಡಲ್ಪಟ್ಟವುಗಳೆಲ್ಲವೂ) ಭಕ್ತ್ಯಾದ್ಯತಿಶಯವಾಗಿ ಮಾಡಲ್ಪಟ್ಟ ನಾರಾಯಣ ನಮಸ್ಕಾರದ ಹದಿನಾರು ಕಲೆಗಳ ಮಧ್ಯದಲ್ಲಿ ಒಂದು ಭಾಗವನ್ನೂ ಕೂಡ ಹೊಂದುವುದಿಲ್ಲ (ಆದಕಾರಣ ಭಕ್ತರು ಸರ್ವದಾ ನಮಸ್ಕರಿಸಬೇಕು. ) ॥ 91 ॥

**ಮೂಲ ॥ ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ॥ ೯೨ ॥**

**ಅರ್ಥ ॥** ವಕ್ಷಸ್ಥಳಕ್ಕೆ ಭೂಸ್ಪರ್ಶದಿಂದಲೂ, ಶಿರಸ್ಸಿನಿಂದಲೂ ಪ್ರತಿಮೆಯನ್ನು ನೋಡೋಣದರಿಂದಲೂ, ಮನೋಧ್ಯಾನದಿಂದಲೂ, ಮಾತಿನಿಂದಲೂ, (ಹರಿಸ್ತೋತ್ರದಿಂದಲೂ) ಎರಡು ಪಾದಗಳಿಂದಲೂ, (ಭೂಮಿಯನ್ನು ಮುಟ್ಟುತ್ತಾ) ಕೈಗಳಿಂದಲೂ (ಭೂಸ್ಪೃಷ್ಟಗಳಾದ) ಮೊಳಕಾಲುಗಳಿಂದಲೂ ಮಾಡಲ್ಪಟ್ಟ ಯಾವ ನಮಸ್ಕಾರವಿದೆಯೋ, ಅಂತಹ ನಮಸ್ಕಾರವು ಅಷ್ಟಾಂಗಯುಕ್ತವಾದ ಪ್ರಣಾಮವೆಂದು (ಶಾಸ್ತ್ರಗಳಲ್ಲಿ) ಹೇಳಲ್ಪಟ್ಟದೆ. ॥ 92 ॥

**ಮೂಲ ॥ ಶಾಠ್ಯೇನಾಪಿ ನಮಸ್ಕಾರಂ ಕುರ್ವತಃ ಶಾರ್ಙ್ಗಪಾಣಯೇ ।**
**ಶತಜನ್ಮಾರ್ಜಿತಂ ಪಾಪಂ ನಶ್ಯತ್ಯೇವ ನ ಸಂಶಯಃ ॥ ೯೩ ॥**

**ಅರ್ಥ ॥** ಶಾರ್ಙ್ಗಧಾರಿಯಾದ ಶ್ರೀಹರಿಗೋಸ್ಕರ ಅಹಂಕಾರಾದಿಗಳಿಂದಾಗಲೀ, ನಮಸ್ಕಾರವನ್ನು ಮಾಡತಕ್ಕ ಅಧಿಕಾರಿಯ ನೂರಾರು ಜನ್ಮಗಳಲ್ಲಿ ಸಂಪಾದಿಸಲ್ಪಟ್ಟ ಪಾಪವು ನಾಶವನ್ನೇ ಹೊಂದುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ॥ 93 ॥

**ಮೂಲ ॥ ಸಂಸಾರಾರ್ಣವ ಮಗ್ನಾನಾಂ**
**ನರಾಣಾಂ ಪಾಪಕರ್ಮಣಾಂ ।**
**ನಾನ್ಯೋದ್ಧರ್ತಾ ಜಗನ್ನಾಥಂ**
**ಮುಕ್ತ್ವಾ ನಾರಾಯಣಂ ಪ್ರಭುಂ (ಪರಂ) ॥ ೯೪ ॥**

**ಅರ್ಥ ॥** ಸಂಸಾರವೆಂಬ ಸಮುದ್ರದಲ್ಲಿ ಮುಳುಗಿದ (ಮತ್ತು) ಪಾಪಕರ್ಮಗಳನ್ನು ಮಾಡುತ್ತಿರುವ ಜನರಿಗೆ ಜಗನ್ನಾಥನು, ಸರ್ವೋತ್ತಮನೂ ಆದ ನಾರಾಯಣನನ್ನು ಹೊರತು ಉದ್ಧಾರವನ್ನು ಮಾಡುವವರು ಬೇರೆ ಯಾರೂ ಇಲ್ಲ. ॥ 94 ॥

**ಮೂಲ ॥ ರೇಣುಕುಂಠಿತಗಾತ್ರಸ್ಯ ಕಣಾ ಯಾವಂತಿ ಭಾರತ ।**
**ತಾವದ್ವರ್ಷ ಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥ ೯೫ ॥**

**ಅರ್ಥ ॥** (ನಮಸ್ಕರಿಸುತ್ತಿರುವ ಕಾಲದಲ್ಲಿ) ಭೂಮಿಯಲ್ಲಿರುವ ಧೂಳಿಗಳಿಂದ ಚೆನ್ನಾಗಿ ಸಂಬದ್ಧವಾದ ಅಷ್ಟಾಂಗ ಶರೀರವುಳ್ಳ ಅಧಿಕಾರಿಗೆ ಭೂಮಿಯಲ್ಲಿರುವ ಎಷ್ಟು ಧೂಳಿಗಳು ಅವನ ದೇಹಕ್ಕೆ ಸಂಬದ್ಧಗಳಾಗುವುವೋ, ಅಷ್ಟು ಸಹಸ್ರವರ್ಷಗಳು ವೈಕುಂಠಲೋಕಾದಿಗಳಲ್ಲಿ ಪೂಜಿಸಲ್ಪಡುತ್ತಾನೆ. (ಆದಕಾರಣ ನಮಸ್ಕಾರಾನಂತರ ದೇಹಸಂಬದ್ಧವಾದ ಧೂಳಿಯನ್ನು ಝಾಡಿಸದಿರುವ ಸತ್ಸಂಪ್ರದಾಯವಿದೆ) ॥ 95 ॥

**ಮೂಲ ॥ ಪಾವನಂ ವಿಷ್ಣು ನೈವೇದ್ಯಂ ಸುಭೋಜ್ಯಮೃಷಿಭಿಃ ಸ್ಮೃತಂ ।**
**ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೯೬ ॥**

**ಅರ್ಥ ॥** ಶ್ರೀಹರಿಗೆ ನಿವೇದಿತವಾದ ಪರಮಪವಿತ್ರವಾದ ಅನ್ನಪಾನ ಮೊದಲಾದುದೇ ಸುಭೋಜ್ಯವೆಂದು ಋಷಿಸಮ್ಮತವು. ಇತರ ದೇವತೆಗಳಿಗೆ ಸಮರ್ಪಿತವಾದ ನೈವೇದ್ಯವನ್ನು ಭಕ್ಷಿಸಿದರೆ, (ಆ ದೋಷವನ್ನು ಪರಿಹರಿಸಿಕೊಳ್ಳುವುದಕ್ಕಾಗಿ) ಚಾಂದ್ರಾಯಣರೂಪ ಪ್ರಾಯಶ್ಚಿತ್ತ ('ಪ್ರಾಯಃ ಪಾಪಮಿತಿ ಪ್ರೋಕ್ತಂ ಚಿತ್ತಂ ತಸ್ಯ ವಿಶೋಧನಂ'। ಪ್ರಾಯಃ ಅಂದರೆ ಪಾಪವೆಂದು ಹೇಳಲ್ಪಡುತ್ತದೆ. ಚಿತ್ತವೆಂದರೆ ಅದನ್ನು ಶೋಧಿಸಿಕೊಳ್ಳುವುದು. ಅಂದರೆ ಪಾಪವನ್ನು ತೊಳೆದು ಕೊಳ್ಳುವುದು)ವನ್ನು ಮಾಡಬೇಕು. (ಋಷಿಗಳು ಹೀಗೆ ಹೇಳಿರುವರು.)

**ತಾತ್ಪರ್ಯ ॥** (1) 'ಚಾಂದ್ರಾಯಣದ ಲಕ್ಷಣವು' ''ತಿಥಿ ವೃದ್ಧ್ಯಾ ಚರೇತ್ಪಿಂಡಾನ್ ಶುಕ್ಲೇ ಶಿಖ್ಯಂಡಸಮ್ಮಿತಾನ್ । ಏಕೈಕಂ ಹ್ರಾಸಯೇತ್ಕೃಷ್ಣೇ ಪಿಂಡಂ ಚಾಂದ್ರಾಯಣಂ ಚರನ್ ।'' ಇತಿ ಯಾಜ್ಞವಲ್ಕ್ಯಃ ॥ ಚಾಂದ್ರಾಯಣವ್ರತ ಮಾಡುವವರು ಮಯೂರದ (ನವಿಲಿನ) ಅಂಡಕ್ಕೆ ಸಮಾನಗಳಾದ ಪಿಂಡ (ಕವಳ) ಗಳನ್ನು ಶುಕ್ಲಪಕ್ಷದಲ್ಲಿ ಪಾಡ್ಯದಿವಸ 1, ಬಿದಿಗೆ 2, ಹೀಗೆ ತಿಥಿ ವೃದ್ಧಿಯಿಂದ ಒಂದೊಂದನ್ನು ಅಭಿವೃದ್ಧಿಕರಿಸಿಕೊಂಡು ಪೂರ್ಣಿಮಾತನಕ ಭಕ್ಷಿಸಬೇಕು. ಪೂರ್ಣಿಮಾ

ದಿನ 15 ಕವಳಗಳನ್ನು ತಿಂದು ಕೃಷ್ಣಪಕ್ಷದಲ್ಲಿ ಪಾಡ್ಯ 14, ಬಿದಿಗೆ 13, ಹೀಗೆ ಒಂದೊಂದನ್ನು ಕಮ್ಮಿ ಮಾಡುತ್ತಾ ಚತುರ್ದಶೀ ದಿನ 1 ಕವಳ, ಅಮಾವಾಸ್ಯೆ ಉಪವಾಸ ಮಾಡಬೇಕು. ಎಂದು ಯಾಜ್ಞವಲ್ಕ್ಯರು (2) ''ಏಕೈಕಂ ವರ್ಧಯೇತ್ಪಿಂಡಂ ಶುಕ್ಲೇ ಕೃಷ್ಣೇ ಚ ಹ್ರಾಸಯೇತ್ । ಇಂದುಕ್ಷಯೇ ನ ಭುಂಜೀತ ಏಷ ಚಾಂದ್ರಾಯಣೋ ವಿಧಿಃ ॥'' ಇತಿ ವಸಿಷ್ಠಃ ॥ ಶುಕ್ಲ ಪಕ್ಷದಲ್ಲಿ ಒಂದೊಂದು ಕವಳವನ್ನು ಅಭಿವೃದ್ಧೀಕರಿಸಬೇಕು. ಕೃಷ್ಣಪಕ್ಷದಲ್ಲಿ ಕಮ್ಮಿ ಮಾಡುತ್ತಾ ಬರಬೇಕು. ಅಮಾವಾಸ್ಯಾದಿನ ಭೋಜನ ಮಾಡಬಾರದು. ಇದೇ ಚಾಂದ್ರಾಯಣ ವಿಧಿಯು. ಎಂದು ವಷಿಷ್ಠರು. 'ಚಂದ್ರಸ್ಯ ಅಯನಮಿವ ಅಯನಂ ಚರಣಂ ಯಸ್ಮಿನ್ ಕರ್ಮಣಿ ಹ್ರಾಸವೃದ್ಧಿಭ್ಯಾಂ ತತ್ ಚಾಂದ್ರಾಯಣಂ' ಹ್ರಾಸ ವೃದ್ಧಿಗಳಿಂದ ಚಂದ್ರನ ಸಂಚಾರದಂತೆ ಸಂಚಾರವು ಯಾವ ಕರ್ಮದಲ್ಲಿದೆಯೋ ಅದು ಚಾಂದ್ರಾಯಣವೆನ್ನಿಸುತ್ತದೆ. (3) ''ಯಥಾ ಕಥಂಚಿತ್ ಪಿಂಡಾನಾಂ ಚತ್ವಾರಿಂಶತ್ ಶತದ್ವಯಂ । ಮಾಸೇನೈವೋಪಭುಂಜೀತ ಚಾಂದ್ರಾಯಣಮಥಾಪರಂ ॥'' ದಿವಸಕ್ಕೆ 8 ಕವಳ, ಅಥವಾ ಹಗಲಿಗೆ 4, ರಾತ್ರಿಗೆ 4, ಅಥವಾ ಒಂದು ದಿನ 4, ಮತ್ತೊಂದು ದಿನ 12. ಅಥವಾ ಒಂದು ದಿನ 16, ಮತ್ತೊಂದು ದಿನ ಉಪವಾಸ. ಹೇಗಾದರೂ ತಿಂಗಳಿಗೆ 240 ಕವಳವನ್ನು ತಿನ್ನಬೇಕು. ಇದೊಂದು ವಿಧ ಚಾಂದ್ರಾಯಣವು. ಎಂದು ಯಾಜ್ಞವಲ್ಕ್ಯರು. (4) ಅಷ್ಟಾವಷ್ಟೌ ಸಮಶ್ನೀಯಾತ್ ಪಿಂಡಾನ್ಮಧ್ಯಂದಿನೇ ಸ್ಥಿತೇ। ನಿಯತಾತ್ಮಾ ಹವಿಷ್ಯಸ್ಯ ಯತಿ ಚಾಂದ್ರಾಯಣಂ ಚರೇತ್ ॥ ಚತುರಃ ಪ್ರಾತರಶ್ನೀಯಾತ್ ಪಿಂಡಾನ್ ವಿಪ್ರಃ ಸಮಾಹಿತಃ । ಚತುರೋಽಸ್ತಮಿತೇ ಸೂರ್ಯೇ ಶಿಶುಚಾಂದ್ರಾಯಣಂ ಚರೇತ್''॥ ಮಧ್ಯಾಹ್ನಕ್ಕೆ ಎಂಟೆಂಟು ಕವಳಗಳನ್ನು ತಿನ್ನುತ್ತಾ ಬಂದರೆ ಯತಿಚಾಂದ್ರಾಯಣವೆಂದೂ, ಬೆಳಿಗ್ಗೆ 4, ರಾತ್ರಿಗೆ 4, ಹೀಗೆ ತಿನ್ನುತ್ತಾ ಬಂದರೆ ಶಿಶುಚಾಂದ್ರಾಯಣವೆಂದೂ ಹೇಳುತ್ತಾರೆ. ಹೀಗೆ ಅನೇಕ ಪ್ರಭೇದಗಳು ಚಾಂದ್ರಾಯಣದಲ್ಲಿವೆ. ॥ 96 ॥

**ಮೂಲ ॥ ಕೋಟ್ಯೈಂದವ ಸಹಸ್ರೈಸ್ತು**
**ಮಾಸೋಪೋಷಣ ಕೋಟಿಭಿಃ ।**
**ತತ್ಫಲಂ ಲಭ(ಭ್ಯ)ತೇ (ಪ್ರಾಪ್ಯತೇ) ಪುಂಭಿಃ**
**ವಿಷ್ಣೋರ್ನೈವೇದ್ಯ ಭಕ್ಷಣಾತ್ ॥ ೯೭ ॥**

**ಅರ್ಥ ॥** ಪ್ರಾಯಶ್ಚಿತ್ತ ಶಾಸ್ತ್ರದಲ್ಲಿ ಹೇಳಲ್ಪಟ್ಟ ಐಂದವನಾಮಕವಾದ ಚಾಂದ್ರಾಯಣದ ಕೋಟಿ ಸಹಸ್ರವ್ರತ ಪ್ರಾಯಶ್ಚಿತ್ತಗಳಿಂದಲೂ, ದಿನವನ್ನಾರಂಭಿಸಿ ಮಾಸಪರ್ಯಂತವಾಗಿ ಮಾಡಲ್ಪಡತಕ್ಕ ಉಪೋಷಣವೂ ಪ್ರತಿನಿತ್ಯ ನಿರಾಹಾರವ್ರತವೂ ಇವುಗಳ ಕೋಟಿ ಸಂಖ್ಯಾಕ ವ್ರತಗಳಿಂದಲೂ ಸಾಧ್ಯವಾದ ಫಲವು ಅಧಿಕಾರಿಗಳಿಂದ ವಿಷ್ಣುವಿಗೆ ನಿವೇದಿತವಾದ ಅನ್ನಾದಿಗಳ ಭಕ್ಷಣದಿಂದಲೇ ಸಿಗುತ್ತದೆ. (ಆದುದರಿಂದ ಶ್ರೀಹರಿಗೆ ಸಮರ್ಪಿತವಾದುದನ್ನೇ ಭಕ್ಷಿಸಬೇಕು.) ॥ 97 ॥

**ಮೂಲ ॥ (+) ವಿಷ್ಣೋರ್ನೈವೇದ್ಯಶೇಷೇಣ ಯೋ ಭುನಕ್ತಿ ದಿನೇದಿನೇ ।**
**ಸಿಕ್ಥೇ ಸಿಕ್ಥೇ ಲಭೇತ್ಪುಣ್ಯಂ ಚಾಂದ್ರಾಯಣಶತಾಧಿಕಂ ॥ ೯೮ ॥**

---

(+ ಚಿಹ್ನೆಯಿರುವ ಶ್ಲೋಕಗಳು ಪ್ರಾಚೀನ ತುಳುಪುಸ್ತಕಗಳಲ್ಲಿಯೂ ಕೃಷ್ಣಾಚಾರ್ಯರ ಟೀಕೆಯಲ್ಲಿಯೂ ಇರುವುದಿಲ್ಲ.)

**ಅರ್ಥ ॥** ಯಾವ ಅಧಿಕಾರಿಯು ಪ್ರತಿನಿತ್ಯವೂ ವಿಷ್ಣುವಿಗೆ ನಿವೇದಿತವಾದ ಅನ್ನಶೇಷದಿಂದ ಭೋಜನಮಾಡುತ್ತಾನೋ, ಆತನು ಒಂದೊಂದು ಕವಳದಲ್ಲಿ ನೂರಾರು ಚಾಂದ್ರಾಯಣವ್ರತ ಮಾಡಿದರೆ ಉಂಟಾಗತಕ್ಕ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯವನ್ನು ಹೊಂದುತ್ತಾನೆ. ॥ 98 ॥

**ಮೂಲ ॥ (+) ನೈವೇದ್ಯಶೇಷಂ ತುಲಸೀ ವಿಮಿಶ್ರಿತಂ**
**ವಿಶೇಷತಃ ಪಾದಜಲೇನ ಸಿಕ್ತಂ ।**
**ಯೋಽಶ್ನಾತಿ ನಿತ್ಯಂ ಪುರತೋ ಮುರಾರೇಃ**
**ಪ್ರಾಪ್ನೋತಿ ಯಜ್ಞಾಯುತಕೋಟಿ ಪುಣ್ಯಂ ॥ ೯೯ ॥**

**ಅರ್ಥ ॥** ಯಾವ ಅಧಿಕಾರಿಯು ಶ್ರೀಹರಿಗೆ ಸಮರ್ಪಿತವಾದ ನೈವೇದ್ಯಶೇಷವನ್ನು ತುಲಸಿಯಿಂದ ವಿಮಿಶ್ರಿತವಾದುದನ್ನಾಗಿಯೂ, ವಿಶೇಷಾಕಾರವಾಗಿ, ವಿಷ್ಣುವಿನ ಪಾದೋದಕದಿಂದ ಸೇಚಿಸಲ್ಪಟ್ಟದ್ದನ್ನಾಗಿಯೂ, ಶ್ರೀಕೃಷ್ಣನ ಮುಂಭಾಗದಲ್ಲಿ ನಿತ್ಯದಲ್ಲಿಯೂ ಭೋಜನಮಾಡುತ್ತಾನೋ, ಆತನು ಕೋಟಿಯಾಗ ಮಾಡಿದ ಪುಣ್ಯವನ್ನು ಹೊಂದುತ್ತಾನೆ. ॥ 99 ॥

**ಮೂಲ ॥ (ತ್ವಯೋಪಭುಕ್ತಸ್ರಗ್ಗಂಧ ವಾಸೋಽಲಂಕಾರ ಚರ್ಚಿತಾಃ ।**
**ಉಚ್ಛಿಷ್ಟ ಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥ ೧೦೦ ॥**

**ಅರ್ಥ ॥** ((ಎಲೋ ಕೃಷ್ಣನೇ!) ನಿನ್ನಿಂದ ಚೆನ್ನಾಗಿ ಸೇವಿಸಲ್ಪಟ್ಟ ಮಾಲಿಕೆ, ಗಂಧ, ವಸ್ತ್ರ ಆಭರಣ ಮೊದಲಾದುದು ಯಾವುದಿದೆಯೋ, ಅದರಿಂದ ಅಲಂಕೃತರಾದ ಮತ್ತು ನೀನು ಭೋಜನಮಾಡಿ ಅವಶಿಷ್ಟವಾದುದನ್ನು ಭೋಜನಮಾಡತಕ್ಕ ಸೇವಕರಾದ ನಾವು ನಿನ್ನ ಮಾಯೆಯನ್ನು (ಸಂಸಾರಕ್ಕೆ ಕಾರಣವಾದ ಪ್ರಕೃತಿಯನ್ನು,) ಗೆಲ್ಲುವೆವು. (ಹೀಗೆ ಶ್ರೀಕೃಷ್ಣನನ್ನು ಕುರಿತು ಉದ್ಧವನ ಮಾತು. ಆದುದರಿಂದ ಶ್ರೀಹರಿಗೆ ಸಮರ್ಪಿತವಾದುದನ್ನೇ ಭೋಜನ ಮಾಡಬೇಕು) ॥ 100 ॥

**ಮೂಲ ॥ (ಪುಷ್ಪಮನ್ನಂ ಫಲಂ ತೋಯಂ ಶಿವಸ್ಥಂ ನ ಸ್ಪೃಶೇತ್ಕ್ವಚಿತ್ ।**
**ಲಂಘಯೇನ್ನೈವ ನಿರ್ಮಾಲ್ಯಂ ಕೂಪೇ ಸರ್ವಂ ವಿನಿಕ್ಷಿಪೇತ್ ॥ ೧೦೧ ॥**

**ಅರ್ಥ ॥** (ಪುಷ್ಪವು, ನಾನಾವಿಧ ಭಕ್ಷ್ಯ ಮೊದಲಾದುದು, ನಾನಾವಿಧ ಫಲವು, ನೀರು ಇವೆಲ್ಲವನ್ನೂ ಯಾವ ಕಾಲದಲ್ಲಿಯೂ ಶಿವಸೇವಿತವಾದುದನ್ನು ಮುಟ್ಟಬಾರದು. ಶಿವನಿರ್ಮಾಲ್ಯವನ್ನು ದಾಟಬಾರದು. ಇವೆಲ್ಲವನ್ನು ಎಲ್ಲಿಯಾದರೂ ಬಾವಿಗೆ ಬಿಸಾಡಬೇಕು. (ಅಂದರೆ, ಲಂಘನಾದಿಗಳಿಂದ ದೋಷವು ಶ್ರುತವಾದುದರಿಂದ ಪೂಜಕನು ಬಾವಿಯಲ್ಲಿ ಹಾಕಬೇಕು.) ॥ 101 ॥

**ಮೂಲ ॥ ತ್ರಿರಾತ್ರ ಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ ।**
**ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥ ೧೦೨ ॥**

**ಅರ್ಥ ॥** ಸಮುದ್ರಸಂಗವಿಲ್ಲದಿರುವ ನದಿಗಳಲ್ಲಿ ಸ್ನಾನಮಾಡಿದ ಪುರುಷನಿಗೆ ತ್ರಿರಾತ್ರಯಾಗದ ಫಲವನ್ನೂ, ಸಮುದ್ರಸಂಗವುಳ್ಳ ನದೀಸ್ನಾನವು ಒಂದು ಪಕ್ಷ ಮಾಡಿದ ಯಾಗದ ಫಲವನ್ನೂ, ಸಮುದ್ರಸ್ನಾನವು ಮಾಸದಲ್ಲಿ ಮಾಡಿದ ಯಾಗದ ಫಲವನ್ನೂ ಕೊಡುತ್ತವೆ. ॥ 102 ॥

**ಮೂಲ ॥ ಷಣ್ಮಾಸ ಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ।**
**ವಿಷ್ಣುಪಾದೋದಕಸ್ಯೈತಾಃ (ತೇ) ಕಲಾಂ ನಾರ್ಹಂತಿ ಷೋಡಶೀಂ ॥ ೧೦೩॥**

**ಅರ್ಥ ॥** ಗೋದಾವರೀ ಸ್ನಾನವು ಆರು ತಿಂಗಳಲ್ಲಿ ಸಾಧ್ಯವಾದ ಯಜ್ಞ ಫಲವನ್ನೂ, ಭಾಗೀರಥೀಸ್ನಾನವು ಸಂವತ್ಸರಸಾಧ್ಯವಾದ ಯಜ್ಞ ಫಲವನ್ನೂ ಕೊಡುತ್ತವೆ. ಆದರೆ ಇವುಗಳೆಲ್ಲ ಮಿಳಿತಗಳಾದಾಗ್ಯೂ ಶ್ರೀವಿಷ್ಣು ಪಾದೋದಕವು ಹದಿನಾರು ಅಂಶಗಳ ಮಧ್ಯದಲ್ಲಿ ಒಂದು ಅಂಶಫಲವನ್ನೂ ಕೊಡಲಿಕ್ಕೆ ಸಹ ಯೋಗ್ಯಗಳಾಗುವುದಿಲ್ಲ. (ಆದುದರಿಂದ ಎಲ್ಲಾ ತೀರ್ಥಗಳಲ್ಲಿ ಸ್ನಾನಾದಿಗಳನ್ನು ಮಾಡುವುದಕ್ಕಿಂತ ಸಾಲಗ್ರಾಮಕ್ಕೆ ಅಭಿಷೇಕಮಾಡಿದ ತೀರ್ಥದ ಸ್ನಾನ-ಪಾನ-ಪ್ರೋಕ್ಷಣಾದಿಗಳಿಂದ ಹೆಚ್ಚು ಫಲವು ಶ್ರುತವಾದುದರಿಂದ ಸಾಲಗ್ರಾಮತೀರ್ಥದ ಧಾರಣಾದಿಗಳನ್ನೇ ಸರ್ವದಾ ಮಾಡುತ್ತಾ ಇರಬೇಕು) ॥ 103 ॥

**ಮೂಲ ॥ ಗಂಗಾ ಪ್ರಯಾಗ ಗಯ ಪುಷ್ಕರ ನೈಮಿಷಾ(ಶಾ)ಣಿ**
**ಸಂಸೇವಿತಾನಿ ಬಹುಶಃ ಕುರುಜಾಂಗಲಾನಿ ।**
**ಕಾಲೇನ ತೀರ್ಥಸಲಿಲಾನಿ ಪುನಂತಿ ಪಾಪಂ**
**ಪಾದೋದಕಂ ಭಗವತಃ ಪ್ರಪುನಾತಿ ಸದ್ಯಃ ॥ ೧೦೪ ॥**

**ಅರ್ಥ ॥** ಭಾಗೀರಥಿಯು, ಪ್ರಯಾಗಕ್ಷೇತ್ರವು, ಗಯಾಕ್ಷೇತ್ರವು, ಪುಷ್ಕರಕ್ಷೇತ್ರವು, ನೈಮಿಷ(ಶ) ಕ್ಷೇತ್ರವು ಇವುಗಳೆಲ್ಲವೂ ಹಾಗೆಯೇ ಕುರುಕ್ಷೇತ್ರವು, ಜಾಂಗಲಕ್ಷೇತ್ರವು ಇವುಗಳೂ; ಅವುಗಳಲ್ಲಿ ಸ್ನಾನ, ಗಮನ, ಆವಾಸಾದಿಗಳಿಂದ ಬಹುಕಾಲ ಚೆನ್ನಾಗಿ ಸೇವಿಸಲ್ಪಟ್ಟರೆ ಪುರುಷನನ್ನು ಪಾಪರಹಿತನನ್ನಾಗಿ ಮಾಡುತ್ತವೆ. ಆದರೆ ಶ್ರೀವಿಷ್ಣುಪಾದೋದಕವು ಸೇವಿಸಿದ ತತ್ಕ್ಷಣವೇ ಅತಿ ಪವಿತ್ರೀಕರಿಸುತ್ತದೆ. ॥104॥

**ಮೂಲ ॥ ಯಾನಿ ಕಾನಿ ಚ ತೀರ್ಥಾನಿ**
**ಬ್ರಹ್ಮಾಂಡಾಂತರ್ಗ(ಸ್ಥಿ)ತಾನಿ ಚ(ವೈ)।**
**ವಿಷ್ಣುಪಾದೋದಕಸ್ಯೈತಾಃ (ತೇ)**
**ಕಲಾಂ ನಾರ್ಹಂತಿ ಷೋಡಶೀಂ ॥ ೧೦೫ ॥**

**ಅರ್ಥ ॥** ಬ್ರಹ್ಮಾಂಡದಲ್ಲಿರುವ ಯಾವ ಯಾವ (ಅಂದರೆ ಸಕಲ) ತೀರ್ಥಗಳು ಇರುತ್ತವೋ, ಇವುಗಳು ಶಾಲಗ್ರಾಮತೀರ್ಥದ ಹದಿನಾರು ಅಂಶಗಳ ಮಧ್ಯದಲ್ಲಿ ಒಂದು ಅಂಶಫಲವನ್ನು ಕೊಡಲಿಕ್ಕೆ ಸಹ ಯೋಗ್ಯಗಳಾಗುವುದಿಲ್ಲ. (ಆದುದರಿಂದ ಸರ್ವಕ್ಕಿಂತ ಇದೇ ಶ್ರೇಷ್ಠವು) ॥ 105 ॥

**ಮೂಲ ॥ ಸ್ನಾತ್ವಾ (ಸ್ನಾನಂ) ಪಾದೋದಕಂ ವಿಷ್ಣೋಃ**
**ಪಿಬನ್ ಶಿರಸಿ ಧಾರಯೇತ್ (ಧಾರಯನ್)।**
**ಸರ್ವಪಾಪ ವಿನಿರ್ಮುಕ್ತೋ**
**ವೈಷ್ಣವೀಂ ಸಿದ್ಧಿಮಾಪ್ನುಯಾತ್ ॥ ೧೦೬ ॥**

**ಅರ್ಥ ॥** ವಿಷ್ಣುಪಾದೋದಕವನ್ನು ಸ್ನಾನಮಾಡುತ್ತಾ, ಪ್ರಾಶನಮಾಡುತ್ತಾ ಭಕ್ತನು ಶಿರಸ್ಸಿನಲ್ಲಿ ಧರಿಸಿದರೆ, ಎಲ್ಲಾ ಪಾಪಗಳಿಂದಲೂ ವಿರಹಿತನಾಗಿ ವಿಷ್ಣುಸಂಬಂಧಿಯಾದ ಜ್ಞಾನಾದಿಸಿದ್ಧಿಯನ್ನು ಹೊಂದುವನು.॥ 106 ॥

ಶ್ರೀಹರಿಗೆ ಸಮರ್ಪಿತವಾದ ನೈವೇದ್ಯಾದಿಗಳನ್ನೇ ಭೋಜನಮಾಡಬೇಕೆಂದು ಹೇಳಿ, ಈಗ ಸಾಲಗ್ರಾಮತೀರ್ಥ ಸ್ನಾನ ಪಾನಾದಿಗಳಿಗೆ ಮಹಾಫಲವಿದೆ ಎನ್ನುವಲ್ಲಿ ಬ್ರಹ್ಮನ ವಾಕ್ಯವನ್ನು ಹೇಳುತ್ತಾರೆ-

**ಮೂಲ ॥ (ಬ್ರಹ್ಮಾ ॥ ದ್ವಾದಶಾಕ್ಷರ ಮಂತ್ರೇಣ ಹ್ಯಭಿಷಿಚ್ಯ ವಿಧಾನತಃ ।**
**ಸಾಲಗ್ರಾಮಜಲೈ ಸ್ನಾತಃ ಸರ್ವತೀರ್ಥೇಷು ಸರ್ವದಾ ॥ ೧೦೭ ॥**

**ಅರ್ಥ ॥** (ಯಾವ ಭಕ್ತನು 12 ಅಕ್ಷರಗಳುಳ್ಳ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ಮಂತ್ರದಿಂದ ಶಾಲಗ್ರಾಮವನ್ನು ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಅಭಿಷೇಕಮಾಡಿ ಶಾಲಗ್ರಾಮಕ್ಕೆ ಅಭಿಷೇಕಮಾಡಿದ ತೀರ್ಥಗಳಿಂದ ವಿಧ್ಯುಕ್ತಪ್ರಕಾರ ಸ್ನಾನಮಾಡಿದರೆ ಸರ್ವದಾ ಭಾಗೀರಥ್ಯಾದಿ ಸರ್ವತೀರ್ಥಗಳಲ್ಲಿಯೂ ಸ್ನಾತನು ಆಗುತ್ತಾನೆ. (ಆದುದರಿಂದ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಸಿಗುವುದರಿಂದ ಸ್ನಾನಕಾಲದಲ್ಲಿ ತನ್ನ ಶಿರಸ್ಸಿಗೆ ಶಾಲಗ್ರಾಮತೀರ್ಥದಿಂದ ಅಭಿಷೇಕವನ್ನು ಮಾಡಿಕೊಳ್ಳಬೇಕು) ॥ 107 ॥

**ಮೂಲ ॥ (ಯಶ್ಚಕ್ರಮಭಿಷಿಚ್ಯಾಥ ತತ್ತೋಯೈಃ ಸ್ವಶಿರೋ ನರಃ ।**
**ಅಭಿಷಿಚ್ಯ ಯದಿ ಪಿಬೇದ್ಯಾತಿ ವಿಷ್ಣೋಃ ಪರಂ ಪದಂ ॥ ೧೦೮ ॥**

**ಅರ್ಥ ॥** (ಯಾವ ಅಧಿಕಾರಿಯು ಚಕ್ರಾಂಕಿತವಾದ ಶಾಲಗ್ರಾಮವನ್ನು ಅಭಿಷೇಕಮಾಡಿ ಆ ತೀರ್ಥಗಳಿಂದ ತನ್ನ ಶಿರಸ್ಸಿಗೆ ಅಭಿಷೇಕವನ್ನು ಮಾಡಿ, ಅಂದರೆ, ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ಅನಂತರದಲ್ಲಿಯೇ ತೀರ್ಥವನ್ನು ತೆಗೆದುಕೊಳ್ಳುತ್ತಾನೋ, ಆತನು ವೈಕುಂಠಲೋಕಕ್ಕೆ ಹೋಗುತ್ತಾನೆ.

**ತಾತ್ಪರ್ಯ ॥** ಆದುದರಿಂದ ಶಾಲಗ್ರಾಮತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿದ ಮೇಲೆಯೇ ತೆಗೆದುಕೊಳ್ಳಬೇಕು. ತೀರ್ಥವನ್ನು ತೆಗೆದುಕೊಂಡ ಮೇಲೆ ಶಿರಸ್ಸಿನಲ್ಲಿ ಧರಿಸುವುದಲ್ಲ, 'ವಿಷ್ಣೋಃ ಪಾದೋದಕಂ ದೇವಿ ಶಿರಸಾ ಧಾರಯನ್ಪಿಬೇತ್। ಯೋ ನರೋ ವಸುಧೇ ನಿತ್ಯಂ ಸ ಯಾತಿ ಪರಮಾಂ ಗತಿಂ।' ಎಂಬ ಪ್ರಮಾಣದಲ್ಲಿ ತೀರ್ಥಪಾನವನ್ನು ಅನಂತರದಲ್ಲಿಯೇ ಮಾಡಬೇಕೆಂದು ಉಕ್ತವಾಗಿದೆ. ॥ 108 ॥)

**ಮೂಲ ॥ (ಗಂಗಾ ಗೋದಾವರೀ ರೇವಾ ನದ್ಯೋ ಮುಕ್ತಿಪ್ರದಾಶ್ಚ ಯಾಃ ।**
**ನಿವಸಂತಿ ಸತೀರ್ಥಾಸ್ತಾಃ ಶಾಲಗ್ರಾಮ ಶಿಲಾ ಜಲೇ ॥ ೧೦೯ ॥**

**ಅರ್ಥ ॥** (ಭಾಗೀರಥಿಯು, ಗೋದಾವರಿಯು, ರೇವಾನದಿಯು ಯಾವ ಈ ಮೂರು ನದಿಗಳು ಕರ್ಮಕ್ಷಯರೂಪವಾದ ಮುಕ್ತಿಯನ್ನು ಕೊಡುತ್ತವೋ, ಆ ಮೂರು ನದಿಗಳು ಸರ್ವತೀರ್ಥ ಸಹಿತಗಳಾಗಿ ಶಾಲಗ್ರಾಮಾಭಿಷಿಕ್ತವಾದ ತೀರ್ಥದಲ್ಲಿ ಇರುತ್ತವೆ. (ಆದುದರಿಂದ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನು ಕೊಡುವುದರಿಂದ ಶಾಲಗ್ರಾಮ ಶಿಲಾತೀರ್ಥವನ್ನು ಸರ್ವದಾ ಸೇವಿಸಬೇಕು.) ॥ 109 ॥

**ಮೂಲ ॥ (ಸಾಲಗ್ರಾಮ ಶಿಲಾ ಚಕ್ರಂ ವಜ್ರಕೀಟ ವಿನಿರ್ಮಿತಂ ।**
**ಅಧಿಷ್ಠಾನಂ ಹಿ ತದ್ವಿಷ್ಣೋಃ ಸರ್ವಪಾಪ ಪ್ರಣಾಶನಂ ॥ ೧೧೦ ॥**

**ಅರ್ಥ ॥** (ವಜ್ರರೂಪಕ್ರಿಮಿಯಿಂದ ನಿರ್ಮಿಸಲ್ಪಟ್ಟ (ಅಂದರೆ, ವಿಶೇಷವಾಗಿ ರಂಧ್ರಾದಿಗಳನ್ನು ಮಾಡಿ ಅಲ್ಲಿ ಚಕ್ರಾದಿಗಳು ಹೇಗೆ ಆಗುವುವೋ ಹಾಗೆ (ನಿರ್ಮಿಸಲ್ಪಟ್ಟ) ಸಾಲಗ್ರಾಮಾಖ್ಯವಾದ ಚಕ್ರಯುಕ್ತ ಶಿಲಾರೂಪವಾದುದು ಯಾವುದಿದೆಯೋ ಅದು ವಿಷ್ಣುವಿಗೆ ಅಧಿಷ್ಠಾನವು. ಆದುದರಿಂದ ಅದು ಸರ್ವಪಾಪಗಳನ್ನು ನಾಶಮಾಡತಕ್ಕುದು.॥ 110 ॥)

**ಮೂಲ ॥ (ಸಾಲಗ್ರಾಮ ಶಿಲಾರೂಪೀ ಯತ್ರ ತಿಷ್ಠತಿ ಕೇಶವಃ ।**
**ತತ್ರ ದೇವಾಃ ಸುರಾಃ ಯಜ್ಞಾ ಭುವನಾನಿ ಚತುರ್ದಶ ॥ ೧೧೧ ॥**

**ಅರ್ಥ ॥** (ಸಾಲಗ್ರಾಮಶಿಲಾಖ್ಯ ಪ್ರತಿಮೆಯಲ್ಲಿ ಸನ್ನಿಹಿತನಾದ ಕೇಶವನು ಯಾವ ದೇಶದಲ್ಲಿ ಇರುತ್ತಾನೋ, ಅಲ್ಲಿಯೇ ದೇವತೆಗಳೂ, ಸುರರೂ, ಅಶ್ವಮೇಧಾದಿ ಯಾಗಗಳೂ, 14 ಲೋಕಗಳೂ ಇರುತ್ತವೆ. (ಆದುದರಿಂದ ಭಗವಂತನಿಗೆ ಮುಖ್ಯ ಪ್ರತಿಮೆಯಾದುದರಿಂದ ಇದು ಸರ್ವಕ್ಕಿಂತ ಶ್ರೇಷ್ಠವು) ॥ 111 ॥)

**ಮೂಲ ॥ (ಯಥಾ ಕಾಷ್ಠಗತೋ ವಹ್ನಿರ್ಮಥ್ನಸ್ಥಾನೇ ಪ್ರಕಾಶತೇ ।**
**ತಥಾ ಸರ್ವಗತೋ ವಿಷ್ಣುಸ್ಸಾಲಗ್ರಾಮೇ ಪ್ರಕಾಶತೇ ॥ ೧೧೨ ॥ )**

**ಅರ್ಥ ॥** (ಹೇಗೆ ಬೆಂಕಿಯು ಎಲ್ಲಾ ಕಟ್ಟಿಗೆಗಳಲ್ಲಿದ್ದಾಗ್ಯೂ ಚೆನ್ನಾಗಿ ಮಥನ ಮಾಡತಕ್ಕ ಕಾಷ್ಠ ವಿಶೇಷದಲ್ಲಿಯೇ ಪ್ರಕಾಶಿಸುತ್ತದೋ, ಹಾಗೆಯೇ ('ತತ್ಸರ್ವಂ ವಾಪ್ಯ ನಾರಾಯಣಃ ಸ್ಥಿತಃ' ಎಂದು ಹೇಳಿದ ರೀತಿಯಾಗಿ) ಒಳಗೂ ಹೊರಗೂ ಸರ್ವತ್ರ ಇರುವವನಾದರೂ ಶಾಲಗ್ರಾಮಶಿಲೆಯಲ್ಲಿ ವಿಶೇಷಾಕಾರವಾಗಿ ಸನ್ನಿಹಿತನಾಗುತ್ತಾನೆ. ಅಂದರೆ ಫಲವನ್ನು ಕೊಡುತ್ತಾನೆ.॥ 112 ॥)

**ಮೂಲ ॥ (ನ ತಥಾ ರಮತೇ ಲಕ್ಷ್ಮ್ಯಾ ನ ತಥಾ ಸ್ವಪುರೇ ಹರಿಃ ।**
**ಸಾಲಗ್ರಾಮ ಶಿಲಾ ಚಕ್ರೇ ಯಥಾ ಸ ರಮತೇ ಸದಾ ॥ ೧೧೩ ॥)**

**ಅರ್ಥ ॥** (ಶ್ರೀಹರಿಯು ಲಕ್ಷ್ಮ್ಯಾದಿಗಳಿಗಿಂತಲೂ ಅತ್ಯಂತ ಪ್ರೀತಿವಿಷಯವಾದುದರಿಂದ ಸಾಲಗ್ರಾಮ ಶಿಲಾ ಚಕ್ರದಲ್ಲಿ ಹೇಗೆ ಯಾವಾಗಲೂ ಕ್ರೀಡಿಸುತ್ತಾನೋ, (ಸನ್ನಿಹಿತನಾಗುತ್ತಾನೋ) ಹಾಗೆ ಲಕ್ಷ್ಮಿಯಿಂದ ಕ್ರೀಡಿಸುವುದಿಲ್ಲ; ಹಾಗೆ ವೈಕುಂಠಾದಿ ಸ್ಥಾನದಲ್ಲಿ ಸನ್ನಿಹಿತನಾಗುವುದಿಲ್ಲ, (ಆದುದರಿಂದ ಶಾಲಗ್ರಾಮವು ಎಲ್ಲಾದಕ್ಕಿಂತಲೂ ಶ್ರೇಷ್ಠವಾಗಿದೆ.) ॥ 113 ॥)

**ಮೂಲ ॥ (ಶಿಲಾ ದ್ವಾದಶ ವೈ ವೈಶ್ಯ ಸಾಲಗ್ರಾಮ ಸಮುದ್ಭವಾ ।**
**ವಿಧಿವತ್ಪೂಜಿತಾ ಯೇನ ತಸ್ಯ ಪುಣ್ಯಂ ವದಾಮಿ ತೇ ॥ ೧೧೪ ॥)**

**ಅರ್ಥ ॥** (ಎಲೋ ವೈಶ್ಯನೇ ಸಾಲಗ್ರಾಮ ಪರ್ವತದಲ್ಲಿ ಹುಟ್ಟಿರುವ ವಜ್ರಕೀಟಗಳಿಂದ ನಿರ್ಮಿಸಲ್ಪಟ್ಟ ರಂಧ್ರ ಚಕ್ರಾದಿಗಳಿಂದ ಯುಕ್ತಗಳಾದ 12 ಸಂಖ್ಯಾಕಗಳಾದ ಶಾಲಗ್ರಾಮಾಖ್ಯ ಶಿಲೆಗಳು ಯಾವ ಅಧಿಕಾರಿಯಿಂದ ವಿಧಿಪ್ರಕಾರ ಪೂಜಿಸಲ್ಪಡುತ್ತವೋ, ಆ ಶಾಲಗ್ರಾಮ ಪೂಜಕನಾದ

ಪುರುಷನಿಗೆ ಯಾವ ಪುಣ್ಯಫಲವಿದೆಯೋ ಅದನ್ನು ಹೇಳುತ್ತೇನೆ. (ಕೇಳು, ಹೀಗೆ ವೈಶ್ಯನ ಹತ್ತಿರ ಒಬ್ಬ ಋಷಿಯ ಸಂಬೋಧನವು) ॥ 114 ॥)

**ಮೂಲ ॥ (ಕೋಟಿದ್ವಾದಶಕೈರ್ಲಿಂಗೈಃ ಪೂಜಿತೈಃ ಸ್ವರ್ಣಪಂಕಜೈಃ ।**
**ಯತ್ಸ್ಯಾದ್ದ್ವಾದಶ ಕಲ್ಪೇಷು ದಿನೇನೈಕೇನ ಲಭ್ಯತೇ ॥ ೧೧೫ ॥)**

**ಅರ್ಥ ॥** (12 ದೈನಂದಿನ ಕಲ್ಪಗಳಲ್ಲಿ ಸುವರ್ಣದಿಂದ ಮಾಡಲ್ಪಟ್ಟ ಕಮಲಾದಿಗಳಿಂದ 12 ಕೋಟಿ ಲಿಂಗಗಳು ಚೆನ್ನಾಗಿ ಪೂಜಿಸಲ್ಪಟ್ಟರೆ, ಅವುಗಳಿಂದ ಯಾವ ಫಲವಾಗುವುದೋ, ಅಂತಹ ಫಲವು ಶಾಲಗ್ರಾಮಕ್ಕೆ ಒಂದು ದಿವಸ ಪೂಜಿಸಿರುವುದರಿಂದ ಲಭಿಸುವುದು. (ಆದುದರಿಂದ ಇತರ ಎಲ್ಲಾ ವಸ್ತುಗಳಿಗಿಂತಲೂ ಶಾಲಗ್ರಾಮವು ಮುಖ್ಯವಾಗಿ ಭಗವಂತನಿಗೆ ಅಧಿಷ್ಠಾನವಾದುದರಿಂದ ಶಾಲಗ್ರಾಮವನ್ನು ಪೂಜಿಸಬೇಕು) ॥ 115 ॥)

**ಮೂಲ ॥ (ಸಾಲಗ್ರಾಮ ಶಿಲಾಯಾಂ ತು ಯಃ ಶ್ರಾದ್ಧಂ ಕುರುತೇ ನರಃ ।**
**ಪಿತರಸ್ತಸ್ಯ ತಿಷ್ಠಂತಿ ತೃಪ್ತಾಃ ಕಲ್ಪಶತಂ ದಿವಿ ॥ ೧೧೬ ॥)**

**ಅರ್ಥ ॥** (ಶಾಲಗ್ರಾಮ ಶಿಲಾಪರ್ವತದಲ್ಲಿ ಯಾವ ಮನುಷ್ಯನು ಸಾಂವತ್ಸರಿಕ ತೀರ್ಥ ಶ್ರಾದ್ಧಾದಿಗಳನ್ನು (ಪಿತೃಗಳನ್ನುದ್ದೇಶಿಸಿ) ಮಾಡುತ್ತಾನೋ, ಅವನ ಪಿತೃಗಳು 100 ಕಲ್ಪಗಳಲ್ಲಿ ತೃಪ್ತರಾಗಿ ಸ್ವರ್ಗಾದಿ ಪುಣ್ಯ ಲೋಕಗಳಲ್ಲಿರುತ್ತಾರೆ ॥ 116 ॥)

**ಮೂಲ ॥ (ಸಾಲಗ್ರಾಮ ಶಿಲಾಗ್ರೇ ಯಃ ಶ್ರಾದ್ಧಂ ದದ್ಯಾದ್ವಿಚಕ್ಷಣಃ ।**
**ಪಿತರಸ್ತಸ್ಯ ತೃಪ್ಯಂತಿ ಮುಕ್ತಿಂ ಯಾಂತಿ ನ ಸಂಶಯಃ ॥ ೧೧೭ ॥)**

**ಅರ್ಥ ॥** (ಹಾಗೆಯೇ ಶಾಲಗ್ರಾಮಶಿಲೆಯು ತನ್ನ ಮನೆಯಲ್ಲಿ ಪೂಜಿಸಲ್ಪಡುತ್ತಿರಲು ಶಾಲಗ್ರಾಮದ ಸಮೀಪದಲ್ಲಿ ಜ್ಞಾನಿಯಾದ ಯಾವ ಮನುಷ್ಯನು ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡುತ್ತಾನೋ, ಅವನ ಪಿತೃಗಳು ಅನೇಕಕಾಲ ತೃಪ್ತರಾಗುತ್ತಾರೆ; ಸಂಸಾರಾದಿ ದುಃಖದಿಂದ ಮುಕ್ತರೂ ಆಗುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ.॥ 117 ॥)

**ಮೂಲ ॥ (ಆಶಂಸತೇ ಸದಾ ದೇವಾಃ ಪಿತರಸ್ಸರ್ವ ಏವ ಹಿ ।**
**ಯಮಿಷ್ಟ್ವಾದೌ ಮಹಾವಿಷ್ಣುಂ ಪಶ್ಚಾತ್ತೇನ ಪಿತ್ರೂನ್ ಸುರಾನ್ ॥**
**ಯಸ್ತರ್ಪಯೇತ್ಸ ವೈ ಪುತ್ರಃ ಸಭಾರ್ಯಃ ಸ ತು ಜೀವತು ॥ ೧೧೮ ॥)**

**ಅರ್ಥ ॥** (ಯಾವ ಮಗನು ಆದಿಯಲ್ಲಿ ವಿಷ್ಣುವನ್ನು ಚೆನ್ನಾಗಿ ಅನ್ನಾದಿ ನೈವೇದ್ಯಗಳಿಂದ ಪೂಜಿಸಿ, ಆಮೇಲೆ ಆ ನೈವೇದ್ಯಶೇಷದಿಂದ ದೇವತೆಗಳನ್ನೂ, ನಮ್ಮನ್ನೂ, (ಪಿತೃಗಳನ್ನೂ) ಶ್ರಾದ್ಧವನ್ನು ಮಾಡಿ ತೃಪ್ತಿಪಡಿಸುವನೋ, ಅವನೇ ಮಗನು. ಆತನೇ ಹೆಂಡತಿ ಮಕ್ಕಳಿಂದ ಯುಕ್ತನಾಗಿ 100 ವರ್ಷ ಜೀವಿಸಲಿ, ಹೀಗೆ ಯಾವಾಗಲೂ ದೇವತೆಗಳೂ ಪಿತೃಗಳೂ ಅಪೇಕ್ಷಿಸುತ್ತಾರೆ. ॥ 118 ॥ )

**ಮೂಲ ॥ (ಪಾದ್ಮೇ ॥ ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಂ ದೇವತಾಂತರಂ ।**
**ಪಿತೃಭ್ಯಶ್ಚಾಪಿ ತದ್ದೇಯಂ ತದಾನಂತ್ಯಾಯ ಕಲ್ಪ್ಯತೇ ॥ ೧೧೯ ॥)**

**ಅರ್ಥ ॥** (ಪಾದ್ಮಪುರಾಣದಲ್ಲಿ ಇದೆ- ಶ್ರೀವಿಷ್ಣುವಿಗೆ ನಿವೇದಿತವಾದ ಅನ್ನದಿಂದ ಇತರ ದೇವತೆಗಳನ್ನು ಹೋಮಿಸಬೇಕು. ಅದನ್ನೇ ಪಿತೃಗಳಿಗೂ ಕೊಡಬೇಕು. ಅದು ಅಕ್ಷಯ್ಯಫಲಕ್ಕಾಗಿ ಸಮರ್ಥವಾಗುತ್ತದೆ. ॥ 119 ॥)

**ಮೂಲ ॥ (ಪಿತೃಶೇಷಂ ತು ಯೋ ದದ್ಯಾದ್ಧರಯೇ ಪರಮಾತ್ಮನೇ ।**
**ರೇತೋಧಾಃ ಪಿತರಸ್ತಸ್ಯ ಭವಂತಿ ಕ್ಲೇಶಭಾಗಿನಃ ॥ ೧೨೦ ॥)**

**ಅರ್ಥ ॥** (ಯಾವ ಮನುಷ್ಯನು ಪಿತೃಗಳಿಗೆ ಕೊಟ್ಟು ಅವಶಿಷ್ಟವಾದುದನ್ನು ಶ್ರಾದ್ಧಕಾಲದಲ್ಲಿ ಪಾಪಪರಿಹಾರಕನಾದ ಶ್ರೀಪರಮಾತ್ಮನಿಗೋಸ್ಕರ ಕೊಡುತ್ತಾನೋ, ಅಂತಹ ಪಾಪಿಷ್ಠನಾದ ಪುರುಷನ ಪಿತೃಗಳು ರೇತಸ್ಸಿನ ಪಾನವುಳ್ಳವರಾಗುತ್ತಾರೆ. ಆದರಿಂದ ನರಕಾದಿಗಳಲ್ಲಿ ಅತಿ ದುಃಖಭಾಗಿಗಳಾಗುತ್ತಾರೆ. (ಆದುದರಿಂದ ಪಿತೃಶೇಷವನ್ನು ಶ್ರೀಹರಿಗೆ ಕೊಡಬಾರದು) ॥ 120 ॥)

**ಮೂಲ ॥ (ಗಾರುಡೇ ॥ ಯಃ ಶ್ರಾದ್ಧಕಾಲೇ ಹರಿಭುಕ್ತಶೇಷಂ**
**ದದಾತಿ ಭಕ್ತ್ಯಾ ಪಿತೃದೇವತಾನಾಂ ।**
**ತೇನೈವ ಪಿಂಡೈಃ ಸುತಿಲೈರ್ವಿಮಿಶ್ರೈಃ-**
**ರಾಕಲ್ಪಕೋಟ್ಯಃ ಪಿತರಃ ಸುತೃಪ್ತಾಃ ॥ ೧೨೧ ॥)**

**ಅರ್ಥ ॥** (ಗಾರುಡಪುರಾಣದಲ್ಲಿ ಇದೆ. ಯಾರು ಪಿತೃಗಳಿಗೆ ಸಾಂವತ್ಸರಿಕಾದಿ ನಿತ್ಯನೈಮಿತ್ತಿಕ ಕಾಲಗಳಲ್ಲಿ ಶ್ರೀವಿಷ್ಣುನೈವೇದ್ಯವನ್ನು (ಅನ್ನ-ಪಾನ-ಭಕ್ಷ್ಯ-ಭೋಜ್ಯಾದಿಗಳನ್ನು) ಭಕ್ತಿಯಿಂದ ಪಿತೃಗಳಿಗೂ, ವಿಶ್ವೇದೇವತೆಗಳಿಗೂ, ಅವರ ಉದ್ದೇಶದಿಂದ ಬ್ರಾಹ್ಮಣರಿಗೆ ಕೊಡುತ್ತಾರೋ, ಅವನಿಂದ ಕೊಟ್ಟ ಸುತಿಲ ದರ್ಭಾದಿಗಳಿಂದ ವಿಶಿಷ್ಟಗಳಾದ ಪಾರ್ವಣಾದಿ ಪಿಂಡಗಳಿಂದ ಅವನ ಪಿತೃಗಳು ಕೋಟಿಕಲ್ಪ ಪರ್ಯಂತವಾಗಿ ಚೆನ್ನಾಗಿ ತೃಪ್ತರಾಗುತ್ತಾರೆ. (ಆದುದರಿಂದ ಪಿತೃಗಳಿಗೆ ನೈವೇದ್ಯ ಶೇಷದಿಂದಲೇ ಶ್ರಾದ್ಧ ಮಾಡಬೇಕು) ॥ 121 ॥)

**ಮೂಲ ॥ (ಶಾಲಗ್ರಾಮ ಶಿಲಾಯಾಸ್ತು ಮೂಲ್ಯಮುದ್ಘಾಟಯೇನ್ನರಃ ।**
**ವಿಕ್ರೇತಾ ಚಾನುಮಂತಾ ಚ ಯಃ ಪರೀಕ್ಷ್ಯಾನುಮೋದಯೇತ್ ॥ ೧೨೨ ॥)**

**ಅರ್ಥ ॥** (ಯಾವ ಪುರುಷನು ಶಾಲಗ್ರಾಮ ಶಿಲೆಯ ಮೌಲ್ಯವನ್ನು ಅಂದರೆ ಶಾಲಗ್ರಾಮವನ್ನು ಪರೀಕ್ಷಿಸಿ ಸಮೀಚೀನವು, ಅದಕ್ಕೆ ಇಷ್ಟು ದ್ರವ್ಯವು ಎಂದು ಅನೇಕರ ಮಧ್ಯದಲ್ಲಿ ಪ್ರಕಟಿಸುವನೋ, ಹಾಗೆಯೇ ತನ್ನ ಸಂಸಾರಕ್ಕಾಗಿ ಶಾಲಗ್ರಾಮವನ್ನು ಮಾರಾಟಮಾಡುವನೋ, ಶಾಲಗ್ರಾಮದ ಕ್ರಯದ್ರವ್ಯಾದಿಗಳನ್ನು ಅನುಮೋದಿಸುವನೋ, (ಅಂದರೆ, ಸಮೀಚೀನವೆಂದು ದ್ರವ್ಯವಿಷಯದಲ್ಲಿ ಯಾರು ಸಮ್ಮತನೋ) ಹಾಗೆಯೇ ಯಾರು ಶಾಲಗ್ರಾಮವನ್ನು ಪರೀಕ್ಷಿಸಿ (ಆ ಶಾಲಗ್ರಾಮಕ್ಕೆ ಇಷ್ಟು ಕ್ರಯವು ಯುಕ್ತವೆಂದು) ಅಂಗೀಕರಿಸುವನೋ ॥ 122 ॥)

**ಮೂಲ ॥ (ಸರ್ವೇ ತೇ ನರಕಂ ಯಾಂತಿ ಯಾವದಾಭೂತಸಂಪ್ಲವಂ ।**
**ಅತಶ್ಚ ವರ್ಜಯೇದ್ವಿದ್ವಾಂಶ್ಚಕ್ರಸ್ಯ ಕ್ರಯವಿಕ್ರಯಂ ॥ ೧೨೩ ॥)**

**ಅರ್ಥ ॥** (ಅವರೆಲ್ಲರೂ ಪಂಚಮಹಾಭೂತಾತ್ಮಕವಾದ ಬ್ರಹ್ಮಾಂಡವು ನಾಶವಾಗುವ ತನಕ ನರಕವನ್ನು ಹೊಂದುತ್ತಾರೆ. ಆದುದರಿಂದ (ಕ್ರಯ ವಿಕ್ರಯಾದಿಗಳಿಂದ ಅನೇಕ ದೋಷಗಳಿದ್ದುದ ರಿಂದ) ಶಾಲಗ್ರಾಮ ಚಕ್ರದ ಕ್ರಯ ವಿಕ್ರಯವನ್ನು ಅದರಲ್ಲಿ ದೋಷವಿದೆ ಎಂದು ತಿಳಿದು ಜ್ಞಾನಿಯು ಬಿಟ್ಟುಬಿಡಬೇಕು.॥ 123 ॥)

**ಮೂಲ ॥ (ಕಿಂ ಬಹೂಕ್ತೇನ ಕರ್ತವ್ಯಮರ್ಚನಂ ಪಾಪಭೀರುಣಾ ।**
**ಚಕ್ರಾಭ್ಯಾಂ ಸಹ ಚಕ್ರಂ ಚ ಸದಾ ಪೂಜ್ಯಂ ಮುಮುಕ್ಷುಭಿಃ ॥ ೧೨೪ ॥)**

**ಅರ್ಥ ॥** (ಪಾಪಕ್ಕೆ ಹೆದರಿದವನಿಂದ ಸರ್ವದಾ ಪೂಜಿಸಬೇಕು; ಅಂದರೆ, ಪೂಜೆ ಮಾಡದಿದ್ದರೆ ಪ್ರತ್ಯವಾಯ ಪಾಪಗಳಿವೆ ಎಂದು ಭಯಪಟ್ಟ ಅಧಿಕಾರಿಯು ಶಾಲಗ್ರಾಮವನ್ನು ಪೂಜಿಸಬೇಕು. ಎರಡು ದ್ವಾರಕಾ ಚಕ್ರಗಳಿಂದ ಯುಕ್ತವಾದ ಶಾಲಗ್ರಾಮಚಕ್ರವು ಮೋಕ್ಷಾರ್ಥಿಗಳಿಂದ ಯಾವಾಗಲೂ ಪ್ರತಿನಿತ್ಯವೂ ಪೂಜಿಸಲ್ಪಡತಕ್ಕುದು (ಆದುದರಿಂದ 2 ದ್ವಾರಕೀಚಕ್ರಗಳಿಂದ ಯುಕ್ತವಾದ ಸಾಲಗ್ರಾಮವನ್ನು ಪೂಜಿಸಬೇಕು.) ಸಾಲಗ್ರಾಮಕ್ಕೆ ಪೂಜಿಸಬೇಕೆಂಬ ವಚನವನ್ನು ಹೊರತು ಬೇರೆ ಅನೇಕ ಮಾತಿನಿಂದ ಏನು ಪ್ರಯೋಜನವು. (ಇದರಿಂದಲೇ ಎಲ್ಲವು ಲಭಿಸುವುದು ಎಂದು ಒಬ್ಬ ಋಷಿಯ ಮಾತು) ॥ 124 ॥)

**ಮೂಲ ॥ (ಯೇ ಪಿಬಂತಿ ಸದಾ ನಿತ್ಯಂ ಶಾಲಗ್ರಾಮ ಶಿಲಾಜಲಂ ।**
**ಪಂಚಗವ್ಯ ಸಹಸ್ರೈಸ್ತು ಪ್ರಾಶಿತ್ಯೈಃ ಕಿಂ ಪ್ರಯೋಜನಂ ॥ ೧೨೫ ॥)**

**ಅರ್ಥ ॥** (ಶಾಲಗ್ರಾಮಕ್ಕೆ ಅಭಿಷೇಕ ಮಾಡಿದ ತೀರ್ಥವನ್ನು ಯಾವ ಭಕ್ತರು ಸ್ನಾನ ಸಂಧ್ಯಾವಂದನ, ಭೋಜನ, ಶಯನಾದಿಕಾಲಗಳಲ್ಲಿ ಪ್ರತಿದಿನದಲ್ಲಿ ಪ್ರಾಶನಮಾಡುತ್ತಾರೋ, ಅವರಿಗೆ ಸಹಸ್ರಾವರ್ತಿ ಪಂಚಗವ್ಯಪ್ರಾಶನಗಳಿಂದ ಏನು ಪ್ರಯೋಜನವು? (ಅಂದರೆ, ಸಹಸ್ರಾವರ್ತಿ ಪಂಚಗವ್ಯಪ್ರಾಶನದಿಂದ ಯಾವ ಫಲವೋ, ಅದೆಲ್ಲವೂ ಶಾಲಗ್ರಾಮತೀರ್ಥವನ್ನು ಪ್ರಾಶನ ಮಾಡುವುದರಿಂದಲೇ ಆಗುತ್ತದೆ.) ॥ 125 ॥)

**ಮೂಲ ॥ ಯಥಾ ಪಾದೋದಕಂ ಪುಣ್ಯಂ ನಿರ್ಮಾಲ್ಯಂ ಚಾನುಲೇಪನಂ ।**
**ನೈವೇದ್ಯಂ ಧೂಪಶೇಷಶ್ಚ ಆರಾರ್ತಿಶ್ಚ ತಥಾ ಹರೇಃ ॥ ೧೨೬ ॥**

**ಅರ್ಥ ॥** ಹಿಂದೆ ಹೇಳಿದ ಪ್ರಕಾರ ವಿಷ್ಣುಪಾದೋದಕವು ಹೇಗೆ ಪುಣ್ಯಪ್ರದವೋ, ಹಾಗೆಯೇ ಭಗವಂತನಿಗೆ ಸಮರ್ಪಿಸಿದ ತುಲಸ್ಯಾದಿನಿರ್ಮಾಲ್ಯವೂ, ಗಂಧಾದ್ಯನುಲೇಪನದ್ರವ್ಯವೂ, ನೈವೇದ್ಯಾದಿಗಳೂ, ಧೂಪಶೇಷವೂ, (ಅಂಗಾರವೂ) ಮಂಗಳಾರತಿಯೂ ಸಮಾನ ಪುಣ್ಯವನ್ನು ಕೊಡುವುವು. ॥ 126 ॥

**ಮೂಲ ॥ ತುಲಸ್ಯಾಸ್ತು ರಜೋಜುಷ್ಟಂ**
**ನೈವೇದ್ಯಸ್ಯ ಚ ಭಕ್ಷಣಂ ।**
**ನಿರ್ಮಾಲ್ಯಂ ಶಿರಸಾ ಧಾರ್ಯಂ**
**ಮಹಾಪಾತಕ ನಾಶನಂ (ಬ್ರಹ್ಮಹತ್ಯಾದಿಕಂ ದಹೇತ್) ॥ ೧೨೭ ॥**

**ಅರ್ಥ ॥**ತುಳಸಿಯ ರಜಸ್ಸುಗಳಿಂದ ಸೇವಿಸಲ್ಪಟ್ಟ (ಯುಕ್ತವಾದ) ನೈವೇದ್ಯವನ್ನೇ ಭಕ್ಷಿಸಬೇಕು. ತುಳಸೀ ಪುಷ್ಪಾದಿ ಭಗವನ್ನಿರ್ಮಾಲ್ಯಗಳನ್ನು ಶಿರಸ್ಸಿನಲ್ಲಿ (ಕಿವಿ ಮೊದಲಾದವುಗಳಲ್ಲಿಯೂ) ಧರಿಸಬೇಕು. ಇವು ಬ್ರಹ್ಮಹತ್ಯಾದಿ ಮಹಾಪಾತಕಗಳನ್ನು ವಿನಾಶಗೊಳಿಸುವುವು. ॥ 127 ॥

**ಮೂಲ ॥ ಭಕ್ತ್ಯಾ ವಾ ಯದಿ ವಾಽಭಕ್ತ್ಯಾ**
**ಚಕ್ರಾಂಕಿತ (ಶಾಲಗ್ರಾಮ)ಶಿಲಾಂ ಪ್ರತಿ ।**
**ದರ್ಶನಂ ಸ್ಪರ್ಶನಂ ವಾಽಪಿ**
**ಸರ್ವಪಾಪ ಪ್ರಣಾಶನಂ ॥ ೧೨೮ ॥**

**ಅರ್ಥ ॥**ಭಕ್ತಿಯಿಂದಲಾಗಲೀ ಭಕ್ತಿಯಿಲ್ಲದೆ ಆಗಲೀ ಶಾಲಗ್ರಾಮ ಶಿಲೆಯ (ಚಕ್ರಾಂಕಿತ ಶಿಲೆಯ) ದರ್ಶನವಾಗಲೀ, ಸ್ಪರ್ಶವಾಗಲೀ (ಯಾರಿಗೆ ಆಗುತ್ತದೋ ಆತನ) ಎಲ್ಲಾ ಪಾಪಗಳೂ ವಿನಾಶವಾಗುವುವು ॥ 128 ॥

**ಮೂಲ ॥ (ಶಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ ।**
**ಉಭಯೋಃ ಸ್ನಾನತೋಯೇನ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೨೯ ॥)**

**ಅರ್ಥ ॥** (ಶಾಲಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ ಶ್ರೀಹರಿಯೂ, ದ್ವಾರಕಾಚಕ್ರದಲ್ಲಿ ಸನ್ನಿಹಿತನಾದ ಶ್ರೀಹರಿಯೂ, ಇವರಿಬ್ಬರ ಸ್ನಾನಜಲದಿಂದ, (ಅಂದರೆ ಪುರುಷಸೂಕ್ತಾದಿಗಳಿಂದ ಅಭಿಷಿಕ್ತ ತೀರ್ಥದಿಂದ ತನ್ನ ಶಿರಸ್ಸು ಮೊದಲಾದ ಅಂಗಗಳಲ್ಲಿ ಅಭಿಷೇಕಮಾಡಿಕೊಂಡಿರುವುದರಿಂದ) ಬ್ರಹ್ಮಹತ್ಯೆಯನ್ನು ಕಳಕೊಳ್ಳುತ್ತಾನೆ ॥ 129 ॥ )

**ಮೂಲ ॥ (★) ಶಾಲಗ್ರಾಮ ಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ ।**
**ತತ್ರ ಸ್ನಾನಂ ಚ ದಾನಂ ಚ ವಾರಾಣಸ್ಯಾಃ ಶತಾಧಿಕಂ ॥ ೧೩೦ ॥**

**ಅರ್ಥ ॥** ಶಾಲಗ್ರಾಮ ಶಿಲೆಯು ಎಲ್ಲಿದೆಯೋ ಅಲ್ಲಿ ಶ್ರೀಹರಿಯು ಸನ್ನಿಹಿತನಾಗಿದ್ದಾನೆ. ಅಲ್ಲಿ ಸ್ನಾನವನ್ನೂ ದಾನವನ್ನೂ (ಮಾಡಿದರೆ) ಕಾಶಿಯಿಂದಲೂ ನೂರುಪಾಲು ಹೆಚ್ಚು ಪುಣ್ಯವು ಬರುವುದು ॥ 130 ॥

**ಮೂಲ ॥ ಮ್ಲೇಂಚ್ಛದೇಶೇಽಶುಚೌ ವಾಪಿ ಚಕ್ರಾಂಕೋ ಯತ್ರ ತಿಷ್ಠತಿ ।**
**ಯೋಜನಾನಿ ತಥಾ ತ್ರೀಣಿ ಮಮ ಕ್ಷೇತ್ರಂ ವಸುಂಧರೇ ॥ ೧೩೧ ॥**

**ಅರ್ಥ ॥** ಎಲೋ ಭೂದೇವಿಯೇ, ಅತ್ಯಂತ ಅಪವಿತ್ರವಾದ ಮ್ಲೇಂಛದೇಶದಲ್ಲಿಯೂ ಎಲ್ಲಿಯಾದರೂ ಚಕ್ರಯುಕ್ತವಾದ ಶಾಲಗ್ರಾಮವು ಇರುತ್ತದೋ ಆ ದೇಶದಲ್ಲಿಯೂ ಮೂರು ಯೋಜನಗಳು (ಮೂರು ಯೋಜನಪರಿಮಿತ ಸ್ಥಳವು) ನನ್ನ ಕ್ಷೇತ್ರವು. (ಆವಾಸಸ್ಥಾನವು. ಹೀಗೆ ಭೂದೇವಿಯನ್ನು ಕುರಿತು ವರಾಹದೇವರ ಮಾತು) ॥ 131 ॥

**ಮೂಲ ॥ ಶಾಲಗ್ರಾಮೋದ್ಭವೋ ದೇವಃ ಶೈಲಂ ಚಕ್ರಾಂಕ ಮಂಡಲಂ ।**
**ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಂ ।**

**(ಶಾಲಗ್ರಾಮೋದ್ಭವಂ ದೇವಂ ಶೈಲಂ ಚಕ್ರಾಂಕಮಂಡಿತಂ ।**
**ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಯವಾಧಿಕಂ) ॥ ೧೩೨ ॥**

**ಅರ್ಥ ॥** ಚಕ್ರಚಿಹ್ನೆಗಳಿಂದ ಅಲಂಕರಿಸಲ್ಪಟ್ಟ ಶಾಲಗ್ರಾಮದಲ್ಲಿ ಸನ್ನಿಹಿತನಾದ ದೇವನು (ಅಂದರೆ ಮತ್ಸ್ಯಾದಿ ಭಗವತ್ಸನ್ನಿಧಾನಯುಕ್ತವಾದ ಶಾಲಗ್ರಾಮವು) ಯಾವ ದೇಶಕ್ಕೆ ಒಯ್ಯಲ್ಪಡು ತ್ತಾನೋ (ತ್ತದೋ) ಆ ದೇಶವೂ ಕಾಶಿಗಿಂತ 100 ಪಾಲು ಉತ್ಕೃಷ್ಟವು. (ಆ ದೇಶವು ಕಾಶಿಗಿಂತ ★ಯವಕ್ಕಿಂತ ಹೆಚ್ಚು ಮಹಿಮೆಯುಳ್ಳದ್ದಾಗಿರುತ್ತದೆ) ॥ 132 ॥

**ಮೂಲ ॥ ಶಾಲಗ್ರಾಮೋದ್ಭವೋ ದೇವೋ**
**ದೇವೋ ದ್ವಾರವತೀ ಭವಃ।**
**ಉಭಯೋಃ ಸಂಗಮೋ ಯತ್ರ**
**ಮುಕ್ತಿಸ್ತತ್ರ ನ (ತತ್ರ ಮುಕ್ತಿರ್ನ) ಸಂಶಯಃ ॥ ೧೩೩ ॥**

**ಅರ್ಥ ॥** ಶಾಲಗ್ರಾಮದಲ್ಲಿ ಸನ್ನಿಹಿತನಾದ ಶ್ರೀಹರಿಯೂ ದ್ವಾರಕಾಚಕ್ರದಲ್ಲಿ ಸನ್ನಿಹಿತನಾದ ಶ್ರೀಹರಿಯೂ (ಅಂದರೆ ಚಕ್ರಾಣಿಕೆಯೂ ಶಾಲಗ್ರಾಮವೂ, ಈ ಎರಡೂ) ಇವರ ಮೇಳನವು ಯಾವ ದೇಶದಲ್ಲಿ ಯಾರ ಮನೆಯಲ್ಲಿ ಆಗುತ್ತದೋ, ಅಲ್ಲಿ ಮುಕ್ತಿಯು ಸಂಶಯವಿಲ್ಲ. (ಅಂದರೆ ಚಕ್ರಾಣಿಕೆ ಶಾಲಗ್ರಾಮಗಳನ್ನು ಪೂಜಿಸಿರುವುದರಿಂದ ಮುಕ್ತಿಯು ಲಭಿಸುತ್ತದೆ.) ॥ 133 ॥

ತೀರ್ಥಪ್ರಾಶನಾದಿಗಳಿಗೆ ಮಾತ್ರ ಹೆಚ್ಚು ಫಲವಿಲ್ಲ. ಮತ್ತೆ ಶಂಖೋದಕಾದಿಗಳಿಗೂ ಬ್ರಹ್ಮಹತ್ಯಾದಿ ದೋಷಗಳನ್ನು ಪರಿಹರಿಸುವ ಶಕ್ತಿಯಿದ್ದುದರಿಂದ ಸರ್ವದಾ ಶಂಖೋದಕಾದಿಗಳನ್ನು ಸೇವಿಸುತ್ತಿರಬೇಕೆನ್ನುವ ವಿಷಯದಲ್ಲಿ ರುದ್ರನ ವಾಕ್ಯವನ್ನುದಾಹರಿಸುತ್ತಾರೆ-

**ಮೂಲ ॥ (ರುದ್ರಃ॥ ಶಂಖೋದಕಂ ಚ ನೈವೇದ್ಯಂ**
**ನಿರ್ಮಾಲ್ಯಂ ಪಾದಯೋರ್ಜಲಂ ।**
**ಆರಾರ್ತಿರ್ಧೂಪಶೇಷಶ್ಚ**
**ಬ್ರಹ್ಮಹತ್ಯಾಪಹಾರಕಾಃ ॥ ೧೩೪ ॥)**

**ಅರ್ಥ ॥** (ರುದ್ರನು ಹೇಳುತ್ತಾನೆ) ಶಂಖೋದಕವು ಶ್ರೀಹರಿಗೆ ನಿವೇದಿತವಾದ ಅನ್ನಾದಿಯೂ ನಿರ್ಮಾಲ್ಯವೂ ಶಾಲಗ್ರಾಮತೀರ್ಥವೂ ಮಂಗಳಾರ್ತಿಯೂ ಅಂಗಾರವೂ ಇವುಗಳೆಲ್ಲವೂ ಪ್ರತಿಯೊಂದೂ ಬ್ರಹ್ಮಹತ್ಯೆಯನ್ನು ಪರಿಹರಿಸತಕ್ಕವುಗಳು ॥ 134 ॥)

**ಮೂಲ ॥ (ಶಂಖಮಧ್ಯೇ ಸ್ಥಿತಂ ತೋಯಂ ಭ್ರಾಮಿತಂ ಕೇಶವೋಪರಿ ।**
**ಅಂಗಲಗ್ನಂ ಮನುಷ್ಯಾಣಾಂ ಬ್ರಹ್ಮಹತ್ಯಾಯುತಂ ದಹೇತ್ ॥ ೧೩೫ ॥)**

**ಅರ್ಥ ॥** (ಕೇಶವನ ಮೇಲೆ ಪಾದವನ್ನಾರಂಭಿಸಿ ಶಿರಃಪರ್ಯಂತವಾಗಿ ಭ್ರಾಮಿತವಾದ

---

(★ ಜಾಲಸೂರ್ಯ ಮರೀಚಿಸ್ಥಂ ತ್ರಸರೇಣುರಿತಿಸ್ಮೃತಂ। ತೇಽಷ್ಟೌ ಲಕ್ಷಾ ತು ತಾಸ್ತಿಸ್ರೋ ರಾಜಸರ್ಷಪ ಉಚ್ಯತೇ। ಗೌರಸ್ತು ತೇ ತ್ರಯಃ ಷಟ್ತೇ ಯವಃ।)

ಶಂಖಮಧ್ಯದಲ್ಲಿರುವ ಜಲವು ಪಾಪಿಷ್ಠರಾದ ಮನುಷ್ಯರ ಶಿರ ಆದ್ಯವಯವಗಳಲ್ಲಿ ಪ್ರೋಕ್ಷಣದಿಂದ ಸಂಬದ್ಧವಾದರೆ ಅಜ್ಞಾನದಿಂದ ಮಾಡಲ್ಪಟ್ಟ ಬ್ರಹ್ಮಹತ್ಯೆಗಳ (10000) ಹತ್ತು ಸಹಸ್ರವನ್ನು ಭಸ್ಮೀಕರಿಸುವುದು. ।। 135 ।।)

**ಮೂಲ ।। (ನ ಗ್ರಹಾ ನ ಚ ಕೂಷ್ಮಾಂಡಾಃ ಪಿಶಾಚೋರಗರಾಕ್ಷಸಾಃ ।**
**ದೃಷ್ಟ್ವಾ ಶಂಖೋದಕಂ ಮೂರ್ಧ್ನಿ ವಿದ್ರವಂತಿ ದಿಶೋ ದಶ ।। ೧೩೬ ।।)**

**ಅರ್ಥ ।।** (ಶಂಖೋದಕವು ಯಾವ ಶಿರಸ್ಸು ಮೊದಲಾದುದರಲ್ಲಿ ಪ್ರೋಕ್ಷಿಸಲ್ಪಡುತ್ತದೋ (ಆತನಿಗೆ) ಆದಿತ್ಯಾದಿ ನವಗ್ರಹರು ಪೀಡಿಸತಕ್ಕವರು ಆಗುವುದಿಲ್ಲ, ಹಾಗೆಯೇ ಭೂತಗಣಗಳೂ ಬೇತಾಳಾದಿ ಪಿಶಾಚಗಳೂ ದುಷ್ಟ ಸರ್ಪಗಳೂ ಪ್ರಸಿದ್ಧ ರಾಕ್ಷಸರೂ ಬಾಧಿಸತಕ್ಕವರು ಆಗುವುದಿಲ್ಲ. (ಆತನನ್ನು) ನೋಡಿಯೇ ಹತ್ತು ದಿಕ್ಕುಗಳಿಗೆ ಓಡಿಹೋಗುತ್ತವೆ. ।। 136 ।।)

**ಮೂಲ ।। (ಷಡ್ಭಿರ್ಮಾಸೋಪವಾಸೈಸ್ತು ಯತ್ಫಲಂ ಪರಿಕೀರ್ತಿತಂ।**
**ವಿಷ್ಣೋರ್ನಿವೇದಿತಾನ್ನೇನ ತತ್ಫಲಂ ಭುಂಜತಾಂ ಕಲೌ ।। ೧೩೭ ।।**

**ಅರ್ಥ ।।** (ಚಾತುರ್ಮಾಸ್ಯದಲ್ಲಿ ಉಪಕ್ರಮತಿಥಿಯನ್ನಾರಂಭಿಸಿ ಒಂದು ತಿಂಗಳು ಪರ್ಯಂತ ಪ್ರತಿದಿನವೂ ಮಾಡಲ್ಪಡತಕ್ಕ ಮಾಸೋಪವಾಸಾಖ್ಯವ್ರತವೂ, ಆರು ತಿಂಗಳಲ್ಲಿ ಪ್ರತಿನಿತ್ಯವೂ ಮಾಡಲ್ಪಡತಕ್ಕ ಉಪವಾಸವೂ ಇವುಗಳಿಂದ ಯಾವ ಫಲವು (ವ್ರತಶಾಸ್ತ್ರಗಳಲ್ಲಿ) ಹೇಳಲ್ಪಟ್ಟದ್ದೋ, ಅಂತಹ ಫಲವು ಕಲಿಯುಗದಲ್ಲಿ ಶ್ರೀಹರಿಗೆ ಸಮರ್ಪಿತವಾದ ಅನ್ನದಿಂದ ಭೋಜನ ಮಾಡುವ ಪುರುಷರಿಗೆ ಲಭಿಸುವುದು. (ಆದುದರಿಂದ ಶ್ರೀಹರಿಗೆ ಸಮರ್ಪಿತವಾದ ನೈವೇದ್ಯವನ್ನೇ ಭಕ್ಷಿಸಬೇಕು.) ।। 137 ।।)

**ಮೂಲ ।। (ವಿಷ್ಣೋರ್ನಿರ್ಮಾಲ್ಯಶೇಷೇಣ ಯೋಂಽಗಾನಿ ಪರಿಮಾರ್ಜಯೇತ್ ।**
**ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ ।। ೧೩೮ ।।)**

**ಅರ್ಥ ।।** (ಶ್ರೀವಿಷ್ಣುವಿಗೆ ಸಮರ್ಪಿಸಿದ ತುಳಸಿ ಮೊದಲಾದ ನಿರ್ಮಾಲ್ಯಶೇಷದಿಂದ ಯಾರು ತನ್ನ ಅಂಗಗಳನ್ನು ಪರಿಮಾರ್ಜನಮಾಡಿಕೊಳ್ಳುತ್ತಾನೋ, (ಅಂದರೆ ತನ್ನ ಅಂಗಗಳಲ್ಲಿ ಧಾರಣಮಾಡಿಕೊಳ್ಳುವನೋ ಆ ದುರಿತ ನಿವೃತ್ತಿಯಾಗಬೇಕೆಂದು ಅಪೇಕ್ಷಿಸತಕ್ಕವನ) ದುರಿತಗಳು ವಿನಾಶಗಳಾಗುತ್ತವೆ. (ವ್ಯಾಧಿನಿವೃತ್ತಿಯಾಗಬೇಕೆಂದು ಅಪೇಕ್ಷಿಸುವವನ) ವ್ಯಾಧಿಗಳು ಸಂಪೂರ್ಣವಾಗಿ ವಿನಾಶವಾಗುವವು. (ಆದಕಾರಣ ನಿರ್ಮಾಲ್ಯವು ಪ್ರಶಸ್ತವು.)।। 138 ।।)

(ಹೀಗೆ ನಿರ್ಮಾಲ್ಯದ ಮಹಿಮೆಯನ್ನು ಹೇಳಿ ಶ್ರೀಹರಿಯ ತೀರ್ಥದ ಮಹಿಮೆಯನ್ನು ಹೇಳುತ್ತಾರೆ-)

**ಮೂಲ ।। (ಅಕಾಲಮೃತ್ಯುಮಥನಂ ಸರ್ವವ್ಯಾಧಿವಿನಾಶನಂ।**
**ಸರ್ವದುರಿತೋಪಶಮನಂ ವಿಷ್ಣುಪಾದೋದಕಂ ಶುಭಂ ।। ೧೩೯ ।।)**

**ಅರ್ಥ ।।** (ವಿಷ್ಣುಪಾದೋದಕವು ಬಾಲ್ಯ, ಯೌವನ, ಕೌಮಾರಾದ್ಯವಸ್ಥೆಗಳಲ್ಲಿ ಪ್ರಾಪ್ತವಾದ

ಅಪಮೃತ್ಯುವನ್ನು ನಾಶಗೊಳಿಸುವುದು. ಕ್ಷಯ, ಅಪಸ್ಮಾರ, ಕುಷ್ಠಾದಿಗಳನ್ನು ನಾಶಗೊಳಿಸುವುದು. ಮತ್ತು ಮನುಷ್ಯಾದಿಗಳ ಶರೀರದಲ್ಲಿ ಸಂಭಾವಿತಗಳಾದ, ನಾನಾವಿಧಗಳಾದ ದುರಿತಗಳನ್ನು ಶಾಂತಿಪಡಿಸುವುದು. ಮತ್ತು ಶುಭವಾದುದು. ॥ 139 ॥)

**ಮೂಲ ॥ (ಕೌತುಕಂ ಶ್ರುಣು ಮೇ ದೇವಿ ವಿಷ್ಣೋರಾರಾರ್ತಿವಹ್ನಿನಾ ।**
**ತಾಪಿತಂ ನಾಶಮಾಯಾತಿ ಬ್ರಹ್ಮಹತ್ಯಾದಿಪಾತಕಂ ॥ ೧೪೦ ॥ )**

**ಅರ್ಥ ॥** (ಶ್ರೀಪರಮಾತ್ಮನ ಅಂಗದಲ್ಲಿ ಸಮರ್ಪಿತವಾದ ಮಂಗಳಾರ್ತಿಯ ಜ್ವಾಲೆಯಿಂದ (ಯಾವ ಭಕ್ತನ ಶಿರಸ್ಸು ಮೊದಲಾದ ಅಂಗಗಳು) ಸಂತಾಪಿತಗಳಾಗುತ್ತವೋ, ಆತನ ಬ್ರಹ್ಮಹತ್ಯಾ, ಸುರಾಪಾನ ಮೊದಲಾದ ಪಾತಕಗಳು ನಾಶವನ್ನು ಹೊಂದುತ್ತವೆ. (ನಷ್ಟವಾಗುತ್ತವೆ) ಈ ಆಶ್ಚರ್ಯವನ್ನು ಎಲೋ ಪಾರ್ವತಿಯೇ ನನ್ನ ಸಕಾಶದಿಂದ ಕೇಳು. (ಎಂದು ಪಾರ್ವತಿಯನ್ನು ಕುರಿತು ರುದ್ರನ ವಚನವು) ॥ 140 ॥)

**ಮೂಲ ॥ (ವಿಷ್ಣೋರಂಗಾರಶೇಷೇಣ ಯೋಽಂಗಾನಿ ಪರಿಮಾರ್ಜಯೇತ್।**
**ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ ॥ ೧೪೧ ॥)**

**ಅರ್ಥ ॥** (ಶ್ರೀವಿಷ್ಣುವಿಗೆ ಸಮರ್ಪಿಸಿದ ಧೂಪಯುಕ್ತ ಅಂಗಾರಶೇಷದಿಂದ ಯಾವ ಭಕ್ತನು ಲಲಾಟಾದ್ಯಂಗಗಳನ್ನು ಲೇಪಿಸಿಕೊಳ್ಳುವನೋ, ಅಂತಹ ಪುರುಷನ ದುಃಖಕರಗಳಾದ ಪಾಪಗಳು ವಿನಾಶವನ್ನು ಹೊಂದುತ್ತವೆ. ಮತ್ತು ನಾನಾವಿಧಗಳಾದ ವ್ಯಾಧಿಗಳೂ ಸಂಪೂರ್ಣವಾಗಿ (ನಾಶವಾಗಿ) ಹೊಂದುತ್ತವೆ. (ಆದುದರಿಂದ ಶ್ರೀಹರಿಗೆ ಸಮರ್ಪಿಸಿದ ಅಂಗಾರಾದಿಗಳನ್ನು ಧರಿಸಲೇಬೇಕು) ॥ 141 ॥)

**ಮೂಲ ॥ ಹರಿಣಾ ಮುಕ್ತಿದಾನೀಹಿ(ಹ) ಮುಕ್ತಿಸ್ಥಾನಾನಿ ಸರ್ವಶಃ ।**
**ಸ(ನ)ಯಸ್ಯ ಸರ್ವಭಾವೇಷು ತಸ್ಯ ತೈಃ ಕಿಂ ಪ್ರಯೋಜನಂ ॥ ೧೪೨ ॥**

**ಅರ್ಥ ॥** ಕಾಶಿಮೊದಲಾದ ಮುಕ್ತಿಸ್ಥಾನಗಳೆಂದು ಹೇಳಲ್ಪಟ್ಟ ತೀರ್ಥಸ್ಥಾನಗಳು ಶ್ರೀಹರಿಯಿಂದಲೇ ಮುಕ್ತಿಯನ್ನು ಕೊಡತಕ್ಕವುಗಳಾಗುತ್ತವೆ. (ಮುಕ್ತಿದಾಯಕಗಳಾಗುವುದಿಲ್ಲ, ಮತ್ತೆ ಶ್ರೀಹರಿಯಿಂದಲೇ,) (ಅಂದರೆ ಅಲ್ಲಿರುವ ಶ್ರೀಹರಿಯ ಸನ್ನಿಧಾನ ಪ್ರೇರಣಾದಿಗಳಿಂದಲೇ ಮೋಕ್ಷಸಾಧನಗಳಾಗುತ್ತವೆ. ಕೇವಲ ತೀರ್ಥಗಳಲ್ಲ.) ಆದಕಾರಣ ಎಲ್ಲಾ ವಸ್ತುಗಳಲ್ಲಿಯೂ (ನಿಯಾಮಕನಾಗಿ ಶ್ರೀಹರಿಯು ಇದ್ದಾನೆಂದು) ಯಾರಿಗೆ (ಭಾವನೆಯಿದೆಯೋ) ಅಂತಹ ಅಧಿಕಾರಿಗೆ ಆ ತೀರ್ಥಸ್ನಾನಗಳಿಂದ ಏನು ಪ್ರಯೋಜನವು? (ಅಂದರೆ ಸರ್ವತ್ರ ಭಗವತ್ಸನ್ನಿಧಾನವಿದೆ ಎಂದು ತಿಳಿದುಕೊಳ್ಳುವುದೇ ಅಧಿಕವಾದುದರಿಂದ ಎಲ್ಲಾ ತೀರ್ಥಗಳಲ್ಲಿ ಹಾಗೆಯೇ ಅನುಸಂಧಾನಮಾಡುತ್ತಿರಬೇಕು) ॥ 142 ॥

**ಮೂಲ ॥ ಹರಿರ್ಯಾತಿ ಹರಿರ್ಯಾತಿ ದಸ್ಯುವ್ಯಾಜೇನ ಯೋ ವದೇತ್ ।**
**ಸೋಽಪಿ ಸ(ತ)ದ್ಗತಿಮಾಪ್ನೋತಿ ಗತಿಂ ಸುಕೃತಿನೋ ಯಥಾ ॥ ೧೪೩ ॥**

**ಅರ್ಥ ॥** ಯಾರು (ಚೋರಾದಿಗಳ ಗಮನಾಗಮನಾದಿಗಳನ್ನು ನೋಡಿ) 'ಹರಿರ್ಯಾತಿ ಹರಿರ್ಯಾತಿ' (ಹೃಞ–ಹರಣೇ, ಹರತೀತಿ ಹರಿಃ=ಅಂದರೆ ಅಪಹರಿಸುವವನು) ಎಂದು ಕಳ್ಳರನ್ನು ಹೇಳುವುದು ಎನ್ನುವ ನೆವನದಿಂದ ಹರಿ ಎಂದು ಹರಿನಾಮವನ್ನುಚ್ಚರಿಸುವವನೋ, ಆತನೂ ಕೂಡ ಸುಕೃತಿಗಳು ಹೇಗೆ ಪುಣ್ಯಗತಿಯನ್ನು ಹೊಂದುತ್ತಾರೋ, ಹಾಗೆಯೇ ಸಜ್ಜನರ ಗತಿಯನ್ನೇ ಹೊಂದುತ್ತಾನೆ. (ಆದಕಾರಣ ಪರಿಹಾಸಪೂರ್ವಕವಾಗಿ ಆಗಲೀ ಯಾವ ನೆವನದಿಂದಲಾದರೂ ಭಗವನ್ನಾಮ ಸಂಕೀರ್ತನೆಮಾಡಿದರೆ ಮಹಾಫಲವಿದ್ದುದರಿಂದ ಸರ್ವದಾ ಸಂಕೀರ್ತನೆ ಮಾಡುತ್ತಿರ ಬೇಕು.) ॥ 143 ॥

''ಅರ್ಚಿತಃ ಸಂಸ್ಮೃತೋ ಧ್ಯಾತಃ'' ಇತ್ಯಾದಿಗಳಿಂದ ಭಗವಂತನಿಗೆ ಪೂಜಾದಿಗಳನ್ನು ಮಾಡಬೇಕೆಂದು ಹೇಳಿ ಈಗ ಶ್ರೀಹರಿಯನ್ನು ಬಿಟ್ಟು ಇತರರನ್ನು ಭಜಿಸಿದರೆ ದೋಷವಿದೆ ಎಂದು ನಿರೂಪಿಸುತ್ತಾರೆ–

**ಮೂಲ ॥ ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೇ(ದೈ)ವಮುಪಾಸತೇ ।**
**ತ್ಯಕ್ತ್ವಾಽಮೃತಂ ಸ ಮೂಢಾತ್ಮಾ ಭುಂಕ್ತೇ ಹಾಲಾಹಲಂ ವಿಷಂ ॥ ೧೪೪ ॥**

**ಅರ್ಥ ॥** (ಹಿಂದೆ ಹೇಳಿದ ಪ್ರಕಾರ ಅರ್ಚನ ಸ್ಮರಣಾದಿಗಳಿಂದ ಮೋಕ್ಷವನ್ನು ಕೊಡತಕ್ಕ ಸರ್ವೋತ್ತಮನಾದ) ವಾಸುದೇವನನ್ನು ಬಿಟ್ಟು ಯಾರು ಇತರ ದೇವತೆಗಳನ್ನು (ಸರ್ವೋತ್ತಮ ರನ್ನಾಗಿ) ಸೇವಿಸುತ್ತಾನೋ, ಅಂತಹ ಮೂಢಮನಸ್ಸುಳ್ಳ ಅಜ್ಞಾನಿಯು (ವಾಸುದೇವನ ಪ್ರಸಾದದಿಂದ ಸಿಗುವ ಮೋಕ್ಷರೂಪ) ಅಮೃತವನ್ನು ಬಿಟ್ಟು ಕಾಲಕೂಟವಿಷವನ್ನು ಭಕ್ಷಿಸಿದವನಂತೆ ಆಗುತ್ತಾನೆ.

**ತಾತ್ಪರ್ಯ ॥** ವಾಸೇದೇವನ ತ್ಯಾಗವೆಂದರೆ– ''ಮುಖ್ಯತ್ಯಾಗೋ ಹರೇರೇಷಃ ಯಸ್ನಾಸ್ತೀತಿ ವದೇದಮುಂ । ತತ್ಸಮಂ ವಾಧಿಕಂ ವಾಽಪಿ ಬ್ರೂಯಾದೈಕ್ಯಮಥಾಪಿ ವಾ ॥ ಸ ಏವ ಮುಖ್ಯತಸ್ತ್ಯಾಗೋ ವಾಸುದೇವಸ್ಯ ಕೀರ್ತಿತಃ । ರಮಾ ಬ್ರಹ್ಮಾದಿಕಾನಾಂ ಚ ತಾರತಮ್ಯಾನಭಿಜ್ಞತಾ ॥ ಸಂಶಯ–ಶ್ಚೋಕ್ತತತ್ತ್ವೇಷು ಜಗನ್ಮಿಥ್ಯಾತ್ವದರ್ಶನಂ । ಅಸ್ಮೃತಿರ್ವಾಸುದೇವಸ್ಯ ತದ್ಭಕ್ತಾನಾಂ ವಿನಿಂದನಂ ॥ ದ್ವಿತೀಯ ಏಷ ತ್ಯಾಗಸ್ತು ವಿಷ್ಣೋರೇವ ಪ್ರಕೀರ್ತಿತಃ । ನಿಷಿದ್ಧಕರ್ಮಕರಣಂ ವಿಹಿತಸ್ಯ ಚ ವರ್ಜನಂ ॥ ತ್ಯಾಗಸ್ತೃತೀಯೋ ಹಿ ಹರೇಶ್ಚತುರ್ಥೋಽಯೋಗ್ಯಪೂರುಷೇ। ಉಪದೇಶಃ ಕೇಶವಸ್ಯ ಯಥಾ ಶಾಸ್ತ್ರೋದಿತಕ್ರಮಾತ್'' ॥ (ಐತರೇಯ ಪು.679.680.681.ಗಳಲ್ಲಿ ಹೇಳಿರುತ್ತದೆ) ॥ 144 ॥

**ಮೂಲ ॥ ತ್ಯಕ್ತ್ವಾಽಮೃತಂ ಯಥಾ ಕಶ್ಚಿದನ್ಯಪಾನಂ ಪಿಬೇನ್ನರಃ ।**
**ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ (ಚಾನ್ಯಂ) ದೈವಮುಪಾಸತೇ ॥೧೪೫॥**

**ಅರ್ಥ ॥** ಹೇಗೆ (ಲೋಕದಲ್ಲಿ) ಒಬ್ಬ ಅಜ್ಞಾನಿಯು ಪಾನಾರ್ಥವಾಗಿರತಕ್ಕ ಪ್ರಸಿದ್ಧಾಮೃತವನ್ನು ಬಿಟ್ಟು ನೀಚರು ಕುಡಿಯತಕ್ಕ ಮದ್ಯಾದಿಗಳನ್ನು ಕುಡಿಯುವನೋ, ಹಾಗೆಯೇ ಶ್ರೀಹರಿಯನ್ನು ಬಿಟ್ಟು ಯಾವನು ಬೇರೆ ದೇವತೆಗಳನ್ನುಪಾಸನೆಮಾಡುತ್ತಾನೋ, ಅವನು ಅವನಿಗೆ ಸಮಾನಿಕನು.॥ 145 ॥

**ಮೂಲ ॥ ಸ್ವಧರ್ಮಂ ತು ಪರಿತ್ಯಜ್ಯ**
**ಪರಧರ್ಮಂ ಚರೇದ್ಯಥಾ (ಯಥಾ ಚರೇತ್) (ಸಮಾಚರೇತ್)।**

**ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ (ಚಾನ್ಯಂ) ದೈವಮುಪಾಸತೇ ॥೧೪೬॥**

**ಅರ್ಥ ॥** ಯಾವನೊಬ್ಬನು ಸ್ವೋಚಿತ ಕರ್ಮಾನುಷ್ಠಾನವನ್ನು ಬಿಟ್ಟು ಪರಧರ್ಮವನ್ನು ಹೇಗೆ ಆಚರಿಸುತ್ತಾನೋ, ಹಾಗೆಯೇ ಶ್ರೀಹರಿಯನ್ನು ಬಿಟ್ಟು ಯಾರೊಬ್ಬನು ಇತರ ದೇವತೆಗಳನ್ನುಪಾಸನೆ ಮಾಡುತ್ತಾನೋ, ಅವನು ಅವನಿಗೆ ಸಮಾನಿಕನು ॥ 146 ॥

**ಮೂಲ ॥ ಯಥಾ ಗಂಗೋದಕಂ ತ್ಯಕ್ತ್ವಾ ಪಿಬೇತ್ಕೂಪೋದಕಂ ನರಃ ।**
**ತಥಾ ಹರಿಂ ಪರಿತ್ಯಜ್ಯ ಯೋಽನ್ಯ (ಚಾನ್ಯಂ) ದೈವಮುಪಾಸತೇ ॥ ೧೪೭ ॥**

**ಅರ್ಥ ॥** ಹೇಗೆ ಲೋಕದಲ್ಲಿ ಗಂಗಾತೀರದಲ್ಲಿರುವ ಮೂಢಮನುಷ್ಯನು ಪಾನಾರ್ಥವಾಗಿರ ತಕ್ಕ ಗಂಗಾ ಜಲವನ್ನು ಬಿಟ್ಟು ಕೂಪೋದಕವನ್ನು ಪಾನ ಮಾಡುವನೋ, ಹಾಗೆಯೇ ವಾಸುದೇವನನ್ನು ಬಿಟ್ಟು ಯಾವನು ಇತರ ದೇವತೆಯನ್ನುಪಾಸನೆ ಮಾಡುತ್ತಾನೋ, ಅವನು ಅವನಿಗೆ ಸಮಾನಿಕನು ॥147॥

**ಮೂಲ ॥ ಗಾಂ ಚ ತ್ಯಕ್ತ್ವಾ ಸ(ವಿ)ಮೂಢಾತ್ಮಾ**
**ಗರ್ದಭೀಂ ವಂದತೇ ಯಥಾ ।**
**ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ(ಚಾನ್ಯಂ) ದೈವಮುಪಾಸತೇ ॥ ೧೪೮ ॥**

**ಅರ್ಥ ॥** ಮೂಢಬುದ್ಧಿಯುಳ್ಳ ಯಾವಾತನು ಸರ್ವಪೂಜ್ಯವಾದ ಗೋವನ್ನು ಬಿಟ್ಟು (ಅಂದರೆ ಗೋವಿಗೆ ನಮಸ್ಕಾರಾದಿಗಳನ್ನು ಮಾಡದೆ) ಕತ್ತೆಯನ್ನು ಹೇಗೆ ನಮಸ್ಕರಿಸುತ್ತಾನೋ, ಹಾಗೆಯೇ ವಾಸುದೇವನನ್ನು ಬಿಟ್ಟು ಯಾರು ಇತರ ದೇವತೆಯನ್ನುಪಾಸನೆ ಮಾಡುತ್ತಾನೋ, ಅವನು ಅವನಿಗೆ ಸಮಾನಿಕನು.॥ 148 ॥

**ಮೂಲ ॥ ಸ್ವಮಾತರಂ ಹರಿತ್ಯಜ್ಯ ಶ್ವಪಾಕೀಂ ವಂದತೇ ಯಥಾ ।**
**ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ (ಚಾನ್ಯಂ) ದೈವಮುಪಾಸತೇ ॥೧೪೯॥**

**ಅರ್ಥ ॥** ಹೇಗೆ ಯಾವಾತನೂ ತನ್ನ ತಾಯಿಯನ್ನು ಬಿಟ್ಟು ನೀಚಳಾದ ಚಂಡಾಲಾದಿ ಸ್ತ್ರೀಯನ್ನು ನಮಸ್ಕರಿಸುತ್ತಾನೋ, ಹಾಗೆಯೇ ಶ್ರೀಹರಿಯನ್ನು ಬಿಟ್ಟು ಯಾವನು ಇತರ ದೇವತೆಯನ್ನುಪಾಸನೆ ಮಾಡುತ್ತಾನೋ, ಅವನು ಅವನಿಗೆ ಸಮಾನಿಕನು ॥ 149 ॥

**ಮೂಲ ॥ ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೈವಮುಪಾಸತೇ ।**
**ತೃಷಿತೋ ಜಾಹ್ನವೀ ತೀರೇ ಕೂಪಂ ಖನತಿ ದುರ್ಮತಿ ॥ ೧೫೦ ॥**

**ಅರ್ಥ ॥** ವಾಸುದೇವನನ್ನು ಬಿಟ್ಟು ಯಾವನು ಇತರ ದೇವತೆಯನ್ನುಪಾಸನೆ ಮಾಡುತ್ತಾನೋ, ದುರ್ಬುದ್ಧಿಯುಳ್ಳ ಯಾವನು ತೃಷಿತನಾಗಿ ನೀರು ಕುಡಿಯಲಿಕ್ಕೆ ಭಾಗೀರಥೀತೀರದಲ್ಲಿ ಬಾವಿಯನ್ನಗಿಸುತ್ತಾನೋ, ಆತನಿಗೆ ಆ ದುರ್ಬುದ್ಧಿಯು ಸಮಾನಿಕನು ॥ 150 ॥

ಪೂರ್ವದಲ್ಲಿ ಹೇಳಿದ ಭಗವತ್ಪೂಜಾ ಮೊದಲಾದ ಅನೇಕ ಸಾಧನಗಳ ಸಮುದಾಯವನ್ನು ಮೋಕ್ಷಕ್ಕಾಗಿ ದೃಢಾಂಗನಾಗಿರುವಾಗಲೇ ಪುರುಷನು ಶೀಘ್ರದಲ್ಲಿ ಮಾಡಬೇಕು, ಸಾವಕಾಶವಾಗಿ ಅಲ್ಲ,

ಅಂದರೆ, ಅಂಗಗಳು ಶಿಥಿಲಗಳಾದ ಮೇಲೆ ಅಲ್ಲ, ಎನ್ನುವಲ್ಲಿ ಋಷಿವಾಕ್ಯವನ್ನು ಪ್ರಮಾಣೀಕರಿಸುತ್ತಾರೆ-

**ಮೂಲ ॥ ಯಾವತ್ಸ್ವಸ್ಥಮಿದಂ ಪಿಂಡಂ ನಿರುಜಂ ಕರುಣಾನ್ವಿತಂ।**
**ತಾವತ್ಕುರುಷ್ವಾತ್ಮಹಿತಂ ಪಶ್ಚಾತ್ತಾಪೇನ ತಪ್ಯಸೇ ॥ ೧೫೧ ॥**

**ಅರ್ಥ ॥** ಆ ಶರೀರವು ಯಾವಾಗ ತನ್ನಲ್ಲಿ ಸ್ವವಿಹಿತವಾದ ಭಗವದಾರಾಧನಾದಿಗಳನ್ನು ಮಾಡುವ ವಿಷಯದಲ್ಲಿ ಸ್ವಾಧೀನವಾಗಿರುತ್ತದೋ, ಹಾಗೆಯೇ ರೋಗರಹಿತವಾಗಿರುತ್ತದೋ, ಚಕ್ಷುರಾದಿ ಜ್ಞಾನೇಂದ್ರಿಯವೂ, ಹಸ್ತಾದಿ ಕರ್ಮೇಂದ್ರಿಯವೂ, ಪಾಟವವುಳ್ಳದ್ದಾಗಿರುತ್ತದೋ, ಅ ಸಮಯದಲ್ಲಿಯೇ ತನಗೆ ಹಿತಕರವಾಗಿಯೂ ಪರಲೋಕಕ್ಕೆ ಸಾಧನವಾಗಿಯೂ ಇರುವ ಕರ್ಮವನ್ನು ಅಂದರೆ ಶ್ರೀಹರಿಗೆ ಪ್ರೀತಿಕರವಾದ ಪೂಜಾದಿ ಮೋಕ್ಷಸಾಧನವನ್ನು ಮಾಡಬೇಕು. ಇಲ್ಲವಾದರೆ ಪಶ್ಚಾತ್ತಾಪದಿಂದ ಸಂತಪ್ತನಾಗುವಿ. (ಅಂದರೆ, ದೇಹದಾರ್ಢ್ಯವಿರುವಾಗಲೇ ಪರಮಾತ್ಮನ ಸೇವಾಮಾಡಬೇಕು.) ॥ 151 ॥

**ಮೂಲ ॥ ಯಾವತ್ಸ್ವಾಸ್ಥ್ಯಂ ಶರೀರೇಷು ಕರಣೇಷು ಚ ಪಾಟವಂ ।**
**ತಾವದರ್ಚಯ ಗೋವಿಂದಮಾಯುಷ್ಯಂ ಸಾರ್ಥಕಂ ಕುರು ॥ ೧೫೨ ॥**

**ಅರ್ಥ ॥** (ಪುಣ್ಯಕರ್ಮಗಳಿಂದ ಸಂಪಾದಿತಗಳಾದ) ಈ ಮನುಷ್ಯಶರೀರಗಳಲ್ಲಿ ಎಷ್ಟು ಕಾಲಪರ್ಯಂತ ಸಾಮರ್ಥ್ಯವೂ ಇಂದ್ರಿಯಗಳಲ್ಲಿ ಪಟುತ್ವವೂ ಇದೆಯೋ ಅಷ್ಟುಕಾಲದವರೆಗೆ ಮೋಕ್ಷಾದಿ ಪುರುಷಾರ್ಥಪ್ರದನಾದ ಶ್ರೀಹರಿಯನ್ನು ಚೆನ್ನಾಗಿ ಪೂಜಿಸು. ಆ ಆಯುಷ್ಯವನ್ನು (ಭಗವತ್ಪೂಜಾದಿಗಳಿಂದ) ಸಾರ್ಥಕವಾಗಿ ಮಾಡಿಕೋ ॥ 152 ॥

**ಮೂಲ ॥ ಸ್ಮರ್ಯತಾಂ ತು ಹೃಷೀಕೇಶೋ ಹೃಷೀಕೇಷು ದೃಢೇಷು ಚ ।**
**ಅದೃಢೇಷು ಹೃಷೀಕೇಷು ಹೃಷೀಕೇಶಂ ಸ್ಮರಂತಿ ಕೇ ॥ ೧೫೩ ॥**

**ಅರ್ಥ ॥** ಇಂದ್ರಿಯಗಳು ದೃಢಗಳಾಗಿಕೊಂಡಿರುವಾಗಲೇ ಇಂದ್ರಿಯಗಳಿಗೆ ಅಧಿಪತಿಯಾದ ಶ್ರೀಹರಿಯು (ಜನರಿಂದ) ಸ್ಮರಿಸಲ್ಪಡಲಿ. ಇಂದ್ರಿಯಗಳು ಶಿಥಿಲೀಭೂತಗಳಾದ ಮೇಲೆ ಶ್ರೀಹರಿಯನ್ನು ಯಾರು ಸ್ಮರಿಸುತ್ತಾರೆ? (ಸ್ಮರಣಾದಿ ಸಾಧನಗಳನ್ನು ಮಾಡಲಿಕ್ಕೆ ಯಾರೂ ಸಮರ್ಥರಾಗಲಾರರು.) ॥ 153 ॥

ಪುತ್ರಮಿತ್ರಕಳತ್ರಾದಿ ವ್ಯರ್ಥವಿಷಯಕವಾದ ಆಲೋಚನೆಗಿಂತ ಭಗವಚ್ಚಿಂತನ ಸಂಕೀರ್ತನ ಮೊದಲಾದವುಗಳು ಮೋಕ್ಷರೂಪ ಫಲವನ್ನು ಕೊಡುತ್ತವೆಂದು ಶ್ರುತವಾದುದರಿಂದ ಸರ್ವದಾ ಭಗವಚ್ಚಿಂತನಾದಿಗಳನ್ನೇ ಮಾಡುತ್ತಿರಬೇಕೆಂದು ಎರಡು ವಚನಗಳಿಂದ ನಿರೂಪಿಸುತ್ತಾರೆ-

**ಮೂಲ ॥ ಯಾವಚ್ಚಿಂತಯತೇ ಜಂತುರ್ವಿಷಯಾನ್ವಿಷ ಸನ್ನಿಭಾನ್ ।**
**ತಾವಚ್ಚೇತ್ಸ್ಮರತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ ॥ ೧೫೪ ॥**

**ಅರ್ಥ ॥** ಜನರು (ಅನಿಷ್ಟವನ್ನು ಕೊಡುವುದರಿಂದ) ವಿಷಕ್ಕೆ ಸದೃಶಗಳಾದ ವಿಷಯಗಳನ್ನು ಎಷ್ಟುಕಾಲ ಪರ್ಯಂತ ಚಿಂತಿಸುತ್ತಾರೋ, ಅಷ್ಟುಕಾಲ ಪರ್ಯಂತ ವಿಷ್ಣುವನ್ನು ಸ್ಮರಿಸಿದ ಪಕ್ಷದಲ್ಲಿ

ಸಂಸಾರಬಂಧದಿಂದ ಯಾರು ತಾನೇ ಮುಕ್ತರಾಗಲಾರರು. (ಎಲ್ಲರೂ ಮುಕ್ತರೇ ಆಗುವರು.) ಆದಕಾರಣ ಮುಮುಕ್ಷುಗಳು ವಿಷಯ ವಿಚಾರಗಳನ್ನು ಬಿಟ್ಟು ಭಗವತ್ಸ್ಮರಣ ಕೀರ್ತನಾದಿಗಳನ್ನು ಸರ್ವದಾ ಮಾಡುತ್ತಾ ಇರಬೇಕು.॥ 154 ॥

**ಮೂಲ ॥ ಯಾವತ್ಪ್ರಲಪತೇ ಜಂತುರ್ಲೋಕವಾರ್ತಾದಿಭಿಃ ಸದಾ ।**
**ತಾವಚ್ಚೇದ್ವದತೇ (ತ್ಸ್ಮರತೇ) ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ ॥**

**ಅರ್ಥ ॥** ಪುರುಷನು ಎಷ್ಟು ಕಾಲಪರ್ಯಂತ ಲೋಕವೃತ್ತಾಂತ ಮೊದಲಾದವುಗಳಿಂದ ಸರ್ವದಾ ಪ್ರಲಪಿಸುತ್ತಿರುತ್ತಾನೋ, ಅಷ್ಟು ಕಾಲಪರ್ಯಂತ ಶ್ರೀವಿಷ್ಣುವನ್ನು ಹೇಳುತ್ತಿದ್ದರೆ (ಸ್ಮರಿಸುತ್ತಿದ್ದರೆ) ಸಂಸಾರಬಂಧದಿಂದ ಯಾವನು ಮುಕ್ತನಾಗಲಾರನು. (ಎಲ್ಲರೂ ಮುಕ್ತರೇ ಆಗುವರು.) ॥ 155 ॥

ಈ ಪ್ರಕಾರವಾಗಿ ಇಷ್ಟು ಗ್ರಂಥಸಂದರ್ಭದಿಂದ ಮೋಕ್ಷವನ್ನು ಬಯಸುವ ಭಕ್ತನು ಭಗವದರ್ಚನ ಸ್ಮರಣ ಧ್ಯಾನ ಕೀರ್ತನ, ಶಾಲಗ್ರಾಮಪೂಜೆ, ತೀರ್ಥಸ್ನಾನ, ಶ್ರೀಹರಿಗೆ ಸಮರ್ಪಿಸಿದ ನೈವೇದ್ಯಭಕ್ಷಣ ನಿರ್ಮಾಲ್ಯಧಾರಣ ಮೊದಲಾದುದನ್ನು ಸರ್ವದಾ ಮಾಡುತ್ತಾ ಇರಬೇಕೆನ್ನುವಲ್ಲಿ ಶ್ರೀಮದಾಚಾರ್ಯರು ಆಯಾಯ ವಿಷಯದಲ್ಲಿ ಅನೇಕ ಪ್ರಮಾಣಗಳನ್ನು ಹೇಳಿ ವೈಷ್ಣವ ಧರ್ಮಗಳ ಮಧ್ಯದಲ್ಲಿ ಅತ್ಯುತ್ತಮವಾದ ಏಕಾದಶೀ ವ್ರತವನ್ನು ಮುಮುಕ್ಷುಗಳಾದ ಭಕ್ತರು ಸರ್ವಥಾ ಮಾಡುತ್ತಿರಬೇಕೆನ್ನುವಲ್ಲಿ ಅನೇಕ ಪ್ರಮಾಣಗಳನ್ನು ಹೇಳುತ್ತಾರೆ. ಅದರಲ್ಲಿ ಜ್ಯೋತಿಷ್ಕರ ಮೂಲಕ ದಶಮೀ ವೇಧರಹಿತವಾದ ಏಕಾದಶೀ ತಿಥಿಯನ್ನು ಅಧಿಕಸಿದ್ಧಾಂತದಿಂದ ಅಂದರೆ ಆರ್ಯಭಟಾದಿ ರೀತಿಯಿಂದ ನಿರ್ಣಯಮಾಡಿ ಏಕಾದಶೀ ವ್ರತವನ್ನು ಮಾಡಬೇಕು. ಬೇರೆ ರೀತಿಯಾಗಿ ಮಾಡಿದರೆ ದೋಷವು ಪ್ರಾಪ್ತವಾಗುವುದೆನ್ನುವ ವಿಷಯದಲ್ಲಿ ಸೂತಪುರಾಣಿಕರ ವಾಕ್ಯವನ್ನು ಹೇಳುತ್ತಾರೆ–

**ಮೂಲ ॥ ಶ್ರೀಸೂತಃ ॥ ಜ್ಞಾತ್ವಾ ವಿಪ್ರೈ(ಪ್ರಾ)ಸ್ತಿಥಿಂ (ವಿಪ್ರಾತ್ತಿಥಿಂ) ಸಮ್ಯಕ್**
**ದೈವಜ್ಞೈಃ ಸಮುದೀರಿತಾಂ ।**
**ಕರ್ತವ್ಯ ಉಪವಾಸಸ್ತು**
**ಅನ್ಯಥಾ ನರಕಂ ವ್ರಜೇತ್ ॥ ೧೫೬ ॥**

**ಅರ್ಥ ॥** ಶ್ರೀಸೂತಪುರಾಣಿಕರು ಹೇಳುತ್ತಾರೆ:– ಎಲೋ ಸಜ್ಜನರೇ! ಏಕಾದಶೀ ತಿಥಿಯನ್ನು ಗಣಕರಿಂದ ಹೇಳಲ್ಪಟ್ಟದ್ದನ್ನು ಚೆನ್ನಾಗಿ ತಿಳಿದು (ಅಂದರೆ ಗಣಕರ ಮೂಲಕ ಅಧಿಕ ಸಿದ್ಧಾಂತ ರೀತಿಯಿಂದ ದಶಮೀವೇಧರಹಿತವಾದುದನ್ನು ಚೆನ್ನಾಗಿ ನಿಶ್ಚಯಿಸಿಕೊಂಡು) ಅಂತಹ ಏಕಾದಶೀ ದಿವಸ ಉಪವಾಸವನ್ನು ಮಾಡತಕ್ಕದ್ದು. (ಅಂದರೆ ಶ್ರೀಹರಿಗೆ ಪ್ರೀತಿಕರವಾದ ಏಕಾದಶೀ ವ್ರತವನ್ನು ಆಚರಿಸದಿದ್ದರೂ ವಿಚಾರಮಾಡದೆ ದಶಮೀ ವೇಧಯುಕ್ತ ಏಕಾದಶೀ ವ್ರತವನ್ನು ಮಾಡಿದರೂ ನರಕವನ್ನು ಹೊಂದುವವನು.

**ತಾತ್ಪರ್ಯ ॥** (1) ದಶಮ್ಯಾದಿ ದಿನತ್ರಯ ವ್ರತಾಚರಣೆಯಲ್ಲಿ ಆರ್ಯಭಟ್ಟಸಿದ್ಧಾಂತವೇ ಗ್ರಾಹ್ಯವೆನ್ನುವ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. ''ವೃದ್ಧೌ ಪ್ರವೃದ್ಧ ಸಿದ್ಧಾಂತಮಧಿಗಮ್ಯ ಮುನೀಶ್ವರಾಃ । ದೈವಜ್ಞೈರ್ನಿರ್ಣಯಃ ಕಾರ್ಯೋ ದಶಮ್ಯಾದಿದಿನತ್ರಯೇ''॥ ''ಆರ್ಯಭಟ್ಟೇನ

ಗಣನಂ ದಶಮ್ಯಾದಿ ದಿನತ್ರಯೇ। ಕಾರ್ಯಮನ್ಯತ್ತು ಸೌರೇಣ ನಿಶ್ಚಿತಂ ಬ್ರಹ್ಮವಿತ್ತಮೈಃ॥'' ಎಂದು ನಿರ್ಣಯಾಮೃತದಲ್ಲಿದೆ. ''ವ್ರತಾನಾಮೇವ ಸರ್ವೇಷಾಂ ಸೌರೇಣೈವ ವಿನಿರ್ಣಯಃ । ದಶಮ್ಯಾದಿ ತ್ರಯಾಣಾಂ ತು ಆರ್ಯೇಣೈವ ತು ನಿರ್ಣಯಃ । ವೃದ್ಧಾರ್ಯಭಟೋ ಗ್ರಾಹ್ಯಃ॥'' ತಥಾ ''ದಶಮ್ಯಾದಿ ತ್ರಯಾಣಾಂ ತು ಸ್ತಂಬೇನೈವ ತು ಕಾರಯೇತ್ ॥'' (ಸ್ತಂಬಃ=ಆರ್ಯಭಟ್ಟಃ) ಇತ್ಯಾದಿ ಪ್ರಮಾಣಪ್ರಕಾರ ಆರ್ಯಭಟ್ಟರೀತಿಯಿಂದ ಗಣನಮಾಡಿಸಿ ನಿಶ್ಚಯಮಾಡಿಕೊಂಡು ದಶಮೀವೇಧ ರಹಿತವಾದ ಏಕಾದಶೀ ದಿವಸ ಉಪವಾಸಮಾಡಬೇಕು. (2) ದಶಮೀ ವೇಧವೆಂದರೆ ದಶಮಿಯಿಂದ ಏಕಾದಶಿಗೆ ತಾಡನ (ಸಂಬಂಧ)ವು. ಅಂದರೆ- ದಶಮೀದಿನ 56 ಘಳಿಗೆಯ ಮೇಲೆ 4 ಘಳಿಗೆ ಅರುಣೋದಯ ಕಾಲವನ್ನಾರಂಭಿಸಿಯೇ ಏಕಾದಶೀ ವ್ರತಾಚರಣದ ಕಾಲವು. ಆ ಅರುಣೋದಯಕಾಲದಲ್ಲಿ ದಶಮಿಯಿದ್ದರೆ ಆ ಏಕಾದಶಿಯು ವಿದ್ಧೈಕಾದಶಿಯೆನ್ನಿಸುತ್ತದೆ. ಆ ದಿನ ಉಪವಾಸಕ್ಕೆ ಯೋಗ್ಯವಲ್ಲ. ''ಕಲಾವೇಧೇಽಪಿ ವಿಪ್ರೇಂದ್ರ ದಶಮ್ಯೈಕಾದಶೀ ಯದಾ। ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭ ಇವ ಸಂತ್ಯಜೇತ್ ॥'' ''ಕಲಾರ್ಧೇನಾಪಿ ವಿದ್ಧಾ ಸ್ಯಾತ್ ದಶಮ್ಯೈಕಾದಶೀ ಯದಾ ॥ ತದಾ ತ್ವೇಕಾದಶೀಂ ತ್ಯಕ್ತ್ವಾ ದ್ವಾದಶ್ಯಾಮುಪವಾಸಯೇತ್ ॥'' ಎಂದು ಪ್ರಮಾಣಸಂಗ್ರಹದಲ್ಲಿ (ಅಂದರೆ- 'ಕ್ಷಣದ್ವಯಂ ಲವಃ ಪ್ರೋಕ್ತೋ ನಿಮೇಷಸ್ತು ಲವದ್ವಯಂ' 2 ಕ್ಷಣಗಳಿಗೆ ಲವವೆಂದೂ, 2 ಲವಗಳಿಗೆ ನಿಮೇಷವೆಂದೂ ಹೆಸರು. 'ಅಷ್ಟಾದಶ ನಿಮೇಷಾಸ್ತು ಕಾಷ್ಠಾ ತ್ರಿಂಶತ್ತು ತಾಃ ಕಲಾ' 18 ನಿಮೇಷಗಳು ಕಾಷ್ಠಾ ಎನ್ನಿಸುತ್ತವೆ. 30 ಕಾಷ್ಠಾಗಳು ಕಲಾ ಎನ್ನಿಸುತ್ತವೆ ಅಂತಹ) ಕಲೆಯ ಅರ್ಧದಿಂದಲಾಗಲೀ ಏಕಾದಶಿಯು ಅರುಣೋದಯಕಾಲದಲ್ಲಿ ದಶಮಿಯಿಂದ ಸಂಬದ್ಧವಾಗಿದ್ದರೆ ಆ ಏಕಾದಶೀ ದಿವಸ ಉಪವಾಸಮಾಡದೆ ದ್ವಾದಶೀ ದಿವಸವೇ ಉಪವಾಸಮಾಡಬೇಕು. (3) ''ಉದಯಾತ್ಪ್ರಾಕ್ ಚತಸ್ರಸ್ತು ನಾಡಿಕಾ ಅರುಣೋದಯಃ'' ಸೂರ್ಯನ ದಯದಿಂದ ಮೊದಲು 4 ಘಳಿಗೆ ಅರುಣೋದಯವೆನ್ನಿಸುತ್ತದೆ. (4) ''ವೇಧಶ್ಚೈವಾತಿ-ವೇಧಶ್ಚ ಮಹಾವೇಧಸ್ತಥೈವ ಚ । ಯೋಗವೇಧಶ್ಚ ಚತ್ವಾರಃ ಉಪವಾಸಸ್ಯ ದೂಷಕಾಃ ॥'' ವೇಧ, ಅತಿವೇಧ, ಮಹಾವೇಧ, ಯೋಗವೇಧ ಎಂದು 4 ವೇಧಗಳು ಏಕಾದಶ್ಯುಪವಾಸವನ್ನು ದೂಷಿಸುತ್ತವೆ. 57 ಘಳಿಗೆ ದಶಮೀತಿಥಿಯಿದ್ದರೆ ವೇಧವೆಂದೂ, 58 ಘಳಿಗೆ ದಶಮಿ ಇದ್ದರೆ ಅತಿವೇಧವೆಂದೂ, 59 ಘಳಿಗೆ ಇದ್ದರೆ ಮಹಾವೇಧವೆಂದೂ, 60ಘಳಿಗೆ ಇದ್ದರೆ ಯೋಗ ವೇಧವೆಂದೂ ಹೆಸರು. (5) ತಥಾ ಚ ಏಕಾದಶೀ ದಿವಸ ಅರುಣೋದಯಕ್ಕಿಂತ ಮೊದಲು 56ನೇ ಘಳಿಗೆಯಲ್ಲಿಯೂ ಯಾವಾಗ ದಶಮೀಸಂಬಂಧವು ಏಕಾದಶೀ ದಿವಸ ತೋರುತ್ತದೋ ಆ ಏಕಾದಶಿಯು ವಿದ್ಧೈಕಾದಶಿಯೆನ್ನಿಸುತ್ತದೆ. ಆ ದಿನ ಸರ್ವಥಾ ಉಪವಾಸಮಾಡಕೂಡದು. (6) ಅದೇ ವಿಷಯದಲ್ಲಿ ತ್ರಿವಿಕ್ರಮಪಂಡಿತಾಚಾರ್ಯರು ವಿಶೇಷವನ್ನು ಹೇಳಿರುವರು- ''ಏಕಾತಿ ದಾದ್ವಶೀ ವೃದ್ಧಾ ನೋ ಚೇತ್ ವೃದ್ಧಾ ತು ಷೋಡಶ । ದ್ವ್ಯೆಕಲಿಪ್ತೀ ಸಮೇ ಹ್ರಾಸೇ ಚತುಷ್ಕಾದುತ್ತರಂ ತ್ರಿದಂ॥ ಅತಿವೃದ್ಧಾವಷ್ಟಯುಗಂ ವೃದ್ಧಾವಷ್ಟ ಸಮೇ ಚತುಃ। ದ್ವ್ಯೆಕಲಿಪ್ತೀ ಸಮೇ ಹ್ರಾಸೇ ಚತುಷ್ಕಾದುತ್ತರಂ ತ್ರಿದಂ॥'' ಇದಕ್ಕೆ ವಾದಿರಾಜಶ್ರೀಮಚ್ಚರಣರು ಹೀಗೆ ವ್ಯಾಖ್ಯಾನಮಾಡಿರುವರು- ''ಷಟ್ಪಂಚ ಘಟಿಕಾ ವೃದ್ಧಿಃ ಅತಿ ವೃದ್ಧಿರಿಹೋಚ್ಯತೇ । ಏಕದ್ವಿತ್ರ್ಯಾತ್ಮಕಾ ವೃದ್ಧಿಃ ಸಮವೃದ್ಧಿರಿತಿ ಸ್ಮೃತಾ ॥'' ಇತ್ಯಾದಿ. ಅಂದರೆ 6, ಅಥವಾ 5, 4 ಘಳಿಗೆ ದಿನೇ ದಿನೇ ವೃದ್ಧಿಯಾಗುತ್ತಾ ಬಂದರೆ ಅತಿವೃದ್ಧಿ ಎನ್ನಿಸುತ್ತದೆ. 1, 2, 3 ಘಳಿಗೆ ದಿನೇ ದಿನೇ ವೃದ್ಧಿಯಾಗುತ್ತಾ ಬಂದರೆ ಸಮವೃದ್ಧಿ ಎನ್ನಿಸುತ್ತದೆ. ಅತಿದ್ವಾದಶೀ ವೃದ್ಧಿಯಿಲ್ಲದಿದ್ದರೆ

(ಅಂದರೆ, ಸಮವೃದ್ಧಿಯಿದ್ದರೆ) 4 ಘಳಿಗೆಯಿಂದ ಮೊದಲು 1 ಘಳಿಗೆಯು (ಅಂದರೆ 56ನೇ ಘಳಿಗೆಯು) ದಶಮೀವೇಧರಹಿತವಾಗಿದ್ದರೆ ಆಗ ಆ ತಿಥಿಯು ದಶಮೀವೇಧರಹಿತವಾದ ಏಕಾದಶಿಯೆನ್ನಿಸುತ್ತದೆ. ಅತ್ಯಂತ ವೃದ್ಧಿಪಕ್ಷದಲ್ಲಿ 4 ಘಳಿಗೆಯಿಂದ ಮೊದಲು 16 ಲಿಪ್ತಿಗಳು ದಶಮೀವೇಧರಹಿತಗಳಾಗಿದ್ದರೆ ಆಗ ಏಕಾದಶೀ ತಿಥಿಯು ಶುದ್ಧಾ ಎನ್ನಿಸುತ್ತದೆ. ''ಲಿಪ್ತಿರ್ವಿಘಟಿಕಾಃ ಪಂಚ'' ಲಿಪ್ತಿಯೆಂದರೆ 5 ಘಳಿಗೆ. ಸಮವೃದ್ಧಿಪಕ್ಷದಲ್ಲಿ 4 ಘಳಿಗೆಯಿಂದ ಮೊದಲು 2 ಲಿಪ್ತಿಗಳು ವೇಧರಹಿತಗಳಾಗಿದ್ದರೆ ಆಗ ಏಕಾದಶೀ ತಿಥಿಯು ಶುದ್ಧಾ ಎನ್ನಿಸುತ್ತದೆ. ಹ್ರಾಸಪಕ್ಷದಲ್ಲಿ 4 ಘಳಿಗೆಯಿಂದ ಮೊದಲು 1 ಲಿಪ್ತಿಯು ವೇಧರಹಿತವಾಗಿದ್ದರೆ ಆಗ ಏಕಾದಶೀ ತಿಥಿಯು ಶುದ್ಧಾ ಎನ್ನಿಸುತ್ತದೆ. ಅತಿವೃದ್ಧಿ ಪಕ್ಷದಲ್ಲಿ 16 ಲಿಪ್ತಿಗಳು ವೇಧರಹಿತಗಳಾಗಿದ್ದರೂ, ಸಮವೃದ್ಧಿಪಕ್ಷದಲ್ಲಿ 8, 4 ಅಂದರೆ, 12 ಲಿಪ್ತಿಗಳು (ಅಂದರೆ 1 ಘಳಿಗೆ) ವೇಧರಹಿತಗಳಾಗಿದ್ದರೂ, ಶುದ್ಧೈಕಾದಶಿಯೆನ್ನಿಸುತ್ತದೆ. 1ನೇ ಶ್ಲೋಕವು ಘಳಿಗೆ ಲಿಪ್ತಿಗಳನ್ನು ಆಶ್ರಯಿಸಿಯೂ, 2ನೇ ಶ್ಲೋಕವು ಲಿಪ್ತಿಮಾತ್ರವನ್ನು ಆಶ್ರಯಿಸಿಯೂ ಹೊರಟಿದೆ. ತಥಾ ಚ ಅತಿವೃದ್ಧಿಪಕ್ಷದಲ್ಲಿ 16 ಲಿಪ್ತಿ ಅಂದರೆ 1 ಘಳಿಗೆಯೂ 20 ವಿಘಳಿಗೆ. ಅಂತೂ 54 ಘಳಿಗೆ 40 ವಿಘಳಿಗೆಯ ಮೇಲೆ ದಶಮೀ ತಿಥಿಯು ಆರ್ಯಭಟ ರೀತಿಯಾಗಿ ಬಂದರೂ, ವೃದ್ಧಿಮಾತ್ರದಲ್ಲಿ 1 ಘಳಿಗೆ ಅಂದರೆ 55ರ ಮೇಲೆ ಬಂದರೂ, ಸಮವೃದ್ಧಿಪಕ್ಷದಲ್ಲಿ 10 ವಿಘಳಿಗೆ ಅಂದರೆ 55-50 ವಿಘಳಿಗೆ ಬಂದರೂ, ಹ್ರಾಸಪಕ್ಷದಲ್ಲಿ 5 ವಿಘಳಿಗೆ ಅಂದರೆ 55-55 ರ ಮೇಲೆ ಬಂದರೂ ದಶಮೀವೇಧವವದೆ ಎಂದು ತಿಳಿಯಬೇಕು. ಆದಕಾರಣ ''ಚತಸ್ರೋವಿಘಟಿಕಾಃ ಪ್ರಾತರರುಣೋದಯ ಉಚ್ಯತೇ। ಅರುಣೋದಯ ವೇಲಾಯಾಂ ದಶಮೀ ದೃಶ್ಯತೇ ಯದಿ ॥'' ಎಂದು ಆಚಾರ್ಯರು ಉದಾಹರಿಸಿದ ವೇಲಾ ಶಬ್ದಕ್ಕೆ ಅತಿವೃದ್ಧಿಪಕ್ಷದಲ್ಲಿ ಅರುಣೋದಯ (60, 59, 58,57 ಘಳಿಗೆ) ಕ್ಕಿಂತ ಮೊದಲು 56ನೇ ಘಳಿಗೆ, ಮತ್ತು 55ನೇ ಘಳಿಗೆಯ ಅಂತ್ಯಭಾಗವೆಂದೂ ಅರ್ಥವು ಎಂದು ಅಂಗೀಕರಿಸಬೇಕು. ಹಾಗೆ ಸಮವೃದ್ಧಿಪಕ್ಷದಲ್ಲಿ 56ನೇ ಘಳಿಗೆ ಮಾತ್ರ, ಸಮಪಕ್ಷದಲ್ಲಿಯೂ ಕ್ಷಯಪಕ್ಷದಲ್ಲಿಯೂ 56ನೇ ಘಳಿಗೆಯಲ್ಲಿ 4ನೇ ಭಾಗಪರ್ಯಂತ ಎಂದು ವೇಲಾ ಶಬ್ದಕ್ಕೆ ಅರ್ಥವು ಎಂದು ತಿಳಿಯುತ್ತದೆ. (7) ''ಅರುಣೋದಯತಃ ಪೂರ್ವಂ ಕಲಾ ವೇಧವಿದೂಷಿತಾ। ಕಲೇತಿ ಘಟಿಕಾ ಪ್ರೋಕ್ತಾ ಮಹಾವೃದ್ಧೌ ಮಹೀಮತೇ। ಚತಸ್ರೋ ಘಟಿಕಾಃ ಪ್ರಾತಃ ಪ್ರಭಾ ಸಂದರ್ಶನಾದ್ರವೇಃ ॥'' ಎಂಬ ವಚನಗಳಿಂದ ಮಹಾವೃದ್ಧಿಯಲ್ಲಿ ಅರುಣೋದಯಕ್ಕಿಂತ ಮೊದಲೂ 1 ಘಳಿಗೆ ವೇಧದಿಂದ ದುಷ್ಟವಾದರೆ ವಿದ್ಧೈಕಾದಶಿಯೆನ್ನಿಸುತ್ತದೆ. ಪ್ರಭೆಯು ಕಾಣುವುದಕ್ಕಿಂತ ಮೊದಲು ಅಂದರೆ, 4 ಘಳಿಗೆಯಿಂದ ಮೊದಲು 56ನೇ ಘಳಿಗೆಯಲ್ಲಿ ಆದಿಭಾಗವೂ 55ನೇ ಘಳಿಗೆಯಲ್ಲಿ ಅಂತ್ಯಭಾಗವೂ ಅರುಣೋದಯಕ್ಕಿಂತ ಮೊದಲಿನ ಕಾಲವೇ ತಿಥಿವೃದ್ಧ್ಯಾದಿಗಳನ್ನು ನೋಡಿ ವೇಲಾಶಬ್ದಕ್ಕೆ ಅರ್ಥಮಾಡಬೇಕೆಂದು ತಿಳಿಯತಕ್ಕುದು. ಅಂತೂ ಅರುಣೋದಯ ವೇಧವು ಹಿಂದೆ ಹೇಳಿದ ರೀತಿಯಾಗಿ 55 ಘಳಿಗೆಯ ಅಂತಿಮಭಾಗಪರ್ಯಂತವೆಂದು ತಿಳಿಯತಕ್ಕುದು. (8) ಮತ್ತು ಸ್ಕಾಂದಪುರಾಣಾಂತರ್ಗತ ವೈಷ್ಣವಸಂಹಿತೆಯಲ್ಲಿ ಮತ್ಸ್ಯಾವತಾರವನ್ನು ಹೇಳುವಾಗ ಏಕಾದಶೀ ಪ್ರಸಂಗದಲ್ಲಿ 55ನೇ ಘಳಿಗೆಯಲ್ಲಿ ವೇಧವು ಹೇಳಲ್ಪಟ್ಟಿದೆ. ''ಪಂಚ ಪಂಚಾಶತಾದೂರ್ಧ್ವಂ ದಶಮೀ ಯದಿ ದೃಶ್ಯತೇ। ಸಂದಿಗ್ಧೈಕಾದಶೀ ಜ್ಞೇಯಾ ಪರಿತ್ಯಾಜ್ಯಾ ಮಹಾತ್ಮಭಿಃ ॥ ಪಂಚ ಪಂಚಾಶತಾದೂರ್ಧ್ವಂ ದೃಶ್ಯತೇ ಯದಿ ಭಾಸ್ಕರಿಃ । ದ್ರಷ್ಟವ್ಯಾ ಸಾ ಪ್ರಯತ್ನೇನ ವರ್ಜನೀಯಾ ನರಾಧಿಪ ॥'' 55 ಘಳಿಗೆಯ ಮೇಲೆ ದಶಮಿಯು ಇದ್ದರೆ ಸಂದಿಗ್ಧೈಕಾದಶಿಯೆಂದು ತಿಳಿಯತಕ್ಕುದು. ಮಹಾನುಭಾವರು ಸರ್ವಥಾ ಆ ದಿನ ಉಪವಾಸಮಾಡಬಾರದು. ಹಾಗೆಯೇ ''ಷಟ್ಪಂಚಾಶದಧೋ

ಯತ್ರ ಕಲಯಾ ದೃಶ್ಯತೇ ಯಮಃ । ಏಕಭುಕ್ತೋಪವಾಸೇ ಚ ಪಾರಣೇ ತತ್ಪರಂ ಪರಂ ॥'' ಅಂದರೆ, 56 ಘಳಿಗೆಯಿಂದ ಕಡಿಮೆ 1 ಕಲಾ ದಶಮೀ ತಿಥಿಯು ಇದ್ದರೂ ಏಕಾದಶೀ ದಿವಸದ ಉಪವಾಸವಿಷಯದಲ್ಲಿಯೂ ದ್ವಾದಶೀದಿನ ಪಾರಣವಿಷಯದಲ್ಲಿಯೂ ಆ ದಿನಕ್ಕಿಂತ ಮರುದಿವಸವನ್ನೇ ಸ್ವೀಕರಿಸಬೇಕು. ಆದಪ್ರಯುಕ್ತ 55 ಘಳಿಗೆ ವೇಧವು ಶಾಸ್ತ್ರದಲ್ಲಿ ಬಹುಕಡೆ ಕಂಡಪ್ರಯುಕ್ತ ಅದನ್ನನುಸರಿಸಿಯೇ ಅರುಣೋದಯವನ್ನೂ ಅನುಸರಿಸಬೇಕಾದುದರಿಂದ, ಸಂಪ್ರದಾಯಾಭಿಜ್ಞರು ''ಪಂಚ ಪಂಚಾಶದಧಿಕಾ ನವನಾಡೀ ಯದಾ ಭವೇತ್'' ಎಂದು ಹೇಳಿರುವರು. ಅದನ್ನನುಸರಿಸಿಯೇ ಸರ್ವರೂ ವೃದ್ಧಿಕ್ಷಯಗಳನ್ನು ನೋಡಿಕೊಂಡು ದಶಮೀ ವೇಧವನ್ನು ನಿಶ್ಚಯಿಸಿಕೊಳ್ಳಬೇಕು. ಅರುಣೋದಯವೇಧವನ್ನು ಮಾತ್ರ ಅಂಗೀಕರಿಸಿ ಈ ಹಿಂದೆ ಹೇಳಿದ ವೇಧವನ್ನು ಅಂಗೀಕರಿಸಿದಿದ್ದರೆ ಪುರಾಣಾದಿ ವಿರೋಧವು ಬರುವುದು. ರಾಮಾನುಜಾಚಾರ್ಯರ ಮತಕ್ಕೂ ನಮ್ಮ ಮತಕ್ಕೂ ವಿಶೇಷವಿಲ್ಲವೆಂದೂ ಆಗುವುದು. ಆದಕಾರಣ ಹೀಗೆಯೇ ಅಂಗೀಕರಿಸಬೇಕು. ಈ ವೇಧವಿಷಯದಲ್ಲಿ ತೌಳವ ಮಾಧ್ವಮಠಗಳ ಹೊರತು ಮಿಕ್ಕ ಮಾಧ್ವ ಮಠಗಳಲ್ಲಿ ಸಂಪ್ರದಾಯ ಭೇದಗಳಿರುತ್ತವೆ. ॥ 156 ॥

**ಮೂಲ ॥ ಕ್ಷಯೇ ವಾಽಪ್ಯಥವಾ ವೃದ್ಧೌ ಸಂಪ್ರಾಪ್ತೇ ವಾ ದಿನಕ್ಷಯೇ ।**
**ಉಪೋಷ್ಯಾ ದ್ವಾದಶೀ ಪುಣ್ಯಾ ಪೂರ್ವವಿದ್ಧಾಂ ಪರಿತ್ಯಜೇತ್ ॥ ೧೫೭ ॥**

**ಅರ್ಥ ॥** ಏಕಾದಶಿಯ ಪೂರ್ವೋತ್ತರ ತಿಥಿಗಳಿಗೆ ಕ್ಷಯವಾಗಲೀ, ವೃದ್ಧಿಯಾಗಲೀ ಅರುಣೋದಯ ಕಾಲದಲ್ಲಿ ವೇಧವಿದ್ದು ದಿನಕ್ಷಯವಾಗಲೀ ಪ್ರಾಪ್ತವಾಗೋಣ (ಏಕಾದಶಿಗೆ ದಶಮೀವೇಧವಿರುವಾಗ ಅಂತಹ ಏಕಾದಶಿಯಲ್ಲಿ ಉಪವಾಸವನ್ನು ಮಾಡದೆ ಆ ದ್ವಾದಶಿಯಲ್ಲಿ ಉಪವಾಸ ಮಾಡತಕ್ಕುದು. ಹಾಗೆ ಮಾಡಿದಲ್ಲಿ ಆ ಏಕಾದಶಿಯಲ್ಲಿ ಮಾಡಬೇಕಾಗಿದ್ದ ಉಪವಾಸದ ಪುಣ್ಯವು ಪ್ರಾಪ್ತವಾಗುವುದು.) ದ್ವಾದಶಿಯೇ ಉಪವಾಸಮಾಡಿದರೆ ಪುಣ್ಯವು ಲಭಿಸುವುದು. ದಶಮೀ ಸಂಬದ್ಧವಾದ ಏಕಾದಶಿಯನ್ನು ಪರಿತ್ಯಾಗಮಾಡಬೇಕು. (ಅಂದರೆ ಆ ದಿನ ಉಪವಾಸ ಮಾಡಬಾರದು.)

**ತಾತ್ಪರ್ಯ ॥** ದಶಮೀದಿವಸ ಸೂರ್ಯೋದಯದಿಂದ ಮತ್ತೊಂದು ಸೂರ್ಯೋದಯದ ಒಳಗೆ 3 ತಿಥಿಗಳು ಮುಟ್ಟಿದರೆ ದಿನಕ್ಷಯವೆನ್ನಿಸುತ್ತದೆ. ಅಂದರೆ- ಆದಿನ ಬೆಳಿಗ್ಗೆ ಸ್ವಲ್ಪ ದಶಮೀ ಇದ್ದು ಅನಂತರ ಏಕಾದಶೀ ತಿಥಿಯು 2ನೇ ಸೂರ್ಯೋದಯಕ್ಕೆ ಸ್ವಲ್ಪ ಮುಂಚಿತವಾಗಿಯೇ ಮುಗಿದುಹೋಗಿ, ಆ 2ನೇ ಸೂರ್ಯೋದಯ ಕಾಲದಲ್ಲಿ ದ್ವಾದಶಿಯು ಸ್ವಲ್ಪ ಸಂದಿರುವುದು. ಇದು ದಿನಕ್ಷಯವೆನ್ನಿಸುತ್ತದೆ. ''ದ್ವೌ ತಿಥ್ಯಂತಾವೇಕರಾತ್ರೇ ಯಸ್ಮಿನ್ ಸ ಸ್ಯಾದ್ದಿನತ್ರಕ್ಷಯಃ । ಏಕಸ್ಮಿನ್ ಸಾವನೇ (ವಾಸರೇ) ತ್ವಹ್ನಿ ತಿಥೀನಾಂ ತ್ರಿತಯಂ ಯದಾ ॥ ತದಾ ದಿನಕ್ಷಯಃ ಪ್ರೋಕ್ತಸ್ತತ್ರ ಸಾಹಸ್ರಿಕಂ ಫಲಂ ॥'' ಅಂದರೆ- ಕಲಾಮಾತ್ರ ನವಮೀ ತಿಥಿಯು; ಅದರಮೇಲೆ ದಶಮೀತಿಥಿಯು ಸ್ವಲ್ಪ ರಾತ್ರಿ ಇರುವಾಗ ಏಕಾದಶೀ ತಿಥಿಯು; ಹೀಗೆ ಮರುದಿವಷ ಉಪವಾಸಮಾಡಬೇಕು; ಎಂದರ್ಥವೆಂದು ಕೆಲವರು ಅನ್ನುವರು. ಬೇರೆಯವರು ಅರುಣೋದಯ ಕಾಲದಲ್ಲಿ ದಶಮೀ ತಿಥಿಯು, ಆಮೇಲೆ ಏಕಾದಶೀ ತಿಥಿಯು. ಸ್ವಲ್ಪರಾತ್ರಿ ಇರುವಾಗ ದ್ವಾದಶೀ, ಹೀಗಿದ್ದರೂ ಮರುದಿವಸ ಉಪವಾಸ ಮಾಡಬೇಕು ಎಂದು ಅನ್ನುವರು. ಹೀಗೆ ಪಾದ್ಮದಲ್ಲಿದೆ. ॥ 157 ॥

**ಮೂಲ ॥ ಪೂರ್ವವಿದ್ಧಾಂ ಪ್ರಕುರ್ವಾಣೋ ನರೋ ಧರ್ಮಾನ್ನಕೃಂತತಿ ।**
**ಸಂತತೇಸ್ತು ವಿನಾಶಾಯ ಸಂಪದೋ ಹರಣಾಯ ಚ ॥ ೧೫೮ ॥**

**ಅರ್ಥ** ॥ (ಹಿಂದೆ ಹೇಳಿದ ಪ್ರಕಾರ) ದಶಮೀ ವೇಧವುಳ್ಳ ಏಕಾದಶೀ ದಿವಸ ಉಪವಾಸ ಮಾಡತಕ್ಕ ಮನುಷ್ಯನು (ಅನೇಕಕಾಲದಲ್ಲಿ ತಾನು ಮಾಡಿದ್ದ ಶಾಸ್ತ್ರವಿಹಿತ) ಧರ್ಮಗಳನ್ನು ವಿನಾಶಗೊಳಿಸುತ್ತಾನೆ. ಆತನು ಸಂತತಿಯ ವಿನಾಶಕ್ಕೂ ಸಂಪತ್ತುಗಳ ನಾಶಕ್ಕೂ ಕಾರಣನು ಆಗುತ್ತಾನೆ. (ಆದಕಾರಣ ದಶಮೀ ವಿದ್ಧವಾದ ಏಕಾದಶೀ ದಿವಸ ಉಪವಾಸ ಮಾಡಬಾರದು.)॥ 158 ॥

**ಮೂಲ ॥ ಕಲಾ ವೇಧೇ ತು (ಧೇಽಪಿ) ವಿಪ್ರೇಂದ್ರ**
**ದಶಮ್ಯೈಕಾದಶೀಂ ತ್ಯಜೇತ್ । ದಶಮ್ಯೈಕಾದಶೀ ಯದಿ)**
**ಸುರಾಯಾ ಬಿಂದುನಾ ಸ್ಪೃಷ್ಟಂ**
**ಗಂಗಾಂಭ ಇವ ಸಂತ್ಯಜೇತ್ ॥ ೧೫೯ ॥**

ಅ ॥ ಎಲೋ ಬ್ರಾಹ್ಮಣಶ್ರೇಷ್ಠನೇ ದಶಮಿಯ ಲೇಶದಿಂದ ವೇಧವಿದ್ದರೂ ಆ ಏಕಾದಶಿಯನ್ನು ಬಿಡಬೇಕು. ಮದ್ಯಗಳ ಲೇಶದಿಂದ ಮುಟ್ಟಲ್ಪಟ್ಟ ಭಾಗೀರಥೀ ಜಲವನ್ನೆಂಬಂತೆ ಬಿಡಬೇಕು ॥ 159 ॥

**ಮೂಲ ॥ ಶ್ವದೃತೌ ಪಂಚಗವ್ಯಂ ಚ (ವ್ಯಾ)**
**ದಶಮ್ಯಾ ದೂಷಿತಾಂ ತ್ಯಜೇತ್ ।**
**ಏಕಾದಶೀಂ ದ್ವಿಜಶ್ರೇಷ್ಠಾಃ**
**ಪಕ್ಷಯೋರುಭಯೋರಪಿ ॥ ೧೬೦ ॥**

**ಅರ್ಥ** ॥ ಎಲೋ ಬ್ರಾಹ್ಮಣಶ್ರೇಷ್ಠರೇ! ಶುಕ್ಲ ಕೃಷ್ಣ ಎರಡು ಪಕ್ಷಗಳಲ್ಲಿಯೂ ದಶಮಿಯಿಂದ ದೂಷಿಸಲ್ಪಟ್ಟ ಏಕಾದಶಿಯನ್ನು ನಾಯಿಯ ಚರ್ಮದಲ್ಲಿರುವ ಪಂಚಗವ್ಯವನ್ನೆಂಬಂತೆ ಬಿಡಬೇಕು. (ಆ ದಿವಸ ಉಪವಾಸ ಮಾಡಬಾರದು)॥ 160 ॥

**ಮೂಲ ॥ ತಸ್ಮಾದ್ವಿಪ್ರಾ ನ ವಿದ್ಧಾ ಹಿ ಕರ್ತವ್ಯೈಕಾದಶೀ ಕ್ವಚಿತ್ ।**
**(ತಸ್ಮಾದ್ವಿಪ್ರಾ ನ ವಿದ್ಧೈಕಾದಶೀ ಕಾರ್ಯಾ ಹಿ ಕುತ್ರಚಿತ್ ।)**
**ವಿದ್ಧಾ ಹಂತಿ ಪುರಾ ಪುಣ್ಯಂ ಶ್ರಾದ್ಧಂ ಚ ವೃಷಲೀಪತಿಃ ॥ ೧೬೧ ॥**

**ಅರ್ಥ** ॥ ಎಲೋ ಬ್ರಾಹ್ಮಣರೇ! ಯಾವ ಕಾರಣದಿಂದ ಅನೇಕ ದೋಷಗಳಿವೆಯೋ, ಆದಕಾರಣ ದಶಮೀವಿದ್ಧವಾದ ಏಕಾದಶಿಯು (ಆ ಏಕಾದಶ್ಯುಪವಾಸವು) ಪೂರ್ವದಲ್ಲಿ ಮಾಡಿದ್ದ ಪುಣ್ಯವನ್ನು ವಿನಾಶಗೊಳಿಸುತ್ತದೆ. ಶೂದ್ರಸ್ತ್ರೀಸಂಗ ಮಾಡುವ ಬ್ರಾಹ್ಮಣನು ಅಥವಾ ರಜಸ್ವಲೆಯಾದ ಕನ್ನಿಕೆಯ ಗಂಡನು ಶ್ರಾದ್ಧವನ್ನು ಹೇಗೆ ಹಾಳು ಮಾಡುತ್ತಾನೋ, ಹಾಗೆಯೇ. (ಆದುದರಿಂದ ವಿದ್ಧೈಕಾದಶೀದಿವಸ ಉಪವಾಸವನ್ನು ಸರ್ವಥಾ ಮಾಡಕೂಡದು) ॥ 161 ॥

**ಮೂಲ ॥ ಜಪ್ತಂ ದತ್ತಂ ಹುತಂ ಸ್ನಾತಂ ತಥಾ ಪೂಜಾ ಕೃತಾ ಹರೇಃ ।**
**ತತ್ಸರ್ವಂ ವಿಲಯಂ ಯಾತಿ ತಮಃ ಸೂರ್ಯೋದಯೇ ಯಥಾ॥ ೧೬೨ ॥**

**ಅರ್ಥ ॥** ಜಪಿಸಲ್ಪಟ್ಟ ಗಾಯತ್ರೀ ಮೊದಲಾದುದೂ, ದಾನಮೊದಲಾದುದೂ, ಹೋಮ ಮೊದಲಾದುದೂ, ತೀರ್ಥಸ್ನಾನ ಮೊದಲಾದುದೂ, ಹಾಗೆಯೇ ಶ್ರೀಹರಿಪೂಜೆಯೂ ಅವೆಲ್ಲವೂ, ಸೂರ್ಯೋದಯವಾಗುವಾಗ ಅಂಧಕಾರದಂತೆ (ವಿದ್ಧೈಕಾದಶೀ ದಿನ ಉಪವಾಸ ಮಾಡೋಣದರಿಂದ) ನಾಶವನ್ನು ಹೊಂದುತ್ತವೆ. ॥ 162 ॥

**ಮೂಲ ॥ ಏಕಾದಶ್ಯಾಂ (ಶ್ಯಾ) ಯದಾ ಬ್ರಹ್ಮನ್ ದಿನಕ್ಷಯ ತಿಥಿರ್ಭವೇತ್ ।**
**ಉಪೋಷ್ಯಾ ದ್ವಾದಶೀ ತತ್ರ (ಪುಣ್ಯಾ) ತ್ರಯೋದಶ್ಯಾಂ ತು ಪಾರಣಂ ॥**
**॥ ೧೬೩ ॥**

**ಅರ್ಥ ॥** ಎಲೋ ಬ್ರಾಹ್ಮಣನೇ! ಯಾವಾಗ ಏಕಾದಶೀ ದಿವಸ (ಹಿಂದೆ ಹೇಳಿದ ಪ್ರಕಾರ) 3 ದಿನಗಳ ಸಂಪರ್ಕರೂಪವಾದ ದಿನಕ್ಷಯ ತಿಥಿಯು ಆಗುವುದೋ ಆಗ ದ್ವಾದಶಿಯು ಉಪವಾಸಕ್ಕೆ ಯೋಗ್ಯವು. (ಆಮೇಲೆ) ತ್ರಯೋದಶೀದಿವಸ ಪಾರಣಮಾಡಬೇಕು.

**ತಾತ್ಪರ್ಯ ॥** ''ದಿನಕ್ಷಯಾತ್ಪರಾ ಯಾ ತು ದ್ವಾದಶೀ ಸಮುಪೋಷಿತಾ । ಇತರೈಕಾದಶೀಭ್ಯೋಽಸ್ಯಾಃ ಸಹಸ್ರಗುಣಿತಂ ಫಲಂ ॥'' ದಿನಕ್ಷಯದಿಂದ ಪರವಾದ ದ್ವಾದಶೀ ದಿನ ಉಪವಾಸ ಮಾಡಿದರೆ ಬೇರೆ ಏಕಾದಶಿಗಳಿಗಿಂತ ಸಹಸ್ರಪಾಲು ಫಲವು. ಎಂದು ಸಮಾಖ್ಯಾವಚನವು. ॥ 163 ॥

ಅರುಣೋದಯ ಕಾಲದಲ್ಲಿ ದಶಮೀವಿದ್ಧವಾದ ಏಕಾದಶಿದಿವಸ ಉಪವಾಸ ಮಾಡಬಾರದು. ಪಾಡ್ಯ ಮೊದಲಾದ ತಿಥಿಗಳಂತೆಯೇ ಸೂರ್ಯೋದಯ ಕಾಲದಲ್ಲಿ ವಿದ್ಧವಾದುದಲ್ಲ, ಎಂದು ನಿರೂಪಿಸುತ್ತಾರೆ:-

**ಮೂಲ ॥ ಪ್ರತಿಪತ್ಪ್ರಭೃತಯಸ್ಸರ್ವಾಃ ಉದಯಾದುದಯಾದ್ರವೇಃ ।**
**ಸಂಪೂರ್ಣಾ ಇತಿ ವಿಜ್ಞೇಯಾಃ ಹರಿವಾಸರ ವರ್ಜಿತಾಃ ॥ ೧೬೪ ॥**

**ಅರ್ಥ ॥** ಏಕಾದಶೀ ಹೊರತು ಪಾಡ್ಯ ಮೊದಲಾದ ಎಲ್ಲಾ ತಿಥಿಗಳು ಸೂರ್ಯೋದಯದಿಂದ ಮರುದಿನದ ಸೂರ್ಯೋದಯತನಕ ಸಂಪೂರ್ಣಗಳೆಂದು ತಿಳಿಯಬೇಕು.

**ತಾತ್ಪರ್ಯ ॥** ಪಾಡ್ಯ ಮೊದಲಾದ ತಿಥಿಗಳು ಆಯಾಯ ದಿನಗಳಲ್ಲಿ ಆಗತಕ್ಕ ಸೂರ್ಯೋದಯ ಕಾಲಗಳಲ್ಲಿದ್ದ ಮಾತ್ರಕ್ಕೆ 2ನೇ ಸೂರ್ಯೋದಯ ತನಕವೂ ಆ ತಿಥಿಯೇ ಸಂಪೂರ್ಣವಾಗಿರುತ್ತದೆ ಎಂದು ಭಾವಿಸತಕ್ಕುದು. ದಶಮೀ ತಿಥಿಯು ಅರುಣೋದಯ ಕಾಲದಲ್ಲಿದ್ದ ಮಾತ್ರಕ್ಕೆ ಸಂಪೂರ್ಣ ಎನ್ನಿಸುಕೊಳ್ಳುತ್ತದೆ. ಅಂದರೆ ಆ ದಿನ ಅರುಣೋದಯಕ್ಕೆ ಸ್ವಲ್ಪ ದಶಮಿಯು ವ್ಯಾಪಿಸಿಕೊಂಡಿದ್ದು ಆ ಮೇಲೆ 60 ಘಳಿಗೆ ಏಕಾದಶಿಯು ಇದ್ದರೂ ಆಚರಣೆಗೆ ಆ ದಿನ ದಶಮಿಯೆಂದೇ ಭಾವಿಸಿಕೊಳ್ಳಬೇಕು. ॥ 164 ॥

**ಮೂಲ ॥ (ಅರುಣೋದಯವೇಲಾಯಾಂ ದಶಮೀ ದೃಶ್ಯತೇ ಯದಿ ।**
**ಪಾಪಮೂಲಂ ತದಾ ಜ್ಞೇಯಮೇಕಾದಶ್ಯುಪವಾಸನಂ ॥ ೧೬೫ ॥**

**ಅರ್ಥ ॥** (ಅರುಣೋದಯವಾಗುವಾಗ ದಶಮಿಯು ಕಾಣಲ್ಪಟ್ಟರೆ ಆ ಏಕಾದಶೀ ದಿವಸ ಉಪವಾಸವು ಸರ್ವಪಾಪಗಳಿಗೆ ಕಾರಣವೆಂದು ತಿಳಿಯಬೇಕು॥ 165 ॥

**ಮೂಲ ।। ಅರುಣೋದಯಕಾಲೇ ತು ದಶಮೀ ಯದಿ ದೃಶ್ಯತೇ ।**
**ಪಾಪಮೂಲಂ ತದಾ ಜ್ಞೇಯಮೇಕಾದಶ್ಯುಪವಾಸನಂ (ಸಿನಾಂ) ।। ೧೬೬ ।।**

**ಅರ್ಥ ।।** ಏಕಾದಶೀ ದಿವಸ ಅರುಣೋದಯಕಾಲದಲ್ಲಿ ದಶಮೀ ಸಂಬಂಧವು ಕಾಣಲ್ಪಟ್ಟರೆ ಆವಾಗ (ಅರುಣೋದಯಕಾಲದಲ್ಲಿ ದಶಮೀಸಂಬಂಧವಿರುವಾಗ) ಆ ಏಕಾದಶ್ಯುಪವಾಸ ಮಾಡುವವರಿಗೆ ಅದು ಪಾಪಗಳಿಗೆ ಮೂಲಕಾರಣವೆಂದು ತಿಳಿಯಬೇಕು. (ಆದಕಾರಣ ಅರುಣೋದಯ ಕಾಲದಲ್ಲಿ ದಶಮೀ ಸಂಬದ್ಧವಾದ ಏಕಾದಶ್ಯುಪವಾಸವನ್ನು ಮಾಡಬಾರದು।)

**ತಾತ್ಪರ್ಯ ।।** ''ಅರುಣೋದಯವೇಲಾಯಾಂ ದಶಮೀ ಯದಿ ಸಂಯುತಾ । ಸಂಪೃಕ್ತೈಕಾದಶೀಂ ತಾಂ ತು ಮೋಹಿನ್ಯೈ ದತ್ತವಾನ್ ಹರಿಃ।।'' ಇತಿ ಗೋಭಿಲಃ ।। ಅಂದರೆ- ಅರುಣೋದಯ ವೇಳೆಯಲ್ಲಿ ದಶಮಿಯು ಕೂಡಿದ್ದರೆ ಆ ಸಂಪೃಕ್ತೈಕಾದಶಿಯನ್ನು ಮೋಹಿನಿಗೋಸ್ಕರ ಶ್ರೀಹರಿಯು ಕೊಟ್ಟನು. ''ಅರುಣೋದಯಕಾಲೇ ತು ದಶಮೀ ಯದಿ ದೃಶ್ಯತೇ । ಸಾ ವಿದ್ಧೈಕಾದಶೀ ತತ್ರ ಪಾಪಮೂಲಮುಪೋಷಣಂ ।। ಅರುಣೋದಯವೇಲಾಯಾಂ ದಶಾಗಂಧೋ ಭವೇದ್ಯದಿ । ಪ್ರದುಷ್ಟಂ ತತ್ಪ್ರಯತ್ನೇನ ವರ್ಜನೀಯಂ ನರಾಧಿಪಃ ।।'' ಎಂದು ಭವಿಷ್ಯತ್ಪುರಾಣದಲ್ಲಿ, ಅಂದರೆ- ಅರುಣೋದಯ ಕಾಲದಲ್ಲಿ ದಶಮಿಯು ಇದ್ದರೆ ಅದು ವಿದ್ಧೈಕಾದಶಿಯೆನ್ನಿಸುತ್ತದೆ. ಆ ದಿನ ಉಪವಾಸವು ಪಾಪಕ್ಕೇನೇ ಕಾರಣವು. ಅರುಣೋದಯ ವೇಳೆಯಲ್ಲಿ ದಶಮಿಯ ಲೇಶವಿದ್ದರೂ ದುಷ್ಟವಾದ ಆ ದಿವಸವನ್ನು ಪ್ರಯತ್ನದಿಂದ ಬಿಡಬೇಕು. ''ಅರುಣೋದಯವೇಲಾಯಾಂ ದಶಮೀ ಕಲಯಾಽಪಿ ವಾ। ವಿದ್ಧಾಂ ಪರಿತ್ಯಜೇನ್ನಿತ್ಯಂ ಶುದ್ಧಾಮುಪವಸೇದ್ಗೃಹೀ।।'' ಇದು ಮೊದಲಾದ ಅನೇಕ ಪ್ರಮಾಣಗಳಲ್ಲಿ ಏಕಾದಶೀ ದಿನ ಅರುಣೋದಯವಾಗುವಾಗ ದಶಮೀ ಸಂಬಂಧವು ಕಾಣಲ್ಪಟ್ಟರೆ ಆ ಏಕಾದಶೀ ಉಪವಾಸವು ನಿಷಿದ್ಧವೆಂದುಕ್ತವಾಗಿದೆ. ।। 166 ।।

**ಮೂಲ ।। ಅರುಣೋದಯವೇಲಾಯಾಂ (ಕಾಲೇ ತು)**
**ದಶಮೀ ಯದಿ ದೃಶ್ಯತೇ ।**
**ನ ತತ್ರೈಕಾದಶೀ ಕಾರ್ಯಾ**
**ಧರ್ಮಕಾಮಾರ್ಥನಾಶಿನಿಃ ।। ೧೬೭ ।।**

**ಅರ್ಥ ।।** ಏಕಾದಶೀ ದಿವಸ ಅರುಣೋದಯವಾಗುವಾಗ ದಶಮೀ ಸಂಬಂಧವು ಕಾಣಲ್ಪಟ್ಟರೆ ಆ ದಿನ ಏಕಾದಶ್ಯುಪವಾಸವು ಮಾಡಬಾರದು. ಧರ್ಮ, ಕಾಮ, ಅರ್ಥಗಳನ್ನು ನಾಶಪಡಿಸುವುದು. ।। 167 ।।

ಅರುಣೋದಯಕಾಲದ ಸ್ವರೂಪವನ್ನು ಪ್ರಮಾಣದಿಂದ ನಿರೂಪಿಸುತ್ತಾರೆ-

**ಮೂಲ ।। ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ ।**
**ಯತೀನಾಂ ಸ್ನಾನಕಾಲೋಽಯಂ ಗಂಗಾಂಭಃ ಸದೃಶಃ ಸ್ಮೃತಃ ।। ೧೬೮ ।।**

**ಅರ್ಥ ।।** ಅರುಣೋದಯಕಾಲವು ಯಾವುದೆಂದರೆ- ಪ್ರಾತಃಕಾಲದಲ್ಲಿ (ಸೂರ್ಯೋದಯ ದಿಂದ) ಮೊದಲು ಯಾವುದು (4) ನಾಲ್ಕು ಘಳಿಗೆ ಇವೆಯೋ (ಆಕಾಲವು) ಅರುಣೋದಯವೆಂದು ಹೇಳಲ್ಪಡುತ್ತದೆ. (ಯಾವ ಕಾರಣದಿಂದ) ಭಾಗೀರಥಿಯ ನೀರಿಗೆ ಸದೃಶವಾಗಿ ಅಂದರೆ

ಭಾಗೀರಥಿಯಲ್ಲಿ ಸ್ನಾನಮಾಡಿದ ಫಲವನ್ನು ಕೊಡುವುದಾಗಿ ಸ್ಮೃತವಾಗಿಯದೋ (ಆದಕಾರಣ) ಇದು ಯತಿಗಳ ಸ್ನಾನಕಾಲವು ॥ 168 ॥

**ಮೂಲ ॥ ಉದಯಾತ್ಪ್ರಾಗ್ಯದಾ ವಿಪ್ರಾ★ ಮುಹೂರ್ತದ್ವಯ ಸಂಯುತಾ ।**
**ಸಂಪೂರ್ಣೈಕಾದಶೀ ನಾಮ ತತ್ರೈವೋಪವಸೇದ್ಗೃಹೀ ॥ ೧೬೯ ॥**

**ಅರ್ಥ ॥** ಎಲೋ ಬ್ರಾಹ್ಮಣರೇ! ಸೂರ್ಯೋದಯಕ್ಕಿಂತ ಮುಂಚೆ (ವ್ಯುತ್ಕ್ರಮದಿಂದ), ಯಾವಾಗ ಎರಡು ಮುಹೂರ್ತಗಳಿಂದ (ಅಂದರೆ - 5ಘಳಿಗೆಗಳಿಂದ) ಯುಕ್ತವಾಗುತ್ತದೋ, ಆಗ ಆ ಏಕಾದಶಿಯು ಸಂಪೂರ್ಣೈಕಾದಶಿಯೆನ್ನಿಸುತ್ತದೆ. (ಅಂದರೆ- 55 ಘಳಿಗೆ ಒಳಗೆ ದಶಮಿಯು ಇದ್ದು ಆಮೇಲೆ ಏಕಾದಶಿಯು ಇದ್ದರೆ ಶುದ್ಧೈಕಾದಶಿಯೆನ್ನಿಸುತ್ತದೆ. ಆದಕಾರಣ) ಸರ್ವರೂ ಆ ದಿವಸದಲ್ಲಿಯೇ ಉಪವಾಸಮಾಡಬೇಕು॥ 169 ॥

ಹೀಗೆ ವೇಧೆಯಿಲ್ಲದಿರುವ ಶುದ್ಧೈಕಾದಶೀ ದಿವಸ ಉಪವಾಸಮಾಡಬೇಕೆಂದು ಹೇಳಿ ಸಂಧಿಗ್ಧೈಕಾದಶೀ ಸ್ವರೂಪವನ್ನು ಹೇಳುತ್ತಾ ಅದನ್ನು ಬಿಡಬೇಕೆಂದು ನಿರೂಪಿಸುತ್ತಾರೆ.

**ಮೂಲ ॥ ಉದಯಾತ್ಪ್ರಾಕ್ ತ್ರಿಘಟಿಕಾ ವ್ಯಾಪಿನ್ಯೇಕಾದಶೀ ಯದಾ ।**
**ಸಂದಿಗ್ಧೈಕಾದಶೀ ನಾಮ ವರ್ಜ್ಯಾ ಧರ್ಮಾರ್ಥನಾಶನೀ ॥ ೧೭೦ ॥**
**(ಸಂಕೀರ್ಣೈಕಾದಶೀ ನಾಮ ವರ್ಜ್ಯಾ ಧರ್ಮಾರ್ಥಕಾಂಕ್ಷಿಭಿಃ)**

**ಅರ್ಥ ॥** ಸೂರ್ಯೋದಯಕ್ಕಿಂತ ಮೊದಲು 57 ಘಳಿಗೆಯ ಮೇಲಿನ 3 ಘಳಿಗೆಗಳಲ್ಲಿ (ತ್ರಿಘಟಿಕೆಯಲ್ಲಿ) ಏಕಾದಶಿಯು ಯಾವಾಗ ವ್ಯಾಪಿಸಿಕೊಂಡಿರುತ್ತದೋ ಆಗ ಏಕಾದಶಿಯು ಸಂಧಿಗ್ಧೈಕಾದಶಿಯೆನ್ನಿಸುತ್ತದೆ. (ಸಂಕೀರ್ಣೈಕಾದಶಿಯೆನ್ನಿಸುತ್ತದೆ. ಧರ್ಮಾರ್ಥಕಾಂಕ್ಷಿಗಳು ಅದನ್ನು ಬಿಡಬೇಕು.) ಆ ಏಕಾದಶಿಯನ್ನು ಬಿಡಬೇಕು. ಆ ದಿನ ಆಚರಣೆಗೆ ದಶಮಿಯು. ಆದಿನ ಉಪವಾಸ ಮಾಡಿದರೆ ಅದು ತಾನು ಮಾಡಿದ ಧರ್ಮಗಳಿಗೂ ಅರ್ಥಗಳಿಗೂ ನಾಶಕವಾಗುತ್ತದೆ. ॥ 170 ॥

**ಮೂಲ ॥ ಪುತ್ರಪೌತ್ರ ಪ್ರ(ವಿ)ವೃದ್ಧ್ಯರ್ಥಂ ದ್ವಾದಶ್ಯಾಮುಪವಾಸಯೇತ್।**
**ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಂ ॥ ೧೭೧ ॥**

**ಅರ್ಥ ॥** ಮಕ್ಕಳು ಮೊಮ್ಮಕ್ಕಳು ಅಭಿವೃದ್ಧಿಯಾಗುವುದಕ್ಕಾಗಿ ಏಕಾದಶಿಗೆ ದಶಮೀವೇಧವಿದ್ದರೆ ದ್ವಾದಶೀ ದಿವಸ ಉಪವಾಸ ಮಾಡಬೇಕು. ಆ ದಿವಸ(100) ನೂರಾರು ಯಾಗಮಾಡಿದ ಪುಣ್ಯವು ಲಭಿಸುವುದು. ತ್ರಯೋದಶೀ ದಿವಸ ಪಾರಣಮಾಡಬೇಕು. ॥ 171 ॥

**ಮೂಲ ॥ ಉದಯಾತ್ಪ್ರಾಕ್ ದ್ವಿಘಟಿಕಾ ವ್ಯಾಪಿನ್ಯೇಕಾದಶೀ ಯದಾ (ಯದಿ) ।**
**ಸಂಕೀರ್ಣೈಕಾದಶೀ ನಾಮ**

---

(★ ೨ ಕ್ಷಣಗಳಿಗೆ ಲವವೆಂದೂ, ೨ ಲವಗಳಿಗೆ ನಿಮೇಷವೆಂದೂ, ೧೮ ನಿಮೇಷಗಳಿಗೆ ಕಾಷ್ಠಾ ಎಂದೂ, ೩೦ ಕಾಷ್ಠಾಕ್ಕೆ ಕಲಾ ಎಂದೂ, ೬೦ ಕಲೆಗಳಿಗೆ ಕ್ಷಣವೆಂದೂ, ೧೨ ಕ್ಷಣಗಳಿಗೆ ಮುಹೂರ್ತವೆಂದೂ ಹೆಸರು. 'ಅಷ್ಟಾದಶ ನಿಮೇಷಾಸ್ತು ಕಾಷ್ಠಾ ತ್ರಿಂಶತ್ತುತಾಃ ಕಲಾ । ತಾಸ್ತು ತ್ರಿಂಶತ್ ಕ್ಷಣಸ್ತೇತು ಮುಹೂರ್ತೋ ದ್ವಾದಶಾಸ್ತ್ರಿಯಾಂ ॥'' ಎಂದು ಕೋಶವು.)

ವರ್ಜ್ಯಾ ಧರ್ಮಾರ್ಥಕಾಂಕ್ಷಿಭಿಃ (ನಾಶಿನೀ)
(ಸಂದಿಗ್ಧೈಕಾದಶೀ ನಾಮ ನ ತತ್ರೋಪವಸೇದ್ಗಹೀ) ॥ ೧೭೨ ॥

**ಅರ್ಥ** ॥ ಸೂರ್ಯೋದಯಕ್ಕಿಂತ ಮೊದಲು ಯಾವಾಗ 2 ಗಳಿಗೆಯಲ್ಲಿ ಏಕಾದಶಿಯು ವ್ಯಾಪಿಸಿ ಕೊಂಡಿರುತ್ತದೋ, ಅದು ಸಂಕೀರ್ಣೈಕಾದಶಿಯೆನ್ನಿಸುತ್ತದೆ. ಧರ್ಮ ಅರ್ಥಾದಿಗಳನ್ನಪೇಕ್ಷಿಸುವವರು ಅದನ್ನು ಬಿಡಬೇಕು. (ಅಥವಾ ಧರ್ಮ ಅರ್ಥಗಳನ್ನು ನಾಶಪಡಿಸುವದು, ಅದು ತ್ಯಾಜ್ಯವು.) ॥172॥

**ಮೂಲ** ॥ ಪುತ್ರರಾಜ್ಯಪ್ರ(ವಿ)ವೃದ್ಧ್ಯರ್ಥಂ ದ್ವಾದಶ್ಯಾಮುಪವಾಸನಂ ।
(ಪುತ್ರಪೌತ್ರಪ್ರವೃದ್ಧ್ಯರ್ಥಂ ದ್ವಾದಶ್ಯಾಮುಪವಾಸಯೇತ್)
ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಂ ॥ ೧೭೩ ॥

**ಅರ್ಥ** ॥ ಪುತ್ರಸಾಮ್ರಾಜ್ಯವು ಅಭಿವೃದ್ಧಿಯಾಗುವುದಕ್ಕೋಸ್ಕರ (ಏಕಾದಶೀ ದಿವಸ ಹಿಂದೆ ಹೇಳಿದ ಪ್ರಕಾರ ವೇಧ ಸಂದೇಹವಿದ್ದರೆ ಮರುದಿವಸವೇ) ದ್ವಾದಶೀ ದಿವಸ ಉಪವಾಸ ಮಾಡಬೇಕು. (ತ್ರಯೋದಶೀ ದಿವಸ ಪಾರಣಮಾಡಿದರೆ) ನೂರಾರು ಯಾಗಮಾಡಿದ ಪುಣ್ಯವು ಲಭಿಸುವುದರಿಂದ ತ್ರಯೋದಶೀ ದಿವಸ ಪಾರಣ ಮಾಡಬೇಕು. ॥ 173 ॥

**ಮೂಲ** ॥ ದಶಮೀಶೇಷಸಂಯುಕ್ತಾ ಗಾಂಧಾರ್ಯಾ ಸಮುಪೋಷಿತಾ ।
ತಸ್ಯಾಃ ಪುತ್ರ ಶತಂ ನಷ್ಟಂ ತಸ್ಮಾತ್ತಾಂ ಪರಿವರ್ಜಯೇತ್ ॥ ೧೭೪ ॥

**ಅರ್ಥ** ॥ ಗಾಂಧಾರಿಯಿಂದ ದಶಮಿಯ ಶೇಷದಿಂದ ಸಂಯುಕ್ತವಾದುದು (ಅಂದರೆ ಅರುಣೋದಯವಾಗುವಾಗ ದಶಮಿಯಿಂದ ವಿದ್ಧವಾದ ಏಕಾದಶಿಯು) ಉಪವಾಸ ಮಾಡಲ್ಪಟ್ಟಿತು. ತನ್ನಿಮಿತ್ತವಾಗಿ ದುರ್ಯೋಧನ ಮೊದಲಾದ ನೂರು(100) ಮಕ್ಕಳು ನಾಶವನ್ನು ಹೊಂದಿದರು. ಆದಕಾರಣ ಅರುಣೋದಯದಲ್ಲಿ ದಶಮೀಶೇಷಸಂಯುಕ್ತವಾದ ಏಕಾದಶಿಯನ್ನು ಬಿಡಬೇಕು. ಅಂದರೆ ಆ ದಿವಸ ಉಪವಾಸ ಮಾಡಬಾರದು.॥ 174 ॥

**ಮೂಲ** ॥ ಅಪೀಷದ್ದಶಮೀವಿದ್ಧಾ ಸದಾ ತಾಂ ಪರಿವರ್ಜಯೇತ್ ।
ಸುರಾಬಿಂದುಸಮಾಯುಕ್ತಾಂ ಪ್ರವದಂತಿ ಮನೀಷಿಣಃ ॥
(ಅಪಿಚೇದ್ದಶಮೀವಿದ್ಧಾ ಸದಾ ತಾಂ ತು ಪರಿತ್ಯಜೇತ್ ।
ಸುರಾಬಿಂದುಸಮಾಯುಕ್ತಮಿತಿ ಪ್ರಾಹುರ್ಮನೀಷಿಣಃ) ॥ ೧೭೫ ॥

**ಅರ್ಥ** ॥ ಅರುಣೋದಯ ಕಾಲದಲ್ಲಿ ಏಕಾದಶಿಯು ದಶಮಿಯಿಂದ ವಿದ್ಧವಾದಾಗ್ಯೂ ಆ ಏಕಾದಶಿಯನ್ನು ಸದಾ ಬಿಡಬೇಕು. ಮದ್ಯದ ಬಿಂದುವಿನಿಂದ ಮುಟ್ಟಲ್ಪಟ್ಟ ಅಮೃತವನ್ನೆಂಬಂತೆ (ವಿದ್ಧೈಕಾದಶಿಯನ್ನು) ಜ್ಞಾನಿಗಳು (ಬಿಡಬೇಕೆಂದು) ಹೇಳುತ್ತಾರೆ, ॥ 175 ॥

ಅನೇಕ ಜ್ಯೋತಿಶ್ಶಾಸ್ತ್ರಗಳ ವಿರೋಧದಿಂದಲೂ ಸ್ಮೃತಿಗಳ ವಿರೋಧದಿಂದಲೂ ಏಕಾದಶೀ ವಿಷಯದಲ್ಲಿ ಬ್ರಾಹ್ಮಣರಿಗೆ ವಿವಾದ ಹುಟ್ಟಲು ಹೇಗೆ ಮಾಡಬೇಕೆಂದರೆ ದ್ವಾದಶೀದಿವಸ ಉಪವಾಸ ಮಾಡಬೇಕೆನ್ನುತ್ತಾರೆ–

**ಮೂಲ ॥ ಬಹ್ವಾಗಮ ವಿರೋಧೇಷು**
**ಬ್ರಾಹ್ಮಣೇಷು ವಿವಾದಿಷು ।**
**ಉಪೋಷ್ಯಾ ದ್ವಾದಶೀ ತತ್ರ (ಪುಣ್ಯಾ)(ಶುದ್ಧಾ)**
**ತ್ರಯೋದಶ್ಯಾಂ ತು ಪಾರಣಂ**
**(ಪಕ್ಷಯೋರುಭಯೋರಪಿ) ॥ ೧೭೬ ॥**

**ಅರ್ಥ ॥** ಅನೇಕಾಗಮಗಳ ವಿರೋಧದಿಂದ ಬ್ರಾಹ್ಮಣರು ಉಪವಾಸ ಮಾಡಬೇಕೋ ಬೇಡವೋ ಎಂದು ವಿವಾದ ಮಾಡುತ್ತಿರಲು ಆಗ ಪುಣ್ಯಪ್ರದವಾದ ದ್ವಾದಶಿಯೇ (ಸರ್ವರಿಂದಲೂ) ಉಪವಾಸಮಾಡತಕ್ಕುದು. ತ್ರಯೋದಶೀ ದಿವಸ ಪಾರಣ ಮಾಡಬೇಕು. ॥ 176 ॥

ಏಕಾದಶೀ ವ್ರತವನ್ನು ಏಕಾದಶೀ ದಿವಸವೇ ಮಾಡಬೇಕೆಂದು ಅನೇಕ ಪ್ರದೇಶಗಳಲ್ಲಿ ಹೇಳಿರುವುದರಿಂದ ದ್ವಾದಶೀ ದಿವಸ ಉಪವಾಸ ಮಾಡಬೇಕೆಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ-

**ಮೂಲ ॥ (★) ಏಕಾದಶ್ಯಾಂ ತು ವಿದ್ಧಾಯಾಂ ಸಂಪ್ರಾಪ್ತೇ ಶ್ರವಣೇ ತಥಾ ।**
**ಉಪೋಷ್ಯಾ ದ್ವಾದಶೀ ಪುಣ್ಯಾ ಪಕ್ಷಯೋರುಭಯೋರಪಿ**
**(ತ್ರಯೋದಶ್ಯಾಂ ತು ಪಾರಣಂ) ॥ ೧೭೭ ॥**

**ಅರ್ಥ ॥** ಏಕಾದಶಿಯು (ಅರುಣೋದಯಕಾಲದಲ್ಲಿ ದಶಮಿಯಿಂದ) ವಿದ್ಧವಾಗುತ್ತಿರಲು ಆಗ ಪುಣ್ಯಪ್ರದವಾದ ದ್ವಾದಶಿಯೇ ಉಪವಾಸಕ್ಕೆ ಯೋಗ್ಯವು. ಅಂದರೆ ದ್ವಾದಶಿಯೇ ಉಪವಾಸ ವನ್ನು ಮಾಡಬೇಕು. ಹೇಗೆ ದ್ವಾದಶೀ ದಿವಸ ಅಭಿಜಿತ್ಕಾಲದಲ್ಲಿ ಶ್ರವಣಸಂಬದ್ಧವಿದ್ದರೆ ದ್ವಾದಶೀ ದಿವಸ ಉಪವಾಸವು ಮಾಡಲ್ಪಡುತ್ತದೋ ಹಾಗೆಯೇ ವಿದ್ಧೈಕಾದಶಿಯನ್ನು ಬಿಟ್ಟು ಶುಕ್ಲಪಕ್ಷ-ಕೃಷ್ಣಪಕ್ಷ, ಎರಡು ಪಕ್ಷಗಳಲ್ಲಿಯೂ ದ್ವಾದಶೀ ದಿವಸವೇ ಉಪವಾಸ ಮಾಡಬೇಕು. ತ್ರಯೋದಶೀ ದಿವಸವೇ ಪಾರಣಮಾಡಬೇಕು.॥ 177 ॥

ಏಕಾದಶೀ ದಿವಸ ದಶಮೀ ವೇಧವಿದ್ದರೆ ಬೇರೆ ತಿಥಿಗಳನ್ನು ಬಿಟ್ಟು ದ್ವಾದಶೀ ದಿವಸವೇ ಉಪವಾಸಮಾಡಬೇಕೆನ್ನುವಲ್ಲಿ ಕಾರಣವೇನೆಂದರೆ- ದ್ವಾದಶಿಯೇ ಅತ್ಯುತ್ತಮವಾದುದರಿಂದ ಆ ದಿವಸವೇ ಉಪವಾಸಮಾಡತಕ್ಕದ್ದು ಯುಕ್ತವೆಂದು ನಿರೂಪಿಸುತ್ತಾರೆ-

**ಮೂಲ ॥ ಉಪರಾಗಸಹಸ್ರಾಣಿ ವ್ಯತೀಪಾತಾಯುತಾನಿ ಚ ।**
**ಅಮಾಲಕ್ಷಂ ತು ದ್ವಾದಶ್ಯಾಃ ಕಲಾಂ ನಾರ್ಹಂತಿ ಷೋಡಶೀಂ ॥ ೧೭೮ ॥**

**ಅರ್ಥ ॥** ಸಹಸ್ರ ಸೂರ್ಯಗ್ರಹಣಾದಿಗಳೂ. ಹತ್ತುಸಹಸ್ರ ವ್ಯತೀಪಾತಗಳೂ, ಲಕ್ಷ ಅಮಾವಾಸ್ಯೆಗಳೂ ಇವುಗಳೆಲ್ಲವೂ ದ್ವಾದಶಿಯ ಹದಿನಾರನೇ ಒಂದು ಕಲೆಯನ್ನು ಹೊಂದಲು ಯೋಗ್ಯಗಳಾಗುವುದಿಲ್ಲ, (ಆದಕಾರಣ ದ್ವಾದಶಿಯು ಎಲ್ಲಾ ಪುಣ್ಯ ಕಾಲಕ್ಕಿಂತಲೂ ಅತಿಶ್ರೇಷ್ಠ ವಾದುದರಿಂದ ಆ ದಿವಸವೇ ಉಪವಾಸಮಾಡಬೇಕು) ॥ 178 ॥

ಮೂಲ ॥ (೧) ಶುದ್ಧಾऽಪಿ ದ್ವಾದಶೀ ಗ್ರಾಹ್ಯಾ
ಪರತೋ ದ್ವಾದಶೀ ಯದಿ ।
(೨) ವಿಷಂ ತು ದಶಮೀ ಜ್ಞೇಯಾ
ಅಮೃತಾ (ತಂ) ಚೈಕಾದಶೀ ತಿಥಿಃ ॥
ವಿಷಪ್ರಧಾನಾ ವರ್ಜ್ಯಾ ಸಾऽಮೃತಾ
ಗ್ರಾಹ್ಯಾ ಪ್ರಯತ್ನತಃ (ಪ್ರಧಾನತಃ) ॥ ೧೭೯ ॥

**ಅರ್ಥ ॥** (1) ನಾವು ಆಚರಿಸಿರುವ ಏಕಾದಶಿಯ ಮರುದಿವಸವು ದಶಮೀ ವೇಧವಿಲ್ಲದೆ ದ್ವಾದಶಿಯು ಕ್ರಮವಾಗಿ ಅಧಿಕವಾಗಿದ್ದರೂ (ಮತ್ತು ಶ್ರವಣ ನಕ್ಷತ್ರ ಮಧ್ಯಾಹ್ನವ್ಯಾಪ್ತಿ, ಸಂಗವಾತ್ಪರದಲ್ಲಿ ಹರಿವಾಸರ ಸ್ಪರ್ಶರೂಪ ಉಪವಾಸ ಕಾರಣಗಳಿಂದ ರಹಿತವಾಗಿದ್ದರೂ) ಅಂತಹ ದ್ವಾದಶಿಯ ಮರುದಿವಸ ಸ್ವಲ್ಪವಾದರೂ ದ್ವಾದಶೀತಿಥಿಸ್ಪರ್ಶವಿದ್ದರೆ ಆ ಹಿಂದಿನ ದ್ವಾದಶೀ ದಿವಸವನ್ನು ಉಪವಾಸ ವ್ರತಾಚರಣೆಗಾಗಿ ಸ್ವೀಕರಿಸಿಕೊಳ್ಳತಕ್ಕದ್ದು. ಅಂದರೆ, ಆ ಪ್ರಕರಣದಲ್ಲಿ 2 ಎರಡು ಉಪವಾಸಗಳು ಆಗುವುದೆಂದು ತಾತ್ಪರ್ಯವು (2) (ಹೇಗೆ ವಿಷಯುಕ್ತವಾದ ಅಮೃತವನ್ನು ಬಿಡಬೇಕೋ ಹಾಗೆಯೇ) ವಿಷರೂಪವಾದ ದಶಮಿಯಿಂದೊಡಗೂಡಿದ ಏಕಾದಶಿಯನ್ನು ಬಿಡಬೇಕು. ಶುದ್ಧೈಕಾದಶಿಯು ಅಮೃತ ರೂಪವಾದುದರಿಂದ ಅದೇ ಪ್ರಧಾನವಾಗಿ ಸ್ವೀಕರಿಸಬೇಕು. ಏಕೆಂದರೆ- ದಶಮೀತಿಥಿಯು ವಿಷವೆಂದು ತಿಳಿಯಬೇಕು. ಏಕಾದಶೀ ತಿಥಿಯು ಅಮೃತವೆಂದು ತಿಳಿಯಬೇಕು. ॥ 179 ॥

ಮೂಲ ॥ ದ್ವಾದಶ್ಯಾಂ ಭೋಜನಂ ಚೈವ
ವಿದ್ಧಾಯಾಂ ಹರ್ಯು (ಯದು) ಪೋಷಣಂ ।
ಯಃ ಕುರ್ಯಾನ್ಮಂದಬುದ್ಧಿತ್ವಾನ್ನಿರಯಂ
ಸೋऽಧಿಗಚ್ಛತಿ ॥ ೧೮೦ ॥

**ಅರ್ಥ ॥** (ವಿದ್ಧೈಕಾದಶಿಯನ್ನು ಬಿಟ್ಟು ದ್ವಾದಶೀದಿವಸವೇ ಉಪವಾಸ ಮಾಡಬೇಕೆಂದು ಯಾವುದು ಹೇಳಲ್ಪಟ್ಟಿತ್ತೋ ಅಂತಹ) ದ್ವಾದಶೀದಿವಸ ಭೋಜನವನ್ನು ದಶಮಿಯಿಂದ ವಿದ್ಧವಾದ ಏಕಾದಶೀದಿವಸ ಉಪವಾಸವನ್ನು ಯಾವ ಮಂದಬುದ್ಧಿಯು ಮಾಡುತ್ತಾನೋ ಅವನು ನರಕಕ್ಕೆ ಹೋಗುತ್ತಾನೆ.

**ತಾತ್ಪರ್ಯ ॥** ಏಕಾದಶಿಗೆ ದಶಮಿಯ ವೇಧವಿದ್ದರೆ ದ್ವಾದಶಿಯೇ ಉಪವಾಸ ಮಾಡಬೇಕು, ಬಹುಫಲಗಳಿವೆ. ವಿದ್ಧೈಕಾದಶೀದಿವಸ ಉಪವಾಸಮಾಡಿ ದ್ವಾದಶೀದಿವಸ ಭೋಜನ ಮಾಡಿದರೆ ನರಕಾದ್ಯನರ್ಥಗಳಿವೆ. ಆದಕಾರಣ ವಿದ್ಧೈಕಾದಶಿಯನ್ನು ಬಿಟ್ಟು ದ್ವಾದಶಿಯೇ ಉಪವಾಸ ಮಾಡಬೇಕು.॥ 180 ॥

''ದ್ವಾದಶೀ ಸ್ವಲ್ಪಮಲ್ಪಾಪಿ ಯದಿ ನ ಸ್ಯಾತ್ಪರೇऽಹನಿ । ದಶಮೀ ಮಿಶ್ರಿಕಾ ಕಾರ್ಯಾ ಮಹಾಪಾತಕನಾಶಿನೀ ॥'' ಹೀಗೆ ಅನೇಕ ವಚನಗಳಲ್ಲಿ ದಶಮೀವಿದ್ಧವಾದ ಏಕಾದಶೀದಿವಸ ಉಪವಾಸಮಾಡಬೇಕೆಂದು ವಿಧಾನಮಾಡಿರುವುದರಿಂದ ಅದನ್ನು ಬಿಡುವುದು ಹೇಗೆ ಎಂದಾಶಂಕಿಸಿದರೆ-

**ಮೂಲ ॥ ಯಾನಿ ಕಾನಿ ಚ ವಾಕ್ಯಾನಿ**
**ವಿದ್ಧೋಪೋಷ (ಪಾಸ್ಯಾ) ಪರಾಣಿ ಚ (ತು)।**
**ಧನದಾರ್ಚಾಪರಾಣಿ ಸ್ಯುಃ**
**ವೈಷ್ಣವೀ ನ ದಶಾಯುತಾ ॥ ೧೮೧ ॥**

**ಅರ್ಥ ॥** ದಶಮೀವಿದ್ಧವಾದ ಏಕಾದಶೀದಿವಸ ಉಪವಾಸಮಾಡಬೇಕೆಂದು ಪ್ರತಿಪಾದಿಸುವ ಯಾವ ವಾಕ್ಯಗಳಿವೆಯೋ, ಆ ವಾಕ್ಯಗಳು ಕಾಮಿತಗಳಾದ ಧನಾದಿಗಳನ್ನು ಕೊಡತಕ್ಕ ದೇವತೆಗಳ ಪೂಜಾವ್ರತಪ್ರತಿಪಾದಕಗಳು. ಏಕೆಂದರೆ- ದಶಮೀ ವೇಧಯುಕ್ತವಾದ ಏಕಾದಶಿಯು ವಿಷ್ಣುಪ್ರೀತಿಕರವಾದದ್ದಾಗುವುದಿಲ್ಲ. ॥ 181 ॥

ವಿದ್ಧೈಕಾದಶೀ ದಿವಸ ಉಪವಾಸ ಮಾಡಬೇಕೆಂದು ಮೋಹಿನಿಯ ಪ್ರಾರ್ಥನಾನುಸಾರವಾಗಿ ಮಾಡಿರುವದರಿಂದ ಸಜ್ಜನರು ಆ ದಿವಸ ಉಪವಾಸಮಾಡಬಾರದೆಂದು ವೇದವ್ಯಾಸರು ಪ್ರತಿಪಾದಿಸಿದ್ದಾರೆಂದು ಆಚಾರ್ಯರು ನಿರೂಪಿಸುತ್ತಾರೆ-

**ಮೂಲ ॥ ಅಥವಾ ಮೋಹನಾರ್ಥಾಯ ★ಮೋಹಿನ್ಯಾ ಭಗವಾನ್ಹರೀ ।**
**ಅರ್ಥಿತಃ ಕಾರಯಾಮಾಸ ವ್ಯಾಸರೂಪೀ ಜನಾರ್ದನಃ ॥ ೧೮೨ ॥**

**ಅರ್ಥ ॥** ಅಥವಾ ವ್ಯಾಸರೂಪಿಯಾದ, ಗುಣಪೂರ್ಣನಾದ, ದುಷ್ಟಸಂಹಾರಕನಾದ ಶ್ರೀಹರಿಯು ಮೋಹಿನಿಯಿಂದ ಪ್ರಾರ್ಥಿಸಲ್ಪಟ್ಟವನಾಗಿ, ಲೋಕಗಳನ್ನು ಮೋಹಿಸುವುದಕ್ಕಾಗಿ ವಿದ್ಧೈಕಾದಶೀ ವ್ರತವನ್ನು ಮೋಹಿನಿಯಿಂದ ಮಾಡಿಸಿದನು; ಅಥವಾ ಮೋಹಿನಿಯಿಂದ ಪ್ರಾರ್ಥಿತನಾಗಿ ವಿದ್ಧೈಕಾದಶೀದಿವಸ ಉಪವಾಸ ಮಾಡಬೇಕೆಂದು ಪ್ರತಿಪಾದಿಸುವ ವಚನಗಳನ್ನು ಶಿಷ್ಯರಿಂದ ಮಾಡಿಸಿದನು.॥ 182 ॥

**ಮೂಲ ॥ ಧನದಾರ್ಚಾವಿವೃದ್ಧ್ಯರ್ಥಂ ಮಹಾವಿತ್ತ ಲಯಸ್ಯ ಚ ।**
**ಅಸುರಾಣಾಂ ಮೋಹನಾರ್ಥಂ ಪಾಷಂಡಾನಾಂ ವಿವೃದ್ಧಯೇ ॥**
**ಆತ್ಮಸ್ವರೂಪಾವಿಜ್ಞಪ್ತೈ ಸ್ವಲೋಕಾಪ್ರಾಪ್ತಯೇ ತಥಾ ॥ ೧೮೩ ॥**

**ಅರ್ಥ ॥** ಸಂಪತ್ತ್ಪದರಾದ ದೇವತೆಗಳ ಪೂಜೆಯು ಅಭಿವೃದ್ಧಿಯಾಗುವುದಕ್ಕಾಗಿಯೂ, ಮಹತ್ತಾದ ದ್ರವ್ಯ (ಮೋಕ್ಷ)ದ ನಾಶಕ್ಕಾಗಿಯೂ, ಅಸುರರನ್ನು ಮೋಹಿಸುವುದಕ್ಕಾಗಿಯೂ, ಪಾಷಂಡಿಗಳ ಸಂಖ್ಯೆಯು ಅಭಿವೃದ್ಧಿಯಾಗುವುದಕ್ಕಾಗಿಯೂ, (ಅಧರ್ಮವು ಹೆಚ್ಚು ಆಗುವುದಕ್ಕಾಗಿ) ನಾರಾಯಣಸ್ವರೂಪ ತಿಳಿಯದಿರುವುದಕ್ಕಾಗಿಯೂ, ಸ್ವರ್ಗಲೋಕವು (ಅಥವಾ ವೈಕುಂಠಲೋಕವು) ಪ್ರಾಪ್ತಿಯಾಗದಿರುವುದಕ್ಕಾಗಿಯೂ ವಿದ್ಧೈಕಾದಶೀ ವ್ರತವನ್ನು ಮಾಡಿಸಿದರು) ॥ 183 ॥

**ಮೂಲ ॥ (ಆತ್ಮಸ್ವರೂಪವಿಜ್ಞಪ್ತೈ ಸ್ವಲೋಕ ಪ್ರಾಪ್ತಯೇ ತಥಾ)**
**ಏವಂ ವಿದ್ಧಾಂ (ಧಾಂ) ಪರಿತ್ಯಜ್ಯ**

---

(★ ''ಮೋಹ''ವೆಂದರೆ- ನಟನ ಅಥವಾ ವಂಚನ, ಇದ್ದ ಆಕಾರಗಳನ್ನು ಅಚ್ಛಾದನೆ ಮಾಡಿಕೊಂಡು ಇಲ್ಲದಿದ್ದ ಆಕಾರಗಳನ್ನು ತೋರಿಸುವುದು ನಟನವು. ಇಲ್ಲದಿರುವವುಗಳನ್ನು ಹೇಳುವುದು ವಂಚನವು.)

**ದ್ವಾದಶ್ಯಾಮುಪವಾಸಯೇತ್ (ನೇ)। (ಸಿನಾಂ)**
**ಕೋಟಿಜನ್ಮಾರ್ಜಿತಂ ಪಾಪ-**
**ಮೇಕಯ್ಯೆ (ಕೇನ್ಯೆ) ವ ವಿನಶ್ಯತಿ ॥ ೧೮೪ ॥**

**ಅರ್ಥ ॥** (ಭಗವಂತನ ಸ್ವರೂಪವು ತಿಳಿಯುವುದಕ್ಕಾಗಿಯೂ, ಹಾಗೆಯೇ ಮುಕ್ತಿಯು ಪ್ರಾಪ್ತಿಯಾಗುವುದಕ್ಕಾಗಿಯೂ) ಹಿಂದೆ ಹೇಳಿದ ಪ್ರಕಾರ ಮಹಾನರ್ಥಪ್ರದವಾದ ವಿದ್ಧೈಕಾದಶಿಯನ್ನು ಬಿಟ್ಟು ದ್ವಾದಶೀದಿವಸ ಉಪವಾಸ ಮಾಡಿದರೆ ಕೋಟಿಜನ್ಮಗಳಲ್ಲಿ ಸಂಪಾದಿಸಲ್ಪಟ್ಟ ಪಾಪವು ಒಂದರಿಂದಲೇ (ದ್ವಾದಶೀ ದಿವಸ ಉಪವಾಸ ಮಾಡೋಣದರಿಂದಲೇ) ನಾಶವಾಗುತ್ತದೆ.॥ 184 ॥

**ಮೂಲ ॥ ತತಃ ಕೋಟಿಗುಣಂ ಚಾಪಿ (ಪಾಪಂ)**
**ನಿಷಿದ್ಧಸ್ಯೇತರೈರ್ಜನೈಃ (ನಿಷಿದ್ಧಸ್ಯ ಹ್ಯುಪೋಷಣೇ) ।**
**ಯದನಾದಿ ಕೃತಂ ಪಾಪಂ ಯ(ತ) ದೂರ್ಧ್ವಂ ಯತ್ಕರಿಷ್ಯತಿ ।**
**ತತ್ಸರ್ವಂ ವಿಲಯಂ ಯಾತಿ ಪರೇಷಾಮುಪವಾಸನಾತ್ ।**
**ನ ಚ ತಸ್ಮಾತ್ಪ್ರಿಯತಮಃ ಕೇಶವಸ್ಯ ಮಮಾಪಿ ಚ (ವಾ)॥ ೧೮೫-೧೮೬ ॥**

**ಅರ್ಥ ॥** (ದ್ವಾದಶೀದಿವಸ ಉಪವಾಸ ಮಾಡಿದರೆ ಯಾವ ಪುಣ್ಯಫಲವು ಹೇಳಲ್ಪಟ್ಟದೋ ಅದಕ್ಕಿಂತಲೂ ಇತರ ಮಹನೀಯರಿಂದ ನಿಷಿದ್ಧವಾದುದನ್ನಾಚರಿಸಿದರೆ ಕೋಟಿಗುಣ ಪಾಪವು (ದಶಮೀ ವಿದ್ಧವಾದ ಏಕಾದಶೀ ದಿವಸ ಉಪವಾಸಮಾಡಿದರೆ) ಬರುತ್ತದೆ. (ಆದಕಾರಣ ವಿದ್ಧೈಕಾದಶಿಯನ್ನು ಬಿಟ್ಟು ದ್ವಾದಶೀದಿವಸ ಉಪವಾಸ ಮಾಡಿದರೆ ಮಹಾಫಲವುಂಟಾಗುತ್ತದೆ.) ಯಾವ ಪುರುಷನಿಂದ (ಆ ದ್ವಾದಶೀ ದಿವಸ ಉಪವಾಸಮಾಡುವವನಿಂದ) ಅನಾದಿ ಜನ್ಮಗಳನ್ನಾರಂಭಿಸಿ ಈ ಜನ್ಮಪರ್ಯಂತವಾಗಿ ಮಾಡಲ್ಪಟ್ಟ ಅನೇಕವಿಧ ಪಾಪಗಳು ಹಾಗೆಯೇ ಆ ಮೇಲೆಯೂ (ಅಂದರೆ, ಇನ್ನು ಬರುವ ಜನ್ಮಗಳಲ್ಲಿಯೂ) ಯಾವ ಪಾಪವನ್ನು ಮಾಡುವನೋ, ಆ ಎಲ್ಲಾ ಪಾಪಗಳು ಬೇರೆ ದ್ವಾದಶೀ ತಿಥಿಗಳ ಮಧ್ಯದಲ್ಲಿ ವಿದ್ಧೈಕಾದಶೀ ಮರುದಿವಸ ದ್ವಾದಶೀದಿವಸ ಉಪವಾಸಮಾಡೋಣದರಿಂದ ನಾಶವನ್ನು ಹೊಂದುತ್ತವೆ. ಮತ್ತು ವಿದ್ಧೈಕಾದಶಿಯನ್ನು ಬಿಟ್ಟು ದ್ವಾದಶೀದಿವಸ ಉಪವಾಸ ಮಾಡತಕ್ಕ ಪುರುಷನ ದೆಶೆಯಿಂದ ಅತ್ಯಂತ ಪ್ರಿಯನು ಬ್ರಹ್ಮಾದಿ ದೇವತೆಗಳಿಂದ ಅತ್ಯುತ್ತಮನಾದ ಶ್ರೀಪರಮಾತ್ಮನಿಗೂ ನನಗೂ (ರುದ್ರನಿಗೂ) ಇಲ್ಲ. (ಆದಕಾರಣ ವಿದ್ಧೈಕಾದಶಿಯನ್ನು ಬಿಟ್ಟು ಕೇವಲ ದ್ವಾದಶೀದಿವಸ ಉಪವಾಸವು ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುತ್ತದೆ.) ॥ 185-186 ॥

**ಮೂಲ ॥ ಏಕಾದಶ್ಯಾಂ(ಶ್ಯಾ) ಹ್ಯವೇಧೇ ತು ದ್ವಾದಶೀಂ ನ ಪರಿತ್ಯಜೇತ್ ।**
**ಪಾರಣೇ ಮರಣೇ ಚೈವ ತಿಥಿಸ್ತಾತ್ಕಾಲಿಕೀ ಸ್ಮೃತಾ ॥ ೧೮೭ ॥**

**ಅರ್ಥ ॥** ಏಕಾದಶೀದಿವಸ ದಶಮೀವೇಧವಿಲ್ಲದಿದ್ದರೆ (ಆ ದಿವಸವೇ ಉಪವಾಸ ಮಾಡಿ ದ್ವಾದಶೀದಿವಸ) ದ್ವಾದಶೀವ್ರತವನ್ನು ಬಿಡಬಾರದು. (ಅಂದರೆ, ಏಕಾದಶೀ ವೇಧಪ್ರಕರಣದಲ್ಲಿ ದ್ವಾದಶೀದಿನ ಉಪವಾಸಮಾಡಿದಂತೆಯೇ ಇಂತಹ ದ್ವಾದಶಿಗಳಲ್ಲಿ ಸಹ ಉಪವಾಸಮಾಡಬಾರ

ದೆಂದು ತಾತ್ಪರ್ಯವು. ಮತ್ತು ದ್ವಾದಶೀ ಪಾರಣವು ಪ್ರಾತಃಕಾಲವನ್ನು ಮೀರಬಾರದೆಂದು ಪ್ರಮಾಣಗಳಿದ್ದರೂ ಪ್ರಾತಃ ಕಾಲದ ಒಳಗಾಗಿಯೇ ದ್ವಾದಶೀ ತಿಥಿಯು ಸಮಾಪ್ತವಾಗುವ ಪ್ರಕರಣದಲ್ಲಿ ದ್ವಾದಶಿಯೂ ಮುಗಿಯುವುದಕ್ಕಿಂತ ಮುಂಚೆಯೇ ದ್ವಾದಶೀಪಾರಣವನ್ನು ಮಾಡಿ ಕೊಳ್ಳತಕ್ಕದ್ದು.) ಏಕೆಂದರೆ- ದ್ವಾದಶೀಪಾರಣಾದಿವಿಷಯದಲ್ಲಿಯೂ, ಮರಣತಿಥಿ ವಿಷಯದಲ್ಲಿಯೂ ತಾತ್ಕಾಲಿಕ ತಿಥಿಯೇ ಸ್ಮೃತ್ಯಾದಿಗಳಿಲ್ಲಿ ಹೇಳಲ್ಪಟ್ಟಿದೆ. (ಅಂದರೆ, ಮರಣಕಾಲದಲ್ಲಿರತಕ್ಕ ತಿಥಿಯೇ ಶ್ರಾದ್ಧಾದಿಗಳಿಗೆ ಹೇಗೆ ಪ್ರಯೋಜಕವೋ, ಹಾಗೆಯೇ, ದ್ವಾದಶೀಪಾರಣವಿಷಯದಲ್ಲಿಯೂ ದ್ವಾದಶೀತಿಥಿಯೆಂದರೆ, ತಾತ್ಕಾಲಿಕ ತಿಥಿಯನ್ನೇ ಉಪಯೋಗಿಸಿಕೊಳ್ಳತಕ್ಕದ್ದು. ''ದ್ವಾದಶ ದ್ವಾದಶೀರ್ಹಂತಿ ದ್ವಾದಶೀ ಚಾತಿಲಂಘಿತಾ'' ಇತ್ಯಾದಿ ವಾಕ್ಯಗಳಿಂದ ದ್ವಾದಶಿಯು ಅತಿಕ್ರಾಂತವಾದರೆ, 12 ಉಪವಾಸದ ಫಲವು ವ್ಯರ್ಥವಾಗುತ್ತದೆ.) ॥ 187 ॥

ಈ ಪ್ರಕಾರವಾಗಿ ಅರುಣೋದಯಕಾಲದಲ್ಲಿ 56 ಗಳಿಗೆಯಲ್ಲಿ ದಶಮೀವೇಧವಿದ್ದರೆ ಆ ಏಕಾದಶಿಯನ್ನು ಬಿಟ್ಟು ವೇಧರಹಿತವಾದ ಶುದ್ಧೈಕಾದಶೀದಿವಸ ಉಪವಾಸ ಮಾಡಬೇಕೆಂದುಕ್ತವಾಯಿತು. ಅದರಲ್ಲಿ ಯಾರು ಅಧಿಕಾರಿಗಳೆಂದರೆ, ಅವರನ್ನು ನಿರೂಪಿಸುತ್ತಾರೆ-

**ಮೂಲ ॥ ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ ।**
**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ ॥**
**ಅಭರ್ತೃಕಾ ತಥಾನ್ಯೇ ಚ (ವಾ) ಸೂತ ವೈದೇಹಿಕಾದಯಃ ।**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥೧೮೮-೧೮೯ ॥**

**ಅರ್ಥ ॥** ಬ್ರಹ್ಮಚಾರಿಗಳೂ, ಗೃಹಸ್ಥಾಶ್ರಮಿಗಳೂ, ವಾನಪ್ರಸ್ಥಾಶ್ರಮಿಗಳೂ, ಸನ್ಯಾಸಾಶ್ರಮಿಗಳೂ, (ಹಂಸ, ಪರಮಹಂಸ, ಕುಟೀಚಕ, ಬಹೂದಕರೆಂಬ ನಾಲ್ಕು ವಿಧ ಸನ್ಯಾಸಿಗಳೂ,) ಹಾಗೂ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ, ಹಾಗೆಯೇ ಸುಮಂಗಲಿಯರೂ, ವಿಧವೆಯರೂ, ಹಾಗೆಯೆ ವರ್ಣಬಾಹ್ಯದಿಂದ ಸೂತವೈದೇಹಿಕಾದಿಗಳೂ ಸಹ ಎಲ್ಲರಿಗೂ ಶುಕ್ಲಪಕ್ಷ-ಕೃಷ್ಣಪಕ್ಷ ಎರಡು ಪಕ್ಷಗಳಲ್ಲಿಯೂ ಏಕಾದಶೀದಿವಸ ಭೋಜನಮಾಡಬಾರದು.

**ತಾತ್ಪರ್ಯ ॥** ಕೃಷ್ಣಪಕ್ಷದಲ್ಲಿ ಗೃಹಸ್ಥಾಶ್ರಮಿ ಮೊದಲಾದವರು ಉಪವಾಸ ಮಾಡಬಾರದೆಂದು ಹೇಳಿರುವುದರಿಂದ ಶುಕ್ಲಪಕ್ಷದಲ್ಲಿ ಮಾತ್ರ ಉಪವಾಸ ಮಾಡಬೇಕೆಂದರೆ ಎರಡು ಪಕ್ಷಗಳಲ್ಲಿಯೂ ಉಪವಾಸಮಾಡತಕ್ಕುದು. ಅಂದರೆ, ಕೃಷ್ಣಪಕ್ಷದಲ್ಲಿ ಏಕಾದಶ್ಯುಪವಾಸ ನಿಷೇಧವು ಕಾಮ್ಯೋಪವಾಸ ನಿಷೇಧಪರವಾದುದರಿಂದ ಎರಡು ಪಕ್ಷಗಳಲ್ಲಿಯೂ ಉಪವಾಸಮಾಡಲೇಬೇಕು.॥ 188-189 ॥

**ಮೂಲ ॥ ಏಕಾದಶ್ಯಾಂ ತು ಯೋ ಭುಂಕ್ತೇ ಮೋಹೇನಾವೃತಚೇತಸಾ (ನಃ)।**
**ಶುಕ್ಲಾಯಾಮಥ ಕೃಷ್ಣಾಯಾಂ ನಿರಯಂ ಯಾತಿ ಸ ಧ್ರುವಂ ॥೧೯೦ ॥**

**ಅರ್ಥ ॥** ಮೋಹಯುಕ್ತವಾದ ಬುದ್ಧಿಯುಳ್ಳ ಯಾವ ಪುರುಷನು ಶುಕ್ಲ, ಕೃಷ್ಣ ಎರಡು ಪಕ್ಷಗಳಲ್ಲಿಯೂ ಏಕಾದಶೀ ದಿವಸ (ಉಪವಾಸಮಾಡದೆ) ಭೋಜನ ಮಾಡುತ್ತಾನೋ, ಅಂತಹ ಪುರುಷನು ನಿಶ್ಚಯವಾಗಿ ನಿತ್ಯವಾದ ನರಕವನ್ನು (ತಾಮಿಸ್ರ ಅಂಧತಾಮಿಸ್ರಗಳನ್ನು) ಹೊಂದುತ್ತಾನೆ. ॥ 190 ॥

ಎರಡು ಪಕ್ಷಗಳಲ್ಲಿಯೂ ಉಪವಾಸ ಮಾಡದಿದ್ದರೆ ಮಹಾದೋಷವಿದೆ ಎಂದು ಹೇಳಲ್ಪಟ್ಟಿತು. ಈಗ 'ಶುಕ್ಲಪಕ್ಷದಲ್ಲಿ ಉಪವಾಸಮಾಡಬೇಕು. ಕೃಷ್ಣಪಕ್ಷದಲ್ಲಿ ಉಪವಾಸ ಮಾಡಬಾರದೆಂದು' ವಿಚಾರವನ್ನು ಮಾತ್ರ ಮಾಡುವವರಿಗೂ ಸಹ ದೋಷವಿದೆ ಎಂದು ಹೇಳಿರುವುದರಿಂದ ವಿಚಾರ ಸಹ ಮಾಡಬಾರದೆಂದು ನಿರೂಪಿಸುತ್ತಾರೆ.

**ಮೂಲ ॥ ವಿವೇಚಯತಿ ಯೋ ಮೋಹಾತ್**
**ಶುಕ್ಲಾ ಕೃಷ್ಣೇತಿ ಪಾಪ(ಮೋಹ) ಕೃತ್ ।**
**ಏಕಾದಶೀಂ ಸ ವೈ ಯಾತಿ**
**ನಿರಯಂ ನಾತ್ರ ಸಂಶಯಃ ॥ ೧೯೧ ॥**

**ಅರ್ಥ ॥** ಶುಕ್ಲಪಕ್ಷದ ಏಕಾದಶಿಯು ಉಪವಾಸಾರ್ಹವು, ಕೃಷ್ಣಪಕ್ಷದ್ದಲ್ಲವೆಂದು ಏಕಾದಶಿಯನ್ನು ಮೋಹದಿಂದ ಯಾರು ವಿವೇಕಮಾಡುತ್ತಾನೋ, ಅಂತಹ ಪಾಪಿಷ್ಠನು ನರಕಕ್ಕೆ ಹೋಗುತ್ತಾನೆ; ಈ ವಿಷಯದಲ್ಲಿ ಸಂಶಯವಿಲ್ಲ. (ಆದಕಾರಣ ಎರಡು ಪಕ್ಷಗಳಲ್ಲಿಯೂ ಉಪವಾಸಮಾಡಬೇಕು.) ॥ 191 ॥

ದೃಷ್ಟಾಂತ ಹೇಳುತ್ತಾರೆ-

**ಮೂಲ ॥ ಯಥಾ ಗೌರ್ನೈವ ಹಂತವ್ಯಾ ಶುಕ್ಲಾ ಕೃಷ್ಣೇತಿ ಭಾಮಿನಿ ।**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ ೧೯೨ ॥**

**ಅರ್ಥ ॥** ಗೋವನ್ನು ಕೊಲ್ಲಬಾರದೆಂದು ಹೇಳಿದರೆ ಬಿಳಿಗೋವು ಅಥವಾ ಕಪ್ಪುಗೋವು (ಅಂದರೆ ಯಾವ ಗೋವೂ) ಕೊಲ್ಲಲ್ಪಡಬಾರದೆಂದು ಹೇಗೆ ಅರ್ಥವಾಗುತ್ತದೋ, ಹಾಗೆಯೇ ಏಕಾದಶೀ ದಿವಸ ಉಪವಾಸ ವಿಷಯದಲ್ಲಿಯೂ ಶುಕ್ಲಪಕ್ಷದ ಏಕಾದಶಿಯು ಉಪವಾಸಮಾಡಬೇಕು. ಕೃಷ್ಣಪಕ್ಷದ ಏಕಾದಶಿಯು ಉಪವಾಸ ಮಾಡಬಾರದೆಂದು ವಿಕಲ್ಪವು ಕೂಡುವುದಿಲ್ಲ. ಭೋಜನಮಾಡಿದರೆ ಮಹಾದೋಷವು ಶ್ರುತವಾದುದರಿಂದ ಎರಡು ಪಕ್ಷಗಳಲ್ಲಿಯೂ ಏಕಾದಶೀ ದಿವಸ ಭೋಜನಮಾಡಬಾರದು. ॥ 192 ॥

''ಸಂಕ್ರಾತ್ಯಾ ಉಪವಾಸೇನ ಪಾರಣೇನ ಯುಧಿಷ್ಠಿರ। ಏಕಾದಶ್ಯಾಂ ಚ ಕೃಷ್ಣಾಯಾಂ ಜ್ಯೇಷ್ಠಪುತ್ರೋ ವಿನಶ್ಯತಿ । ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ । ವನಸ್ಥಾ ಇತಿ ಧರ್ಮೋಽಯಂ ಶುಕ್ಲಾಮೇವ ಸದಾ ಗೃಹೀ ॥'' ''ಭರಣ್ಯಾದಿಯುತಾಂ ವಾಪಿ ಕೃಷ್ಣಾಂ ನೋಪವಸೇದ್ಗೃಹೀ ॥'' ಇವು ಮೊದಲಾದ ಅನೇಕ ವಾಕ್ಯಗಳಲ್ಲಿ ಕೃಷ್ಣಪಕ್ಷದ ಏಕಾದಶೀದಿವಸ ಉಪವಾಸಮಾಡಬಾರದೆಂದು ಹೇಳಿರುವುದರಿಂದ, ಎರಡು ಪಕ್ಷಗಳಲ್ಲಿಯೂ ಉಪವಾಸಮಾಡ ಬೇಕೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ- ಹಾಗೆ ನಿಷೇಧಿಸಿದ್ದು ಕಾಮ್ಯೋಪವಾಸ ನಿಷೇಧ ಪರವಾದುದರಿಂದ ಎರಡು ಪಕ್ಷಗಳಲ್ಲಿಯೂ ಉಪವಾಸ ಮಾಡಲೇಬೇಕೆಂದು ನಿರೂಪಿಸುತ್ತಾರೆ-

**ಮೂಲ ॥ ಯಾನಿ ಕಾನಿ ಚ ವಾಕ್ಯಾನಿ ಕೃಷ್ಣೈಕಾದಶಿ ವರ್ಜನೇ ।**
**ಭರಣ್ಯಾದಿ ನಿಷೇಧೇ (ಽಪಿ) ಚ ತಾನಿ ಕಾಮ್ಯಫಲಾರ್ಥಿನಾಂ ॥ ೧೯೩ ॥**

**ಅರ್ಥ ॥** ಕೃಷ್ಣಪಕ್ಷದ ಏಕಾದಶೀದಿವಸ ಉಪವಾಸಮಾಡಬಾರದೆನ್ನುವ ವಿಷಯದಲ್ಲಿಯೂ ಭರಣ್ಯಾದಿ ನಕ್ಷತ್ರಗಳಿಂದೊಡಗೂಡಿದ ಏಕಾದಶೀ ದಿವಸ ಉಪವಾಸ ಮಾಡಬಾರದೆನ್ನುವ ವಿಷಯ ದಲ್ಲಿಯೂ ಮೇಲೆ ಹೇಳಿದ ಕೆಲವು ವಾಕ್ಯಗಳು ತೋರುತ್ತವೆ. ಆದಾಗ್ಯೂ ಆ ವಾಕ್ಯಗಳು ಕಾಮ್ಯಫಲವನ್ನಪೇಕ್ಷಿಸಿ ಏಕಾದಶೀ ವ್ರತವನ್ನು ಮಾಡುವವರಿಗೇನೇ ನಿಷೇಧಪರಗಳಾಗಿವೆ. (ಶ್ರೀವಿಷ್ಣುಪ್ರೀತಿಗಾಗಿ ಉಪವಾಸಮಾಡುವ ವಿಷಯದಲ್ಲಿ ನಿಷೇಧಪರಗಳಲ್ಲ, ಆದಕಾರಣ ಆ ನಿಷೇಧವು ಕಾಮ್ಯೋಪವಾಸಪರವಾದುದರಿಂದ ಎರಡು ಏಕಾದಶಿಗಳಲ್ಲಿಯೂ ಉಪವಾಸವನ್ನು ಮಾಡಲೇಬೇಕು.) ॥ 193 ॥

**ಮೂಲ ॥ ಕಾಮಿನೋಽಪಿ ಹಿ ಸಿದ್ಧ್ಯರ್ಥಂ(ಮೋಕ್ಷಾರ್ಥಂ) (ನಿತ್ಯಾರ್ಥಂ)**
**ಕುರ್ಯುರೇವೋಪವಾಸನಂ ।**
**ಪ್ರೀಣನಾರ್ಥಂ ಹರೇರ್ನಿತ್ಯಂ**
**ನ ತು ಕಾಮ್ಯ ವ್ಯಪೇಕ್ಷಯಾ ॥ ೧೯೪ ॥**

**ಅರ್ಥ ॥** ಕಾಮ್ಯೋಪವಾಸವನ್ನು ಮಾಡುವ ಪುರುಷರೂ ಕೂಡ ತಮ್ಮ ಇಷ್ಟಸಿದ್ಧಿಗಾಗಿ, (ಮೋಕ್ಷಕ್ಕಾಗಿ) (ನಿತ್ಯಕ್ಕಾಗಿ ಅಂದರೆ- ಮಾಡದಿದ್ದರೆ ಮಹಾ ಪ್ರತ್ಯವಾಯವು ಬರುವುದರಿಂದ ಅದನ್ನು ಪರಿಹರಿಸುವುದಕ್ಕಾಗಿ) ಶ್ರೀಹರಿಯ ಪ್ರೀತಿಗಾಗಿಯೂ ಪ್ರತಿ ಏಕಾದಶಿಯಲ್ಲಿಯೂ ಉಪವಾಸ ಮಾಡಲೇಬೇಕು. ಕೇವಲ ಕಾಮ್ಯವ್ರತವನ್ನಪೇಕ್ಷಿಸಿ ಮಾಡುವುದಲ್ಲ, (ಮಾಡದಿದ್ದರೆ ಮಹಾ ಪ್ರತ್ಯವಾಯವು ಹೇಳಲ್ಪಟ್ಟಿದೆ. ॥ 194 ॥

**ಮೂಲ ॥ ತಸ್ಮಾಚ್ಛುಕ್ಲಾಮಥೋ ಕೃಷ್ಣಾಂ ಭರಣ್ಯಾದಿ ಯುತಾಮಪಿ ।**
**ಪ್ರತ್ಯವಾಯ ನಿಷೇಧಾರ್ಥಾ(ರ್ಥ) ಮುಪವಾಸೀತ ನಿತ್ಯಶಃ ॥**
**ಪ್ರೀಣನಾರ್ಥಂ ಹರೇಶ್ಚಾಪಿ ವಿಷ್ಣುಲೋಕಸ್ಯ ಚಾಪ್ತಯೇ ॥ ೧೯೫ ॥**

**ಅರ್ಥ ॥** ಆದಕಾರಣ ಕಾಮ್ಯಫಲವನ್ನಪೇಕ್ಷಿಸುವವನಿಗೂ, ಬರತಕ್ಕ ಪ್ರತ್ಯವಾಯಗಳನ್ನು ನಿಷೇಧಿಸುವುದಕ್ಕಾಗಿಯೂ, ಶ್ರೀಹರಿಯ ಪ್ರೀತಿಗಾಗಿಯೂ. ವೈಕುಂಠಲೋಕವು ಪ್ರಾಪ್ತಿಯಾಗುವುದ ಕ್ಕಾಗಿಯೂ, ಶುಕ್ಲಪಕ್ಷದ ಏಕಾದಶಿಯನ್ನೂ, ಕೃಷ್ಣಪಕ್ಷದ ಏಕಾದಶಿಯನ್ನೂ ಭರಣ್ಯಾದಿ ನಕ್ಷತ್ರಗಳಿಂದೊಡಗೂಡಿದ ಏಕಾದಶಿಯನ್ನೂ ನಿರಂತರದಲ್ಲಿಯೂ ಉಪವಾಸ ಮಾಡತಕ್ಕದ್ದು.

**ತಾತ್ಪರ್ಯ ॥** ''ಭುಂಕ್ಷ್ವ ಭುಂಕ್ಷ್ವೇತಿ ಯೋ ಬ್ರೂಯಾದ್ಯೋ ಭುಂಕ್ತೇ ಹರಿವಾಸರೇ। ತಾವುಭೌ ನರಕಂ ಯಾತೋ ಯಾವದಾಭೂತಸಂಪ್ಲವಂ ॥'' ಇವು ಮೊದಲಾದ ವಾಕ್ಯಗಳಿಂದ ಭೋಜನ ಮಾಡು ಎಂದು ಪ್ರೇರಿಸುವವರಿಗೂ, ಭೋಜನ ಮಾಡುವವರಿಗೂ, ಇಬ್ಬರಿಗೂ ನರಕಾದ್ಯನರ್ಥವು ಪ್ರಾಪ್ತವಾಗುವುದರಿಂದ ಸರ್ವರೂ ನಿರಂತರದಲ್ಲಿ ಎರಡು ಪಕ್ಷಗಳಲ್ಲಿಯೂ ಉಪವಾಸವನ್ನು ಮಾಡಬೇಕು. ಶುಕ್ಲಪಕ್ಷದ ಏಕಾದಶಿಯನ್ನು ಮಾತ್ರ ಮಾಡುವುದಲ್ಲ. ॥ 195 ॥

ಪೂರ್ವದಲ್ಲಿ ಏಕಾದಶೀದಿವಸ ಅರುಣೋದಯ ಕಾಲದಲ್ಲಿ ದಶಮೀ ವೇಧವಿದ್ದರೆ ಅದನ್ನು ಬಿಟ್ಟು ದ್ವಾದಶೀದಿವಸ ಉಪವಾಸವನ್ನು ಮಾಡಿ ಮರುದಿವಸ ಪಾರಣವನ್ನು ಮಾಡಬೇಕೆನ್ನುವ

ವಿಷಯದಲ್ಲಿ ಅನೇಕ ವಚನಗಳನ್ನು ನಿರೂಪಿಸಿದರು. ಶುಕ್ಲಪಕ್ಷದ ಏಕಾದಶೀ ದಿವಸ ಉಪವಾಸ ಮಾಡಿದಮೇಲೆ ದ್ವಾದಶೀದಿವಸ ಪಾರಣೆಯು ಪ್ರಾಪ್ತವಾಯಿತು. ಅದರಲ್ಲಿ ದ್ವಾದಶಿಯು ಪೂರ್ಣ ದ್ವಾದಶಿಯಲ್ಲಿ ಸರ್ವಥಾ ಪಾರಣವನ್ನು ಮಾಡಬಾರದು. ಆ ದಿನವು ಉಪವಾಸವು. ಇಲ್ಲದಿದ್ದರೆ ಮಹಾಪ್ರತ್ಯವಾಯವು ಶ್ರುತವಾದುದರಿಂದ ಆ ವಿಷಯದಲ್ಲಿ ಸ್ಮೃತಿವಚನಗಳನ್ನು ಮಾಡದಿದ್ದರೆ ಪ್ರತ್ಯವಾಯವಿದೆ ಎಂದು ಪ್ರತಿಪಾದಿಸುತ್ತಾರೆ.

**ಮೂಲ ॥ ಕಲಾವಾರ್ಧ ಕಲಾವಾಪಿ ಪರತೋ ದ್ವಾದಶೀ ಯದಿ ।**
**(ಕಲಾ ವಾ ಘಟಿಕಾ ವಾऽಪಿ ಅಪರೇ (ಪ್ರಾತರಪರೇ)ದ್ವಾದಶೀ ಯದಿ)**
**ದ್ವಾದಶ ದ್ವಾದಶೀರ್ಹಂತಿ ಪೂರ್ವೇದ್ಯುಃ ಪಾರಣೇ ಕೃತೇ ॥ ೧೯೬ ॥**

**ಅರ್ಥ ॥** ಮರುದಿವಸ (ತ್ರಯೋದಶೀ ದಿವಸ) ಕಲಾ (18 ನಿಮೇಷಕ್ಕೆ ಕಾಷ್ಠಾ ಎಂದೂ, 30 ಕಾಷ್ಠಕ್ಕೆ ಕಲಾ ಎಂದೂ ಹೆಸರು) ಮಾತ್ರ ದ್ವಾದಶೀಯಾಗಲೀ (ಘಟಿಕಾ (1 ಗಳಿಗೆ) ಮಾತ್ರ ದ್ವಾದಶೀಯಾಗಲೀ) ಅರ್ಧಕಲಾ ಮಾತ್ರ ದ್ವಾದಶೀಯಾಗಲೀ ಪ್ರಾತಃಕಾಲದಲ್ಲಿ ಕಾಣಲ್ಪಟ್ಟರೆ ಆಗ ಮೊದಲಿನ ದಿವಸದಲ್ಲಿಯೇ ಪಾರಣಮಾಡಿದರೆ 12 ದ್ವಾದಶೀಫಲಗಳನ್ನು ನಾಶಮಾಡುತ್ತದೆ.

**ತಾತ್ಪರ್ಯ ॥** ತ್ರಯೋದಶೀ ದಿವಸ ಅತ್ಯಲ್ಪ ದ್ವಾದಶಿಯಿದ್ದರೆ ಮೊದಲಿನ ದಿವಸವು (ಪೂರ್ಣದ್ವಾದಶಿಯೂ) ಉಪವಾಸಾರ್ಹವು. ಅಂತಹ ಸಂದರ್ಭದಲ್ಲಿ ಏಕಾದಶಿಯು, ಪೂರ್ಣ ದ್ವಾದಶಿಯು ಇವೆರಡು ದಿನಗಳಲ್ಲಿಯೂ ಉಪವಾಸಮಾಡಬೇಕು. ಕಲಾ ಮಾತ್ರ ದ್ವಾದಶಿಯುಕ್ತವಾದ ತ್ರಯೋದಶೀದಿವಸ ಪಾರಣಮಾಡಬೇಕು. ಮೊದಲಿನ ದಿವಸದಲ್ಲಿ ಪಾರಣಮಾಡಿದರೆ ಆ ಪಾರಣವು ಮೊದಲು ತಾನು ಮಾಡಿದ 12 ದ್ವಾದಶೀ ವ್ರತಗಳಲ್ಲಿ ಯಾವ ಪುಣ್ಯಫಲಗಳಿವೆಯೋ, ಅವುಗಳನ್ನು ನಾಶಗೊಳಿಸುವುದು. ಆದಕಾರಣ ಆ ಎರಡು ದಿವಸಗಳಲ್ಲಿಯೂ ಉಪವಾಸಮಾಡಿ ತ್ರಯೋದಶೀ ದಿವಸ ಪ್ರಾತಃಕಾಲದಲ್ಲಿಯೇ ಪಾರಣವನ್ನು ಮಾಡಬೇಕು.॥ 196 ॥

ಇದೇ ಅರ್ಥದಲ್ಲಿ ಪ್ರಮಾಣಾಂತರವನ್ನುದಾಹರಿಸುತ್ತಾರೆ-

**ಮೂಲ ॥ ಅತಿರಿಕ್ತಾ ದ್ವಾದಶೀ ಚೇದ್ಯ ಸ್ತಾಂ(ತ್ಸ ತಾಂ)ನೋಪೋಷಯೇದ್ಯದಿ ।**
**ದ್ವಾದಶ ದ್ವಾದಶೀರ್ಹಂತಿ ದ್ವಾದಶೀ ಚಾತಿಲಂಘಿತಾ ॥ ೧೯೭ ॥**

**ಅರ್ಥ ॥** ಅತಿರಿಕ್ತ ದ್ವಾದಶೀದಿವಸ 60 ಗಳಿಗೆ ಆದಮೇಲೆ, ಮರುದಿವಸ ತ್ರಯೋದಶೀ ದಿವಸ ಸ್ವಲ್ಪ ದ್ವಾದಶಿಯು ಇದ್ದರೆ ಪೂರ್ಣ ದ್ವಾದಶೀದಿವಸವೂ ಉಪವಾಸ ಮಾಡಬೇಕು. ಅದನ್ನೂ ಉಪವಾಸಮಾಡದಿದ್ದರೆ 12 ದ್ವಾದಶಿಗಳನ್ನು ನಾಶಗೊಳಿಸುತ್ತದೆ. ತ್ರಯೋದಶೀ ಯುಕ್ತವಾದ ಸಾಧನದ್ವಾದಶಿಯು ಅತಿಕ್ರಾಂತವಾದರೂ (ಅಂದರೆ, ಪಾರಣಮಾಡುವಾಗ ದ್ವಾದಶಿಯು ದಾಟಿಬಿಟ್ಟರೆ) 12 ದ್ವಾದಶೀಫಲಗಳನ್ನು ನಾಶಗೊಳಿಸುತ್ತದೆ; ಅಂದರೆ ಮೊದಲು 12 ದ್ವಾದಶಿಗಳಲ್ಲಿ ಮಾಡಿದ ಪುಣ್ಯಫಲವು ನಷ್ಟವಾಗುತ್ತದೆ. ॥ 197 ॥

**ಮೂಲ ॥ (★) ದ್ವಾದಶ್ಯಾಮತಿರಿಕ್ತಾಯಾಂ ಯೋ ಭುಂಕ್ತೇ ಪೂರ್ವವಾಸರೇ।**
**ದ್ವಾದಶ ದ್ವಾದಶೀರ್ಹಂತಿ ದ್ವಾದಶೀಂ ವಾ ಪರಿತ್ಯಜೇತ್ ॥ ೧೯೮ ॥**

**ಅರ್ಥ ॥** (ತ್ರಯೋದಶೀ ದಿವಸದಲ್ಲಿಯೂ) ದ್ವಾದಶಿಯು ಹೆಚ್ಚು ಇದ್ದರೆ, ಯಾರು ಪೂರ್ಣ ದ್ವಾದಶೀದಿವಸ (ಉಪವಾಸಮಾಡದೆ) ಭೋಜನಮಾಡುತ್ತಾನೋ, ಆತನು ಮೊದಲು ಮಾಡಿದ 12 ದ್ವಾದಶೀವ್ರತಗಳಿಂದುಂಟಾದ ಪುಣ್ಯಗಳನ್ನು ಕಳಕೊಳ್ಳುತ್ತಾನೆ. ದ್ವಾದಶಿಯನ್ನು ಪರಿತ್ಯಾಗ ಮಾಡಿದರೂ (ತ್ರಯೋದಶೀದಿವಸ ಅತ್ಯಲ್ಪವಿರುವ ದ್ವಾದಶಿಯಲ್ಲಿ ಪಾರಣಮಾಡದೆ ಅದನ್ನತಿಕ್ರಮಿಸಿದರೂ) 12 ದ್ವಾದಶಿಯ ಪುಣ್ಯಗಳನ್ನು ಕಳಕೊಳ್ಳುತ್ತಾನೆ.

**ತಾತ್ಪರ್ಯ ॥** (1) ಆದುದರಿಂದ ತ್ರಯೋದಶೀದಿವಸ ಪುಚ್ಛದ್ವಾದಶಿಯನ್ನು ಬಿಡಬಾರದು. ಪುಚ್ಛದ್ವಾದಶಿಯಲ್ಲಿಯೇ ಭೋಜನಮಾಡಬೇಕು. ಅಂದರೆ- ಏಕಾದಶೀದಿವಸ ಉಪವಾಸಮಾಡಿ, ಮರುದಿನ ಪೂರ್ಣ ದ್ವಾದಶೀದಿವಸವೂ ಉಪವಾಸ ಮಾಡಿ ತ್ರಯೋದಶೀ ದಿವಸ ಪುಚ್ಛದ್ವಾದಶಿಯಲ್ಲಿ ಪಾರಣಮಾಡಬೇಕು. (2) ಅತಿರಿಕ್ತ ದ್ವಾದಶೀದಿವಸ ಉಪವಾಸ, ಪಾರಣ ಮೊದಲಾದುವುಗಳನ್ನು ಆರ್ಯಭಟ್ಟ ರೀತಿಯಾಗಿ ವಿಚಾರಮಾಡಿಸಿ ಮಾಡಬೇಕು. ಈ ರೀತಿಯಾಗಿ ಪ್ರಮಾಣಗಳಿವೆ- ''ಬ್ರಾಹ್ಮಣಃ ಪೈತೃಕಾದೀನಿ ದೇವಕಾರ್ಯಾಣಿ ಸೌರತಃ । ದ್ವಾದಶ್ಯಾದಿ ವ್ರತಾದೀನಿ ಹ್ಯಾರ್ಯೇಣೈವ ತು ಕಾರಯೇತ್ ॥'' ಬ್ರಾಹ್ಮಣನು ಪಿತೃಕೃತ್ಯಗಳನ್ನೂ ದೇವಕಾರ್ಯಗಳನ್ನೂ ಸೂರ್ಯಸಿದ್ಧಾಂತಾನುಸಾರವಾಗಿಯೂ, ದ್ವಾದಶ್ಯಾದಿ ವ್ರತಗಳನ್ನು ಆರ್ಯಭಟ್ಟ ರೀತಿಯಾಗಿಯೂ ಮಾಡಬೇಕು. ತಥಾ ಚ ಏಕಾದಶಿಯನ್ನೂ, ದ್ವಾದಶಿಯನ್ನೂ ಆರ್ಯಭಟ್ಟ ರೀತಿಯಾಗಿ ಗಣನಮಾಡಿಸಿ, ಅತಿರಿಕ್ತ ದ್ವಾದಶಿಯಿದ್ದರೆ ಮೊದಲಿನ ದಿವಸವೇ ಉಪವಾಸವನ್ನು ಮಾಡಬೇಕು. ಈ ವಿಷಯದಲ್ಲಿ ಸಮಾಖ್ಯಾವಚನಗಳು- ''ದ್ವಾದಶೀತಿ ಕಲಾ ಕಾಷ್ಠಾ ಯದಿ ಸ್ಯಾದಪರೇಽಹನಿ । ದ್ವಾದಶ ದ್ವಾದಶೀರ್ಹಂತಿ ಪೂರ್ವಸ್ಯಾಂ ಪಾರಣಂ ಕೃತಂ । ದಶಮೀವೇಧರಹಿತಾ ಪರೇದ್ಯುರ್ದ್ವಾದಶೀ ಯದಿ। ಅತಿರಿಕ್ತಾ ತು ಸಾ ಜ್ಞೇಯಾ ಸರ್ವಪಾಪಪ್ರಣಾಶಿನೀ ॥'' ಇಂತಹ ಅತಿರಿಕ್ತ ದ್ವಾದಶೀದಿವಸವೂ ಉಪವಾಸ ಮಾಡಬೇಕು. ॥198॥

ಈ ಪ್ರಕಾರ ಏಕಾದಶಿಯು ದಶಮೀವೇಧವಿದ್ದರೆ ದ್ವಾದಶೀದಿವಸ ಉಪವಾಸ ಮಾಡಬೇಕು. ಮರುದಿವಸ ದ್ವಾದಶಿಯು ಅತಿರಿಕ್ತವಾಗಿದ್ದರೆ ದ್ವಾದಶಿಯೇ ಉಪವಾಸ ಮಾಡಬೇಕೆನ್ನುವ ವಿಷಯದಲ್ಲಿ ಪ್ರಮಾಣಗಳನ್ನು ಹೇಳಿ, ಕೇವಲ ದ್ವಾದಶಿಯಲ್ಲಿ ಮಧ್ಯಾಹ್ನಕಾಲದಲ್ಲಿ ಶ್ರವಣನಕ್ಷತ್ರಯೋಗವಿದ್ದರೆ, ಆ ದಿನವೂ ಉಪವಾಸ ಮಾಡಬೇಕು. ಮಾಡದಿದ್ದರೆ ಪ್ರತ್ಯವಾಯವೂ, ಮಾಡಿದರೆ ಫಲಾಧಿಕ್ಯವೂ ಇದೆ ಎಂದು ನಿರೂಪಿಸುತ್ತಾರೆ-

**ಮೂಲ ॥ ದ್ವಾದಶೀಂ ಶ್ರವಣೋಪೇತಾಂ ಯೋ ನೋಪೋಷ್ಯಾತ್ಸು (ತ್ಸ) ಮಂದಧೀಃ ।**
**ಪಂಚಸಂವತ್ಸರಕೃತಂ ಪುಣ್ಯಂ ತಸ್ಯ ವಿನಶ್ಯತಿ ॥ ೧೯೯ ॥**

**ಅರ್ಥ ॥** (''ದಿನಾರ್ಧಸಂಯುತಾಂ ಶ್ರೋಣಾಂ ದ್ವಾದಶ್ಯಾ ಸಹ ಸಂಗತಾಂ । ತಾಮುಪೋಷ್ಯ ವ್ರತಂ ಕುರ್ಯಾದ್ವಾಮನಸ್ಯಾತಿವಲ್ಲಭಾಂ ॥'' ಇತಿ ಮರೀಚಿಃ ॥ ''ಉದಯಾದಭಿಜಿಲ್ಲಗ್ನಗಾಮಿನಿ ಶ್ರುತಿವಾಸರೇ । ಫಾಲ್ಗುನ್ಗೇ ಪ್ರೋಷ್ಠಪದ್ಯಾಂ ವಾ ಹ್ಯುಪೋಷ್ಯ ವ್ರತಮಾಚರೇತ್ ॥'' ಎಂದು ಹೇಳಿದ ಪ್ರಕಾರ) ದ್ವಾದಶಿಯನ್ನು ಅಂದರೆ- ಮಧ್ಯಾಹ್ನದವರೆಗೆ ದ್ವಾದಶಿಯನ್ನು ಮಧ್ಯಾಹ್ನ ಪರ್ಯಂತರವಿರುವ ಶ್ರವಣನಕ್ಷತ್ರದಿಂದ ಯುಕ್ತವಾದುದನ್ನು ಯಾವ ಪುರುಷನು ಉಪವಾಸಮಾಡುವುದಿಲ್ಲವೊ, ಅಂತಹವನು ಅತ್ಯಲ್ಪಜ್ಞನು, ಅಂತಹ ಪುರುಷನ ಐದು ಸಂವತ್ಸರಗಳಲ್ಲಿ ಸಂಪಾದಿಸಲ್ಪಟ್ಟ ಸರ್ವ ಪುಣ್ಯವೂ ನಷ್ಟವಾಗುತ್ತದೆ.

**ತಾತ್ಪರ್ಯ ॥** (1) ಆದುದರಿಂದ ಉದಯವನ್ನಾರಂಭಿಸಿಯೇ ಮಧ್ಯಾಹ್ನಕಾಲದಲ್ಲಿ ಶ್ರವಣ ನಕ್ಷತ್ರ ದ್ವಾದಶೀತಿಥಿ ಇವುಗಳ ಯೋಗವಿದ್ದರೇನೇ ವೈಷ್ಣವರು ಉಪವಾಸ ಮಾಡಬೇಕು. ಉಪವಾಸ ಮಾಡದಿದ್ದರೆ ಮಹಾಪ್ರತ್ಯವಾಯ ಪ್ರತಿಪಾದಕಗಳಾದ ಸಮಾಖ್ಯಾವಚನಗಳಿವೆ. ''ಶ್ರವಣದ್ವಾದಶೀಂ ಪುಣ್ಯಾಂ ನೋಪೋಷ್ಯಾನ್ಯತ್ಸಮೀಕ್ಷತೇ । ಸಂವತ್ಸರಕೃತಂ ಕರ್ಮ ತತ್ಕ್ಷಣಾದೇವ ನಶ್ಯತಿ ॥'' ಅಂದರೆ- ಶ್ರವಣದ್ವಾದಶೀದಿನ ಉಪವಾಸಮಾಡದಿದ್ದರೆ ಒಂದು ಸಂವತ್ಸರದಲ್ಲಿ ಮಾಡಿದ ಎಲ್ಲಾ ಪುಣ್ಯಕರ್ಮಗಳು ತತ್ಕ್ಷಣವೇ ನಷ್ಟವಾಗುತ್ತದೆ. ಹೀಗೆ ವಿಷ್ಣುಧರ್ಮದಲ್ಲಿ, ಅತ್ರಿಃ - ''ಶ್ರುತ್ವಾ ಯೇ ಪಾರಣಂ ಕುರ್ಯುರ್ದ್ವಾದಶ್ಯಾಂ ಶ್ರವಣಂ ಯದಿ । ತೇ ಯಾಂತಿ ರೌರವಂ ಘೋರಂ ಬಾಲವೃದ್ಧಾತುರಾ ಅಪಿ ॥'' ದ್ವಾದಶೀದಿನ ಶ್ರವಣನಕ್ಷತ್ರವದೆ ಎಂದು ಕೇಳಿಯೂ ಯಾರು ಪಾರಣಮಾಡುವರೋ ಅಂತಹ ಬಾಲಕರು, ವೃದ್ಧರು, ಆತುರರೂ, ಸರ್ವರೂ ಕೂಡ ರೌರವನರಕಕ್ಕೆ ಹೋಗುತ್ತಾರೆ ಎಂದು ಅತ್ರಿಋಷಿಯು. ಜಾಂಬಾಲಿಃ— ''ದ್ವಾದಶ್ಯಾ ಶ್ರುತಿಯುಕ್ತಾಯಾಂ ಯೇ ಕುರ್ಯುಃ ಪಾರಣಂ ದ್ವಿಜಾಃ। ತೇ ಯಾಂತಿ ರೌರವಂ ಘೋರಂ ಬಾಲವೃದ್ಧಾತುರಾ ಅಪಿ ॥'' ಈ ಪ್ರಕಾರವಾಗಿ ಮಾಡದಿದ್ದರೆ ನರಕಾದ್ಯನರ್ಥವು ಮಾತ್ರ ಹೇಳಿದ್ದಲ್ಲ, ಉಪವಾಸ ಮಾಡಿದರೆ ಮಹಾಫಲವೂ ಹೇಳಲ್ಪಟ್ಟಿದೆ. ಧರ್ಮಸಂಹಿತೆಯಲ್ಲಿ, ''ಯದಾ ತು ಶುಕ್ಲದ್ವಾದಶ್ಯಾಂ ನಕ್ಷತ್ರಂ ಶ್ರವಣಂ ಭವೇತ್। ತನ್ನಕ್ಷತ್ರೆ ಚೋಪವಾಸ ಏಕಾದಶ್ಯಯುತಂ ಫಲಂ ॥ ಶುಕ್ಲಾ ವಾ ಯದಿ ವಾ ಕೃಷ್ಣದ್ವಾದಶೀ ಶ್ರವಣಾನ್ವಿತಾ । ತತ್ರೋಪವಾಸಂ ಕುರ್ವೀತ ಏಕಾದಶ್ಯಾಃ ಶತಂ ಫಲಂ ॥'' ಶುಕ್ಲಪಕ್ಷ ಅಥವಾ ಕೃಷ್ಣಪಕ್ಷ ದ್ವಾದಶೀದಿನ ಶ್ರವಣ ನಕ್ಷತ್ರವಿದ್ದರೆ ಆ ದಿನ ಉಪವಾಸ ಮಾಡಬೇಕು. ಮಾಡಿದರೆ ಏಕಾದಶಿಗಿಂತ (10000) ಹತ್ತು ಸಹಸ್ರಪಾಲು ಫಲವಿದೆ. ತಥಾ ಚ ಮಾಡದಿದ್ದರೆ ಪ್ರತ್ಯವಾಯವೂ ಮಾಡಿದರೆ ಫಲಾಧಿಕ್ಯವೂ ಇದ್ದುದರಿಂದ ಶ್ರವಣದ್ವಾದಶೀ ವ್ರತವನ್ನು ಮಾಡಬೇಕು. ''ಉದಯದ್ವಯಸಂಸ್ಪೃಷ್ಟಶ್ರೋಣಾಯುಕ್ತಾ ಹರಿರ್ಯದಿ । ತದಾ ನೋಪೋಷಣಂ ಕಾರ್ಯಂ ವೈಷ್ಣವೈರ್ವಿಷ್ಣುತತ್ಪರೈಃ ॥'' ಎರಡು ಸೂರ್ಯೋದಯಗಳಿಗೆ ಮುಟ್ಟಿಕೊಂಡಿದ್ದ ಶ್ರವಣನಕ್ಷತ್ರದಿಂದ ದ್ವಾದಶಿಯು ಯುಕ್ತವಾದರೆ ಆಗ ವೈಷ್ಣವರು ಉಪವಾಸ ಮಾಡಕೂಡದು. ''ಪೂರ್ವತ್ರ ಯದಿ ಸಂಪೂರ್ಣಾ ಪರತ್ರ ಶ್ರುತಿಭಂ ಯದಿ । ತದಾ ನೋಪೋಷಣಂ ಕಾರ್ಯಂ ದ್ವಾದಶ್ಯಾಂ ವಿಷ್ಣುತತ್ಪರೈಃ ॥'' ಮೊದಲಿನ ದಿನ ಶ್ರವಣನಕ್ಷತ್ರ ಸಂಪೂರ್ಣವಾಗಿದ್ದು ಪರದಿನವೂ ಶ್ರವಣನಕ್ಷತ್ರವಿದ್ದರೆ ಆಗ ದ್ವಾದಶೀದಿನ ವೈಷ್ಣವರು ಉಪವಾಸ ಮಾಡಕೂಡದು. ಅಂದರೆ, ಶ್ರವಣದ್ವಾದಶಿಯ ಪರದಿನದಲ್ಲಿಯೂ ಸ್ವಲ್ಪವಾದರೂ ಶ್ರವಣನಕ್ಷತ್ರವಿದ್ದರೆ ಅಂತಹ ಹಿಂದಿನ ಶ್ರವಣದ್ವಾದಶೀದಿನ ಉಪವಾಸ ಮಾಡಕೂಡದು. ''ಅನಂಗಯುಕ್ತದ್ವಾದಶ್ಯಾಂ ವಿಶ್ವೇದೇವರ್ಕ್ಷವರ್ಜಿತಾ । ಶ್ರುತಿರ್ಭವೇತ್ತದಾ ತತ್ರ ಕುರ್ಯಾದ್ವ್ರತಮುಪೋಷಣಂ''॥ ತ್ರಯೋದಶೀಯುಕ್ತ ದ್ವಾದಶೀದಿನ ಶ್ರವಣ ನಕ್ಷತ್ರವು ಉತ್ತರಾಷಾಢಾ ನಕ್ಷತ್ರದಿಂದ ವರ್ಜಿತವಾದರೆ ಆಗ ಉಪವಾಸ ಮಾಡಬೇಕು. ಅಂದರೆ ಉದಯಕಾಲದಲ್ಲಿಯೇ ಶ್ರವಣನಕ್ಷತ್ರವಿರಬೇಕೆಂದು ತಾತ್ಪರ್ಯವು. ''ಶ್ರವಣದ್ವಾದಶೀಂ ಪುಣ್ಯಾಂ ಕೋಟಿಮಾಪ್ನೋತ್ಯುಪೋಷ್ಯ ವೈ । ತಸ್ಮಾಚ್ಛತಗುಣಂ ಪಾಪಂ ಉತ್ತರಾಷಾಢದೂಷಿತಾಂ''॥ ಇತ್ಯಾದಿ ಶ್ರವಣದ್ವಾದಶೀದಿವಸ ಉಪವಾಸಮಾಡಿ ಬಹುಪುಣ್ಯವನ್ನು ಹೊಂದುತ್ತಾನೆ. ಆ ದಿನವೇ ಉತ್ತರಾಷಾಢಾ ನಕ್ಷತ್ರದಿಂದ ದೂಷಿಸಲ್ಪಟ್ಟಿದ್ದರೆ ಅಂದರೆ, ವಿದ್ಧವಾಗಿದ್ದರೆ ಅದಕ್ಕಿಂತ (100) ನೂರು ಪಾಲು ಪಾಪವು ಬರುವುದು. ''ದ್ವಾದಶೀ ಯದಿ ವೈ ಸ್ವಲ್ಪಾಶ್ರವಣಂ ಚಾತಿರಿಚ್ಯತೇ । ತದಾ ನೋಪೋಷಣಂ ಕಾರ್ಯಂ''॥ ದ್ವಾದಶಿಯು ಸ್ವಲ್ಪವಾಗಿದ್ದು

ಶ್ರವಣವು ಹೆಚ್ಚು ಇದ್ದರೂ ಉಪವಾಸ ಮಾಡಕೂಡದು. ''ಧನಿಷ್ಠಾಸಂಯುತೇ ಕುರ್ಯಾತ್ ಶ್ರವಣದ್ವಾದಶೀ ವ್ರತಂ। ತತ್ಕರ್ಮ ಸಫಲಂ ಜ್ಞೇಯಮಿತಿ ಪ್ರಾಹ ಪ್ರಜಾಪತಿಃ''॥ ಧನಿಷ್ಠಾನಕ್ಷತ್ರದಿಂದ ಯುಕ್ತವಾದ ಶ್ರವಣದ್ವಾದಶೀವ್ರತವನ್ನು ಮಾಡಬೇಕು. ಆ ಕರ್ಮವೇ ಸಫಲವೆಂದು ತಿಳಿಯಬೇಕು. ತಥಾ ಚ ಉತ್ತರಾಷಾಢಾನಕ್ಷತ್ರದಿಂದ ವಿದ್ಧವಾಗಿದ್ದರೆ ಆ ಶ್ರವಣದ್ವಾದಶೀದಿನ ಉಪವಾಸ ಮಾಡಕೂಡದು. ಶ್ರವಣನಕ್ಷತ್ರಕ್ಕೂ ಮಧ್ಯಾಹ್ನ ಕಾಲದಲ್ಲಿ ವ್ಯಾಪ್ತಿಯು ಆವಶ್ಯಕವು. ಧನಿಷ್ಠಾನಕ್ಷತ್ರದಿಂದ ಯುಕ್ತವಾಗಿದ್ದರೆ ಪ್ರಶಸ್ತವು. ಅಂದರೆ ಮರುದಿನ ಸೂರ್ಯೋದಯಕ್ಕೆ ಶ್ರವಣನಕ್ಷತ್ರವು ಮುಟ್ಟಿಬಾರದೆಂದು ತಾತ್ಪರ್ಯವು. ಹೀಗೆ ದೋಷವಿಲ್ಲದಿರುವ ಶ್ರವಣದ್ವಾದಶಿಯಲ್ಲಿ ಉಪವಾಸ ಮಾಡಬೇಕು. ಅಂತಹ ಶ್ರವಣದ್ವಾದಶೀ ಉಪವಾಸವು ಭಾದ್ರಪದ ಶುದ್ಧದಲ್ಲಿ ಮಾಘ ಅಥವಾ ಫಾಲ್ಗುಣ ಬಹುಳದಲ್ಲಿ ಬಂದೀತು ಹೊರತು ಬೇರೆ ತಿಂಗಳಿನಲ್ಲಿ ಬರಲಾರದು ॥ 199 ॥

ಹಾಗಾದರೆ ''ಪಾರಣಾಂತಂ ವ್ರತಂ ಪ್ರೋಕ್ತಂ ವ್ರತಾಂತೇ ವಿಪ್ರಭೋಜನಂ । ಅಸಮಾಪ್ತೇ ವ್ರತೇ ಪೂರ್ವೇ ನೈವ ಕುರ್ಯಾತ್ ವ್ರತಾಂತರೇ ॥'' ಎಂದು ಹೇಳಿರುವುದರಿಂದ ಏಕಾದಶೀವ್ರತವು ದ್ವಾದಶೀದಿವಸ ಪಾರಣಪರ್ಯಂತವಾಗಿ ಆಗುತ್ತದೆ. ಆದಕಾರಣ ದ್ವಾದಶೀದಿವಸವೂ ಉಪವಾಸ ಮಾಡಿದರೆ ಏಕಾದಶ್ಯುಪವಾಸವ್ರತವು ನಷ್ಟವಾಗಬೇಕಾಗುವುದೆಂದರೆ ಈ ಎರಡು ದಿವಸಗಳಿಗೂ ಒಬ್ಬನೇ ದೇವತೆಯಾದುದರಿಂದ ದೋಷವಿಲ್ಲವೆಂದು ಪ್ರಮಾಣಗಳಿಂದ ಪ್ರತಿಪಾದಿಸುತ್ತಾರೆ-

**ಮೂಲ ॥ ಏಕಾದಶೀಮುಪೋಷ್ಯಾಥ**
**ದ್ವಾದಶೀಮಪ್ಯ(ಶೀಂ ಸಮು) ಪೋಷಯೇತ್ ।**
**ನ ತತ್ರ ವಿಧಿಲೋಪಃ ಸ್ಯಾ-**
**ದುಭಯೋರ್ದೇವತಾ ಹರಿಃ ॥ ೨೦೦ ॥**

**ಅರ್ಥ ॥** ಏಕಾದಶೀ ದಿವಸ ಉಪವಾಸಮಾಡಿ ದ್ವಾದಶೀ ದಿವಸವೂ ಉಪವಾಸ ಮಾಡಬೇಕು. ಆ ವಿಷಯದಲ್ಲಿ ವಿಧಿಗೆ ಲೋಪವು ಬರುವುದಿಲ್ಲ. ಏಕೆಂದರೆ ಎರಡು ದಿವಸಗಳಿಗೂ ಶ್ರೀಹರಿಯೇ ದೇವತೆಯು.

**ತಾತ್ಪರ್ಯ ॥** ಏಕಾದಶೀ ದಿವಸ ಉಪವಾಸಮಾಡಿ ದ್ವಾದಶೀ ದಿವಸವೂ ಉಪವಾಸ ಮಾಡಿದರೆ ಏಕಾದಶೀ ವ್ರತಕ್ಕೆ ಲೋಪವು ಬರಬೇಕಾಗುವುದೆಂದರೆ ಏಕಾದಶೀ ದ್ವಾದಶೀ ಎರಡು ದಿವಸಗಳಿಗು ಸರ್ವೋತ್ತಮನಾದ ಶ್ರೀಹರಿಯೇ ದೇವತೆಯಾದುದರಿಂದ ಹರಿವಾಸರವಾದ ಪ್ರಯುಕ್ತ ಮರುದಿವಸ ಪಾರಣಮಾಡಿದರೆ ವ್ರತಕ್ಕೆ ಭಂಗವು ಬರುವುದಿಲ್ಲ. ಇದೇ ಅಭಿಪ್ರಾಯವು. ನಾರದೀಯ ಪುರಾಣದಲ್ಲಿ ಸ್ಪಷ್ಟವಾಗಿ ನಿರೂಪಿಸಿಯದೆ. ''ಯಥಾನುಪ್ರಾಪ್ಯತೇ ಋಕ್ಷಂ ದ್ವಾದಶ್ಯಾಂ ವೈಷ್ಣವಂ ಕ್ವಚಿತ್ । ಏಕಾದಶೀ ತಥೋಪೋಷ್ಯಾ ಪಾಪಘ್ನೀ ಶ್ರವಣಾನ್ವಿತಾ ॥ ಉಭಯೋರ್ದೇವತಾ ವಿಷ್ಣುಃ ಪಾರಣೇ ಪುರುಷೋತ್ತಮಃ । ವಿಭೇದೋಽತ್ರ ನ ಕರ್ತವ್ಯೋ ವಿಭೇದಾತ್ ಪತತೇ ನರಃ ॥'' ದಶಮೀ ತಿಥಿಗೆ ಯಮನು ದೇವತೆಯು. ಶ್ರೀವಿಷ್ಣುವು ದೇವತೆಯಲ್ಲ. ಆದಕಾರಣ ಅತಿಪ್ರಸಂಗವಿಲ್ಲ. ತಥಾ ಚ ಏಕಾದಶೀದಿನ ಉಪವಾಸ ಮಾಡಿ ದ್ವಾದಶೀ ದಿನ ಶ್ರವಣನಕ್ಷತ್ರಯೋಗವು ಮಧ್ಯಾಹ್ನಪರ್ಯಂತ ವಾಗಿದ್ದರೆ ಆ ದಿನವೂ ಉಪವಾಸ ಮಾಡಿ ಮರುದಿನ ತ್ರಯೋದಶೀ ದಿನ ಪಾರಣಾದಿಗಳನ್ನು ಮಾಡಬೇಕು.॥ 200 ॥

ಹೀಗೆ ಅಲ್ಪದ್ವಾದಶಿಯು ಅತಿರಿಕ್ತವಾಗಿರುವಾಗ ತತ್ಕಾಲದಲ್ಲಿಯೇ ಪಾರಣವನ್ನು ಮಾಡತಕ್ಕದ್ದೆಂದು ಹೇಳಲ್ಪಟ್ಟಿತು. ಅತ್ಯಲ್ಪಕಾಲದಲ್ಲಿ ಬ್ರಾಹ್ಮಣರಿಗೆ ಭೋಜನಾದಿಗಳನ್ನು ಮಾಡಿಸುವ ಸಂದರ್ಭದಲ್ಲಿ ಮಾಡಲು ಅಸಾಧ್ಯವಾದುದರಿಂದಲೂ ಸಂಧ್ಯಾದಿ ನಿತ್ಯಕರ್ಮಗಳಿಗೆ ಲೋಪವು ಪ್ರಾಪ್ತವಾಗುವುದರಿಂದಲೂ ಆಗಲೇ ಪಾರಣವನ್ನು ಹೇಗೆ ಮಾಡುವುದು? ಎಂದರೆ ಆ ವಿಷಯದಲ್ಲಿ ಪ್ರಶ್ನ ಪ್ರತ್ಯುತ್ತರಗಳಿಂದ ಋಷಿವಾಕ್ಯವನ್ನು ಪಠನ ಮಾಡುತ್ತಾರೆ-

**ಮೂಲ ॥ (★ ಅಲ್ಪಾಯಾಮಪಿ ವಿಪ್ರೇಂದ್ರ ಪಾರಣಂ ತು ಕಥಂ ಭವೇತ್।)**
**ಪಾರಯಿತ್ವೋದಕೇನಾಪಿ(ನೈವ) ಭುಂಜಾನೋ ನೈವ ದುಷ್ಯತಿ ॥ ೨೦೧ ॥**

**ಅರ್ಥ ॥** ದ್ವಾದಶಿಯು ಅತ್ಯಲ್ಪವಾಗಿರುವಾಗ ಆಗ ಪಾರಣವು ಹೇಗೆ ಆಗುವುದು ( ಪರಾಧೀನರಾದ ಸ್ತ್ರೀಪುರುಷರಿಂದ ಅತ್ಯಲ್ಪಕಾಲದಲ್ಲಿಯೇ ಪಾರಣವನ್ನು ಮಾಡಲು ಅಶಕ್ಯವಾಗಿದೆ, ಹೀಗೆ ಒಬ್ಬ ಋಷಿಯು ಪ್ರಶ್ನಿಸುವಾಗ ಉತ್ತರವನ್ನು ಹೇಳುತ್ತಾರೆ.) (ಪರಾಧೀನನಾಗಿ ಬ್ರಾಹ್ಮಣಸಂತರ್ಪಣಾದಿಗಳನ್ನು ಮಾಡಿಸುವ ಪುರುಷನು) ನೀರಿನಿಂದಲೇ ಪಾರಣಮಾಡಿಕೊಂಡು (ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಮೇಲೆ) ಭೋಜನ ಮಾಡುವವನು ದುಷ್ಟನಾಗುವುದಿಲ್ಲ, ಅಂದರೆ ಏಕಾದಶ್ಯುಪವಾಸಕ್ಕೆ ಭಂಗ ಬರುವುದಿಲ್ಲ. (ಹಾಗೆ ವರಾಹಪುರಾಣದಲ್ಲಿಯೂ ಹೇಳಿರುತ್ತದೆ.) ॥ 201 ॥

ಅನ್ಯಾಧೀನನಾದ ಪುರುಷನಿಗೂ ಪ್ರಾತಃಕಾಲದಲ್ಲಿ ಕಲಾ, ಘಟಿಕೆಗಳಿಂದ ಮೊದಲೇ ಸ್ನಾನ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಧ್ಯಾಹ್ನಿಕ ಕರ್ಮಗಳನ್ನೂ ಆವಾಗಲೇ ಮಾಡಲು ಸಾಧ್ಯವಿಲ್ಲದಿರುವುದರಿಂದ ಅವುಗಳನ್ನೆಲ್ಲಾ ಹೇಗೆ ಮಾಡುವುದು ಮಾಡದಿದ್ದರೆ ಅವುಗಳಿಗೆಲ್ಲಾ ಲೋಪವು ಬರುವುದು. ಎಂದರೆ-

**ಮೂಲ ॥ (ಯದಲ್ಪಾ ದ್ವಾದಶೀ ದೃಷ್ಟಾ ನಿಶೀಥಾದೂರ್ಧ್ವಮೇವ ತು ।**
**ಆಮಧ್ಯಾಹ್ನಾಃ ಕ್ರಿಯಾಃ ಸರ್ವಾಃ ಕರ್ತವ್ಯಾಃ ಶಂಭುಶಾಸನಾತ್ ॥ ೨೦೨ ॥**

**ಅರ್ಥ ॥** ಯಾವಾಗ ದ್ವಾದಶಿಯು ಅತ್ಯಲ್ಪವಾಗಿ ಕಾಣಲ್ಪಡುತ್ತದೋ, ಆಗ ಅರ್ಧರಾತ್ರಿಯಿಂದ ಮೇಲೆಯೇ (ಅಂದರೆ 10 ಗಳಿಗೆ ರಾತ್ರಿಯಿರುವುದಕ್ಕಿಂತ ಮೊದಲೇ ಎದ್ದು) ಪ್ರಾತಃಕಾಲವನ್ನಾರಂಭಿಸಿ ಮಧ್ಯಾಹ್ನಪರ್ಯಂತವಾಗಿ ಮಾಡಲ್ಪಡತಕ್ಕ ನಿತ್ಯನೈಮಿತ್ತಿಕ ಎಲ್ಲಾ ಕರ್ಮಗಳೂ (ಸೂರ್ಯೋದಯದಿಂದ ಮೊದಲೇ) ಮಾಡತಕ್ಕವುಗಳು. ('ಅಕಾಲೇ ಚ ಕೃತಂ ಕರ್ಮ ನಿಷ್ಫಲಂ ಸ್ಯಾತ್' ಅಕಾಲದಲ್ಲಿ ಮಾಡಿದ ಕರ್ಮವು ನಿಷ್ಫಲವಾಗುವುದು, ಇದು ಮೊದಲಾದ ವಾಕ್ಯಗಳಿಂದ ಅಕಾಲದಲ್ಲಿ ಹೇಗೆ ಮಾಡುವುದೆಂದರೆ) ಮಹಾದೇವನ ಶಾಸನರೂಪ ಪ್ರಮಾಣದಿಂದ (ಆವಾಗಲೇ ಮಾಡತಕ್ಕದ್ದು.) ॥ 202 ॥

**ಮೂಲ ॥ (ವ್ಯಾಸಃ ॥ ಉಷಸಿ ದ್ವೇ ತು ಕರ್ತವ್ಯೇ**
**ಪ್ರಾತರ್ಮಾಧ್ಯಾಹ್ನಿಕಕ್ರಿಯೇ ।**
**ಭುಜೇರ್ಯದಾಪಕರ್ಷಃ ಸ್ಯಾತ್ತದಂತರ್ನ್ಯಾಯತೋ ಭವೇತ್ ॥ ೨೦೩ ॥)**

**ಅರ್ಥ ॥** (ವೇದವ್ಯಾಸರು (ನಿರೂಪಿಸುತ್ತಾರೆ- ಸಾಧನದ್ವಾದಶೀ ದಿವಸ) ಉಷಃಕಾಲ

ದಲ್ಲಿಯೇ (''ಪಂಚ ಪಂಚ ಉಷಃಕಾಲಃ ಸಪ್ತಪಂಚಾರುಣೋದಯಃ'') ಪ್ರಾತಃಕಾಲದಲ್ಲಿ ಮಾಡತಕ್ಕ ಸ್ನಾನ ಸಂಧ್ಯಾವಂದನ ಔಪಾಸನ ಮೊದಲಾದುದು, ಮಧ್ಯಾಹ್ನ ಕಾಲದಲ್ಲಿ ಮಾಡತಕ್ಕ ದೇವತಾರ್ಚನ ವೈಶ್ವದೇವ ಮೊದಲಾದುದು, ಹೀಗೆ ಎರಡು ಕ್ರಿಯಾ ಸಮುದಾಯಗಳೂ ದ್ವಾದಶೀ ಕಾಲದಲ್ಲಿಯೇ ಮಾಡತಕ್ಕವುಗಳು. (ಏಕೆಂದರೆ-) ಸ್ನಾನ, ಸಂಧ್ಯಾವಂದನ, ಮಾಧ್ಯಾಹ್ನಿಕ, ದೇವತಾರ್ಚನ, ವೈಶ್ವದೇವಾದಿಗಳು ಮಾಡಿದ ಮೇಲೆ ಮಾಡಲ್ಪಡತಕ್ಕ ಭೋಜನಕ್ಕೆ (ಯಾವಾಗ ಪ್ರಾತಃಕಾಲದಲ್ಲಿ ದ್ವಾದಶೀ ದಿವಸವೇ ಮಾಡತಕ್ಕದ್ದಾದುದರಿಂದ) ಅಪಕರ್ಷ(ಸೆಳಕೊಳ್ಳುವುದು)ವಾಗಬೇಕೋ, ಅದರ ಮಧ್ಯದಲ್ಲಿಯೇ (ದ್ವಾದಶಿಯಲ್ಲಿಯೇ) ''ಅಂಗಕರ್ಮಗಳು ಪ್ರಧಾನಕರ್ಮದ ಅಧೀನ ವಾಗಿದೆ'' ಎಂಬ ನ್ಯಾಯದಿಂದ ಆಗುವುದು. (ಆವಾಗಲೇ ಅದಕ್ಕಾಗಿ ಕರ್ಮಗಳನ್ನು ಮಾಡಬೇಕು.) ॥ 203 ॥)

ಯಾವಾಗ ಆತುರಾದಿಗಳಿಗೆ ಪ್ರಾತಃಕಾಲದಲ್ಲಿಯೇ ಸ್ನಾನ ಸಂಧ್ಯಾವಂದನಾದಿಗಳನ್ನು ಮಾಡಲಿಕ್ಕೆ ಸಾಮರ್ಥ್ಯವಿಲ್ಲವೋ, ಆಗ ಅವರಿಗೆ ಪಾರಣವು ಹೇಗೆ ಆಗುವುದು? ಎಂದರೆ-

**ಮೂಲ ॥ (ಕರ್ತುಂ ಸಾಧ್ಯಂ ಯದಾ ನಾಲಂ ದ್ವಾದಶ್ಯದ್ಭಿಸ್ತು ಪಾರಯೇತ್ ।**
**ಕೃತಾವಲ್ಪಾಶಿವತ್ಪಶ್ಚಾದ್ಭುಂಜೀತೇತ್ಯಪರೇ ಜಗುಃ ॥ ೨೦೪ ॥**

**ಅರ್ಥ ॥** (ಸಂಧ್ಯಾವಂದನಾದಿ ಕರ್ಮಗಳನ್ನು ಮಾಡಲಿಕ್ಕೆ ಯಾವಾಗ (ಅಶಕ್ತರಿಗೆ ಸಾಮರ್ಥ್ಯ ವಿಲ್ಲವೋ, ಆವಾಗಲೂ ದ್ವಾದಶೀದಿವಸವೇ (ಮಂತ್ರಸ್ನಾನಾದಿಗಳನ್ನು ಮಾಡಿ) ಜಲಗಳಿಂದ ಪಾರಣಮಾಡಬೇಕು. ಅನಂತರ ಮಧ್ಯಾಹ್ನಾದಿ ಮೇಲಿನ ಕಾಲದಲ್ಲಿ (ಸ್ವವಿಹಿತಗಳಾದ ಕರ್ಮಗಳನ್ನು ಮಾಡಿ) ಭೋಜನಮಾಡಬೇಕು. ಹೇಗೆಂದರೆ, ಯಜ್ಞವಿಶೇಷದಲ್ಲಿ ಭೋಜನವನ್ನು ಮಾಡದೆ ಉದಕವನ್ನು ಮಾತ್ರ ಪ್ರಾಶನಮಾಡುವ ಯಾಜ್ಞಿಕ ಪುರುಷನಂತೆ. (ಅಂದರೆ ಯಾಗದಲ್ಲಿ ತತ್ಕಾಲದಲ್ಲಿ ಭೋಜನಮಾಡದೆ ಕಾಲಾಂತರದಲ್ಲಿ ಭೋಜನ ಮಾಡತಕ್ಕ ಪುರುಷನಂತೆ.) (ಮುಖ್ಯ ಕಾಲದಲ್ಲಿ ಭೋಜನಮಾಡದೆ ಬೇರೆ ಕಾಲದಲ್ಲಿ ಭೋಜನವು ನಿಷಿದ್ಧವಾದ ಪ್ರಯುಕ್ತ ಹಾಗೆ ಮಾಡುವುದು ಹೇಗೆ ಸಂಗತವಾಗುವುದೆಂದರೆ) ಕೆಲವರು ಮಾತ್ರ ಹೀಗೆ ಹೇಳುತ್ತಾರೆ. ॥ 204 ॥

**ಮೂಲ ॥ ಅಶಿತಾನಶಿತಾ ಯಸ್ಮಾದಾಪೋ ವಿದ್ವದ್ಭಿರೀರಿತಾಃ ।**
**ಅಂಭಸಾ ಕೇವಲೇನೈವ ಕರಿಷ್ಯೇ ವ್ರತಪಾರಣಂ ।**
**(★ತದ್ವಿಶಿಷ್ಟಂ ಮುನಿಪ್ರೋಕ್ತಮಶಿತಾನಶಿತಂ ಚ ಯತ್ ॥ ೨೦೫ ॥**

**ಅರ್ಥ ॥** ನೀರು ಕುಡಿದರೆ ಭುಕ್ತಪ್ರಾಯವಾಗಿಯೂ (ಭೋಜನಮಾಡಿದ ಹಾಗೂ) ಉಪೋಷಿತಪ್ರಾಯವಾಗಿಯೂ (ಉಪವಾಸಮಾಡಿದ ಹಾಗೂ)ಆಗುತ್ತದೆ. ಹೀಗೆ ವಿದ್ವಾಂಸರಿಂದ ಯಾವ ಕಾರಣದಿಂದ ಹೇಳಲ್ಪಡುತ್ತವೋ, ಆದಕಾರಣ ಬೇರೆ ದ್ರವ್ಯಗಳಿಂದ ಮಿಶ್ರವಾಗದಿರುವ ಕೇವಲ ನೀರಿನಿಂದಲೇ ಏಕಾದಶೀ ವ್ರತಾಂಗ ಪಾರಣವನ್ನು ಮಾಡುವೆನು. (ಹೀಗೆ ಸಂಕಲ್ಪಿಸಿ ಪೂರ್ವೋಕ್ತಮಂತ್ರದಿಂದ ವ್ರತಾಂಗ ಪಾರಣವನ್ನು ಮಾಡಬೇಕು.) (ಯಾವುದು ಭೋಜನಮಾಡಿದ ಹಾಗೂ ಉಪವಾಸ ಮಾಡಿದ ಹಾಗೂ ಆಗುತ್ತದೋ, ಅದು ಅತ್ಯುತ್ತಮವೆಂದು ಮುನಿಗಳಿಂದ ಹೇಳಲ್ಪಟ್ಟಿದೆ.) ॥ 205 ॥

ಮರುದಿವಸ ದ್ವಾದಶಿಯು ಅತಿರಿಕ್ತವಾಗಿದ್ದರೆ ಆ ದಿವಸವೂ ಉಪವಾಸಮಾಡಿ ಪುಚ್ಚದ್ವಾದಶೀ ದಿವಸ ಪಾರಣವನ್ನು ಮಾಡಬೇಕು. ಹಾಗೆಯೇ ಶ್ರವಣದ್ವಾದಶಿಯಲ್ಲಿಯೂ ಉಪವಾಸ ಮಾಡಿ ತ್ರಯೋದಶೀದಿವಸ ಪಾರಣವನ್ನು ಮಾಡಬೇಕು. ಇದು ಮುಖ್ಯ ವೈಷ್ಣವ ವ್ರತವಾಗಿದೆ, ಎಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು ಹೇಳಿದ ಅರ್ಥದಲ್ಲಿ ಪ್ರಮಾಣಗಳನ್ನು ಹೇಳಿ ಅದರಲ್ಲಿ ವಿಶ್ವಾಸ ಹುಟ್ಟುವುದಕ್ಕಾಗಿ ಏಕಾದಶೀ ಮಾಹಾತ್ಮ್ಯೆಯನ್ನು ಹೇಳುತ್ತಾರೆ-

**ಮೂಲ ॥ ನ ಕಾಶೀ ನ ಗಯಾ ಗಂಗಾ**
**ನ ರೇವಾ ನ ಚ ಪುಷ್ಕರಂ (ಗೌತಮೀ)।**
**ನ ಚಾಪಿ ಕೌರವಂ ಕ್ಷೇತ್ರಂ**
**ತುಲ್ಯಂ ಭೂಪ ಹರೇರ್ದಿನಾತ್ ॥ ೨೦೬ ॥**

**ಅರ್ಥ ॥** ಕಾಶಿಯೂ ಅಲ್ಲ, ಗಯೆಯೂ ಅಲ್ಲ, ಭಾಗೀರಥಿಯೂ ಅಲ್ಲ, ರೇವಾನದಿಯೂ ಅಲ್ಲ, (ಗೌತಮೀಯೂ) ಪುಷ್ಕರ ಕ್ಷೇತ್ರವೂ ಅಲ್ಲ, ಕುರುಕ್ಷೇತ್ರವೂ ಕೂಡ ಹರಿದೇವತಾಕ ಏಕಾದಶೀ ದಿನದಿಂದ ಸಮಾನವಲ್ಲ.

**ತಾತ್ಪರ್ಯ ॥** ಸ್ನಾನ-ಪಾನ ಆವಾಸಾದಿಗಳಿಂದ ಹೆಚ್ಚು ಫಲಗಳನ್ನು ಕೊಡುವ ಕಾಶ್ಯಾದಿಗಳು ಏಕಾದಶೀ ದಿವಸಕ್ಕೆ ಸಮಾನವಲ್ಲ, ಅಂದರೆ ಏಕಾದಶ್ಯುಪವಾಸ ಫಲಕ್ಕೆ ಸಮವಲ್ಲ, ತಥಾಚ ಎಲ್ಲಾ ತೀರ್ಥಸ್ನಾನಾದಿಗಳಿಗಿಂತ ಹೆಚ್ಚು ಫಲವನ್ನು ಕೊಡುವುದರಿಂದ ಏಕಾದಶೀ ವ್ರತವು ಅತಿ ಶ್ರೇಷ್ಠವು ॥ 206 ॥

**ಮೂಲ ॥ ಅಶ್ವಮೇಧ ಸಹಸ್ರಾಣಿ ವಾಜಪೇಯ ಶತಾನಿ ಚ ।**
**ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೨೦೭ ॥**

**ಅರ್ಥ ॥** ವಿಧಿಪೂರ್ವಕವಾಗಿ ಮಾಡಿದ ಸಹಸ್ರ ಅಶ್ವಮೇಧಯಾಗಗಳೂ ನೂರಾರು ವಾಜಪೇಯ ಯಾಗಗಳೂ ಕೂಡ ವಿಧಿಪ್ರಕಾರ ಮಾಡಿದ ಏಕಾದಶೀ ಉಪವಾಸದ 16 ಕಲೆಗಳ ಮಧ್ಯದಲ್ಲಿ 1 ಕಲೆಯನ್ನು ಕೂಡ ಹೊಂದುವುದಿಲ್ಲ. ॥ 207 ॥

**ಮೂಲ ॥ ಏಕಾದಶೀ ಸಮುತ್ಥೇನ ವಹ್ನಿನಾ ಪಾತಕೇಂಧನಂ ।**
**ಭಸ್ಮೀಭವತಿ ರಾಜೇಂದ್ರ ಅ(ಹ್ಯ)ಪಿ ಜನ್ಮ ಶತೋದ್ಭವಂ ॥ ೨೦೮ ॥**

**ಅರ್ಥ ॥** ಹೇಗೆ ಕಾಡುಕಿಚ್ಚಿನಿಂದ ಅರಣ್ಯದಲ್ಲಿರುವ ಕಟ್ಟಿಗೆ ಸಮೂಹವು ಭಸ್ಮೀಭೂತ ವಾಗುತ್ತದೋ ಹಾಗೆಯೇ ಹೇ ರಾಜಶ್ರೇಷ್ಠನೇ ಏಕಾದಶ್ಯುಪವಾಸದಿಂದ ಉಂಟಾದ ಪುಣ್ಯದಿಂದ ನೂರಾರು ಜನ್ಮಗಳಲ್ಲಿ ಮಾಡಿದ್ದ ಮಹಾಪಾತಕಾದಿ ನಾನಾವಿಧಗಳಾದ ಪಾತಕಗಳು ಭಸ್ಮೀಭೂತ ಗಳಾಗುತ್ತವೆ. ॥ 207 ॥

ಗ್ರಹಣ ಮೊದಲಾದ ಪುಣ್ಯತಿಥಿಗಳು ಇರುವಾಗ ಏಕಾದಶಿಯೇ ಉತ್ತಮವಾಗುವುದು ಹೇಗೆಂದರೆ- ಮಹಾ ಪಾತಕಾದಿಗಳನ್ನು ನಾಶಪಡಿಸುವುದರಿಂದ ಏಕಾದಶಿಗೆ ಸಮಾನವು ಯಾವುದೂ ಇಲ್ಲವೆಂದು ನಿರೂಪಿಸುತ್ತಾರೆ-

**ಮೂಲ ॥ ನೇದೃಶಂ ಪಾವನಂ ಕಿಂಚಿನ್ನರಾಣಾಂ ಭುವಿ ವಿದ್ಯತೇ ।**
**ಯಾದೃಶಂ ಪದ್ಮನಾಭಸ್ಯ ದಿನಂ ಪಾತಕಹಾನಿದಂ (ನಾಶನಂ) ॥ ೨೦೯ ॥**

**ಅರ್ಥ ॥** ಜಂಬೂದ್ವೀಪದಲ್ಲಿ (ಕರ್ಮಭೂಮಿಯಲ್ಲಿ) ಸತ್ಕರ್ಮಗಳನ್ನು ಮಾಡುವ ಮನುಷ್ಯರಿಗೆ ಶ್ರೀಹರಿಯ ದಿನವಾದ ಏಕಾದಶಿಯು ಎಂತಹ ಪಂಚಮಹಾಪಾತಕಾದಿಗಳನ್ನು ನಾಶಪಡಿಸುವುದೋ ಇಂತಹ ಮಹಾ ಪಾತಕಗಳನ್ನು ನಾಶಪಡಿಸುವುದು ಪರಮ ಪಾವಿತ್ರ್ಯವನ್ನು ಕೂಡುವುದು ಯಾವುದೂ ಇರುವುದಿಲ್ಲ. (ಆದಕಾರಣ ಏಕಾದಶೀ ವ್ರತವೇ ಉತ್ತಮವಾಗಿದೆ.) ॥ 209 ॥

ಮನುಷ್ಯರು ಮಾಡತಕ್ಕ ಪಾಪಗಳು ಅನಂತಗಳಾದುದರಿಂದ ಏಕಾದಶ್ಯುಪವಾಸವು ಪುಣ್ಯಫಲ ವನ್ನು ಕೊಡುವುದು ಹೇಗೆ ಎಂದರೆ–

**ಮೂಲ ॥ ತಾವತ್ಪಾಪಾನಿ ದೇಹೇಸ್ಮಿಂಸ್ತಿಷ್ಠಂತಿ ಮನುಜಾಧಿಪ ।**
**ಯಾವನ್ನೋಪೋಷಯೇಜ್ಜಂತುಃ ಪದ್ಮನಾಭದಿನಂ ಶುಭಂ ॥ ೨೧೦ ॥**

**ಅರ್ಥ ॥** ಅನೇಕ ವಿಧಗಳಾದ ಪಾಪರಾಶಿಗಳನ್ನು ಮಾಡುವ ಜೀವರು ಎಷ್ಟುಕಾಲ ಪರ್ಯಂತ ವಾಗಿ ಶ್ರೀಹರಿದೇವತಾಕ ಏಕಾದಶಿಯ ಮಹಿಮೆಯನ್ನು ತಿಳಿಯದೆ ಉಪವಾಸ ಮಾಡುವುದಿಲ್ಲವೋ, ಅಷ್ಟು ಕಾಲಪರ್ಯಂತ ಎಲೋ ರಾಜಶ್ರೇಷ್ಠನೇ ಈ ಶರೀರದಲ್ಲಿ ಪಾಪರಾಶಿಗಳಿರುತ್ತವೆ. ॥ 210 ॥

**ಮೂಲ ॥ ಏಕಾದಶೇಂದ್ರಿಯೈಃ ಪಾಪಂ ಯತ್ಕೃತಂ ಭವತಿ ಪ್ರಭೋ ।**
**ಏಕಾದಶ್ಯುಪವಾಸೇನ ತತ್ಸರ್ವಂ ವಿಲಯಂ ವ್ರಜೇತ್ ॥ ೨೧೧ ॥**

**ಅರ್ಥ ॥** 11 ಇಂದ್ರಿಯಗಳಿಂದ (ಅಂದರೆ ಕಣ್ಣು ಕಿವಿ, ಮೂಗು, ನಾಲಿಗೆ, ತ್ವಕ್ ಎಂಬ 5 ಜ್ಞಾನೇಂದ್ರಿಯಗಳು, ವಾಕ್, ಹಸ್ತ, ಪಾದ, ಪಾಯು, ಉಪಸ್ಥ ಎಂಬ 5 ಕರ್ಮೇಂದ್ರಿಯಗಳು, ಮನಸ್ಸೂ ಕೂಡಿ 11 ಇಂದ್ರಿಯಗಳೂ) ಎಲೋ ಪ್ರಭುವೇ ಪುರುಷನಿಂದ ಯಾವ ದುರ್ವಿಷಯಗಳ ದರ್ಶನ–ಸ್ಪರ್ಶನ ಧ್ಯಾನ ಮೊದಲಾದವುಗಳಿಂದ ಪಾಪವು ಮಾಡಲ್ಪಡುತ್ತದೋ, ಆ ಎಲ್ಲಾ ಪಾಪಗಳು ಏಕಾದಶ್ಯುಪವಾಸವು ಚೆನ್ನಾಗಿ ಮಾಡೋಣದರಿಂದ ನಾಶವನ್ನು ಹೊಂದುತ್ತದೆ. (ಆದಕಾರಣ ಅತಿಶ್ರೇಷ್ಠವು) ॥ 211 ॥

ಏಕಾದಶಿಯು ಅತಿಪವಿತ್ರವಾದ ಪ್ರಯುಕ್ತ ಆ ವ್ರತವನ್ನು ಮಾಡುವವರಿಗೆ ಯಮದರ್ಶನ ನರಕಾದಿಗಳನ್ನು ಪರಿಹರಿಸಿಕೊಡುವುದರಿಂದ ಆ ವ್ರತವು ಅತಿಶ್ರೇಷ್ಠವೆಂದು ನಿರೂಪಿಸುತ್ತಾರೆ–

**ಮೂಲ ॥ ಏಕಾದಶೀ ಸಮಂ ಕಿಂಚಿತ್ ಪವಿತ್ರಂ ನ ಹಿ ವಿದ್ಯತೇ**
**(ಪಾಪತ್ರಾಣಂ ನ ವಿದ್ಯತೇ) ।**
**ವ್ಯಾಜೇನಾಪಿ ಕೃತಾ ರಾಜನ್ನ ದರ್ಶಯತಿ ಭಾಸ್ಕರಿಂ ॥ ೨೧೨ ॥**

**ಅರ್ಥ ॥** ಎಲೋ ರಾಜನೇ ಯಾವುದಾದರೊಂದು ನಿಮಿತ್ತದಿಂದಲೂ ಅನುಷ್ಠಿತವಾದ ಏಕಾದಶ್ಯುಪವಾಸವು ಯಮನನ್ನು ತೋರಿಸುವುದಿಲ್ಲ, ಯಮನ ಆಗಮನವನ್ನು ತೋರಿಸುವುದಿಲ್ಲ,

ಆದಕಾರಣ ಏಕಾದಶಿಗೆ ಸಮವಾದುದು ಯಾವುದೊಂದು ವ್ರತಗಳ ಸಮುದಾಯವೂ ಕೂಡ ಇರುವುದಿಲ್ಲ. (ಏಕೆಂದರೆ ಇದೇ) ಸರ್ವ ಪಾಪಗಳಿಂದಲೂ ರಕ್ಷಿಸತಕ್ಕುದು.

**ತಾತ್ಪರ್ಯ ॥** ಏಕಾದಶೀ ವ್ರತವು ಪರಮ ಪವಿತ್ರವಾದುದರಿಂದಲೂ ಯಮದರ್ಶನಾದಿಗಳನ್ನು ಪರಿಹರಿಸುವುದರಿಂದಲೂ ಅದು ಅತಿಶ್ರೇಷ್ಠವು. ಆದಕಾರಣ ಎಲ್ಲಾ ವ್ರತಗಳಿಗಿಂತ ಹೆಚ್ಚು ಫಲಗಳನ್ನು ಕೊಡುವುದರಿಂದ ಅತ್ಯುತ್ತಮವಾದ ಪ್ರಯುಕ್ತ ಸರ್ವರೂ ಏಕಾದಶೀ ವ್ರತವನ್ನು ಅನುಷ್ಠಾನ ಮಾಡಬೇಕು. ॥ 212 ॥

**ಮೂಲ ॥ (+) ಶ್ರೀವ್ಯಾಸಃ ॥ ಅನ್ನಂ ನಿವೇದಯೇನ್ಮಹ್ಯಂ**
**ಪ್ರಾಪ್ತೇ ಮದ್ವಾಸರೇ ಶುಭೇ।**
**ತಸ್ಯಾಪಿ ನರಕಪ್ರಾಪ್ತಿಃ**
**ಕಿಂ ಪುನರ್ಭೋಜನೇ ಕೃತೇ ॥ ೨೧೩ ॥**

**ಅರ್ಥ ॥** ಶ್ರೀವ್ಯಾಸರು ನಿರೂಪಿಸುತ್ತಾರೆ:- ಶುಭವಾದ ನನ್ನ ದಿವಸವು (ಏಕಾದಶಿಯು) ಪ್ರಾಪ್ತವಾಗುತ್ತಿರಲು ನನಗೋಸ್ಕರ ಯಾರು ಅನ್ನವನ್ನು ಸಮರ್ಪಿಸುತ್ತಾರೋ ಆತನಿಗೂ ನರಕಪ್ರಾಪ್ತಿಯಾಗುತ್ತದೆ. ಭೋಜನ ಮಾಡಿದರೆ ಪ್ರಾಪ್ತಿಯಾಗುತ್ತದೆಂದು ಏನು ಹೇಳಬೇಕು. ॥ 213 ॥

ಹೀಗೆ ಉಪವಾಸವನ್ನು ಮಾಡುವವರಿಗೆ ವಿಶ್ವಾಸಹುಟ್ಟುವುದಕ್ಕಾಗಿ ಏಕಾದಶೀ ಮಾಹಾತ್ಮ್ಯೆಯನ್ನು ಪ್ರಮಾಣಗಳಿಂದ ಹೇಳಿ ಎಲ್ಲರೂ ಉಪವಾಸ ಮಾಡಲೇಬೇಕು. ಎಂದು ಹೇಳಲ್ಪಟ್ಟಿತು. ಅಂತಹ ಏಕಾದಶಿಯಲ್ಲಿ ಭೋಜನ ಮಾಡಿದರೆ ಮಹಾದೋಷವಿದೆಯೆಂದು ನಿರೂಪಿಸುತ್ತಾರೆ-

**ಮೂಲ ॥ (ಶ್ರೀವೇದವ್ಯಾಸ ಉವಾಚ) ಸ ಬ್ರಹ್ಮಹಾ ಸ ಗೋಘ್ನಶ್ಚ**
**ಸಸ್ತೇನೋ (ಸ್ತೇನಸ್ಸ) ಗುರುತಲ್ಪಗಃ ।**
**ಏಕಾದಶ್ಯಾಂ ತು ಭುಂಜಾನಃ**
**ಪಕ್ಷಯೋರುಭಯೋರಪಿ ॥ ೨೧೪ ॥**

**ಅರ್ಥ ॥** ಶುಕ್ಲಪಕ್ಷ-ಕೃಷ್ಣಪಕ್ಷ ಎರಡರಲ್ಲಿಯೂ ಏಕಾದಶೀ ದಿವಸ (ಉಪವಾಸ ಮಾಡದೆ) ಭೋಜನ ಮಾಡುವವನು ಬ್ರಹ್ಮಹತ್ಯಾ, ಗೋಹತ್ಯಾ, ಸ್ವರ್ಣಾದಿಗಳನ್ನು ಕದಿಯೋಣ, ಗುರುದಾರಾಗಮನ, (ಇದು ಮೊದಲಾದ ಸರ್ವಪಾಪಗಳನ್ನೂ ಮಾಡಿದವನೂ ಆಗುತ್ತಾನೆ. ಆದಕಾರಣ ಆ ದಿನ ಭೋಜನಾದಿಗಳನ್ನು ಮಾಡಬಾರದು) ॥ 214 ॥

**ಮೂಲ ॥ ವರಂ ಸ್ವಮಾತೃಗಮನಂ ವರಂ ಗೋಮಾಂಸ ಭಕ್ಷಣಂ ।**
**ವರಂ ಹತ್ಯಾ ಸುರಾಪಾನಮೇಕಾದಶ್ಯನ್ನ (ಶ್ಯಾಂ ತು) ಭೋಜನಾತ್**
**॥ ೨೧೫ ॥**

**ಅರ್ಥ ॥** ಏಕಾದಶೀ ದಿನ ಅನ್ನವನ್ನು ಭೋಜನ ಮಾಡುವುದಕ್ಕಿಂತ ತನ್ನ ತಾಯಿಯ ಸಂಗವು ಶ್ರೇಷ್ಠವು. ಗೋವಿನ ಮಾಂಸವನ್ನು ಭಕ್ಷಿಸುವುದು ಪ್ರಶಸ್ತವು. ಬ್ರಾಹ್ಮಣಾದಿಗಳ ವಧವು, ಮದ್ಯಪಾನವು,

ಶ್ರೇಷ್ಠವು. ಅಂದರೆ- ಏಕಾದಶೀ ದಿವಸ ಭೋಜನಾದಿಗಳನ್ನು ಮಾಡುವುದಕ್ಕಿಂತ ಸ್ವಮಾತೃಗಮನಾದಿಗಳಲ್ಲಿ ಪಾಪವು ಬಹಳ ಕಡಿಮೆ ॥ 215 ॥

**ಮೂಲ ॥ ಏಕಾದಶೀ ದಿನೇ ಪುಣ್ಯೇ (ಪ್ರಾಪ್ತೇ) ಭುಂಜತೇ ಯೇ ನರಾಧಮಾಃ ।**
**ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥ ೨೧೬ ॥**

**ಅರ್ಥ ॥** ಮಹಾಪುಣ್ಯಪ್ರದವಾದ ಏಕಾದಶೀ ದಿವಸ ಯಾರು ಭೋಜನ ಮಾಡುತ್ತಾರೋ, ಅವರು ನರಾಧಮರು. ಏಕಾದಶೀದಿವಸ ಭೋಜನ ಮಾಡತಕ್ಕವರ ಮುಖವನ್ನು ನೋಡಿ (ಆದರಿಂದುಂಟಾದ ಪಾಪ ಪರಿಹಾರಿಕ್ಕಾಗಿ, ಸೂರ್ಯನನ್ನು ನೋಡಬೇಕು.) (ಆದಕಾರಣ ಏಕಾದಶೀ ದಿವಸ ಭೋಜನ ಮಾಡಬಾರದು) ॥ 216 ॥

**ಮೂಲ ॥ ಪೃಥಿವ್ಯಾಂ ಯಾನಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।**
**ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ॥ ೨೧೭ ॥**

**ಅರ್ಥ ॥** ಕರ್ಮಭೂಮಿಯಲ್ಲಿ ಬ್ರಹ್ಮಹತ್ಯಾ, ಸ್ವರ್ಣಸ್ತೇಯ, ಗುರುದಾರಾಗಮನ ಮೊದಲಾದ ಅಪರಿಮಿತಗಳಾದ ಯಾವ ಪಾಪಗಳಿವೆಯೋ, ಅವುಗಳೆಲ್ಲವೂ ಏಕಾದಶೀ ದಿವಸವು ಪ್ರಾಪ್ತವಾಗುವಾಗ ಅನ್ನವನ್ನು ಆಶ್ರಯಿಸಿರುತ್ತವೆ. (ಆದಕಾರಣ ಏಕಾದಶೀದಿನ ಭೋಜ್ಯವಾದ ಅನ್ನವು ಸರ್ವಪಾಪಗಳಿಗೂ ಆಶ್ರಯವಾದುದರಿಂದ ಆದಿನ ಸರ್ವಥಾ ಭೋಜನ ಮಾಡಬಾರದು) ॥ 217 ॥

**ಮೂಲ ॥ ರುಗ್ಮಾಂಗದಃ ॥ ಅಷ್ಟವರ್ಷಾಧಿಕೋ ಯಸ್ತು**
**(ಅ)ಹ್ಯಶೀತಿರ್ನ ಹಿ ಪೂರ್ಯತೇ।**
**ಯೋ ಭುಂಕ್ತೇ ಮಾನವಃ ಪಾಪೋ**
**ವಿಷ್ಣೋರಹನಿ ಚಾಗತೇ ॥ ೨೧೮ ॥**

**ಅರ್ಥ ॥** ರುಕ್ಮಾಂಗದ ರಾಜನು (ಹೇಳುತ್ತಾನೆ) ಎಂಟು ವರ್ಷದ ಮೇಲೆ ಎಂಭತ್ತು ವರ್ಷಗಳೊಳಗೆ ಇರುವ ಯಾವನು ಏಕಾದಶೀ ದಿನದಲ್ಲಿ ಭೋಜನ ಮಾಡುತ್ತಾನೋ, ಅವನು ಎಲ್ಲಾ ಪಾಪಗಳನ್ನು ಮಾಡುವನು.

**ತಾತ್ಪರ್ಯ ॥** 8 ವರ್ಷಗಳಿಗಿಂತ ಮೊದಲೂ 80 ವರ್ಷಗಳು ದಾಟಿದ ಮೇಲೂ ಭೋಜನ ಮಾಡುವವರಿಗೆ ವಿಶೇಷ ದೋಷವಿಲ್ಲದಿದ್ದರೂ ತನ್ಮಧ್ಯದಲ್ಲಿರುವವರಿಗೆ ಮಹಾ ದೋಷಗಳು ಶ್ರುತಗಳಾದುದರಿಂದ ಸರ್ವಥಾ ಭೋಜನ ಮಾಡಬಾರದು ॥ 218 ॥

**ಮೂಲ ॥ ಪಿತಾ ವಾ ಯದಿ ವಾ ಪುತ್ರೋ ಭಾರ್ಯಾ ವಾಽಪಿ ಸುಹೃಜ್ಜನಃ ।**
**ಪದ್ಮನಾಭ ದಿನೇ ಭುಂಕ್ತೇ ನಿಗ್ರಾಹ್ಯೋ ದಸ್ಯುವದ್ಭವೇತ್ ॥ ೨೧೯ ॥**

**ಅರ್ಥ ॥** ''ಜನಿತಾ ಚೋಪನೀತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥'' ಎಂದು ಹೇಳಿದ ಐದು ವಿಧ) ತಂದೆಯವರಾಗಲೀ, ಮಕ್ಕಳಾಗಲೀ, ಹೆಂಡತಿಯಾಗಲೀ, ಬಂಧುಜನರಾಗಲೀ. ಮಿತ್ರರಾಗಲೀ, ಯಾರಾದರು ಸರಿಯೇ, ಏಕಾದಶೀ ದಿವಸ ಯಾವುದಾದರೊಂದು ನೆವದಿಂದಾಗಲೀ ಭೋಜನ ಮಾಡುತ್ತಾರೋ, ಅವರೆಲ್ಲರೂ ಕಳ್ಳರಂತೆ

(ವಿಷ್ಣುಭಕ್ತರಾದ ಮಹಾನುಭಾವರಿಂದ) ನಿಗ್ರಹಿಸಲಿಕ್ಕೆ ಯೋಗ್ಯರಾಗುವರು. (ಅಂದರೆ- ''ಉತ್ತಮೇ ವಚಸಾ ಶಿಕ್ಷಾ ಮಧ್ಯಮೇಽರ್ಥಾಪಹಾರಣಂ । ಅಧಮೇ ದೇಹದಂಡಶ್ಚ ॥'' ಇವು ಮೊದಲಾದ ವಾಕ್ಯಗಳಲ್ಲಿ ಹೇಳಿದ ಪ್ರಕಾರ ದಂಡ್ಯರಾಗುವರು) ॥ 219 ॥

**ಮೂಲ ॥ (% ಧರ್ಮವಿಭೂಷಣಃ ॥**
**''ಪ್ರಾತರ್ಹರಿದಿನಂ ಲೋಕಾಸ್ತಿಷ್ಟಧ್ವಂ ಚೈಕಭೋಜನಾಃ ।**
**ಅಕ್ಷಾರ ಲವಣಾಸ್ಸರ್ವೇ ಹವಿಷ್ಯಾನ್ನ ನಿಷೇವಿಣಃ'' ॥ ೨೨೦ ॥)**

**ಅರ್ಥ ॥** (ರುಕ್ಮಾಂಗದನ ಪುತ್ರನಾದ ಧರ್ಮವಿಭೂಷಣನು ಹೇಳುತ್ತಾನೆ. ಎಲೋ ಭಕ್ತರೇ! ನಾಳೆ ಬೆಳಿಗ್ಗೆ ಏಕಾದಶೀ ದಿವಸವು ಪ್ರಾಪ್ತವಾಗುವುದು. ಆದಕಾರಣ ಈ ದಿನ (ದಶಮೀದಿವಸ) ಒಂದಾವರ್ತಿಯೇ ಭೋಜನಮಾಡಿರಿ. ಸರ್ವರೂ ಕ್ಷಾರಪದಾರ್ಥಗಳನ್ನೂ, ಉಪ್ಪನ್ನೂ ಸೇವಿಸ ಬಾರದು. ಶಾಸ್ತ್ರೋಕ್ತವಾದ ಹವಿಷ್ಯಾನ್ನವನ್ನು ಸೇವಿಸುತ್ತಾ ಇರಬೇಕು.)

**ತಾತ್ಪರ್ಯ ॥** (1) ''ಹೈಡಿಂಬಿಕಾ ರಾಜಮಾಷಾಃ ಮಾಷಾ ಮುದ್ಗಾ ಮಸೂರಕಾಃ। ಲಂಕ್ಯಾಢಕ್ಯಶ್ಚ ನಿಷ್ಪಾವಾಃ ತಿಲಾದ್ಯಾಃ ಕ್ಷಾರಸಂಜ್ಞಿತಾಃ''॥ ಅಂದರೆ- ದೊಡ್ಡ ಅವರೆ, ಅವಡೆ, ಉದ್ದು, ದೊಡ್ಡ ಹೆಸರು, ಮಸೂರಕಾ ಎನ್ನುವ ವ್ರೀಹಿಪ್ರಭೇದ, ('ಸಜ್ಜೆ' ಎಂದು ಕೆಲವರು ಅನ್ನುವರು.). ತೊಗರಿಬೇಳೆಯ ಪ್ರಭೇದ, ಅವರೆ, ಕೇವಲ ಎಳ್ಳು, ಮೊದಲಾದವುಗಳು ಕ್ಷಾರಪದಾರ್ಥಗಳೆನ್ನುತ್ತವೆ. (2) ''ಹೈಮಂತಿಕಂ ಸಿತಾಸ್ವಿನ್ನಂ ಧಾನ್ಯಂ ಮುದ್ಗಾ ಯವಾಸ್ತಿಲಾಃ । ಕಂದಂ ಸೈಂಧವ ಸಾಮುದ್ರೇ ಗವ್ಯೇ ಚ ದಧಿಸರ್ಪಿಷೀ ॥ ಪಯೋಽನುದ್ಧೃತಸಾರಂ ಚ ಪನಸಾಮ್ರಹರೀತಕೀ । ಪಿಪ್ಪಲೀ ಜೀರಕಂ ಚೈವ ನಾಗರಂ ಚಾಥ ತಿಂತ್ರಿಣೀ ॥ ಕದಲೀ ಲವಲೀ ಧಾತ್ರೀ ಫಲಾನಿ ಗುಡಮೈಕ್ಷವಂ । ಅತೈಲಪಕ್ವಂ ಮುನಯೋ ಹವಿಷ್ಯಾಣಿ ಪ್ರಚಕ್ಷತೇ'' ॥ ಅಂದರೆ- ಗೌಡದೇಶದಲ್ಲಿ ಸಿತಾಸ್ವಿನ್ನವೆಂದು ಪ್ರಸಿದ್ಧವಾದ ಧಾನ್ಯವು, ಅದು ಹೇಮಂತ ಋತುವಿನಲ್ಲಿ ಹುಟ್ಟಿದ್ದೇ ಆಗಬೇಕು. ಹೆಸರು, ಜುಂಗುಬತ್ತ, ಎಳ್ಳು, ಸುವರ್ಣದ ಗಡ್ಡೆ, ಸೈಂದುಪ್ಪು, ಸಮುದ್ರದ ಉಪ್ಪು, ಮೊಸರು, ತುಪ್ಪ, ಕೆನೆತೆಗೆಯದಿದ್ದ ಹಾಲು, ಹಲಸಿನ ಹಣ್ಣು, ಮಾವಿನ ಹಣ್ಣು, ಅಣಿಲೆಕಾಯಿ, ಹಿಪ್ಲಿ, ಜೀರಿಗೆ, ಶುಂಠಿ, ಹುಳಿ, ದಕ್ಷಿಣದೇಶದಲ್ಲಿ ಕದಲಿಯೆಂದು ಪ್ರಸಿದ್ಧವಾದ ಬಾಳೆಹಣ್ಣು, (ಲವಲೀ ಅಂದರೆ) ರಾಯ ಆಂವಳೀ ಎಂದು ಮಹಾರಾಷ್ಟ್ರದಲ್ಲಿ, ಹರಫಾರೇವರಿ ಎಂದು ಮಧ್ಯದೇಶದಲ್ಲಿ ಪ್ರಸಿದ್ಧವಾದದ್ದು, (ಮಾದೃಫಲವೆಂದು ಕೆಲವರು ಅನ್ನುವರು) ನೆಲ್ಲಿ, ಫಲಗಳು, ಕಬ್ಬಿನಿಂದ ಮಾಡಿದ ಬೆಲ್ಲ, ತೈಲಪಕ್ವವಲ್ಲದಿರುವುದು, ಇವುಗಳನ್ನು ಮುನಿಗಳು ಹವಿಷ್ಯಗಳೆಂದು ಹೇಳುವರು. ॥ 220 ॥)

**ಮೂಲ ॥ (% ''ಅವನೀ ತಲ್ಪಶಯನಾಃ ಪ್ರಿಯಾ ಸಂಗವಿವರ್ಜಿತಾಃ।**
**ಸ್ಮರಧ್ವಂ ದೇವದೇವೇಶಂ ಪುರಾಣಪುರುಷೋತ್ತಮಂ'' ॥ ೨೨೧ ॥)**

**ಅರ್ಥ ॥** (ಭೂಮಿಯಲ್ಲಿಯೇ ಮಲಗಬೇಕು. ಸ್ತ್ರೀಸಂಗವನ್ನು ಮಾಡಬಾರದು. ಪುರಾತನನೂ ಪುರುಷೋತ್ತಮನೂ, ಇಂದ್ರಾದಿಗಳಿಗೆ ಅಧಿಪತಿಗಳಾದ ಬ್ರಹ್ಮಾದಿಗಳಿಗೆ ಒಡೆಯನೂ ಆದ ಶ್ರೀಹರಿಯನ್ನು ಸ್ಮರಿಸುತ್ತಾ ಇರಬೇಕು ॥ 221 ॥)

---

**(% ಈ ಚಿಹ್ನೆಗಳಿರುವ ಪಾಠಗಳು ಶ್ರೀಕೃಷ್ಣಾಪುರ ಮಠದ ಪ್ರಾಚೀನ ಪುಸ್ತಕದಲ್ಲಿ ಹೆಚ್ಚಾಗಿರುತ್ತದೆ.)**

**ಮೂಲ ॥ (% "ಸಕೃದ್ಭೋಜನ ಸಂಯುಕ್ತಾ ಹ್ಯುಪವಾಸೇ ಭವಿಷ್ಯಥ ।**
**ಅಕೃತಶ್ರಾದ್ಧನಿಚಯಾ ಜಲ ಪಿಂಡೋದಕ ಕ್ರಿಯಾಃ" ॥ ೨೨೨ ॥**

**ಅರ್ಥ ॥** (ಈ ಹೊತ್ತು ಒಂದಾವರ್ತಿ ಭೋಜನ ಮಾಡಿದವರಾಗಿ ಉಪವಾಸ ವಿಷಯದಲ್ಲಿ ಜಾಗರೂಕರಾಗಿರಬೇಕು. ಶ್ರಾದ್ಧಗಳ ಸಮೂಹವನ್ನು ತಿಲೋದಕ ಪಿಂಡಪ್ರಧಾನ ಉದಕಕ್ರಿಯೆಗಳನ್ನು ಏಕಾದಶೀದಿವಸ ಮಾಡಬೇಡಿರಿ ॥ 222 ॥)

**ಮೂಲ ॥ ಬ್ರಹ್ಮಾ ॥ ಉಪೋಷ್ಯ ದ್ವಾದಶೀಂ ಪುಣ್ಯಾಂ**
**(ಉಪೋಷ್ಯಾ ದ್ವಾದಶೀ ಪುಣ್ಯಾ) ಸರ್ವಪಾಪ ಕ್ಷಯಪ್ರದಾಂ (ದಾ)।**
**ನ ಪಶ್ಯಂತಿ ಯಮಂ ವಾಽಪಿ**
**ನರಕಾಣಿ ನ ಯಾತನಾಂ ॥**
**(ವ್ಯಾಸಃ ॥ ಉಪೋಷ್ಯಾ ದ್ವಾದಶೀ ಶುದ್ಧಾ**
**ಸರ್ವಪಾಪ ಕ್ಷಯಪ್ರದಾ ।**
**ನ ಪಶ್ಯಂತಿ ಯಮಂ ವಾಽಪಿ**
**ನರಕಾಣಿ ಚ ಯಾತನಾಃ) ॥ ೨೨೩ ॥**

**ಅರ್ಥ ॥** (ಬ್ರಹ್ಮನು ನಿರೂಪಿಸುತ್ತಾನೆ) ಪುಣ್ಯಪ್ರದವಾದ ಎಲ್ಲಾ ಪಾಪಗಳನ್ನು ನಾಶಗೊಳಿಸುವ ಶುದ್ಧೈಕಾದಶಿಯೇ ಉಪವಾಸಮಾಡಿ (ಪಾಪಗಳಿಗೆ ಫಲಗಳನ್ನು ಕೊಡುವ) ಯಮನನ್ನಾಗಲೀ, ನರಕಗಳನ್ನಾಗಲೀ ನೋಡುವುದಿಲ್ಲ, ಯಾತನೆಯನ್ನು ಸಹಾ ಅನುಭವಿಸುವುದಿಲ್ಲ. ॥ 223 ॥

ಏಕಾದಶೀದಿವಸ ಉಪವಾಸಮಾಡಬೇಕೆಂದು ಬಹುಪ್ರಮಾಣಗಳಲ್ಲಿ ಹೇಳಿ ಸರ್ವಥಾ ಭೋಜನಮಾಡಬಾರದೆಂದು ಇನ್ನೂ ಪ್ರಮಾಣಗಳಿಂದ ಸಮರ್ಥಿಸುತ್ತಾರೆ-

**ಮೂಲ ॥ (★ಶಂಕರಃ) ॥ ರಟಂತೀಹ ಪುರಾಣಾನಿ**
**ಭೂಯೋ ಭೂಯೋ ವರಾನನೇ ।**
**ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ ॥ ೨೨೪ ॥**

ಅ ॥ ಎಲೋ ಸುಂದರಿಯೇ! ಏಕಾದಶೀದಿನದಲ್ಲಿ ಯಾವ ನೆವನದಿಂದಲೂ ಸರ್ವಥಾ ಭೋಜನಮಾಡಬಾರದೆಂದು ಸಾತ್ವಿಕಪುರಾಣಗಳು ಮತ್ತೂ ಮತ್ತೂ ಸಾರುತ್ತಿವೆ. ತಾ ॥ (1) "ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಂ। ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ ॥ ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ (2) ತತಃ ಪರಂ । ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ॥ ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ । (3) ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ॥ ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ। ಸಾತ್ವಿಕಾಃ ಮೋಕ್ಷದಾಃ ಪ್ರೋಕ್ತಾಃ ರಾಜಸಾಃ ಸ್ವರ್ಗದಾಃ ಸ್ಮೃತಾಃ। ತಥೈವ ತಾಮಸಾ ದೇವಿ ನಿರಯಪ್ರಾಪ್ತಿಹೇತವಃ ॥" ವೈಷ್ಣವ, ನಾರದೀಯ, ಭಾಗವತ, ಗಾರುಡ, ಪಾದ್ಮ, ವಾರಾಹ ಇವುಗಳು (6) ಸಾತ್ವಿಕ ಪುರಾಣಗಳು ಮುಕ್ತಿಯನ್ನು ಕೊಡತಕ್ಕವುಗಳು. (2) ಬ್ರಹ್ಮಾಂಡ,

ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯತ್, ವಾಮನ, ಬ್ರಾಹ್ಮ ಇವುಗಳು (6) ರಾಜಸ ಪುರಾಣಗಳು ಸ್ವರ್ಗಪ್ರದಗಳು. (3) ಮಾತ್ಸ್ಯ, ಕೌರ್ಮ, ಲೈಂಗ, ಶೈವ, ಸ್ಕಾಂದ, ಆಗ್ನೇಯ ಇವುಗಳು 6 ತಾಮಸಪುರಾಣಗಳು. ಇವು ನರಕಪ್ರಾಪ್ತಿಗೆ ಕಾರಣಗಳು, ಎಂದು ಪಾದ್ಮಪುರಾಣದಲ್ಲಿದೆ. (ಉತ್ತರ ಖಂಡ, 42 ನೇ ಅಧ್ಯಾಯ) ಸಾತ್ವಿಕ ಪುರಾಣಗಳೆಲ್ಲವೂ ಸರ್ವಥಾ ಭೋಜನಮಾಡಬಾರದು. ನಿರಾಹಾರನಾಗಿರಬೇಕು ಎಂದು ಸಾರುತ್ತಿವೆ. ।। 224 ।।

**ಮೂಲ ।। ದ್ವಾದಶೀ ನ ಪ್ರಮೋಕ್ತವ್ಯಾ ಯಾವದಾಯುಃ ಪ್ರವರ್ತತೇ ।**
**ಅರ್ಚನೀಯೋ ಹೃಷೀಕೇಶೋ ವಿಶುದ್ಧೇನಾಂತರಾತ್ಮನಾ ।। ೨೨೫ ।।**

**ಅರ್ಥ ।।** ಶುದ್ಧೈಕಾದಶಿಯು, ವಿದ್ಧೈಕಾದಶಿಯ ಮರುದಿವಸ ದ್ವಾದಶಿಯೂ, ಅತಿರಿಕ್ತ ದ್ವಾದಶಿಯ ಪುಚ್ಛದ್ವಾದಶಿಯೂ, ಶ್ರವಣದ್ವಾದಶಿಯೂ ಇವೆಲ್ಲವೂ ಬಿಡಲ್ಪಡಬಾರದು. ಆಯುಷ್ಯ ವಿರುವ ತನಕ ಸರ್ವರೂ ಉಪವಾಸಮಾಡಬೇಕು. ಶುದ್ಧಾಂತಃಕರಣದಿಂದ ಹೃಷೀಕೇಶನು ಚೆನ್ನಾಗಿ ಪೂಜಿಸಲ್ಪಡಬೇಕು.

**ತಾತ್ಪರ್ಯ ।।** ದಶಮ್ಯಾದಿ 3 ದಿನಗಳ ವಿಷಯದಲ್ಲಿ ಅತ್ಯಾವಶ್ಯಕ ಪ್ರಮೇಯಗಳನ್ನು ಸಂಗ್ರಹಿಸಿ ನಿರೂಪಿಸಿರುವೆನು. (1) ಮುಮುಕ್ಷುಗಳಾದ ಭಕ್ತರು ದಶಮೀವಿದ್ಧವಾಗದಿರುವ ಏಕಾದಶೀದಿವಸ ಉಪವಾಸ ಮಾಡಬೇಕು. ಹಿಂದಿನ ದಿನವು ವೇಧವಿಲ್ಲದೆ ಉಪವಾಸಕ್ಕೆ ಯೋಗ್ಯವಾದ ಏಕಾದಶಿಯಾಗಿದ್ದು ನ್ಯಾಯಪ್ರಾಪ್ತವಾದ ದ್ವಾದಶೀದಿನದ ಮರುದಿವಸ ಸ್ವಲ್ಪವಾದರೂ ದ್ವಾದಶೀ ತಿಥಿಯು ಇದ್ದರೂ, ಹಿಂದೆ ಹೇಳಿದ ದ್ವಾದಶೀದಿನವು ಮಧ್ಯಾಹ್ನವ್ಯಾಪ್ತಗಳಾದ ದ್ವಾದಶೀತಿಥಿ ಮತ್ತು ಶ್ರವಣನಕ್ಷತ್ರಗಳಿಂದ ಕೂಡಿದ್ದರೂ, ಮತ್ತು ಅಂತಹ ದ್ವಾದಶೀದಿನದಲ್ಲಿ ಹರಿವಾಸರವು ಸಂಗವಕಾಲಕ್ಕಿಂತ ಪರದಲ್ಲಿ ತೋರಿದರೂ ಇಂತಹ ಮೂರು (3) ರೀತಿಯ ದ್ವಾದಶೀದಿನಗಳಲ್ಲಿ ಉಪವಾಸಮಾಡಿ ಪರದಿನದಲ್ಲಿಯೇ ಪಾರಣವನ್ನು ಮಾಡತಕ್ಕುದು. ಹೀಗೆ (3) ಮೂರು ಕಾರಣಗಳಿಂದ ಮಾಧ್ವರಿಗೆ ಉಪವಾಸದ್ವಯ ಯೋಗವು (2 ಉಪವಾಸವು) ಸಂಭವಿಸುವುದು. (2) ಉಪವಾಸವೆಂದರೆ– ''ಉಪಾವೃತ್ತಸ್ಯ ಪಾಪೇಭ್ಯೋ ಯಸ್ತು ವಾಸೋ ಗುಣೈಃ ಸಹ । ಉಪವಾಸಃ ಸ ವಿಜ್ಞೇಯಃ ಸರ್ವಭೋಗವಿವರ್ಜಿತಃ ''।। ಅಂದರೆ ಬಿಡಲಿಕ್ಕೆ ಯೋಗ್ಯಗಳಾದವುಗಳಿಂದ ವ್ಯಾವೃತ್ತನಾದವನಿಗೆ ಶಾಸ್ತ್ರೋಕ್ತಗಳಾದ ಪೂಜಾ ಜಾಗರಾದಿಗಳಿಂದೊಡಗೂಡಿ ಇರುವಿಕೆಯೂ, ನಿರಾಹಾರವಾಗಿ ಇರುವಿಕೆಯೂ ಉಪವಾಸವೆನ್ನಿಸುತ್ತದೆ. ಎಂದು ವಿಷ್ಣುಧರ್ಮೋತ್ತರದಲ್ಲಿ, (3) ''ತಜ್ಜಾಪ್ಯಂ ತದ್ಗತಂ ಧ್ಯಾನಂ ತತ್ಕಥಾಶ್ರವಣಾದಿಕಂ । ತದರ್ಚನಂ ಚ ತನ್ನಾಮ ಕೀರ್ತನಶ್ರವಣಾದಯಃ ।। ಉಪವಾಸಕೃತಾವೇತೇ ಗುಣಾಃ ಪ್ರೋಕ್ತಾ ಮನೀಷಿಭಿಃ''।। ಶ್ರೀಹರಿಜಪವು, ಅವನ ಧ್ಯಾನವು, ಅವನ ಕಥೆಯನ್ನು ಕೇಳುವುದು, ಅವನ ಪೂಜೆಯು, ಶ್ರೀಹರಿಯ ನಾಮಸಂಕೀರ್ತನೆ, ಶ್ರವಣ ಮೊದಲಾದವುಗಳು ಉಪವಾಸ ಮಾಡುವುದರಲ್ಲಿ ಗುಣಗಳೆಂದು ಜ್ಞಾನಿಗಳಿಂದ ಹೇಳಲ್ಪಟ್ಟಿದೆ. (4) ದಶಮ್ಯಾದಿ 3 ದಿವಸಗಳಲ್ಲಿ ಮಾಡತಕ್ಕ ಸಂಕಲ್ಪಪ್ರಕಾರವು – ''ದಶಮ್ಯಾಂ ಪ್ರಾತರುತ್ಥಾಯ ನಿತ್ಯಕರ್ಮ ವಿಧಾಯ ಚ । ಪ್ರಾರ್ಥಯೇದಚ್ಯುತಂ ಧೀಮಾನ್ ವ್ರತಾಚರಣತತ್ಪರಃ ।।'' ''ದಶಮೀದಿವಸೇ ಪ್ರಾಪ್ತೇ ವ್ರತಸ್ಥೋಽಹಂ ಜನಾರ್ದನ । ತ್ರಿದಿನಂ ದೇವದೇವೇಶ ನಿರ್ವಿಘ್ನಂ ಕುರು ತೇ ನಮಃ'' ।। ದಶಮೀದಿನ ಬೆಳಿಗ್ಗೆ ಎದ್ದು ನಿತ್ಯಕರ್ಮಾದಿಗಳನ್ನು

ಮಾಡಿ ವ್ರತಾಚರಣದಲ್ಲಿ ಆಸಕ್ತನಾದ ಜ್ಞಾನಿಯು ಅಚ್ಯುತನನ್ನು ಪ್ರಾರ್ಥಿಸಬೇಕು. 'ಎಲೋ ಜನಾರ್ದನನೇ ದಶಮೀದಿವಸವು ಪ್ರಾಪ್ತವಾಗುವಾಗ ನಾನು ವ್ರತದಲ್ಲಿರುತ್ತೇನೆ. ಮೂರು ದಿವಸಗಳಲ್ಲಿಯೂ ನಿರ್ವಿಘ್ನವನ್ನು ಮಾಡು. ನಿನಗೆ ನಮಸ್ಕಾರವು''. ಎರಡು ಉಪವಾಸಗಳಾದರೆ ಹೀಗೆ ಪ್ರಾರ್ಥಿಸಬೇಕು- ಉಪವಾಸದ್ವಯಂ ಚೇತ್ ಸ್ಯಾತ್ ತದ್ದೈವಂ ಪ್ರಾರ್ಥಯೇದ್ಧರಿಂ । ''ದಶಮ್ಯಾಮೇಕಭುಕ್ತೋಽಹಮುಪವಾಸದ್ವಯಂ ಹರೇ ॥ ಕೃತ್ವಾ ತುರೀಯೇ ದ್ವಾದಶ್ಯಾಂ ವಿಧಾಸ್ಯಾಮಿ ತು ಪಾರಣಂ। ಚತುರ್ದಿನಕೃತಾದಸ್ಮಾನ್ನತ್ಕೃತಾತ್ ಪರಮೇಶ್ವರಃ ॥ ಭೂತ್ವಾ ಪ್ರಸನ್ನಹೃದಯೋ ಭಕ್ತಿಂ ಮೇ ವರ್ಧಯಾನಿಶಂ।'' ಪ್ರಾರ್ಥಯಿತ್ವಾ ತತೋ ಯಾಮದ್ವಯಾದೂರ್ಧ್ವಂ ಚರೇದ್ಭುಜಿಂ ॥ ಲವಣಸ್ಯ ಪರಿತ್ಯಾಗಂ ದಶಮೀ ದ್ವಾದಶೀದಿನೇ । ಯದಿ ಕುರ್ವೀತ ಚೈಕಾನ್ನಂ ವ್ರತಸ್ಯ ದ್ವಿಗುಣಂ ಫಲಂ ॥ ಏಕಾದಶ್ಯಾಂ ತತೋಽಭ್ಯರ್ಚ ಪ್ರಾರ್ಥಯೇ ನ್ಮಧುಸೂದನಂ। ''ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಹಮಪರೇಽಹನಿ ॥ ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ''। ಉಪವಾಸದ್ವಯೇ ಪ್ರಾಪ್ತೇ ಪ್ರಾರ್ಥಯೇ ದೇವಮಚ್ಯುತಂ ॥ ''ಅದ್ಯ ಶ್ವಶ್ಚ ನಿರಾಹಾರೋ ಭೂತ್ವಾಹಂ ದ್ವಾದಶೀದಿನೇ। ವಿಧಾಸ್ಯೇ ಪಾರಣಂ ದೇವ ಪ್ರೀತೋ ಭವ ಮಮಾನಿಶಂ''॥ ಎರಡು ಉಪವಾಸಗಳಾದರೆ ಹೀಗೆ ಶ್ರೀಹರಿಯನ್ನು ಪ್ರಾರ್ಥಿಸಬೇಕು. ''ದಶಮೀದಿವಸ ಒಂದಾವರ್ತಿ ಭೋಜನಮಾಡಿದ ನಾನು ಎರಡು ಉಪವಾಸ ಗಳನ್ನು ಮಾಡಿ ದ್ವಾದಶೀದಿವಸ ಪಾರಣವನ್ನು ಮಾಡುವೆನು. ಎಲೋ ಶ್ರೀಹರಿಯೇ! ನಾನು ಈ ನಾಲ್ಕು ದಿವಸಗಳಲ್ಲಿ ಮಾಡಿದ ಕರ್ಮದಿಂದ ನೀನು ಪ್ರಸನ್ನನಾಗಿ ಭಕ್ತಿಯನ್ನು ಅಭಿವೃದ್ಧೀಕರಿಸು.'' ಹೀಗೆ ಪ್ರಾರ್ಥಿಸಿ ದಶಮೀದಿವಸ ಎರಡು ಯಾಮಗಳಾದ ಮೇಲೆ ಭೋಜನಮಾಡಬೇಕು. ದಶಮೀ ದ್ವಾದಶಿಗಳಲ್ಲಿ ಉಪ್ಪನ್ನು ತಿನ್ನಬಾರದು. ಆ ಎರಡು ದಿವಸಗಳಲ್ಲಿಯೂ ಒಂದೊಂದಾವರ್ತಿಯೇ ಭೋಜನಮಾಡಿದರೆ ಇಮ್ಮಡಿ ಫಲವು. ಆಮೇಲೆ ಏಕಾದಶೀದಿವಸ ಶ್ರೀಹರಿಯನ್ನು ಪೂಜಿಸಿ ಹೀಗೆ ಪ್ರಾರ್ಥಿಸಬೇಕು. ''ಪುಂಡರೀಕಾಕ್ಷನೇ! ಏಕಾದಶೀದಿವಸ ನಿರಾಹಾರನಾಗಿದ್ದು ಮರುದಿವಸ ಭೋಜನಮಾಡುವೆನು; ನನಗೆ ರಕ್ಷಕನಾಗು.'' 2 ಉಪವಾಸಗಳು ಪ್ರಾಪ್ತಗಳಾದರೆ ಹೀಗೆ ಪ್ರಾರ್ಥಿಸಬೇಕು- 'ಈಹೊತ್ತೂ ನಾಳೆಯೂ ನಿರಾಹಾರನಾಗಿದ್ದು ದ್ವಾದಶೀದಿವಸ ಪಾರಣವನ್ನು ಮಾಡುವೆನು; ಸದಾ ಪ್ರೀತನಾಗು.' ಎಂದು ವಾರಾಹಪುರಾಣದಲ್ಲಿದೆ. (5) ''ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ । ಪ್ರಸನ್ನಃ ಸುಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ''॥ ಕೇಶವನೇ! ಈ ವ್ರತದಿಂದ ಕಗ್ಗತ್ತಲೆಯಂತಿರುವ ಅಜ್ಞಾನದಿಂದ ಅಂಧನಾದ ನನಗೆ ನೀನು ಸಂತುಷ್ಟನೂ ಸುಮುಖನೂ ಆಗಿ ಜ್ಞಾನದೃಷ್ಟಿಯನ್ನು ಕೊಡುವವನಾಗು. ಹೀಗೆ ದ್ವಾದಶೀದಿವಸ ಪಾರಣವಾದ ಮೇಲೆ ಪ್ರಾರ್ಥಿಸಬೇಕು. (6) ''ಏಕಾದಶ್ಯುಪವಾಸೇನ ದ್ವಾದಶ್ಯಾಂ ಪಾರಣೇನ ಚ । ಯದಾರ್ಜಿತಂ ಮಯಾ ಪುಣ್ಯಂ ತೇನ ಪ್ರೀಣಾತು ಕೇಶವಃ '' ॥ ಏಕಾದಶೀದಿನ ಉಪವಾಸದಿಂದಲೂ, ದ್ವಾದಶೀದಿವಸ ಪಾರಣದಿಂದಲೂ, ಯಾವ ಪುಣ್ಯವು ನನ್ನಿಂದ ಮಾಡಲ್ಪಟ್ಟಿತೋ, ಅದರಿಂದ ಕೇಶವನು ಸಂತುಷ್ಟನಾಗಲಿ. ಎಂದು ವ್ರತವನ್ನು ಸಮರ್ಪಿಸಬೇಕು. (7) ''ಉಷ್ಣೋದಕಂ ತಥಾ ತೈಲಂ ದಿವಾ ಸ್ವಾಪಂಚ ಸಂಗಮಂ । ವರ್ಜನೀಯಂ ಪ್ರಯತ್ನೇನ ದಶಮ್ಯಾದಿ ದಿನತ್ರಯೇ॥ ಶಾಕಂ ಮಧು ಪರಾನ್ನಂ ಚ ಪುನರ್ಭೋಜನ ಮೈಥುನೇ। ಚಣಕಂ ಕಾಂಸ್ಯಪಾತ್ರಂ ಚ ತೈಲಾಭ್ಯಂಗಂ ತಥೈವ ಚ ॥ ವೈಷ್ಣವಶ್ಚ ತತೋ ನಿತ್ಯಂ ದ್ವಾದಶ್ಯಾಮಷ್ಟ ವರ್ಜಯೇತ್ ॥'' ಇತ್ಯಾದಿ. ದಶಮ್ಯಾದಿ 3 ದಿವಸಗಳಲ್ಲಿ ಉಷ್ಣೋದಕ

ಸ್ನಾನವನ್ನೂ, ತೈಲಾಭ್ಯಂಗವನ್ನೂ, ಹಗಲಿನಲ್ಲಿ ನಿದ್ರೆಯನ್ನೂ, ಸ್ತ್ರೀಸಂಗವನ್ನೂ ಬಿಡಬೇಕು. ಪಲ್ಯಕಾಯಿ, ಮಾದಕಪದಾರ್ಥ, ಪರಾನ್ನ, ಎರಡನೇ ಆವರ್ತಿ ಭೋಜನ, ಸ್ತ್ರೀಸಂಗ, ಕಡಲೆ, ಕಾಂಸ್ಯಪಾತ್ರ ಭೋಜನ, ತೈಲಾಭ್ಯಂಗ, ಹಗಲಿನಲ್ಲಿ ನಿದ್ರೆ, ಲೋಭ, ವ್ಯರ್ಥವಾಗಿ ಮಾತಾಡುವಿಕೆ, ಪ್ರವಾಸ ಅಂಜನ, ಇತ್ಯಾದಿಗಳನ್ನು ಪ್ರತಿದ್ವಾದಶಿಯಲ್ಲಿಯೂ ಬಿಟ್ಟುಬಿಡಬೇಕು. (8) ''ಶೃಣು ಪುತ್ರ ನೃಣಾಂ ಪಾಪಂ ಕೋಟಿಜನ್ಮಾರ್ಜಿತಂ ಕಲೌ । ವ್ಯಪೋಹತಿ ನ ಸಂದೇಹ ಏಕಾದಶ್ಯಾಂ ತು ಜಾಗರಾತ್ '' ॥ ಇತ್ಯಾದಿ. ಮಗನೇ ಕೇಳು! ಕೋಟಿಜನ್ಮಗಳಲ್ಲಿ ಸಂಪಾದಿಸಲ್ಪಟ್ಟ ಮನುಷ್ಯರ ಪಾಪವೂ ಏಕಾದಶೀದಿನ ಜಾಗರಮಾಡಿದುದರಿಂದಲೇ ಕಲಿಯುಗದಲ್ಲಿ ನಷ್ಟವಾಗುತ್ತದೆ, ಸಂಶಯವಿಲ್ಲ, ಇತ್ಯಾದಿ ಸ್ಕಾಂದಪುರಾಣದಲ್ಲಿ ಹೇಳಿದ ಪ್ರಕಾರ ಜಾಗರಮಾಡಿದರೆ ಮಹಾಫಲವಿದ್ದುದರಿಂದ ವಿಷ್ಣುಭಕ್ತರೆಲ್ಲರೂ ಆವಶ್ಯಕವಾಗಿ ಜಾಗರಮಾಡಬೇಕು. (9) ''ಪಾಷಂಡಿನಂ ವಿಕರ್ಮಸ್ಥಂ ಪತಿತಂ ಶ್ವಪಚಂ ತಥಾ । ನಾವಲೋಕೇನ್ನ ಸಂಭಾಷೇತ್ ತ್ರಿದಿನಂ ತತ್ರ ವೈಷ್ಣವಃ ॥ ಅವೈಷ್ಣವೋ ದ್ವಿಜೋ ಯಸ್ತು ಸ ಪಾಷಂಡೀತಿ ವಿಶ್ರುತಃ; ಶಿಖೋಪವೀತತ್ಯಾಗೀ ಚ ವಿಕರ್ಮಸ್ಥ ಇತೀರಿತಃ ॥ ಮಹಾಪಾಪೋಪಪಾಪಾಭ್ಯಾಂ ಯುಕ್ತಃ ಪತಿತ ಉಚ್ಯತೇ। ಅಂತ್ಯಜಃ ಶ್ವಪಚಃ ಪ್ರೋಕ್ತೋ ದೇವಿ ತತ್ರೈವ ನಿರ್ಣಯಃ ॥'' ಅಂದರೆ– ಪಾಷಂಡಿಯನ್ನೂ, ವಿಕರ್ಮಸ್ಥನನ್ನೂ, ಪತಿತನನ್ನೂ, ಹಾಗೆಯೇ ಶ್ವಪಚನನ್ನೂ ದಿನತ್ರಯದಲ್ಲಿ ವೈಷ್ಣವನು ನೋಡಬಾರದು, ಅವರೊಡನೆ ಮಾತನಾಡಬಾರದು. ವೈಷ್ಣವನಲ್ಲದಿದ್ದ ಬ್ರಾಹ್ಮಣನು ಪಾಷಂಡಿಯೆಂದು ಹೇಳಲ್ಪಡುತ್ತಾನೆ. ತಲೆಕೂದಲುಗಳನ್ನು ಸಂಪೂರ್ಣವಾಗಿ ಕತ್ತರಿಸಿಕೊಂಡವನೂ, ಯಜ್ಞೋಪವೀತವನ್ನು ತೆಗೆದುಹಾಕಿದವನೂ ವಿಕರ್ಮಸ್ಥನೆಂದು ಹೇಳಲ್ಪಡುತ್ತಾನೆ. ಮಹಾಪಾತಕ ಉಪಪಾತಕಗಳಿಂದ ಕೂಡಿದವನು ಪತಿತನೆಂದು ಹೇಳಲ್ಪಡುತ್ತಾನೆ. ಅಂತ್ಯಜನು ಶ್ವಪಚನೆಂದು ಹೇಳಲ್ಪಡುತ್ತಾನೆ. ತಥಾಚ ಪತಿತಾದಿಗಳ ಹತ್ತಿರ ಸಂಭಾಷಣಾದಿಗಳನ್ನು ಮಾಡಬಾರದು. ಸ್ತ್ರೀಸಂಭೋಗಾದಿಗಳನ್ನು ಬಿಟ್ಟುಬಿಡಬೇಕು. (10) ''ಯಥಾ ಶೌಚಗತಂ ಶ್ರಾದ್ಧಮಾಶೌಚಾಂತೇ ವಿಧೀಯತೇ । ತಥೈವೈಕಾದಶೀ ಶ್ರಾದ್ಧಂ ದ್ವಾದಶ್ಯಾಮೇವ ಕಾರಯೇತ್॥ ತಸ್ಮಾದೇಕಾದಶೀಶ್ರಾದ್ಧಂ ನೋಪವಾಸೇ ಸಮಾಚರೇತ್ ॥ ದಾತೃ ಭೋಕ್ತೃ ಪಿತೄಣಾಂ ತದನ್ನಂ ದುರ್ಗತಿಸಾಧನಂ ॥'' ಇತ್ಯಾದಿ ಸಂಗ್ರಹೇ ॥ ಅಂದರೆ– ಹೇಗೆ ಅಶೌಚಮಧ್ಯದಲ್ಲಿ ಪ್ರಾಪ್ತವಾದ ಶ್ರಾದ್ಧವು ಅಶೌಚ ಮುಗಿದ ಮೇಲೆ ಆಚರಿಸತಕ್ಕುದೋ, ಹಾಗೆಯ ಏಕಾದಶೀ (ಉಪೋಷ್ಯದಿನ ಪ್ರಾಪ್ತವಾದ) ಶ್ರಾದ್ಧವು ದ್ವಾದಶೀದಿನವೇ ಮಾಡಬೇಕು. ಆದಕಾರಣ ಉಪವಾಸದಿನ ಮಾಡಬಾರದು. ಆ ದಿನ ಶ್ರಾದ್ಧಮಾಡಿದರೆ ಆ ಅನ್ನವು ದಾತೃಗಳಿಗೂ, ಭೋಜನಮಾಡುವವರಿಗೂ, ಪಿತೃಗಳಿಗೂ ದುರ್ಗತಿಯನ್ನು ಹೊಂದಿಸುವುದು. ಏಕಾದಶೀದಿನ ಅನ್ನವನ್ನು ಇಚ್ಛಿಸುವವನೂ, ಕೊಡುವವನೂ. ಭೋಜನಮಾಡುವವನೂ ಸರ್ವರೂ ತಮ್ಮನ್ನು ಪಿತೃಗಳಿಂದ ಕೂಡಿಕೊಂಡು ನರಕದಲ್ಲಿ ಬೀಳಿಸುವರು. ಆದಿನ ಶ್ರಾದ್ಧಮಾಡುವವನು ಪಿತೃಗಳಿಗೆ ರೇತಸ್ಸು ಮೂತ್ರ ಪುರೀಷಾದಿಗಳನ್ನು ಕೊಡುವವನಂತೆ ಆಗುವನು. (11) ''ದೇವಾನಾಂ ಚ ಋಷೀಣಾಂ ಚ । ವಿಶೇಷತಃ ಪಿತೄಣಾಂ । ಅನ್ನಂ ನ ದದ್ಯಾತ್ ಕೃಷ್ಣಾಹೇ ಭಗವಂತಂ ಹರಿಂ ವಿನಾ॥'' ಏಕಾದಶೀದಿನ ಶ್ರೀಹರಿಯನ್ನು ಹೊರತು ಬೇರೆ ದೇವತೆಗಳಿಗೂ, ಋಷಿಗಳಿಗೂ ಅದನಯೋಗ್ಯವಾದ ಹವಿಸ್ಸು ಮೊದಲಾದವುಗಳನ್ನು ಕೊಡಬಾರದು. ಎಂದು ದತ್ತಾತ್ರೇಯ ಸಂಹಿತೆಯಲ್ಲಿದೆ. (12) ''ವಿಷ್ಣೋರಹನಿ ಸಂಪ್ರಾಪ್ತೇ ಪಕ್ಷಯೋರುಭಯೋರಪಿ । ನಾಗ್ನಿಹೋತ್ರಂ ನ ಚ ಶ್ರಾದ್ಧಂ ನಿತ್ಯೌಪಾಸನಮೇವ ಚ ॥ ಏಕಾದಶ್ಯಾಂ ನ ಕುರ್ವೀತ ದ್ವಾದಶ್ಯಾಮೇವ ಕಾರಯೇತ್ ॥'' ಶುಕ್ಲಪಕ್ಷ,

ಕೃಷ್ಣಪಕ್ಷ ಎರಡು ಪಕಗಳಲ್ಲಿಯೂ ಏಕಾದಶೀದಿನ ಅಗ್ನಿಹೋತ್ರವನ್ನೂ, ಶ್ರಾದ್ಧವನ್ನೂ ನಿತ್ಯೋಪಾಸನವನ್ನೂ ಮಾಡಕೂಡದು. ದ್ವಾದಶೀದಿನವೇ ಮಾಡಬೇಕು. ಎಂದು ಭಾರದ್ವಾಜ ಸಂಹಿತೆಯಲ್ಲಿದೆ. (13) ''ವರ್ಣಾಶ್ರಮಾಣಾಂ ಸರ್ವೇಷಾಂ ಸ್ತ್ರೀಣಾಂ ಚ ವರವರ್ಣಿನಿ । ಏಕಾದಶ್ಯುಪವಾಸಸ್ತು ಕರ್ತವ್ಯೋ ನಾತ್ರ ಸಂಶಯಃ ॥'' ಸರ್ವವರ್ಣದವರೂ, ಸರ್ವ ಆಶ್ರಮದವರೂ, ಸ್ತ್ರೀಯರೂ ಏಕಾದಶ್ಯುಪವಾಸವನ್ನು ಮಾಡಬೇಕು, ಈ ವಿಷಯದಲ್ಲಿ ಸಂಶಯವಿಲ್ಲ ಎಂದು ಪಾದ್ಮದಲ್ಲಿ ಸರ್ವರೂ ಅಧಿಕಾರಿಗಳೆಂದು ನಿರೂಪಿಸಿಯದೆ.

(14) ''ಮಥ್ಯಮಾನೇ ತು ದುಗ್ಧಾಬ್ಧೌ ದೈವತೈಶ್ಚ ಮಹಾಬಲೈಃ । ಉತ್ಪಾದನಾರ್ಥಂ ಲಕ್ಷ್ಮ್ಯಾಶ್ಚ ತತ ಏತೇ ಮಹರ್ಷಯಃ । ಉಪೋಷ್ಯ ನಿಯಮಂ ಕೃತ್ವಾಂ ಜಪ್ತಂ ಶ್ರೀಸೂಕ್ತಮುತ್ತಮಂ ॥'' ಇತ್ಯಾದಿ. ಮಹಾಬಲಿಷ್ಠರಾದ ದೇವತೆಗಳಿಂದ ಕ್ಷೀರಸಮುದ್ರವು ಮಥನಮಾಡಲ್ಪಡುತ್ತಿರಲು, ಲಕ್ಷ್ಮಿಯನ್ನು ಹುಟ್ಟಿಸುವುದಕ್ಕಾಗಿ ಆ ಈ ಋಷಿಗಳು ಉಪವಾಸಮಾಡಿ, ನಿಯಮಮಾಡಿ ಶ್ರೀಸೂಕ್ತವು ಜಪಿಸಲ್ಪಟ್ಟಿತು. ದೇವತೆಗಳು ಸಹಸ್ರನಾಮವನ್ನು ಪಠನಮಾಡಿದರು. ಅದನ್ನು ಮೊದಲುಗೊಂಡು ಬ್ರಹ್ಮಾದಿ ಸರ್ವದೇವತೆಗಳು, ಋಷಿಗಳು, ಮನುಷ್ಯರು, ಯೋಗಿಗಳು, ಇವರೆಲ್ಲರೂ ಮಹಾಭಕ್ತಿಯುಕ್ತರಾಗಿ ವಿಷ್ಣುವಿನ ಆಜ್ಞಾನುಸಾರವಾಗಿ ಶುದ್ಧೈಕಾದಶೀ ದಿನವೇ ಉಪವಾಸಮಾಡಿ ಜನಾರ್ದನನನ್ನು ವಿಧಿ ಪ್ರಕಾರ ದ್ವಾದಶೀದಿನ ಪೂಜಿಸಿದರು, ಎಂದು ಪಾದ್ಮದಲ್ಲಿ ದೇವತೆಗಳಿಗೂ ಏಕಾದಶೀವ್ರತವು ಅವಶ್ಯಾಚರಣೀಯವೆಂದು ಸ್ಪಷ್ಟವಾಗುತ್ತದೆ. ।

(15) ''ಏಕಾದಶೀಂ ವಿನಾ ಕಿಂಚಿತ್ ಪಾವನಂ ಪಾಪಕರ್ಷಣಂ । ಪ್ರಾಯಶ್ಚಿತ್ತ ವಿಹೀನಾನಾಂ ಸ್ಮೃತಿವಿದ್ಭಿರುದಾಹೃತಂ ॥ ಪಕ್ಷೇ ಪಕ್ಷೇಽಪ್ಯಾರ್ಜಿತಾನಾಮಘೌಘಾನಾಂ ನಿವೃತ್ತಯೇ। ನಿರ್ಮಿತಾ ವಿಷ್ಣುನಾ ಪೂರ್ವಂ ದಿವ್ಯಾ ಹ್ಯೇಕಾದಶೀ ತಿಥಿಃ ॥ ಏಕಾದಶ್ಯುಪವಾಸೇನ ಪುಣ್ಯೇನೈಕೇನ ಸತ್ತಮ । ಶ್ವಪಚೋಽಪಿ ಹರಿಂ ಯಾತಿ ನಾನ್ಯತಶ್ಚಾನ್ಯ ಪುಣ್ಯಕೃತ್ ॥''

ಏಕಾದಶೀ ಹೊರತು ಪಾಪನಾಶಕಗಳಾದ ಪವಿತ್ರವಾದ ಮತ್ತೊಂದು ವ್ರತವು ಇರುವುದಿಲ್ಲ. ಪ್ರಾಯಶ್ಚಿತ್ತವಿಲ್ಲದಿದ್ದವರಿಗೆ ಇದೇ ಪಾಪವನ್ನು ಕಳೆಯತಕ್ಕುದೆಂದು ಹೇಳಲ್ಪಟ್ಟಿದೆ. ಪ್ರತಿ ಪಕ್ಷದಲ್ಲಿ ಸಂಪಾದಿತಗಳಾದ ಪಾಪಸಮೂಹಗಳನ್ನು ನಿವೃತ್ತಿಗೊಳಿಸುವುದಕ್ಕಾಗಿ ಶ್ರೀಹರಿಯಿಂದ ಈ ದಿವ್ಯವಾದ ಏಕಾದಶೀ ವ್ರತವು ನಿರ್ಮಿಸಲ್ಪಟ್ಟಿದೆ. ಪುಣ್ಯಪ್ರದವಾದ ಏಕಾದಶ್ಯುಪವಾಸದಿಂದಲೇ ಶ್ವಪಚನೂ ಕೂಡ ಮುಕ್ತಿಯನ್ನು ಹೊಂದುತ್ತಾನೆ. ಬೇರೆ ವ್ರತಗಳನ್ನು ಮಾಡಿರುವುದಾದರೂ ಈ ಏಕಾದಶೀವ್ರತವನ್ನು ಮಾಡದಿದ್ದರೆ ಮುಕ್ತಿಯನ್ನು ಹೊಂದಲಾರರು. ಎಂದು ಧರ್ಮಸಂಹಿತೆಯಲ್ಲಿ ಹೇಳಿಯದೆ. (16) ಮತ್ತು ಏಕಾದಶೀದಿನ ಶ್ರೀಹರಿಗೆ ಸಹ ಪಕ್ವಾನ್ನವನ್ನು ಸಮರ್ಪಿಸಬಾರದು. ''ಹರಿಶ್ಚ ದೇವತಾಃ ಸರ್ವಾಃ ಪಿತರಶ್ಚ ಮಹರ್ಷಯಃ । ನಾಶ್ನಂತಿ ಗರ್ಹಿತಾನ್ನಂ ತು ಸಂಪ್ರಾಪ್ತೇ ಹರಿವಾಸರೇ। '' ಏಕಾದಶೀದಿನ ಶ್ರೀಹರಿಯೂ, ಸರ್ವದೇವತೆಗಳೂ, ಪಿತೃಗಳೂ, ಮಹರ್ಷಿಗಳೂ ಕೂಡ ಆ ದಿನ ಅನ್ನವು ನಿಂದಿತವಾಗಿರುವುದರಿಂದ ಅನ್ನವನ್ನು ಸ್ವೀಕರಿಸುವುದಿಲ್ಲ, ''ಅನ್ನಂ ಸಮರ್ಪಯೇನ್ಮಹ್ಯಂ ಯಸ್ತು ಮದ್ವ್ಯಾಸರೇ ಶುಭೇ। ತಸ್ಯಾಪಿ ನಿರಯಃ ಪ್ರೋಕ್ತಂ ಕಿಂ ಪುನರ್ಭೋಜನೇ ಕೃತೇ ॥'' ಯಾರು ಏಕಾದಶೀದಿನ ನನಗೋಸ್ಕರ ಅನ್ನವನ್ನು ಸಮರ್ಪಿಸುತ್ತಾರೋ, ಆತನಿಗೂ ನರಕವೆಂದು ಹೇಳಲ್ಪಟ್ಟಿದೆ. ಭೋಜನಮಾಡಿದರೆ ನರಕಪ್ರಾಪ್ತಿಯಾಗುತ್ತದೆಂದು ಸುತರಾಂ ಸಿದ್ಧವಾಯಿತು.

''ತಂಡುಲೋಽಗ್ನ್ಯಂಬುಸಂಯೋಗಾತ್ ಪಿಷ್ಟಂ ಲವಣಯೋಗತಃ । ಫಲಂ ತ್ರಿತಯ-ಸಂಯೋಗಾದನ್ನಂ ಭವತಿ ತತ್ಕ್ಷಣಾತ್ ॥'' ಅಕ್ಕಿಯು ಬೆಂಕಿ ನೀರುಗಳ ಸಂಯೋಗದಿಂದಲೂ, ಹಿಟ್ಟು ಉಪ್ಪಿನ ಸಂಯೋಗದಿಂದಲೂ, ಫಲವು ಈ ಮೂರರ ಸಂಯೋಗದಿಂದಲೂ ತತ್ಕ್ಷಣದಲ್ಲಿ ಅನ್ನವಾಗುತ್ತದೆ. ಅಂತೂ ಏಕಾದಶೀದಿನ ಅನ್ನವನ್ನು ಸಮರ್ಪಿಸಬಾರದು, ಎಂದು ವಿಷ್ಣುರಹಸ್ಯದಲ್ಲಿ ಹೇಳಿಯದೆ. (17) ''ಖರ್ಜೂರಂ ನಾಳಿಕೇರಂ ಚ ಪ್ರಿಯಾಲಪನಸಾದಿಕಂ । ಆಮ್ರಂ ಚ ಕದಲೀ ದ್ರಾಕ್ಷಾ ಕ್ಷೀರಂ ದಧಿ ಘೃತಂ ತಥಾ ॥'' ಎಂದು ವಾರಾಹಪುರಾಣದಲ್ಲಿ ಹೇಳಿದ ಪ್ರಕಾರ ಖರ್ಜೂರಾದಿಗಳನ್ನು ಶ್ರೀಹರಿಗೆ ಸಮರ್ಪಿಸಬೇಕು. ಅಥವಾ ''ಅನ್ನಂ ನ ದದ್ಯಾತ್ಕೃಷ್ಣಾಹೇ ಭಗವಂತಂ ಹರಿಂ ವಿನಾ ॥'' ಎಂಬ ವಚನದಿಂದ ಶ್ರೀಹರಿಗೆ ಅನ್ನವನ್ನು ನೈವೇದ್ಯಮಾಡಿದರೆ ದೋಷವಿಲ್ಲವೆಂದು ಹೇಳಿದುದರಿಂದ ಎರಡು ವಿಧ ವಾಕ್ಯಗಳನ್ನನುಸರಿಸಿ ಸ್ವಯಂವ್ಯಕ್ತಾದಿ ಸ್ಥಳದಲ್ಲಿ ಅನ್ನವನ್ನು ಸಮರ್ಪಿಸುವುದು. ಬೇರೆ ಕಡೆ ಫಲಾದಿಗಳನ್ನೇ ಸಮರ್ಪಿಸಬೇಕು. ಆದಕಾರಣ ಯಾವ ವಿರೋಧವೂ ಇಲ್ಲವೆಂದು ತಿಳಿಯತಕ್ಕುದು. (18) ದ್ವಾದಶೀದಿನ ಹರಿವಾಸರವಿದ್ದರೆ ಅದನ್ನು ದಾಟಿದಮೇಲೆ ಪಾರಣವನ್ನು ಮಾಡಬೇಕು. ''ದ್ವಾದಶ್ಯಾಮಾದ್ಯಪಾದಸ್ತು ಕೀರ್ತಿತೋ ಹರಿವಾಸರಃ । ನ ತತ್ರ ಪಾರಣಂ ಕುರ್ಯಾತ್ ಸಾಪಿ ಹ್ಯೇಕಾದಶೀ ಸಮಾ'' ॥ ದ್ವಾದಶೀ ತಿಥಿಯ ಒಂದನೇ ಪಾದವು ಹರಿವಾಸರವೆಂದು ಹೇಳಲ್ಪಟ್ಟಿದೆ. ಆಗ ಪಾರಣಮಾಡಬಾರದು. ಅದೂ ಏಕಾದಶಿಗೆ ಸಮವಾದದ್ದು ಎಂದು ನಾರದೀಯದಲ್ಲಿ ಹೇಳಿಯದೆ. ''ದ್ವಾದಶ್ಯಾಮಾದ್ಯಪಾದಸ್ತು ಕೀರ್ತಿತೋ ಹರಿವಾಸರಃ । ಮಹಾದೋಷಕರಂ ಚಾನ್ನಂ ಸಂಪ್ರಾಪ್ತೇ ಹರಿವಾಸರೇ ॥'' ದ್ವಾದಶೀತಿಥಿಯ ಪ್ರಥಮಪಾದವು ಹರಿವಾಸರವೆಂದೆನ್ನಿಸಿಕೊಳ್ಳಲ್ಪಡುತ್ತದೆ. ಹರಿವಾಸರ ಕಾಲದಲ್ಲಿ ಅನ್ನಭೋಜನವು ಮಹಾದೋಷಕರವಾಗಿದೆ, ಹೀಗೆ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ. ''ಏಕಾದಶ್ಯಾಃ ಪ್ರಾಂತಭಾಗಃ ದ್ವಾದಶ್ಯಾಃ ಪೂರ್ವ ಏವ ತು। ಹರಿವಾಸರ ನಾಮಾಸೌ ಸರ್ವಕಾಲೋತ್ತಮೋ ಮತಃ ॥'' ಇತ್ಯಾದಿ. ಏಕಾದಶೀ ತಿಥಿಯ ಕೊನೆಯ ಪಾದವೂ ದ್ವಾದಶೀತಿಥಿಯ ಆದ್ಯಪಾದವೂ ಹರಿವಾಸರವೆಂದೆನ್ನಿಸಿಕೊಳ್ಳಲ್ಪಟ್ಟಿದೆ. ಇದು ಮಹಾಪುಣ್ಯಕಾಲವಾಗಿದೆ. ಈ ಪ್ರಕಾರ ಸ್ಮೃತ್ಯಂತರದಲ್ಲಿ ಹೇಳಲ್ಪಟ್ಟಿದೆ. (19) ''ಏಕಾದಶ್ಯಾಃ ಪ್ರಾಂತಭಾಗೋ ದ್ವಾದಶ್ಯಾಃ ಪೂರ್ವ ಏವ ಚ । ಇತಿ ಯಾಮದ್ವಯಂ ದೇವಿ ಪ್ರೋಚ್ಯತೇ ಹರಿವಾಸರಃ ॥ ದ್ವಾದಶ್ಯಾಂ ವಾ ದಶಮ್ಯಾಂ ವಾ ಯದಿ ದೈವಾತ್ ಸ ಆಪತೇತ್। ನ ತದಾಽನ್ನಂ ಸಮಶ್ನೀಯಾದೇಕಾದಶ್ಯಾಃ ಸಮೋ ಹಿ ಸಃ ॥ ಹರಿವಾಸರತಃ ಪೂರ್ವಂ ದಶಮ್ಯಾಂ ಭೋಜನಂ ಸ್ಮೃತಂ । ತಸ್ಮಿನ್ನತೀತೇ ಕರ್ತವ್ಯಂ ದ್ವಾದಶ್ಯಾಂ ಪಾರಣಂ ಬುಧೈಃ ॥'' ಏಕಾದಶಿಯ ಅಂತ್ಯಭಾಗವು, ದ್ವಾದಶಿಯ ಪೂರ್ವ ಭಾಗವು ಹೀಗೆ ಎರಡೆರಡು ಯಾಮಗಳು ಹರಿವಾಸರವೆಂದು ಹೇಳಲ್ಪಡುತ್ತದೆ. ಇಂತಹ ಹರಿವಾಸರವು ದ್ವಾದಶೀದಿನ ಮಧ್ಯಾಹ್ನದವರೆಗೂ, ದಶಮೀದಿನ ಎಂಟು (8) ಘಳಿಗೆ ರಾತ್ರಿಯ ನಂತರವೂ ಬರಬಹುದು. ಇಂತಹ ಹರಿವಾಸರಕಾಲದಲ್ಲಿ ಭೋಜನಾದಿಗಳನ್ನು ಮಾಡಬಾರದು. ಅದು ಏಕಾದಶಿಗೇನೇ ಸಮಾನವು. ದ್ವಾದಶೀದಿನ ದಶಮೀದಿನವಾಗಲೀ, ದೈವಾತ್ ಅವುಗಳು ಬಂದರೆ ಆಗ ಯಾವದನ್ನೂ ತಿನ್ನಬಾರದು. ದಶಮೀದಿನ ಹರಿವಾಸರವಿದ್ದರೆ ಅದಕ್ಕಿಂತ ಮೊದಲೇ ಭೋಜನಮಾಡಬೇಕು. ದ್ವಾದಶೀದಿನ ಹರಿವಾಸರ ಮುಗಿದಮೇಲೆಯೇ ಪಾರಣಮಾಡಬೇಕು, ಎಂದು ವಾರಾಹದಲ್ಲಿ ಹೇಳಿರುತ್ತದೆ. (20) ''ದ್ವಾದಶ್ಯಾಮಾದ್ಯಪಾದಸ್ತು ಸಂಗವಾತ್ಪರತೋ ಯದಿ । ಉಪವಾಸದ್ವಯಂ ಕಾರ್ಯಮನ್ಯಥಾ ನರಕಂ ವ್ರಜೇತ್॥'' ದ್ವಾದಶೀದಿನ

ಒಂದನೇ ಪಾದವು ಸಂಗವಕಾಲಕ್ಕಿಂತ ಪರದಲ್ಲಿದ್ದರೆ ಎರಡು ಉಪವಾಸ ಮಾಡಬೇಕು. ಇಲ್ಲವಾದರೆ ನರಕಕ್ಕೆ ಹೋಗುವನು. ಸಂಗವಕಾಲವೆಂದರೆ– ಆಯಾಯ ದಿನಗಳ ಹಗಲನ್ನು ಐದು ಪಾಲುಮಾಡಿ ಅಂತಹ ಒಂದನೇ ಅಂಶವು ಪ್ರಾತಃಕಾಲವೆಂತಲೂ, ಎರಡನೇ ಅಂಶವು ಸಂಗವಕಾಲವೆಂತಲೂ, ಈ ಮೇರೆಗೆ ಉಳಿದ ಅಂಶಗಳನ್ನು ಮಧ್ಯಾಹ್ನ, ಅಪರಾಹ್ನ, ಸಾಯಾಹ್ನಗಳೆಂದು ತಿಳಿಯಬೇಕು. (21) ''ಪ್ರಾತಃಕಾಲೇ ತು ದ್ವಾದಶ್ಯಾಂ ಯದಾ ಸ್ಯಾದ್ಧರಿವಾಸರಃ । ತದಾ ಕುರ್ವೀತ ಹೋಮಾದಿ ವ್ಯತೀತೇ ಹರಿವಾಸರೇ ।। ತರ್ಪಣಂ ಶ್ರಾದ್ಧಹೋಮಾದಿ ನಿತ್ಯಂ ನೈಮಿತ್ತಿಕಂ ತಥಾ । ಕುರ್ವೀತ ಜಲಪಾನಾದಿ ವ್ಯತೀತೇ ಹರಿವಾಸರೇ ।।'' ದ್ವಾದಶೀದಿನ ಪ್ರಾತಃಕಾಲದಲ್ಲಿ ಹರಿವಾಸವಿದ್ದರೆ ಹರಿವಾಸರ ದಾಟಿದ ಮೇಲೆಯೇ ಹೋಮಾದಿಗಳನ್ನು, ತರ್ಪಣವನ್ನು, ಶ್ರಾದ್ಧಹೋಮಾದಿಗಳನ್ನು, ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಬೇಕು. ಜಲಪಾನಾದಿಗಳನ್ನು ಆಮೇಲೆಯೇ ಮಾಡಬೇಕು. ಎಂದು ವಾರಾಹ ಪುರಾಣದಲ್ಲಿ ಹೇಳಿಯದೆ. (22) ''ಕಲಾದ್ವಯಂ ತ್ರಯಂ ವಾಽಪಿ ದ್ವಾದಶೀಂ ನ ತ್ವತಿಕ್ರಮೇತ್ । ಪಾರಣೇ ಮರಣೇ ನೄಣಾಂ ತಿಥಿಸ್ತಾತ್ಕಾಲಿಕೀ ಸ್ಮೃತಾ ।।'' ಯಾವಾಗ ತ್ರಯೋದಶೀದಿನ ದ್ವಾದಶಿಯ ಕಲಾರ್ಧವಾಗಲೀ, 1 ಕಲೆಯಾಗಲೀ, 2 ಕಲೆಗಳಾಗಲೀ, 3 ಕಲೆಗಳಾಗಲೀ ಇರುತ್ತವೋ, ಆಗ ಅದರೊಳಗೇನೇ ಪಾರಣಮಾಡಬೇಕು. ದ್ವಾದಶಿಯನ್ನತಿಕ್ರಮಿಸಬಾರದು. ಅತಿಕ್ರಾಂತವಾದರೆ 12 ದ್ವಾದಶಿಗಳ ಪುಣ್ಯವು ನಷ್ಟವಾಗುತ್ತದೆ. ಪಾರಣದಲ್ಲಿಯೂ, ಮರಣದಲ್ಲಿಯೂ ತಾತ್ಕಾಲಿಕವಾದ ತಿಥಿಯು ಸ್ಮೃತವಾಗಿದೆ. ಎಂದು ನಾರದೀಯ ಪುರಾಣದಲ್ಲಿದೆ. (23) ಸಂಕೋಚದ್ವಾದಶಿಯಲ್ಲಿಯೂ ಪಾರಣ ಮಾಡುವುದಕ್ಕಿಂತ ಮೊದಲೇ ಸರ್ವಕ್ರಿಯೆಗಳನ್ನೂ ಮಾಡಬೇಕು. ''ಅಲ್ಪಾಯಾಮಥ ವಿಪ್ರೇಂದ್ರ ದ್ವಾದಶ್ಯಾಮರುಣೋದಯೇ। ಸ್ನಾನಾರ್ಚನಕ್ರಿಯಾಃ ಕಾರ್ಯಾಃ ದಾನಹೋಮಾದಿ ಸಂಯುತಾಃ ।।'' ಅತ್ಯಲ್ಪ ದ್ವಾದಶಿಯಲ್ಲಿಯೂ ಅರುಣೋದಯದಲ್ಲಿಯೇ ಸ್ನಾನ, ಅರ್ಚನ, ದಾನ, ಹೋಮಾದಿಗಳೆಲ್ಲವನ್ನೂ ಮಾಡಬೇಕು, ಎಂದು ನಾರದರು ಹೇಳಿರುವರು. (24) ''ಗಯಾಶ್ರಾದ್ಧೇನ ಪಿತರೋ ಯಥಾ ತೃಪ್ತಾ ಭವಂತಿ ಹಿ । ತಥಾ ತೃಪ್ತಾ ಭವಂತ್ಯೇವ ದ್ವಾದಶ್ಯಾಮೇವ ಪಾರಣಾತ್।।'' ಗಯೆಯಲ್ಲಿ ಶ್ರಾದ್ಧಮಾಡೋಣದರಿಂದ ಪಿತೃಗಳು ಹೇಗೆ ತೃಪ್ತರಾಗುತ್ತಾರೋ, ಹಾಗೆಯೇ ಅಲ್ಪದ್ವಾದಶಿಯಲ್ಲೇ ಪಿಂಡದಾನಾದಿಗಳಿಂದ ತೃಪ್ತರಾಗುತ್ತಾರೆ. ''ಅರ್ಧೋದಯೇ ಚ ಸಂಕ್ರಾಂತೌ ಗ್ರಹಣೇ ಚಂದ್ರಸೂರ್ಯಯೋಃ । ದ್ವಾದಶ್ಯಾಮಾಬ್ದಿಕೇ ಚೈವ ಕುತಪೋ ನ ಹ್ಯಪೇಕ್ಷಿತಃ ।।'' ಅರ್ಧೋದಯದಲ್ಲಿಯೂ, ಸಂಕ್ರಾಂತಿಯಲ್ಲಿಯೂ, ಚಂದ್ರ ಸೂರ್ಯರ ಗ್ರಹಣದಲ್ಲಿಯೂ, ದ್ವಾದಶಿಯ ಸಾಂವತ್ಸರಿಕದಲ್ಲಿಯೂ ಕುತಪಕಾಲವು ಅಪೇಕ್ಷಿಸಲ್ಪಡುವುದಿಲ್ಲ. ಎಂದು ಯಮಸ್ಮೃತಿಯು. (25) ಇದೇ ವಿಷಯದಲ್ಲಿ ವರಾಹಪುರಾಣದಲ್ಲಿ ವಿಶೇಷ ವಿಷಯವು ಹೇಳಿಯದೆ. ''ಯದಿ ಚ ದ್ವಾದಶೀ ಸ್ವಲ್ಪಾ ನಿತ್ಯಕರ್ಮ ಕಥಂ ತದಾ । ಹೋಮಶ್ಚ ವೈಶ್ವದೇವಶ್ಚ ಕದಾ ಕಾರ್ಯೋ ವದಸ್ವ ತತ್ ।। ಶ್ರೀವರಾಹ ಉವಾಚ ।। ತ್ರಯೋ ಭಾಗಾಸ್ತ್ರಿಯಾಮಾಯಾಸ್ತತ್ರಾದ್ಯೌ ಸಂತ್ಯಜೇದ್ಬುಧಃ । ಭಾಗೇ ತೃತೀಯೇ ಸ್ನಾತ್ವಾ ತು ನಿತ್ಯಕರ್ಮಾಣಿ ಕಾರಯೇತ್ ।। ಆಮಧ್ಯಾಹ್ನಾನಿ ಕರ್ಮಾಣಿ ರಾತ್ರಾವೇವ ವಿಧಾಯ ಚ। ಸ್ವಲ್ಪಾಯಾಮಪಿ ಭದ್ರಾಯಾಂ ಪಾರಣಂ ರವಿದರ್ಶನೇ ।। ಯದಾ ಸೂರ್ಯೋದಯಾತ್ಪೂರ್ವಂ ಘಟಿಕೈಕಾವಶಿಷ್ಯತೇ । ಸ ವೈ ಸೂರ್ಯೋದಯೋ ನಾಮ ಮುನಿಭಿಃ ಪರಿಕೀರ್ತಿತಃ ।। ತತ್ಪೂರ್ವಘಟಿಕೈಕಾ ತು ಪ್ರಾತಃಕಾಲ ಇತೀರಿತಃ । ಮಾಧ್ಯಾಹ್ನಿಕಂ ತದಾ ಕುರ್ಯಾತ್ ಹೋಮಂ ಸೂರ್ಯೋದಯೇ ತಥಾ ।। ವೈಶ್ವದೇವಂ ತತಃ ಕೃತ್ವಾ ಬ್ರಹ್ಮಯಜ್ಞಂ ಚ ತರ್ಪಣಂ ।

ಆಪೋಶನಂ ವಿಧಾಯೈವ ಪ್ರತೀಕ್ಷೇದ್ರವಿದರ್ಶನಂ ॥ ಅರುಣೋದಯತಃ ಪೂರ್ವಂ ಕೃತಂ ಸ್ನಾನಂ ವೃಥಾ ಭವೇತ್ । ಯತಃ ಪರ್ಯುಷಿತಂ ತತ್ಸ್ಯಾತ್ ಸಾಧನದ್ವಾದಶೀಂ ವಿನಾ ॥ ಸಾಧನೀಯಾऽತಿಯತ್ನೇನ ಯತಃ ಸಾ ಸಾಧನೀ ಮತಾ । ಸ್ವಲ್ಪಾಯಾಮಪಿ ದ್ವಾದಶ್ಯಾಂ ಪಾರಣಂ ವಿದಧೀತ ಯಃ । ವ್ರತಂ ಪೂರ್ಣಂ ಭವೇತ್ ತಸ್ಯ ವ್ರತಲೋಪೋऽನ್ಯಥಾ ಭವೇತ್ ॥'' ಇತ್ಯಾದಿ. ದ್ವಾದಶಿಯು ಸ್ವಲ್ಪವಾಗಿದ್ದರೆ ನಿತ್ಯಕರ್ಮಗಳನ್ನೂ, ಹೋಮವನ್ನೂ ವೈಶ್ವದೇವವನ್ನೂ ಯಾವಾಗ ಮಾಡಬೇಕು? ನನ್ನ ಮೇಲೆ ವಿಶ್ವಾಸದಿಂದ ಹೇಳು ಎಂದು ಪ್ರಶ್ನೆಮಾಡುವಾಗ ಶ್ರೀವರಾಹನು ಹೇಳುತ್ತಾನೆ. ರಾತ್ರಿಯಲ್ಲಿ (3) ಮೂರು ಭಾಗಮಾಡಿ ಆದಿಯ (2) ಎರಡು ಭಾಗಗಳನ್ನು ಬಿಟ್ಟು (3)ಮೂರನೇ ಭಾಗದಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನು ಮಾಡಬೇಕು. ಮಧ್ಯಾಹ್ನಪರ್ಯಂತ ಮಾಡತಕ್ಕ ಕರ್ಮಗಳನ್ನು ರಾತ್ರಿಯಲ್ಲಿಯೇ ಮಾಡಿ ಸ್ವಲ್ಪವಾದ ದ್ವಾದಶಿಯಲ್ಲಿಯೇ ಸೂರ್ಯನ ದರ್ಶನವಾದೊಡನೆ ಪಾರಣಮಾಡಬೇಕು. ಸೂರ್ಯೋದಯಕ್ಕಿಂತ ಮೊದಲು ಒಂದು ಘಳಿಗೆಯು ಪ್ರಾತಃಕಾಲವೆಂದು ಹೇಳಲ್ಪಡುತ್ತದೆ. ಆಗ ಮಾಧ್ಯಾಹ್ನಿಕಮಾಡಿಕೊಂಡು ಸೂರ್ಯೋದಯವಾಗುವಾಗ ಹೋಮವನ್ನೂ, ವೈಶ್ವದೇವವನ್ನೂ, ಅಮೇಲೆ ಬ್ರಹ್ಮಯಜ್ಞವನ್ನೂ, ತರ್ಪಣವನ್ನೂ ಮಾಡಬೇಕು. ಆಪೋಶನ ತೆಗೆದುಕೊಂಡು ಸೂರ್ಯದರ್ಶನವನ್ನು ನಿರೀಕ್ಷಿಸಬೇಕು. ದ್ವಾದಶೀ ಹೊರತು ಬೇರೆ ದಿನಗಳಲ್ಲಿ ಅರುಣೋದಯಕ್ಕಿಂತ ಮೊದಲು ಸ್ನಾನಮಾಡಿದರೆ ವ್ಯರ್ಥವಾಗುವುದು. ಯಾವ ಕಾರಣದಿಂದ ಅತಿಪ್ರಯತ್ನದಿಂದ ಸಾಧಿಸಲಿಕ್ಕೆ ಯೋಗ್ಯವೋ, ಆದುದರಿಂದಲೇ ಸಾಧನೀ ಎಂದು ಹೇಳಲ್ಪಟ್ಟದೆ. ಸ್ವಲ್ಪ ದ್ವಾದಶಿಯಲ್ಲಿಯೇ ಯಾವನು ಪಾರಣಮಾಡುತ್ತಾನೋ ಆತನಿಗೇನೇ ವ್ರತವು ಪೂರ್ಣವಾಗುವುದು. ಇಲ್ಲವಾದರೆ ವ್ರತಕ್ಕೆ ಭಂಗವು ಬರುವುದು. ದ್ವಾದಶಿಯು ಅತಿಕ್ರಾಂತವಾದರೆ 12 ದ್ವಾದಶಿಗಳ ಪುಣ್ಯವು ನಷ್ಟವಾಗುತ್ತದೆ. ಸಂಶಯವಿಲ್ಲ. ಅಂತಹ ದ್ವಾದಶಿಯಲ್ಲಿ ಪಿತೃಗಳ ಶ್ರಾದ್ಧವು ಬಂದರೆ, ಬ್ರಾಹ್ಮಣರನ್ನು ಮೊದಲು ಭೋಜನಮಾಡಿಸಿ, ಆಮೇಲೆ ತಾನು ಭೋಜನ ಮಾಡಬೇಕು. ವ್ರತಕ್ಕೆ ಲೋಪವು ಬರುವುದಿಲ್ಲ, ಸಂಪೂರ್ಣ ಫಲವು ಬರುವುದು. ಪತ್ನೀ ಮುಂತಾದ ನಿಯಮ್ಯ ಜನರು ತಮ್ಮ ಪ್ರಭುನಿದೇಶಗಳಿಂದ ತಮಗೆ ನಿಯತಗಳಾದ ಪರಿವೇಷಣಾದಿ ಕೆಲಸಗಳನ್ನು ಮಾಡಿ ಸಾಧನಕಾಲವು ಅತಿಕ್ರಮಿಸಿ ಹೋಗುವ ಸಂದರ್ಭದಲ್ಲಿ ವಿಹಿತಕಾಲದಲ್ಲಿ ತೀರ್ಥ ಪ್ರಾಶನೆ ಮಾಡಿಕೊಂಡು ತಮ್ಮ ಅಂತಹ ಕಾರ್ಯಗಳು ಮುಗಿದೊಡನೆಯೇ ಪಾರಣವನ್ನು ಮಾಡಿದರೂ ಸಾಧನಕಾಲದಲ್ಲಿಯೇ ಪಾರಣಮಾಡಿದಂತೆಯೇ ಆಗುವುದು. (26) ಆದಕಾರಣ ಮುಮುಕ್ಷುಗಳಾದ ಭಕ್ತರೆಲ್ಲರೂ ನೂರಾರು ಜನ್ಮಗಳಲ್ಲಿ ಮಾಡಿದ್ದ ಪಾಪಗಳನ್ನು ಪರಿಹರಿಸಿಕೊಂಡು ಭಗವತ್ಪ್ರಸಾದವನ್ನು ಸಂಪಾದಿಸುವುದಕ್ಕಾಗಿ ಏಕಾದಶೀದಿವಸ ಉಪವಾಸ ಮಾಡಬೇಕು. ಅದರಿಂದ ಮುಕ್ತ್ಯಾದಿರೂಪ ಪುರುಷಾರ್ಥವನ್ನು ಹೊಂದುವರು ॥ 225 ॥

**ಮೂಲ ॥ ಭಕ್ತ್ಯಾ ಗ್ರಾಹ್ಯೋ ಹೃಷೀಕೇಶೋ ನ ಧನೈರ್ಧರಣೀಸುರಾಃ ।**
**ಭಕ್ತ್ಯಾ ಸಂಪೂಜಿತೋ ವಿಷ್ಣುಃ ಫಲಂ ಧ(ದ)ತ್ತೇ ಸಮಾಹಿತಂ ॥ ೨೨೬ ॥**

**ಅರ್ಥ ॥** ಎಲೋ ಋಷಿಗಳಿರಾ! ಚಕ್ಷುರಾದಿ ವಿಷಯೇಂದ್ರಿಯಗಳಿಗೆ ನಿಯಾಮಕನಾದ ಶ್ರೀಹರಿಯು ಭಕ್ತಿಯಿಂದಲೇ ವಶೀಕರಿಸಿಕೊಳ್ಳಲಿಕ್ಕೆ ಯೋಗ್ಯನು, ದ್ರವ್ಯಾದಿಗಳಿಂದ ಗ್ರಾಹ್ಯನಾಗ ಲಾರನು. ಶ್ರೀಹರಿಯು ಭಕ್ತಿಯಿಂದ ಚೆನ್ನಾಗಿ ಪೂಜಿಸಲ್ಪಟ್ಟರೆ (ಹಾಗೆ ಪೂಜಿಸುವವನಿಗೆ) ಇಷ್ಟವಾದ ಎಲ್ಲವನ್ನೂ ಕೊಡುತ್ತಾನೆ ॥ 226 ॥

**ಮೂಲ ॥ ಜಲೇನಾಪಿ ಜಗನ್ನಾಥಃ ಪೂಜಿತಃ ಕ್ಲೇಶನಾಶನಃ ।**
**ಪರಿತೋಷಂ ಪ್ರಯಾತ್ಯಾಶು ತೃಷಾರ್ತಸ್ತು ಯಥಾ ಜಲೈಃ ॥ ೨೨೭ ॥**

**ಅರ್ಥ ॥** ''ಪತ್ರಂ ಪುಷ್ಪಂ ಫಲಂ ತೋಯಂ'' ಎಂದು ಹೇಳಿದ ಪ್ರಕಾರ ಕೇವಲ ನೀರಿನಿಂದಲೂ (ದರಿದ್ರನಾದ ಭಕ್ತನಿಂದ) ಪೂಜಿಸಲ್ಪಟ್ಟ ದುಃಖಪರಿಹಾರಕನಾದ ಜಗನ್ನಾಥನು ಸಂತುಷ್ಟನಾಗುತ್ತಾನೆ. ಹೇಗೆಂದರೆ- ತೃಷೆಯಿಂದ ಬಾಧಿತನಾದ ಪುರುಷನು ನೀರುಗಳಿಂದ (ಅಂದರೆ, ನೀರನ್ನು ಕುಡಿದರೆ) ಹೇಗೆ ಸಂತುಷ್ಟನಾಗುತ್ತಾನೋ, ಹಾಗೆಯೇ ॥ 227 ॥

ನಿತ್ಯದಲ್ಲಿಯೂ ಷೋಡಶೋಪಚಾರಗಳಿಂದಲೂ, ಸರ್ವಪ್ರಕಾರಗಳಿಂದಲೂ ಭಗವಂತನಿಗೆ ಪೂಜಾ ನಮಸ್ಕಾರಾದಿಗಳನ್ನು ಮಾಡುತ್ತಾ, ಆಮೇಲೆ ಅವನ ಪ್ರಾರ್ಥನೆಯನ್ನು ತನ್ನ ಇಷ್ಟವು ಸಿದ್ಧಿಸುವುದಕ್ಕಾಗಿ ಮಾಡಬೇಕೆಂದು ಮುಂದಿನ ಶ್ಲೋಕಗಳಿಂದ ನಿರೂಪಿಸುತ್ತಾರೆ-

**ಮೂಲ ॥ ಆಸೀನಸ್ಯ ಶಯಾನಸ್ಯ ತಿಷ್ಠತೋ ವ್ರಜತೋಽಪಿ ವಾ ।**
**ರಮಸ್ವ ಪುಂಡರೀಕಾಕ್ಷ ನೃಸಿಂಹ ಹೃದಯೇ ಮಮ ॥**
**(ಹೃದಯೇ ಮಮ ಸರ್ವದಾ) ॥ ೨೨೮ ॥**

**ಅರ್ಥ ॥** ಎಲೋ ಪುಂಡರೀಕಾಕ್ಷನೇ! ನರಸಿಂಹನೇ! ಕೂತುಕೊಂಡಿರುವ, ಮಲಗಿರುವ, ನಿಂತಿರುವ, ಓಡಾಡುವ ನನ್ನ (ಸರ್ವ ದುಃಖಗಳನ್ನು ಪರಿಹರಿಸುವುದಕ್ಕಾಗಿ) ಹೃದಯದಲ್ಲಿ ಸರ್ವದಾ ಕ್ರೀಡಿಸುತ್ತಾ ಇರು. (ಆದಕಾರಣ, ''ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಂ । ಯೇಷಾಂ ಹೃದಿಸ್ಥೋ ಭಗವಾನ್ಮಂಗಲಾಯತನಂ ಹರಿಃ ॥'' ಎಂದು ಹೇಳಿದ ಪ್ರಕಾರ ಸರ್ವಮಂಗಲರೂಪನಾದುದರಿಂದ ಮಂಗಳವನ್ನೇ ಕೊಡುತ್ತಾ ಹೃದಯದಲ್ಲಿ ಕ್ರೀಡಿಸಿಕೊಂಡಿರು.) ॥ 228 ॥

**ಮೂಲ ॥ ಕರಾವಲಂಬನಂ ದೇಹಿ ಶ್ರೀಕೃಷ್ಣ ಕಮಲೇಕ್ಷಣ ।**
**ಭವ ಪಂಕಾರ್ಣವೇ ಘೋರೇ ಮಜ್ಜತೋ ಮಮ ಸರ್ವದಾ (ಶಾಶ್ವತ) ॥ ೨೨೯ ॥**

**ಅರ್ಥ ॥** ಶಾಶ್ವತನೇ! ಕಮಲಾಕ್ಷನೇ! ಶ್ರೀಕೃಷ್ಣನೇ! (ಜನನ, ಮರಣ, ನರಕವಾಸ ಮೊದಲಾದ ಹೆಚ್ಚು ದುಃಖಗಳನ್ನು ಕೊಡುವುದರಿಂದ) ಭಯಂಕರವಾದ ಸಂಸಾರಾಖ್ಯವಾದ ಕೆಸರುಸಮುದ್ರದಲ್ಲಿ ಮುಳುಗಿಕೊಂಡಿರುವ ನನ್ನ (ಉದ್ಧಾರಕ್ಕಾಗಿ) ಸರ್ವದಾ ಅಭಯವನ್ನು ಕೊಡುವ ಹಸ್ತಾವಲಂಬನವನ್ನು ಕೊಡು. (ಆದಕಾರಣ ಅಂತಹ ದುಃಖಸಂಸಾರವನ್ನು ಹೋಗಲಾಡಿಸುವುದಕ್ಕಾಗಿ ಕರಾವಲಂಬನವನ್ನು ಕೊಡು; ಹೀಗೆ ಭಕ್ತರು ಪ್ರಾರ್ಥನೆ ಮಾಡತಕ್ಕದ್ದು.) ॥ 229 ॥

**ಮೂಲ ॥ ಸರ್ವಗಶ್ಚೈವ (ಶ್ಚ ಸ) ಸರ್ವಾತ್ಮಾ (ತ್ಮನ್)**
**ಸರ್ವಾವಸ್ಥಾಸು ಚಾಚ್ಯುತ । (ಸರ್ವಸ್ವಾಮೀ ಭವಾಚ್ಯುತ)**
**ರಮಸ್ವ ಪುಂಡರೀಕಾಕ್ಷ ನೃಸಿಂಹ ಹೃದಯೇ ಮಮ ॥ ೨೩೦ ॥**

**ಅರ್ಥ ||** ಎಲೋ ಪುಂಡರೀಕಾಕ್ಷನೇ! ನರಸಿಂಹನೇ! ಅಚ್ಯುತನೇ! ಸರ್ವತ್ರ ವ್ಯಾಪ್ತನಾದ ಸರ್ವಸ್ವಾಮಿಯಾದ ನೀನು ಎಲ್ಲಾ ಅವಸ್ಥೆಗಳಲ್ಲಿಯೂ ನನ್ನ ಹೃದಯದಲ್ಲಿ ಕ್ರೀಡಿಸುತ್ತಿರು || 230 ||

**ಮೂಲ || (★) ಏಕಾದಶ್ಯಾಂ ನ ಭುಂಜೀತ ನ ಸುರಾಂ ವಾ ಪಿಬೇತ್ಕ್ವಚಿತ್।**
**ಬ್ರಾಹ್ಮಣೋ ನೈವ ಹಂತವ್ಯ ಇತ್ಯೇಷಾ ವೈದಿಕೀ ಸ್ಮೃತಿಃ || ೨೩೧ ||**

**ಅರ್ಥ ||** ಏಕಾದಶೀ ದಿವಸ ಭೋಜನ ಮಾಡಬಾರದು; ಯಾವ ಕಾಲದಲ್ಲಿಯೂ ಮದ್ಯಪಾನ ಮಾಡಬಾರದು; ಬ್ರಾಹ್ಮಣನು ಕೊಲ್ಲಲ್ಪಡಬಾರದು; ಎಂಬುದು ವೇದದಲ್ಲಿದ್ದ ಸ್ಮೃತಿಯು || 231 ||

**ಮೂಲ || ತ್ರಾಹಿ ತ್ರಾಹಿ ಜಗನ್ನಾಥ**
**ವಾಸುದೇವಾಚ್ಯುತಾವ್ಯಯ (ವ್ಯಯಾಚ್ಯುತ) ।**
**ಮಾಂ ಸಮುದ್ಧರ ಗೋವಿಂದ ದುಃಖಸಂಸಾರಸಾಗರಾತ್ || ೨೩೨ ||**

**ಅರ್ಥ ||** ಹೇ ಜಗನ್ನಾಥ ! ಹೇ ವಾಸುದೇವ ! ವೃದ್ಧಿಹ್ರಾಸಗಳಿಲ್ಲದಿರುವವನೇ ! ನಾಶರಹಿತನೇ ! (ನಾನಾವಿಧಗಳಾದ ಸಾಂಸಾರಿಕದುಃಖಗಳಿಂದ) ರಕ್ಷಿಸು, ರಕ್ಷಿಸು, ಹೇ ಗೋವಿಂದ ! ನಾನಾವಿಧಗಳಾದ ಸಾಂಸಾರಿಕ ದುಃಖಗಳೆಂಬ ಸಮುದ್ರದಿಂದ ನನ್ನನ್ನು ಚೆನ್ನಾಗಿ ಉದ್ಧಾರ ಮಾಡು || 232 ||

**ಮೂಲ || ಏತತ್ಪುಣ್ಯಮಿದಂ (ಏತತ್ಪುಣ್ಯಂ ಪರಂ) ಗುಹ್ಯಂ**
**ಪವಿತ್ರಂ ಪಾಪನಾಶನಂ ।**
**ಆಯುಷ್ಯಂ ಚ ಯಶಸ್ಯಂ ಚ ಧನ್ಯಂ (ಕಲಿ) ದುಃಸ್ವಪ್ನನಾಶನಂ || ೨೩೩ ||**

**ಅರ್ಥ ||** ಈ ವಿಷ್ಣುಪೂಜಾದಿಯು ಪುಣ್ಯಪ್ರದವು. ಅತಿ ಗೋಪ್ಯವಾದದ್ದು, ಪವಿತ್ರವಾದದ್ದು ಸರ್ವಪಾಪಪರಿಹಾರಕವು, ಆಯುಷ್ಯವನ್ನು ಹೆಚ್ಚಿಸತಕ್ಕುದು. ಕೀರ್ತಿಯನ್ನು ಕೊಡತಕ್ಕುದು. ಕೃತಾರ್ಥರನ್ನು ಮಾಡುವುದು. ದುಃಸ್ವಪ್ನಗಳನ್ನು ನಾಶಗೊಳಿಸುವುದು.|| 233 ||

**ಮೂಲ || ಕಲೌ ಪಾಪಂ (ಪಾತಕಂ ತು) ಕಿಯನ್ಮಾತ್ರಂ**
**ಹತ್ಯಾ ಸ್ತೇಯಾದಿ ಸಂಭವಂ ।**
**ಸ್ಮೃತೇ ಮನಸಿ ಗೋವಿಂದೇ ದಹ್ಯತೇ ತೂಲರಾಶಿವತ್ || ೨೩೪ ||**

**ಅರ್ಥ ||** ಕಲಿಯುಗದಲ್ಲಿ ಖೂನಿ, ಕಳವುಗಳಿಂದ ಸಂಭವಿಸಿದ ಪಾಪಗಳು ಎಷ್ಟು ಮಾತ್ರವು! ಗೋವಿಂದನನ್ನು ಮನಸ್ಸಿನಲ್ಲಿ ಚೆನ್ನಾಗಿ ಸ್ಮರಿಸಲ್ಪಡೋಣ ಹತ್ತಿರಾಶಿಯು ಬೆಂಕಿಕಿಡಿಯಿಂದ ಭಸ್ಮವಾಗುವಂತೆ ಸುಟ್ಟು ನಾಶಹೊಂದುತ್ತದೆ. (ಆದಕಾರಣ ತನ್ನನ್ನು ಉದ್ಧರಿಸುವುದಕ್ಕಾಗಿ ಸರ್ವದಾ ಪ್ರಾರ್ಥಿಸುತ್ತಾ ಇರಬೇಕು.) || 234 ||

**ಮೂಲ || ಕಲೌ ಕೇಶವಭಕ್ತಾನಾಂ ನ ಭಯಂ ವಿದ್ಯತೇ ಕ್ವಚಿತ್ ।**
**ಸ್ಮೃತೇ ಸಂಕೀರ್ತಿತೇ ಧ್ಯಾತೇ ಸಂಕ್ಷಯಂ ಯಾತಿ ಪಾತಕಂ || ೨೩೫ ||**

**ಅರ್ಥ ॥** ಕಲಿಯುಗದಲ್ಲಿ ಕೇಶವಭಕ್ತರಿಗೆ ಯಾವ ವಿಧವಾದ ಭಯವೂ ಇಲ್ಲ, ಏಕೆಂದರೆ-ಶ್ರೀಹರಿಯನ್ನು ಸ್ಮರಿಸಲ್ಪಡುತ್ತಿರಲು, ಸಂಕೀರ್ತನೆ ಮಾಡಲ್ಪಡುತ್ತಿರಲು, (ಅಂದರೆ, ರಾಮಕೃಷ್ಣಾದಿ ನಾಮಗಳ ಅರ್ಥಾನುಸಂಧಾನ ಪೂರ್ವಕವಾಗಿ ಚೆನ್ನಾಗಿ ನಾಮಾದಿಗಳಿಂದ ಸಂಕೀರ್ತನೆ ಮಾಡಲ್ಪಡುತ್ತಿರಲು) ಧ್ಯಾನಮಾಡಲ್ಪಡುತ್ತಿರಲು ಶ್ರೀಹರಿಯ ಭಕ್ತರ ಪಾತಕಗಳೆಲ್ಲವೂ ನಾಶ ಹೊಂದುತ್ತವೆ.

**ತಾತ್ಪರ್ಯ ॥** ಭಗವಂತನ ಸ್ಮರಣ, ಸಂಕೀರ್ತನೆ, ಧ್ಯಾನ ಮೊದಲಾದುವುಗಳಿಗೆ ಇಂತಹ ಮಹಾಮಹಿಮೆಗಳು ಇದ್ದ ಪ್ರಯುಕ್ತ ತನ್ನನ್ನು ಉದ್ಧರಿಸಿಕೊಳ್ಳುವುದಕ್ಕಾಗಿಯೇ ಸರ್ವದಾ ಸ್ಮರಣಾದಿಗಳನ್ನು ಮಾಡುತ್ತಿರಬೇಕು. ॥ 235 ॥

**ಮೂಲ ॥ ಅಧ್ಯೇತವ್ಯಮಿದಂ ಶಾಸ್ತ್ರಂ ಶ್ರೋತವ್ಯಮನಸೂಯಯಾ ।**
**ಭಕ್ತೇಭ್ಯಶ್ಚ ಪ್ರದಾತವ್ಯಂ ಧಾರ್ಮಿಕೇಭ್ಯಃ ಪುನಃ ಪುನಃ ॥ ೨೩೬ ॥**

**ಅರ್ಥ ॥** ಈ ಶಾಸ್ತ್ರವನ್ನೇ ಸರ್ವದಾ ಅಧ್ಯಯನಮಾಡುತ್ತಾ ಇರಬೇಕು. ಅಸೂಯೆ ಇಲ್ಲದೆ ಶ್ರವಣಮಾಡಬೇಕು. ಮತ್ತೂ ಮತ್ತೂ ಭಕ್ತರಿಗೂ, ಧಾರ್ಮಿಕರಿಗೂ ಉಪದೇಶಿಸುತ್ತಿರಬೇಕು ॥ 236॥

**ಮೂಲ ॥ ಅಧೀಯಾ ನಾ(ನ) ಇದಂ ಶಾಸ್ತ್ರಂ (ಸತ್ಯಂ)**
**ವಿಷ್ಣೋರ್ಮಾಹಾತ್ಮ್ಯಮುತ್ತಮಂ ।**
**ಸರ್ವಪಾಪ ವಿನಿರ್ಮುಕ್ತಾಃ (ಕ್ತಃ)**
**ಪ್ರಾಪ್ನುವಂತಿ ಪರಂ (ಪ್ರಾಪ್ನೋತಿ ಪರಮಂ)ಪದಂ ॥ ೨೩೭ ॥**

**ಅರ್ಥ ॥** ಶ್ರೀಹರಿಯ ಮಹಿಮಾರೂಪವಾದ, ಅತ್ಯುತ್ತಮವಾದ, ಯಥಾರ್ಥವಾದ ಈ ಶಾಸ್ತ್ರವನ್ನು ಅಧ್ಯಯನಮಾಡುವವರು (ನು) ಎಲ್ಲಾ ಪಾಪಗಳಿಂದ ಬಿಡಲ್ಪಟ್ಟವರಾ(ನಾ)ಗಿ ಅತ್ಯುತ್ತಮವಾದ ವೈಕುಂಠವನ್ನು ಹೊಂದುತ್ತಾರೆ (ನೆ)॥ 237 ॥

**ಮೂಲ ॥ ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಂ ।**
**ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ ಗಚ್ಛತಿ ॥ ೨೩೮ ॥**

**ಅರ್ಥ ॥** ಅಧಿಕಾರಿಯು ಶಾಸ್ತ್ರ ಶ್ರವಣಮಾಡಿಯೇ ಧರ್ಮವನ್ನು ತಿಳಿಯುತ್ತಾನೆ. ಶಾಸ್ತ್ರಶ್ರವಣ ಮಾಡಿಯೇ ದುರ್ಬುದ್ಧಿಯನ್ನು ಬಿಡುತ್ತಾನೆ. ಶಾಸ್ತ್ರಶ್ರವಣ ಮಾಡಿಯೇ ಜ್ಞಾನವನ್ನು ಹೊಂದುತ್ತಾನೆ. ಶಾಸ್ತ್ರ ಶ್ರವಣಮಾಡಿಯೇ ಮುಕ್ತಿಯನ್ನು ಹೊಂದುತ್ತಾನೆ. ॥ 238 ॥

**ಮೂಲ ॥ ತಸ್ಮಾದಿದಂ ಸದಾ ಸೇವ್ಯಂ (ಸಮಾಶ್ರಾವ್ಯಂ)**
**ಶ್ರೋತವ್ಯಂ ಚ ಸದೈವ ಹಿ ।**
**ಕುತರ್ಕದಾವದಗ್ಧೇಭ್ಯೋ ನ ದಾತವ್ಯಂ ಕಥಂಚನ ॥ ೨೩೯ ॥**

**ಅರ್ಥ ॥** ಆದಕಾರಣ ಈ ಶಾಸ್ತ್ರವನ್ನು ಸರ್ವದಾ ಸೇವಿಸುತ್ತಿರಬೇಕು. ಯಾವಾಗಲೂ ಶ್ರವಣ ಮಾಡುತ್ತಲೇ ಇರಬೇಕು. ಕುತ್ಸಿತಗಳಾದ ತರ್ಕಶಾಸ್ತ್ರಗಳೆಂಬ ಕಾಡುಕಿಚ್ಚುಗಳಿಂದ ಸುಡಲ್ಪಟ್ಟವರಿಗೆ (ಕುತರ್ಕಗಳಲ್ಲಿಯೇ ಆಸಕ್ತರಾದವರಿಗೆ) ಯಾವ ಪ್ರಕಾರದಿಂದಲೂ ಉಪದೇಶಿಸಬಾರದು ॥ 239 ॥

**ಮೂಲ ॥ ಸಂಸಾರ ವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।**
**ಅಮೃತಾಯ ಸ್ಮೃತ(ಕೃತ) ಸ್ತೇಷಾಂ ಕೃಷ್ಣಾಮೃತ ಮಹಾರ್ಣವಃ ॥ ೨೪೦ ॥**

**ಅರ್ಥ ॥** ಈ ಮನುಷ್ಯ ಶರೀರಾದಿಗಳಲ್ಲಿ (ಪುತ್ರ-ಮಿತ್ರ-ಕಳತ್ರಾದಿಗಳಲ್ಲಿರುವ ಅಭಿಮಾನರೂಪವಾದ) ವಿಷವನ್ನು ಕುಡಿಯೋಣದರಿಂದ (ಅದರ ಸಂಬಂಧದಿಂದ) ಯಾವ ಪ್ರಾಣಿಗಳು (ಶ್ರೀಹರಿಯು ಉದ್ಧಾರಕನೆಂದು ಜ್ಞಾನವಿಲ್ಲದಿರುವುದರಿಂದ) ಮೃತ ಪ್ರಾಯರಾಗಿರುವರೋ, ಹಾಗೆಯೇ, ಗರ್ಭವಾಸ, ಜನ್ಮ, ಮರಣ, ನರಕ ದುಃಖಗಳೆಂಬುವ ವಿಷಗಳ ಅನುಭವದಿಂದ ಯಾವ ಅನೇಕ ಸಜ್ಜನರು ಭೂಲೋಕದಲ್ಲಿರುವರೋ, ಅಂತಹವರಿಗೆ ಜನನ ಮರಣಗಳು ಬಾರದಿರುವುದಕ್ಕಾಗಿಯೂ, ಸ್ವರೂಪಾನಂದಾವಿರ್ಭಾವರೂಪ ಮೋಕ್ಷಪ್ರಾಪ್ತಿಗಾಗಿಯೂ ಶ್ರೀಕೃಷ್ಣನ ಅಮೃತರೂಪಗಳಾದ ಮಹಾಗುಣಾರ್ಣವಗಳನ್ನು ಪ್ರತಿಪಾದಿಸುವ ಕೃಷ್ಣಾಮೃತಮಹಾರ್ಣವಾಖ್ಯ ಗ್ರಂಥವು ನಮ್ಮಿಂದ ಸ್ಮರಿಸಲ್ಪಟ್ಟಿತು.(ಮಾಡಲ್ಪಟ್ಟಿತು) (ಆದಕಾರಣ ಭಕ್ತರಿಗೆ ಮೋಕ್ಷಕ್ಕಾಗಿ ಮಾಡಿರುವುದರಿಂದ ಈ ಗ್ರಂಥವನ್ನು ಸರ್ವರೂ ಸೇವಿಸಬೇಕು.) ॥ 240 ॥

**ಮೂಲ ॥ ಕ್ಲಿನ್ನಂ ಪಾದೋದಕೇನೈವ ಯಸ್ಯ ನಿತ್ಯಂ ಕಲೇವರಂ ।**
**ತೀರ್ಥ ಕೋಟಿ ಸಹಸ್ರೈಸ್ತು ಸ್ನಾತೋ ಭವತಿ ಪ್ರತ್ಯಹಂ ॥ ೨೪೧ ॥**

**ಅರ್ಥ ॥** ಯಾವ ಭಕ್ತರ ಶರೀರವು ನಿತ್ಯದಲ್ಲಿಯೂ ವಿಷ್ಣುಪಾದೋದಕದಿಂದಲೇ ಸೇಚಿತವಾಗುತ್ತದೆಯೋ ಅಂತಹವರು ಪ್ರತಿನಿತ್ಯವೂ ಸಹಸ್ರಕೋಟಿ ತೀರ್ಥಗಳಿಂದ ಸ್ನಾನಮಾಡಲ್ಪಡುತ್ತಾರೆ. ಅಂದರೆ, ಅನೇಕ ತೀರ್ಥಗಳಲ್ಲಿ ಸ್ನಾನಮಾಡುವುದಕ್ಕಿಂತ ವಿಷ್ಣುಪಾದೋದಕವನ್ನು ಶರೀರಕ್ಕೆ ಪ್ರೋಕ್ಷಿಸಿಕೊಂಡರೆ ಹೆಚ್ಚು ಫಲವು ಲಭಿಸುವುದು॥ 241 ॥

**ಮೂಲ ॥ ತೀರ್ಥಕೋಟಿ ಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಂ ।**
**ತೋಯಂ ಯದಿ ಪಿಬೇನ್ನಿತ್ಯಂ ಶಾಲಗ್ರಾಮ ಶಿಲಾಚ್ಯುತಂ ॥ ೨೪೨ ॥**

**ಅರ್ಥ ॥** ಶಾಲಗ್ರಾಮಶಿಲೆಗೆ ಅಭಿಷೇಕ ಮಾಡಿದ ತೀರ್ಥವನ್ನು ನಿತ್ಯದಲ್ಲಿಯೂ ಪಾನ ಮಾಡುವ ಪಕ್ಷದಲ್ಲಿ (ಆತನಿಗೆ) ಸಹಸ್ರಕೋಟಿ ತೀರ್ಥಗಳು ಸೇವಿಸಲ್ಪಡೋಣದರಿಂದ ಏನು ಪ್ರಯೋಜನವು? ಅಂದರೆ, ಅವುಗಳ ಸೇವೆಗಿಂತ ತೀರ್ಥಪಾನದಲ್ಲಿಯೇ ಹೆಚ್ಚು ಫಲವು ॥ 242 ॥

**ಮೂಲ ॥ ಶಾಲಗ್ರಾಮ ಶಿಲಾಸ್ಪರ್ಶಂ ಯೇ ಕುರ್ವಂತಿ ದಿನೇ ದಿನೇ ।**
**ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಸ್ಸವಾಸವಾಃ ॥ ೨೪೩ ॥**

**ಅರ್ಥ ॥** ಯಾರು ಪ್ರತಿನಿತ್ಯದಲ್ಲಿಯೂ ಶಾಲಗ್ರಾಮ ಶಿಲೆಯ ಸ್ಪರ್ಶವನ್ನು ಮಾಡುತ್ತಾರೋ, ಅಂತಹವರ ಕರಸ್ಪರ್ಶವನ್ನು (ಹಸ್ತಲಾಘವವನ್ನು) ದೇವೇಂದ್ರ ಸಹಿತರಾದ ಸರ್ವ ದೇವತೆಗಳೂ ಇಚ್ಛಿಸುತ್ತಾರೆ ॥ 243 ॥

**ಮೂಲ ॥ ದುಸ್ಸಹೋ ನಾರಕೋ ವಹ್ನಿರ್ದುಸ್ಸಹಾ ಯಮಕಿಂಕರಾಃ ।**
**ವಿಷಮಶ್ಚಾಂತಕಪಥಃ ಪ್ರೇತತ್ವಂ ಚಾತಿದಾರುಣಂ ॥ ೨೪೪ ॥**

**ಅರ್ಥ ॥** ನರಕಸಂಬಂಧಿಯಾದ ಬೆಂಕಿಯು ಸಹಿಸಲಸಾಧ್ಯವು. ಯಮನ ಕಿಂಕರರೂ ಸಹಿಸಲ ಸಾಧ್ಯರು. ಯಮಮಾರ್ಗವೂ ಸಹಿಸಲಸಾಧ್ಯವು. ದೇಹತ್ಯಾಗಾನಂತರದಲ್ಲಿ ಪ್ರಾಪ್ತವಾಗುವ ಪ್ರೇತತ್ವವು ಅತಿದುಃಖಗಳನ್ನು ಕೊಡುವುದರಿಂದ ಅತಿ ಕಠಿನವು ॥ 244 ॥

**ಮೂಲ ॥ ಸಂಚಿಂ(ವಿಚಿಂ) ತ್ಯ ಮನಸಾಽಪ್ಯೇವಂ**
**ಪಾತಕಾದ್ವಿನಿವರ್ತಯೇತ್(ತೇ) ।**
**ಸ್ಮರಣಂ ಕೀರ್ತನಂ ವಿಷ್ಣೋಃ ಸದೈವ ನ ಪರಿತ್ಯಜೇತ್ ॥**
**(ಸ್ಮರಣಾತ್ಕೀರ್ತನಾದ್ವಿಷ್ಣೋಃ ಸದೈವ ಪರಿಚಿಂತನಾತ್) ॥ ೨೪೫ ॥**

**ಅರ್ಥ ॥** ಆದುದರಿಂದ ಹೀಗೆ ಜನರು ಆಲೋಚಿಸಿ (ಎಲ್ಲಾ ದುಃಖಗಳು ನಿವೃತ್ತಿಯಾಗುವುದ ಕ್ಕಾಗಿ) ದೇವರನ್ನು ಭಕ್ತಿಪೂರ್ವಕವಾದಿ ಮನಸ್ಸಿನಿಂದ ವಿಶೇಷಾಕಾರವಾಗಿ ಧ್ಯಾನಮಾಡಿ, ಪುರುಷನು ನರಕಾದಿಗಳಿಗೆ ಸಾಧನಭೂತಗಳಾದ ಪಾತಕಗಳ ಸಮುದಾಯದಿಂದ ವಿನಿವೃತ್ತನಾಗುತ್ತಾನೆ. ಆದಕಾರಣ ಹಿಂದೆ ಹೇಳಿದ ಪ್ರಕಾರ ಶ್ರೀಹರಿಯ ಸ್ಮರಣೆಯನ್ನೂ, ಸಂಕೀರ್ತನೆಯನ್ನೂ ಪ್ರತಿಕ್ಷಣ ದಲ್ಲಿಯೂ ಬಿಡಬಾರದು. (ಶ್ರೀವಿಷ್ಣುವಿನ ಸ್ಮರಣ, ಸಂಕೀರ್ತನೆ ನಿರಂತರ ಧ್ಯಾನಗಳಿಂದ ಅಂದರೆ - ಅವುಗಳನ್ನು ಮಾಡಿ ಪಾಪಗಳಿಂದ ನಿವೃತ್ತನಾಗುತ್ತಾನೆ.) ॥ 245 ॥

**ಮೂಲ ॥ (ಶ್ರೀವೇದವ್ಯಾಸಃ) ॥ ಅಚ್ಯುತಾನಂತ ಗೋವಿಂದ**
**ನಾಮೋಚ್ಚಾರಣ ಭೇಷಜಾತ್ (ಭೀಷಿತಾಃ) ।**
**ನಶ್ಯಂತಿ ಸಕಲಾಃ ರೋಗಾಃ ಸತ್ಯಂ ಸತ್ಯಂ ವದಾಮ್ಯಹಂ ॥ ೨೪೬ ॥**

**ಅರ್ಥ ॥** ಶ್ರೀವೇದವ್ಯಾಸರು ಹೇಳುತ್ತಾರೆ- ಅಚ್ಯುತ, ಅನಂತ, ಗೋವಿಂದ ಎಂಬುವ ನಾಮಗಳ ಉಚ್ಚಾರಣವೆಂಬ ಔಷಧದಿಂದ (ಉಚ್ಚಾರಣದಿಂದ ಭಯಗ್ರಸ್ತಗಳಾಗಿ) ಎಲ್ಲಾ ರೋಗಗಳೂ ನಾಶಹೊಂದುತ್ತವೆ. ಇದು ಸತ್ಯವೇ. ನಾನು ಸತ್ಯವನ್ನೇ ಹೇಳುತ್ತೇನೆ.॥ 246 ॥

**ಮೂಲ ॥ ಸಕೃದುಚ್ಚ(ಚ್ಚಾ)ರಿತಂ ಹರಿರಿತ್ಯಕ್ಷರದ್ವಯಂ ।**
**ಬುದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೨೪೭ ॥**

**ಅರ್ಥ ॥** ಯಾರಿಂದ ಹರಿ ಎಂಬ ಎರಡು ಅಕ್ಷರಗಳು ಒಂದಾವರ್ತಿಯಾಗಲೀ ಉಚ್ಚರಿಸಲ್ಪಡು ವವೋ, ಆತನಿಂದ ಮುಕ್ತಿಗಾಗಿ ಧ್ಯಾನಾದಿಗಳ ದ್ವಾರಾ ಗಮನವನ್ನು ಉದ್ದೇಶಿಸಿ ಅಂತರಂಗ ಸಾಧನವು ಬದ್ಧವಾಯಿತು.॥ 247 ॥

**ಮೂಲ ॥ ಏವಂ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।**
**ಕೀರ್ತಯಂತಿ ಪರಂ (ಸುರ) ಶ್ರೇಷ್ಠಂ ದೇವಂ ನಾರಾಯಣಂ ಪ್ರಭುಂ ॥**
**॥ ೨೪೮ ॥**

**ಅರ್ಥ ॥** ಹೀಗೆಯೇ ಬ್ರಹ್ಮಾದಿದೇವತೆಗಳೂ, ತಪಸ್ವಿಗಳಾದ ಋಷಿಗಳೂ, ದೇವಶ್ರೇಷ್ಠರೂ, ದೇವಪ್ರಭುವೂ ಆದ ನಾರಾಯಣನನ್ನು ಸಂಕೀರ್ತನೆ ಮಾಡುತ್ತಾ ಇರುತ್ತಾರೆ.॥ 248 ॥

ಮೂಲ ॥ ಕಿಂ ತಸ್ಯ ದಾನೈಃ ಕಿಂ ತೀರ್ಥೈಃ
ಕಿಂ ತಪೋಭಿಃ ಕಿಮಧ್ವರೈಃ ।
ಯೋ ನಿತ್ಯಂ ಧ್ಯಾಯತೇ ದೇವಂ (ವಿಷ್ಣುಂ)
ನಾರಾಯಣಮನನ್ಯಧೀಃ ॥ ೨೪೯ ॥

ಅರ್ಥ ॥ ಯಾವ ಅಧಿಕಾರಿಯು ಅತ್ಯಾಸಕ್ತವಾದ ಬುದ್ಧಿಯುಳ್ಳವನಾಗಿ ನಾರಾಯಣನನ್ನು ನಿತ್ಯದಲ್ಲಿಯೂ ಧ್ಯಾನಿಸುತ್ತಾನೋ, ಅಂತಹ ಅಧಿಕಾರಿಗೆ ದಾನಗಳಿಂದಲೂ, ತೀರ್ಥಸ್ನಾನಾದಿಗಳಿಂದಲೂ, ತಪಸ್ಸುಗಳಿಂದಲೂ, ಜ್ಯೋತಿಷ್ಟೋಮಾದಿಗಳಿಂದಲೂ ಏನು ಪ್ರಯೋಜನವು? ॥ 249 ॥

ಮೂಲ ॥ ನಿತ್ಯೋತ್ಸವೋ ಭವೇತ್ತೇಷಾಂ (ಹೃಷೀಕಾಣಾಂ)
ನಿತ್ಯಶ್ರೀರ್ನಿತ್ಯಮಂಗಲಂ ।
(ನಿತ್ಯೋತ್ಸವೋ ನಿತ್ಯತಾ ಚ ನಿತ್ಯಶ್ರೀರ್ನಿತ್ಯಶೋ ಜಯಃ ।)
ಯೇಷಾಂ ಹೃದಿಸ್ಥೋ ಭಗವಾನ್
ಮಂಗಲಾಯತನಂ (ನೋ)ಹರಿಃ ॥ ೨೫೦ ॥

ಅರ್ಥ ॥ ಷಡ್ಗುಣೈಶ್ವರ್ಯಸಂಪನ್ನನೂ, ಎಲ್ಲಾ ಕಲ್ಯಾಣಗುಣಗಳಿಗೆ ಆಶ್ರಯನೂ ಆದ ಹರಿಯು ಯಾವ ಭಕ್ತರ ಹೃದಯದಲ್ಲಿ ಧ್ಯಾನಮಾಡಲ್ಪಡುತ್ತಾನೋ, ಅಂತಹ ಭಕ್ತರಿಗೆ ನಿತ್ಯೋತ್ಸವವೂ (ನಿತ್ಯದಲ್ಲಿ ಸಂತೋಷವೂ) ವಿನಾಶಾಭಾವವೂ, ನಿತ್ಯೈಶ್ವರ್ಯವೂ, ನಿತ್ಯಮಂಗಳವೂ ಆಗಿರುತ್ತದೆ. ॥ 250 ॥

ಮೂಲ ॥ ಜೀವಂಶ್ಚತುರ್ದಶಾದೂರ್ಧ್ವಂ
ಪುರುಷೋ ನಿಯಮೇನ (ನಿಮಿಷೇಣ) ತು ।
(★ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ)
ಸ್ತ್ರೀವಾಽಪ್ಯನೂನ ದಶಕಂ ದೇಹಂ ಮಾನುಷ ಮಾರ್ಜಯೇತ್(ತೇ)
॥ ೨೫೧ ॥

ಅರ್ಥ ॥ 14ವರ್ಷಗಳಿಂದ ಮೇಲೆ ಜೀವಿಸುತ್ತಿರುವ ಪುರುಷನು ನಿಯಮದಿಂದ (1 ನಿಮಿಷದಿಂದ) (★ಹತ್ತಕ್ಕಿಂತ ಕಡಿಮೆಯಲ್ಲದ ಶರೀರ(ಜನ್ಮ)ಗಳಿಗೆ ಕಾರಣಗಳನ್ನು (ಕಾರಣಗಳಾದ ಪುಣ್ಯ-ಪಾಪಗಳನ್ನು) ಮಾಡುತ್ತಾನೆ). ಸ್ತ್ರೀಯರೂ ಕೂಡ ಹತ್ತಕ್ಕೆ ಕಡಿಮೆಯಾಗದ ಮನುಷ್ಯ ಸಂಬಂಧಿಯಾದ ಶರೀರವನ್ನು ಸಂಪಾದಿಸುವರು. ॥ 251 ॥

ಮೂಲ ॥ ಚತುರ್ದಶೋರ್ಧ್ವ ಜೀವೀನಿ (ತು)
ಸಂಸಾರಶ್ಚಾದಿ ವರ್ಜಿತಃ ।
ಅವಿದಿತ್ವಾ (ಅತೋಽವಿತ್ವಾ) ಪರಂ ದೇವಂ
ಮೋಕ್ಷಾಶಾ ಕಾ ಮಹಾಮುನೇ ॥ ೨೫೨ ॥

**ಅರ್ಥ ॥** ಎಲೋ ಮಹಾ ಮುನಿಯೇ! ಸಂಸಾರವು ಆದಿಯಿಲ್ಲದಿರುವುದು. ಆದಕಾರಣ 14 ವರ್ಷಗಳಿಗಿಂತ ಮೇಲೆ ಬದುಕುತ್ತಿರುವವನಿಗೆ (14 ವರ್ಷ ದಾಟಿದವನಿಗೆ) ಸರ್ವೋತ್ತಮನಾದ ದೇವನನ್ನು ತಿಳಿಯದೆ ಮುಕ್ತಿಯ ಅಭಿಲಾಷೆಯೆಲ್ಲಿ? ಅಂದರೆ- ಶ್ರೀಹರಿಯನ್ನು ತಿಳಿಯದಿದ್ದವನಿಗೆ ಸರ್ವಥಾ ಮುಕ್ತಿಯು ಸಿಗಲಾರದು। ॥ 252 ॥

**ಮೂಲ ॥ ಆ ಚತುರ್ದಶಮಾದ್ವರ್ಷಾ-**
**ತ್ಪುರುಷೋ (ತ್ಕರ್ಮಾಣಿ) ನಿಯಮೇನ ತು ।**
**ದಶಾವರಾಣಾಂ ದೇಹಾನಾಂ**
**ಕಾರಣಾನಿ ಕರೋತ್ಯಯಂ ॥**
**ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ॥ ೨೫೩ ॥**

**ಅರ್ಥ ॥** ಪುರುಷನು 14 ವರ್ಷಗಳನ್ನಾರಂಭಿಸಿ ಮಾಡತಕ್ಕ ಕರ್ಮಗಳನ್ನು ನಿಯಮವಾಗಿ (10) ಹತ್ತರಿಂದ ಹೆಚ್ಚಾದ ಶರೀರಗಳಿಗೆ ಕಾರಣಗಳನ್ನು ಮಾಡುತ್ತಾನೆ. ಆದಕಾರಣ ಕರ್ಮನಾಶದಿಂದ ಮುಕ್ತಿಯು ಹೇಗೆ ತಾನೇ ಆಗುವುದು? ॥ 253 ॥

**ಮೂಲ ॥ ಸಮಾನಾಂ ವಿಷಮಾ ಪೂಜಾ ವಿಷಮಾಣಾಂ ಸಮಾ ತಥಾ ।**
**ಕ್ರಿಯತೇ ಯೇನ ದೇವೋಽಪಿ ಸ್ವಪದಾದ್ಭ್ರಶ್ಯತೇ ಹಿ ಸಃ ॥ ೨೫೪ ॥**

**ಅರ್ಥ ॥** ಸಮಾನರಿಗೆ ವಿಷಮವಾದ ಪೂಜೆಯೂ, ಗುಣಾದಿಗಳಿಂದ ಸಮರಲ್ಲದಿದ್ದವರಿಗೆ ಸಮವಾದ ಪೂಜೆಯೂ ಯಾರಿಂದ ಮಾಡಲ್ಪಡುತ್ತದೋ, ಆತನು ದೇವನಾದಾಗ್ಯೂ ತನ್ನ ಪದವಿಯಿಂದ ಚ್ಯುತನಾಗುತ್ತಾನೆ. ॥ 254 ॥

**ಮೂಲ ॥ ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ।**
**ಏತಾನಿ ಮಾನ್ಯ ಸ್ಥಾನಾನಿ ಗರಿಯೋ ಹ್ಯುತ್ತರೋ (ಯದ್ಯದು)ತ್ತರಂ**
**॥ ೨೫೫ ॥**

**ಅರ್ಥ ॥** ದ್ರವ್ಯವು, ಬಂಧುವು, ವಯಸ್ಸು, ಸಂಧ್ಯಾವಂದನಾದಿಕರ್ಮ, ಐದನೇಯದ್ದು ವಿದ್ಯೆಯು, ಇವುಗಳು ಪೂಜ್ಯಸ್ಥಾನಗಳು, ಮೇಲುಮೇಲಿನದ್ದು ಶ್ರೇಷ್ಠವಾದುದು. ಅಂದರೆ, ಧನಿಕರಿಂದ ಬಾಂಧವರೂ, ಬಾಂಧವರಿಗಿಂತ ಹೆಚ್ಚು ವಯಸ್ಸಿನವರೂ, ಅವರಿಗಿಂತ ಕರ್ಮಠರೂ, ಅವರಿಗಿಂತ ವಿದ್ಯಾವಂತರೂ ಹೀಗೆ ಮೇಲುಮೇಲುಪಟ್ಟವರು ಶ್ರೇಷ್ಠರು ॥ 255 ॥

**ಮೂಲ ॥ ಗುಣಾನುಸಾರಿಣೀಂ ಪೂಜಾಂ ಸಮಾಂ ದೃಷ್ಟಿಂ ಚ ಯೋ ನರಃ ।**
**ಸರ್ವಭೂತೇಷು ಕುರುತೇ ತಸ್ಯ ವಿಷ್ಣುಃ ಪ್ರಸೀದತಿ ॥ ೨೫೬ ॥**

**ಅರ್ಥ ॥** ಯಾವ ಮನುಷ್ಯನು ಅವರವರ ಗುಣಗಳನ್ನನುಸರಿಸಿ ಪೂಜೆಯನ್ನು ಮಾಡುತ್ತಾನೋ, ಮತ್ತು ಎಲ್ಲಾ ಭೂತಗಳಲ್ಲಿಯೂ (ಶ್ರೀಹರಿಯು) ಲಕ್ಷ್ಮೀಸಮೇತನಾಗಿದ್ದಾನೆಂದು ಜ್ಞಾನವನ್ನು ಸಂಪಾದಿಸುತ್ತಾನೋ, ಆತನಿಗೆ ಶ್ರೀವಿಷ್ಣುವು ಪ್ರಸನ್ನನಾಗುತ್ತಾನೆ. ॥ 256 ॥

ಮೂಲ ॥ ಯಥಾ ಸುಹೃತ್ಸು ಕರ್ತವ್ಯಂ
ಪಿತೃ ಭ್ರಾತೃ (ಶತ್ರು) ಸುತೇಷು (ದಾರ ಸುತಾದಿಷು)।
ತಥಾ ಕರೋತಿ ಪೂಜಾಂ ಹಿ
(ಪೂಜಾದಿ) ಸಮಬುದ್ಧಿಃ ಸ ಉಚ್ಯತೇ ॥ ೨೫೭ ॥

ಅರ್ಥ ॥ ಹೇಗೆ ತಂದೆ, ತಾಯಿ, ಸೋದರರು, ಮಕ್ಕಳು ಮೊದಲಾದ ಸುಹೃತ್‌ಗಳಲ್ಲಿ ಪೂಜಾದಿಗಳನ್ನು ಯಥಾಯೋಗ್ಯವಾಗಿ ಮಾಡುವನೋ, ಹಾಗೆಯೇ ಮನೆಗೆ ಬಂದ ಮಹಾತ್ಮರಲ್ಲಿ ಪೂಜಿಸತಕ್ಕವನು ಸಮಬುದ್ಧಿಯೆನ್ನಿಸುತ್ತಾನೆ. ಅಂದರೆ—ಸರ್ವತ್ರ ನಿಯಾಮಕನಾಗಿ ಶ್ರೀ ಸ್ವಾಮಿಯು ಇದ್ದಾನೆಂದು ತಿಳಿದಿರುವುದರಿಂದ ಸಮದೃಷ್ಟಿಯುಳ್ಳವನೆನ್ನಿಸುತ್ತಾನೆ. ॥ 257 ॥

ಮೂಲ ॥ ತಿರ್ಯಕ್ಪುಂಡ್ರಂ ನ ಕುರ್ವೀತ
ಸಂಪ್ರಾಪ್ತೇ ಮರಣೇ(ಽಪಿ ಚ) ತಥಾ ।
ನ ಚಾನ್ಯನಾಮ ವಿಬ್ರೂಯತ್
ಪರಾನ್ನಾ (ರಂ ವಾ) ರಾಯಣಾದೃತೇ ॥ ೨೫೮ ॥

ಅರ್ಥ ॥ ಮರಣವು ಪ್ರಾಪ್ತವಾಗುವ ಸಂದರ್ಭದಲ್ಲಿಯೂ ಅಡ್ಡವಾಗಿ ಪುಂಡ್ರವನ್ನು ಧರಿಸಬಾರದು. ಸರ್ವೋತ್ತಮನಾದ ನಾರಾಯಣನನ್ನು ಹೊರತು ಬೇರೆ ನಾಮವನ್ನು ಸರ್ವೋತ್ತಮವನ್ನಾಗಿ (ಅಂದರೆ, ರುದ್ರಾದಿಗಳನ್ನು ಸರ್ವೋತ್ತಮರನ್ನಾಗಿ) ಹೇಳಬಾರದು ॥ 258 ॥

ಮೂಲ ॥ ನೈವೇದ್ಯಶೇಷಂ ದೇವಸ್ಯ ಯೋ ಭುನಕ್ತಿ ದಿನೇ ದಿನೇ ।
ಸಿಕ್ಥೇ ಸಿಕ್ಥೇ ಭವೇತ್ಪುಣ್ಯಂ ಚಾಂದ್ರಾಯಣ ಶತಾಧಿಕಂ ॥ ೨೫೯ ॥

ಅರ್ಥ ॥ ಯಾರು ಶ್ರೀಹರಿಗೆ ಸಮರ್ಪಿಸಿದ ನೈವೇದ್ಯ ಶೇಷವನ್ನು ಪ್ರತಿನಿತ್ಯವೂ ಭೋಜನ ಮಾಡುತ್ತಾನೋ, ಆತನಿಗೆ ಒಂದೊಂದು ಕವಳಕ್ಕೆ (100) ನೂರು ಚಾಂದ್ರಾಯಣವ್ರತಗಳಿಗಿಂತ ಹೆಚ್ಚು ಪುಣ್ಯವು ಉಂಟಾಗುವುದು. ॥ 259 ॥

ಮೂಲ ॥ ಊರ್ಧ್ವಪುಂಡ್ರಮೃಜುಂ ಸೌಮ್ಯಂ ಲಲಾಟೇ ಯಸ್ಯ ದೃಶ್ಯತೇ ।
ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ೨೬೦ ॥

ಅರ್ಥ ॥ ಯಾರ ಲಲಾಟದಲ್ಲಿ ಸರಲವಾದ, ಸೌಮ್ಯವಾದ (ನೋಡಲಿಕ್ಕೆ ಅತಿಪ್ರಿಯವಾದ) ಊರ್ಧ್ವಪುಂಡ್ರವು ಕಾಣಲ್ಪಡುತ್ತದೋ, ಆತನು (ಊರ್ಧ್ವಪುಂಡ್ರವನ್ನು ಧರಿಸಿದವನು) ಚಂಡಾಲನಾದಾಗ್ಯೂ, (ಕರ್ಮಭ್ರಷ್ಟನಾದಾಗ್ಯೂ) ಪೂಜ್ಯನೇ ಆಗುವನು. ಸಂಶಯವಿಲ್ಲ.॥ 260 ॥

ಮೂಲ ॥ (ಊರ್ಧ್ವಪುಂಡ್ರಂ ಲಲಾಟೇ ತು ದಂಡಾಕಾರಂ ಸುಶೋಭನಂ ।
ಮಧ್ಯೇ ಛಿದ್ರೇಣ ಸಂಯುಕ್ತಂ ತಚ್ಛಿದ್ರಂ ಮಮ ಮಂದಿರಂ) ॥ ೨೬೧ ॥

ಅರ್ಥ ॥ (ಊರ್ಧ್ವಪುಂಡ್ರವು ಲಲಾಟದ ಮಧ್ಯದಲ್ಲಿ ಛಿದ್ರಸಹಿತವಾಗಿಯೇ ಧರಿಸಬೇಕು.

(ಛಿದ್ರವಿಲ್ಲದೆ ಧರಿಸಬಾರದು) ದಂಡಾಕಾರವಾಗಬೇಕು. ಅತಿಶೋಭನವಾಗಬೇಕು । ಆ ಛಿದ್ರವು ನನ್ನ ಆವಾಸಸ್ಥಾನವು.) ॥ 261 ॥

**ಮೂಲ ॥ ಅಶುಚಿರ್ವಾಪ್ಯನಾಚಾರೋ ಮನಸಾ ಪಾಪಮಾಚರನ್(ರೇತ್) ।**
**ಶುಚಿರೇವ ಭವೇನ್ನಿತ್ಯಂ ಊರ್ಧ್ವ ಪುಂಡ್ರಾಂಕಿತೋ ನರಃ ॥ ೨೬೨ ॥**

**ಅರ್ಥ ॥** ಮನುಷ್ಯನು ಊರ್ಧ್ವಪುಂಡ್ರದಿಂದ ಚಿಹ್ನಿತನಾದರೆ ಅಶುಚಿಯಾಗಲೀ, ಆಚಾರ ವಿಹಿತನಾಗಲೀ, ಮನಸ್ಸಿನಿಂದ (ಇಂದ್ರಿಯಗಳಿಂದ) ಪಾಪಮಾಡುವವನಾಗಲೀ ನಿತ್ಯದಲ್ಲಿಯೂ ಶುಚಿಯೇ ಆಗುವನು ॥ 262 ॥

**ಮೂಲ ॥ ಊರ್ಧ್ವಪುಂಡ್ರಂವಿಹೀನಸ್ಯ ಸ್ಮಶಾನಸದೃಶಂ ಮುಖಂ ।**
**ಅವಲೋಕ್ಯ ಮುಖಂ ತಸ್ಯ (ತೇಷಾಮಾ) ಆದಿತ್ಯಮವಲೋಕಯೇತ್ ॥೨೬೩ ॥**

**ಅರ್ಥ ॥** ಊರ್ಧ್ವಪುಂಡ್ರವಿಲ್ಲದಿರುವವನ ಮುಖವು ಸ್ಮಶಾನಕ್ಕೆ ಸಮವು. (ಸ್ಮಶಾನದಂತೆ ಅಪವಿತ್ರವು) ದಂಡಾಕಾರವಾಗಿ ಊರ್ಧ್ವಪುಂಡ್ರವಿಲ್ಲದಿರುವವರ ಮುಖವನ್ನು ನೋಡಿದರೆ (ಅದರಿಂದುಂಟಾದ ಪಾಪಪರಿಹಾರಕ್ಕಾಗಿ) ಸೂರ್ಯನನ್ನು ನೋಡಬೇಕು. ॥

ತಾತ್ಪರ್ಯ ॥ ''ಯೇ ಕಂಠಲಗ್ನೇ ತುಲಸೀ ನಳಿನಾಕ್ಷಮಾಲಾ ಯೇ ಬಾಹುಮಧ್ಯ ಪರಿಚಿಹ್ನಿತ ಶಂಖಚಕ್ರಾಃ । ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಸ್ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ''॥ ಯಾರು ಕುತ್ತಿಗೆಯಲ್ಲಿ ತುಳಸೀ ಕಮಲಾಕ್ಷಮಾಲಿಕೆಗಳನ್ನು ಧರಿಸುವರೋ, ಭುಜಮಧ್ಯದಲ್ಲಿ ಶಂಖಚಕ್ರಗಳ ಚಿಹ್ನೆಯುಳ್ಳವರೋ, ಲಲಾಟದಲ್ಲಿ ಊರ್ಧ್ವಪುಂಡ್ರವನ್ನು ಧರಿಸುವರೋ, ಅಂತಹ ವೈಷ್ಣವರು ಲೋಕವನ್ನು ಶೀಘ್ರವಾಗಿ ಪವಿತ್ರೀಕರಿಸುವರು. ಇವು ಮೊದಲಾದ ವಚನಗಳಿಂದ ಊರ್ಧ್ವಪುಂಡ್ರಧಾರಣವು ಮಹಾಫಲವುಳ್ಳದ್ದು ॥ 263 ॥

**ಮೂಲ ॥ ಯಜ್ಞೋ ದಾನಂ ತಪಶ್ಚೈವ (ತಪೋ ಹೋಮಃ)**
**ಸ್ವಾಧ್ಯಾಯಃ ಪಿತೃತರ್ಪಣಂ ।**
**ವ್ಯರ್ಥಂ ಭವತಿ ತತ್ಸರ್ವಂ ಊರ್ಧ್ವಪುಂಡ್ರಂ ವಿನಾ ಕೃತಂ ॥ ೨೬೪ ॥**

**ಅರ್ಥ ॥** ಊರ್ಧ್ವಪುಂಡ್ರಧಾರಣೆಮಾಡದೆ ಮಾಡಲ್ಪಟ್ಟ ಅಶ್ವಮೇಧಾದಿಯಾಗಗಳು, ಪಂಚಮಹಾಯಜ್ಞವು, ದಾನವು, ಸ್ವಾಧ್ಯಾಯವು, ವೇದಾಧ್ಯಯನವು, ಪಿತೃತರ್ಪಣವು, (ಅಂದರೆ ಮಹಾದಾನಾದಿಗಳೂ. ಗೋ, ಭೂ, ಶಿಲ, ಹಿರಣ್ಯಾದಿ ದಾನವು, ಕೃಚ್ಛ್ರಚಾಂದ್ರಾಯಣಾದಿ ತಪಸ್ಸೂ, ಅಗ್ನಿಹೋತ್ರ, ಔಪಾಸನ ಮೊದಲಾದ ಹೋಮಗಳೂ, ವೇದಶಾಸ್ತ್ರಾಧ್ಯಯನಾದಿಗಳೂ, ಪಿತೃಶ್ರಾದ್ಧ ತಿಲತರ್ಪಣಾದಿಗಳೂ, ದೇವರ್ಷಿ ಪಿತೃತರ್ಪಣವೂ)ಅವೆಲ್ಲಾ ನಿತ್ಯನೈಮಿತ್ತಿಕ ಕರ್ಮಗಳ ಸಮೂಹವು ವ್ಯರ್ಥವಾಗುತ್ತದೆ. ॥ 264 ॥

**ಮೂಲ ॥ ಗೋಪೀಚಂದನ ಲಿಪ್ತಾಂಗೋ ಯಂ ಯಂ ಪಶ್ಯತಿ ಚಕ್ಷುಷಾ ।**
**ತಂ ತಂ ಶುದ್ಧಂ ವಿಜಾನೀಯಾನ್ನಾತ್ರ ಕಾರ್ಯಾ ವಿಚಾರಣಾ ॥ ೨೬೫ ॥**

**ಅರ್ಥ ॥** ಗೋಪೀಚಂದನದಿಂದ ಲೇಪಿಸಲ್ಪಟ್ಟ ಲಲಾಟ ಬಾಹು ಮೊದಲಾದ ಅಂಗಗಳುಳ್ಳವನು, ಕಣ್ಣಿನಿಂದ ಯಾರು ಯಾರನ್ನು ನೋಡುತ್ತಾನೋ, ಅವರವರನ್ನು ಶುದ್ಧರನ್ನಾಗಿ ತಿಳಿಯಬೇಕು. ಈ ವಿಷಯದಲ್ಲಿ ವಿಚಾರಣೆಯು ಮಾಡಬೇಕಾಗಿಲ್ಲ. ॥ 265 ॥

**ಮೂಲ ॥ ಆಸ್ಫೋಟಯಂತಿ ಪಿತರಃ ಪ್ರನೃತ್ಯಂತಿ ಪಿತಾಮಹಾಃ ।**
**ವೈಷ್ಣವೋಽಸ್ಮತ್ಕುಲೇ ಜಾತಃ ಸ ನಃ ಸಂತಾರಯಿಷ್ಯತಿ ॥ ೨೬೬ ॥**

**ಅರ್ಥ ॥** ವಿಷ್ಣುಭಕ್ತ್ಯಾದಿಗಳುಳ್ಳವನು ನಮ್ಮ ಕುಲದಲ್ಲಿ ಪುತ್ರನಾಗಿ ಹುಟ್ಟಿದ್ದಾನೆ. ಆತನು ನರಕದಲ್ಲಿ ದುಃಖಿಸುತ್ತಿರುವ ನಮ್ಮನ್ನು ನರಕಗಳಿಂದ ದಾಟಿಸುವನು. (ಅಂದರೆ, ಚೆನ್ನಾಗಿ ನರಕದಿಂದ ಉದ್ಧರಿಸಿ ರಕ್ಷಿಸುವನೆಂದು ವಿಷ್ಣುಭಕ್ತನಾದ ಮಗನ) ಪಿತೃಗಳು ಭುಜಗಳ ಆಸ್ಫೋಟವನ್ನು ಮಾಡುತ್ತಾರೆ. ಆತನ ಪಿತಾಮಹ ಪ್ರಪಿತಾಮಹಾದಿಗಳು ಚೆನ್ನಾಗಿ ನರ್ತನಾದಿಗಳನ್ನು ಮಾಡುತ್ತಾರೆ. (ಕುಣಿಯುತ್ತಾರೆ. ಆದಕಾರಣ ವಿಷ್ಣುಭಕ್ತನಾಗಿ ಹುಟ್ಟುವ ಹಾಗೆ ದೇವರನ್ನು ಪ್ರಾರ್ಥಿಸುತ್ತಾ ಇರಬೇಕು) ॥ 266 ॥

**ಮೂಲ ॥ ಜೀವಿತಂ ವಿಷ್ಣುಭಕ್ತಸ್ಯ ವರಂ ಪಂಚದಿನಾನ್ಯಪಿ ।**
**ನ ತು ಕಲ್ಪ ಸಹಸ್ರೈಸ್ತು ಭಕ್ತಿಹೀನಸ್ಯ ಕೇಶವೇ ॥ ೨೬೭ ॥**

**ಅರ್ಥ ॥** ಶ್ರೀಹರಿಯಲ್ಲಿ ಭಕ್ತಿಯಿರುವ (ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವುಳ್ಳ) ಪುರುಷನಿಗೆ ಕೇವಲ ಐದು ದಿವಸಗಳಲ್ಲಿ ಜೀವನವೂ ಶ್ರೇಷ್ಠವೇ. (ಆದಕಾರಣ ಭಕ್ತಿಯನ್ನು ಮಾಡಬೇಕು.) ಕೇಶವನಲ್ಲಿ ಭಕ್ತಿ ವಿರಹಿತನಾದ ಪುರುಷನಿಗೆ ಸಹಸ್ರಕಲ್ಪಗಳಿಂದಲೂ ಜೀವನವು ಶ್ರೇಷ್ಠವಾಗುವುದಿಲ್ಲ. (ಆತನ ಜೀವನವು ವ್ಯರ್ಥವೇ) ॥ 267 ॥

ಭಗವಂತನ ಪೂಜಾ ಸ್ಮರಣ ಸಂಕೀರ್ತನಾದಿಗಳನ್ನು ಮಾಡದಿರುವ ಮನುಷ್ಯರ ಜನನವೇ ವ್ಯರ್ಥವು. ಅವರು ಭೂಭಾರರಾದುದರಿಂದ ಭೋಜ್ಯವಾದ ಅನ್ನಕ್ಕೆ ಶತ್ರುವಾಗಿದ್ದಾರೆ. ಆದಕಾರಣ ಶ್ರೀಹರಿಯ ಪೂಜಾದಿಗಳನ್ನು ಸರ್ವದಾ ಮಾಡುತ್ತಾ ಇರಬೇಕೆಂದು ನಿರೂಪಿಸುತ್ತಾರೆ-

**ಮೂಲ ॥ ಕಿಂ ತೇನ ಜಾತಮಾತ್ರೇಣ ಭೂಭಾರೇಣಾನ್ನ ಶತ್ರುಣಾ ।**
**ಯೋ ಜಾತೋ ನಾರ್ಚಯೇದ್ವಿಷ್ಣುಂ**
**ನ ಸ್ಮರೇನ್ನಾ(ದ್ನಾ) ಪಿ ಕೀರ್ತಯೇತ್ ॥ ೨೬೮ ॥**

**ಅರ್ಥ ॥** ಜನ್ಮವೆತ್ತಿದ ಯಾವ ಪುರುಷನು ವಿಷ್ಣುವನ್ನು ಪೂಜಾ ಸಾಧನ ದ್ರವ್ಯಗಳಿಂದ ಕಾಲಕಾಲದಲ್ಲಿ ಪೂಜಿಸುವುದಿಲ್ಲವೋ, ಭಗವನ್ಮಾಹಾತ್ಮ್ಯಜ್ಞಾನ ಪೂರ್ವಕವಾಗಿ ಸ್ಮರಿಸುವುದಿಲ್ಲವೋ, ಭಗವನ್ನಾಮಗಳ ಅರ್ಥಾನುಸಂಧಾನ ಪೂರ್ವಕವಾಗಿ ಸಂಕೀರ್ತಿಸುವುದಿಲ್ಲವೋ, ಅಂತಹ, (ಭಗವಂತನ ಪೂಜಾದಿಗಳಿಂದ ವಿರಹಿತನಾದ) ಭಗವದ್ಧರ್ಮಗಳಿಲ್ಲದಿರುವ, (ಮನುಷ್ಯರು ಮಾಡತಕ್ಕದ್ದನ್ನು ಮಾಡದಿರುವುದರಿಂದ) ಜನ್ಮವನ್ನು ಮಾತ್ರ ಎತ್ತಿದವನು ಭೂಮಿಗೆ ಭಾರಭೂತನೂ, ಭೋಜ್ಯವಾದ ಅನ್ನಕ್ಕೆ ಶತ್ರುವೂ ಆದ ಪುರುಷನಿಂದ ಏನು ಪ್ರಯೋಜನವು? (ಅವನ ಉತ್ಪತ್ತಿಯೇ ವ್ಯರ್ಥವು) ॥ 268 ॥

ವಿಷ್ಣುಭಕ್ತ್ಯಾದಿಗಳು ಇಲ್ಲದಿರುವ ಬ್ರಾಹ್ಮಣಕ್ಕಿಂತ ವರ್ಣಬಾಹ್ಯನಾದ ವಿಷ್ಣುಭಕ್ತನು ಪಾವಿತ್ರ್ಯವನ್ನು ಮಾಡುವುದರಿಂದ ವಿಷ್ಣುಭಕ್ತಿಯು ಅತ್ಯಾವಶ್ಯಕವೆಂದು ನಿರೂಪಿಸುತ್ತಾರೆ-

**ಮೂಲ ॥ (ಶ್ವಪಾಕಮಿವ ನೇಕ್ಷೇತ ಲೋಕೇ ವಿಪ್ರಮವೈಷ್ಣವಂ ।**
**ವೈಷ್ಣವೋ ವರ್ಣಬಾಹ್ಯೋಽಪಿ ಪುನಾತಿ ಭುವನತ್ರಯಂ ॥ ೨೬೯ ॥**

**ಅರ್ಥ ॥** (ಕರ್ಮಭೂಮಿಯಲ್ಲಿ ಹಿಂದೆ ಹೇಳಿದ ಪ್ರಕಾರ ಭಗವತ್ಪೂಜಾದಿ ವೈಷ್ಣವ ಧರ್ಮಗಳಿಲ್ಲದಿರುವ ಬ್ರಾಹ್ಮಣನನ್ನು ಯಜ್ಞ ಮೊದಲಾದ ವಿಶಿಷ್ಟಕರ್ಮಗಳನ್ನು ಮಾಡುವವರ ಮಧ್ಯದಲ್ಲಿ ಪ್ರಕೃಷ್ಟನಾದಾಗ್ಯೂ ಆತನನ್ನು ಶ್ವಾನಮಾಂಸಾದಿಗಳನ್ನು ಬೇಯಿಸಿ ತಿನ್ನುವ ಅತಿಭ್ರಷ್ಟನನ್ನೆಂಬಂತೆ ನೋಡಬಾರದು. ವಿಷ್ಣುಭಕ್ತ್ಯಾದಿಗಳಿಂದ ಯುಕ್ತನಾಗಿದ್ದರೆ, ಆತನು ಬ್ರಾಹ್ಮಣಾದಿ ವರ್ಣಗಳಿಂದ ಬಾಹ್ಯನಾಗಿದ್ದರೂ ಮೂರು ಲೋಕಗಳಲ್ಲಿರುವ ಜನರನ್ನು (ವಿಷ್ಣುವಿನಲ್ಲಿ ಅಸಾಧಾರಣ ಭಕ್ತಿ, ಸ್ಮರಣ, ಕೀರ್ತನಾದಿಗಳಿಂದ) ಪವಿತ್ರೀಕರಿಸುತ್ತಾನೆ. (ಆದಕಾರಣ ಸರ್ವರೂ ವೈಷ್ಣವ ಧರ್ಮಯುಕ್ತರಾಗಬೇಕು) ॥269॥

**ಮೂಲ ॥ (ಯಮಃ ॥ ವೈಷ್ಣವೋ ಯದ್ಗೃಹೇ ಭುಂಕ್ತೇ**
**ಯೇಷಾಂ ವೈಷ್ಣವ ಸಂಗತಿಃ ।**
**ತೇಽಪಿ ವಃ ಪರಿಹರ್ತವ್ಯಾಃ ಸತ್ಸಂಗಹತ ಕಿಲ್ಬಿಷಾಃ ॥ ೨೭೦ ॥**

**ಅರ್ಥ ॥** (ಯಮದೇವರು (ತನ್ನ ಭೃತ್ಯರೊಡನೆ ನಿರೂಪಿಸುತ್ತಾರೆ-) ವಿಷ್ಣುಭಕ್ತ್ಯಾದಿಗಳುಳ್ಳ ಬ್ರಾಹ್ಮಣನು ಯಾವ ಗೃಹಸ್ಥನ ಮನೆಯಲ್ಲಿ ಭೋಜನ ಮಾಡುತ್ತಾನೋ, ಯಾವ ಪುರುಷರಿಗೆ ಆಸನ, ಶಯನ, ಗಮನ, ಸ್ನಾನ, ಪಾನಾದಿಗಳಲ್ಲಿ ವಿಷ್ಣುಭಕ್ತರ ಸಹವಾಸವಿದೆಯೋ, ಅವರೂ (ವೈಷ್ಣವರಿಗೆ ಸತ್ಕಾರಮಾಡುವವರೂ) ಕೂಡ ನಿಮ್ಮಿಂದ (ನನ್ನ ಲೋಕವಾದ ನರಕ ಮೊದಲಾದವುಗಳನ್ನು ತೋರಿಸುವುದಕ್ಕೋಸ್ಕರ) ನನ್ನ ಸಮೀಪಕ್ಕೆ ತರಲ್ಪಡಬಾರದು, ಏಕೆಂದರೆ, ಅವರು ವಿಷ್ಣುಭಕ್ತರ ಆಸನ, ಶಯನ, ಸಹವಾಸಾದಿಗಳಿಂದ ಪಾಪಗಳನ್ನು ಕಳಕೊಂಡಿರುವರು. (ಆದಕಾರಣ ಅವರನ್ನು ನನ್ನ ಲೋಕಕ್ಕೆ ತರಬಾರದು.) ॥ 270 ॥

**ಮೂಲ ॥ (ವಿಷ್ಣುಭಕ್ತಸ್ಯ ಯೇ ದಾಸಾಃ ವೈಷ್ಣವಾನ್ನ ಭುಜಶ್ಚ ಯೇ ।**
**ತೇಽಪಿ ತದ್ದ್ವಿಜಾ ವೈಶ್ಯ ಗತಿಂ ಯಾಂತಿ ನಿರಾಕುಲಾಃ ॥ ೨೭೧ ॥)**

**ಅರ್ಥ ॥** (ವಿಷ್ಣುದೀಕ್ಷಾಪೂರ್ವಕವಾಗಿ ಅಷ್ಟಾಕ್ಷರ ದ್ವಾದಶಾಕ್ಷರವೇ ಮೊದಲಾದ ಮಂತ್ರಾದಿಗಳಲ್ಲಿ ಆಸಕ್ತನಾದ ಮಹಾನುಭಾವನಾದ ಗೃಹಸ್ಥನಿಗೆ ಯಾರು ಸೇವಕರೋ, ಅಂತಹ ವೈಷ್ಣವರ ಅನ್ನವನ್ನು ಭುಂಜಿಸುತ್ತಾ ಯಾರು ಇರುತ್ತಾರೋ, ಆ ಬ್ರಾಹ್ಮಣರೂ ಅನ್ನದಾನಾದಿಗಳನ್ನು ಮಾಡುವ ವಿಷ್ಣುಭಕ್ತನಾದ ಮಹಾನುಭಾವನಂತೆ ವಿಷ್ಣುಭಕ್ತರ ಅನ್ನಭೋಜನಾದಿಗಳಿಂದ ಸಾಂಸಾರಿಕ ಮನೋವ್ಯಾಕುಲರಹಿತರಾಗಿ ಮುಕ್ತಿಯನ್ನು ಹೊಂದುತ್ತಾರೆ. ಹೀಗೆ ವೈಶ್ಯನೊಡನೆ ಒಬ್ಬ ಋಷಿಯ ಮಾತು ॥ 271 ॥)

**ಮೂಲ ॥ (ಪ್ರಾರ್ಥಯೇದ್ವೈಷ್ಣವಸ್ಯಾನ್ನಂ ಪ್ರಯತ್ನೇನ ವಿಚಕ್ಷಣಃ ।**
**ಸರ್ವಪಾಪ ವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೨೭೨ ॥)**

**ಅರ್ಥ ॥** (ತನ್ನನ್ನು ಉದ್ಧರಿಸಿಕೊಳ್ಳುವುದರಲ್ಲಿ ನಿಪುಣನಾದ ಮನುಷ್ಯನು ಮಹಾನುಭಾವನಾದ ವೈಷ್ಣವನ ಅನ್ನಪಾನ ಮೊದಲಾದವುಗಳನ್ನು ಪ್ರಾರ್ಥಿಸಬೇಕು; (ಅಂದರೆ ಪ್ರಯತ್ನಪಟ್ಟು ವೈಷ್ಣವರ ಮನೆಗೆ ಹೋಗಿ ಅನ್ನಾದಿಗಳನ್ನು ಕೊಡಬೇಕೆಂದು ನಮಸ್ಕಾರಮಾಡಿ ಪ್ರಾರ್ಥಿಸಬೇಕು) ತಾನು ಮಾಡಿದ ನಾನಾವಿಧಗಳಾದ ಅನೇಕ ಸಂಚಿತ ಪಾಪಗಳಿಂದ ಬಿಡಲ್ಪಟ್ಟವನಾಗಿ ವೈಕುಂಠಾದಿಗಳಲ್ಲಿ ಪೂಜಿಸಲ್ಪಡುತ್ತಾನೆ. (ಆದಕಾರಣ ವೈಷ್ಣವರ ಅನ್ನವು ಮಹಾಫಲವನ್ನು ಕೊಡತಕ್ಕುದು.) ॥ 272 ॥)

**ಮೂಲ ॥ (ಮಹಾಪಾತ ಸಂಯುಕ್ತೋ ವ್ರಜೇದ್ವೈಷ್ಣವ ಮಂದಿರಂ ।**
**ಯಾಚಯೇದನ್ನಮಮೃತಂ ತದಭಾವೇ ಜಲಂ ಪಿಬೇತ್ ॥ ೨೭೩ ॥)**

**ಅರ್ಥ ॥** (ಪಂಚ ಮಹಾಪಾತಕಾದಿಗಳಿಂದೊಡಗೂಡಿದ ಪಾಪಪುರುಷನು (ಅನ್ನಕ್ಕಾಗಿ) ವೈಷ್ಣವರ ಮನೆಗೆ (ತಾನಾಗಿಯೇ) ಹೋಗಬೇಕು. ಶ್ರೀಹರಿಗೆ ಸಮರ್ಪಿಸಿದುದರಿಂದ ಅಮೃತತುಲ್ಯ ವಾದ ಶುದ್ಧವಾದ ಅನ್ನವನ್ನು (ಅವರೊಡನೆ) ಪ್ರಾರ್ಥಿಸಬೇಕು. (ಅಂದರೆ- ನಾನು ಪಂಚಮಹಾ ಪಾತಕಿಯು. ಆ ಪಾಪವನ್ನು ಕಳಕೊಳ್ಳುವುದಕ್ಕಾಗಿ ತಮ್ಮ ಮನೆಯಲ್ಲಿ ತಾವು ಶ್ರೀಹರಿಗೆ ಸಮರ್ಪಿಸಿದ ಅನ್ನವನ್ನು ನನಗೆ ಕೊಡಬೇಕೆಂದು ಪ್ರಾರ್ಥಿಸಬೇಕು.) (ಅವರ ಮನೆಯಲ್ಲಿ) ಅನ್ನವಿಲ್ಲದಿದ್ದರೆ (ಅಂದರೆ ಇವನು ಅನ್ನವನ್ನು ಭೋಜಿಸಲಿಕ್ಕೆ ಯೋಗ್ಯನಲ್ಲವೆಂದರಿತು ವೈಷ್ಣವರು ಅನ್ನವನ್ನು ಕೊಡದಿದ್ದರೆ, ಅವರ ಮನೆಯಲ್ಲಿರುವ ಶ್ರೀಹರಿಗೆ ಸಮರ್ಪಿಸಿದ) ನೀರನ್ನು (ಬೇಡಿಕೊಂಡು ತನ್ನ ಪಾಪವನ್ನು ಕಳಕೊಳ್ಳುವುದಕ್ಕಾಗಿ) ಕುಡಿಯಬೇಕು. (ಆ ಜಲಪಾನದಿಂದಲೂ ನಿಶ್ಚಯವಾಗಿಯೂ ಪಾಪವಿರಹಿತನಾಗುತ್ತಾನೆ) ॥ 273 ॥)

**ಮೂಲ ॥ (ಸರ್ವಪಾಪ ವಿಶುದ್ಧ್ಯರ್ಥಂ ವಿಷ್ಣುಭಕ್ತಗೃಹಂ ವ್ರಜೇತ್ ।**
**ತಂ ನಮಸ್ಕೃತ್ಯ ಭಕ್ತ್ಯಾ ತು ಯಾಚಯೇದನ್ನಮುತ್ತಮಂ ॥ ೨೭೪ ॥)**

**ಅರ್ಥ ॥** (ತಾನು ಮಾಡಿದ ಮಹಾಪಾತಕಾದಿ ಪಾಪಗಳಿಂದ ಶುದ್ಧೀಕರಿಸಿಕೊಳ್ಳುವುದಕ್ಕಾಗಿ ಪುಣ್ಯಕ್ಷೇತ್ರಾದಿಗಳಲ್ಲಿರತಕ್ಕ ವಿಷ್ಣುಭಕ್ತನ ಮನೆಗೆ ಹೋಗಬೇಕು. ಆತನನ್ನು ನಮಸ್ಕರಿಸಿ ಪಾಪಗಳನ್ನು ಪರಿಹರಿಸುವಂತಹ ಅತ್ಯುತ್ತಮವಾದ ಅನ್ನವನ್ನು ಭಕ್ತಿಯಿಂದ ಬೇಡಬೇಕು. (ಅಂದರೆ, ತಾವು ಶ್ರೀಹರಿಗೆ ಸಮರ್ಪಿಸಿದ ಅನ್ನವನ್ನು ನಾನು ಭಕ್ಷಿಸಿದುದರಿಂದ ನಾನು ಮಾಡಿದ ಅನೇಕ ಪಾಪಗಳೂ ಪರಿಹೃತಗಳಾಗಬೇಕೆಂದು ಭಕ್ತಿಪೂರ್ವಕವಾಗಿ ಬೇಡಬೇಕು. ಆ ಅನ್ನವನ್ನು ಭೋಜನಮಾಡಿದರೆ ಅವನ ಎಲ್ಲಾ ಪಾಪಗಳೂ ಪರಿಹೃತಗಳಾಗುತ್ತವೆ) ॥ 274 ॥)

**ಮೂಲ ॥ (ಸಾಂಗಂ ಸಮುದ್ರಂ ಸನ್ಯಾಸಂ ಸ ಋಷಿ ಛಂದದೈವತಂ ।**
**ಸದೀಕ್ಷಾವಿಧಿವತ್ಸ್ನಾನಂ ಸಯಂತ್ರಂ ದ್ವಾದಶಾಕ್ಷರಂ**
**ಅಷ್ಟಾಕ್ಷರಂ ಚ ಮಂತ್ರೇಶಂ ಜಪಂತಸ್ತೇ ಹಿ ವೈಷ್ಣವಾಃ ।**
**ತಾನ್ಸ್ಪೃಷ್ಟ್ವಾ ಬ್ರಹ್ಮಹಾ ಶುದ್ಧಃ ಸ್ಯಾದನ್ಯೋ ವೈಷ್ಣವಃ ಸ್ವಯಂ**
**॥ ೨೭೫ -೨೭೬ ॥)**

**ಅರ್ಥ ॥** (ಯಾರು ಅಂಗನ್ಯಾಸ ಮುದ್ರಾ ನ್ಯಾಸಗಳಿಂದೊಡಗೂಡಿದ್ದ ಆಯಾಯ

ಮಂತ್ರಗಳನ್ನು ಪ್ರತ್ಯಕ್ಷೀಕರಿಸಿಕೊಂಡ ಋಷಿಯೂ, ಜಗತೀ ಮೊದಲಾದ ಛಂದಸ್ಸುಗಳೂ, ಆಯಾಯ ಮಂತ್ರಗಳಲ್ಲಿ ಪ್ರತಿಪಾದ್ಯವಾದ ದೇವತೆಯೂ ಇವುಗಳಿಂದ ಯುಕ್ತವಾದುದು; ದ್ವಾದಶಾಕ್ಷರಾದಿ ಮಂತ್ರಗಳಿಂದ ಯಂತ್ರಗಳನ್ನು ಮಾಡುವುದೂ ಇದರಿಂದ ಯುಕ್ತವಾದುದು; ಸರ್ವಮಂತ್ರಗಳಲ್ಲಿ ಶ್ರೇಷ್ಠವಾದುದೂ ಆಗಿರುವ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು, ನಾರಾಯಣಾಷ್ಟಾಕ್ಷರ ಮಂತ್ರವನ್ನೂ ಜಪಿಸುವರೋ, ಅವರೇ ವೈಷ್ಣವರೆಂದು (ತಿಳಿಯಬೇಕು). ಅಂತಹ ವಿಷ್ಣುಭಕ್ತರನ್ನು ಕಂಡು ಮತ್ತೊಬ್ಬ ಬ್ರಹ್ಮಹತ್ಯಾ ಮಾಡಿದವನು ಸಹಾ ಶುದ್ಧನಾಗುವನು. (ತಾನು ವಿಷ್ಣುದೀಕ್ಷಾದಿಗಳಿಂದ ಯುಕ್ತನಾಗಿದ್ದು ಪ್ರಮಾದದಿಂದ ಪಾಪಾದಿಗಳ ಸಂಬಂಧವಾಗೋಣ ಆ ಪಾಪವನ್ನು ಕಳಕೊಳ್ಳುವುದಕ್ಕಾಗಿ ವೈಷ್ಣವರನ್ನು ನೋಡಿ ಶುದ್ಧನಾಗವನು. ಆದಕಾರಣ ವೈಷ್ಣವತ್ವವು ಅತಿದುರ್ಲಭವಾದುದರಿಂದ ಅನೇಕ ಪ್ರಕಾರವಾದ ವಿಷ್ಣುಭಕ್ತಿಯಿಂದ ವೈಷ್ಣವತ್ವವನ್ನು ಸಂಪಾದಿಸಿ ಮುಕ್ತನಾಗಬೇಕು) ॥ 275-276 ॥)

**ಮೂಲ ॥ (ಕೃತಘ್ನೋ ವಾಽಥ ಗೋಘ್ನೋ ವಾ ಹೈತುಕಃ ಸರ್ವಪಾತಕಃ ।**
**ಗೋಪೀಚಂದನ ಸಂಪರ್ಕಾತ್ಪೂತೋ ಭವತಿ ಮಾನವಃ ॥ ೨೭೭ ॥)**

**ಅರ್ಥ ॥** (ತನಗೆ ಮಾಡಿದ ಉಪಕಾರದ ಅನುಸಂಧಾನವಿಲ್ಲದಿರುವವನು, ಜ್ಞಾನಾಜ್ಞಾನ ಗಳಿಂದ ಗೋವುಗಳನ್ನು ಸಂಹರಿಸಿದವನು, ವೇದಶಾಸ್ತ್ರಾದಿಗಳಲ್ಲಿ ಹೇಳಲ್ಪಟ್ಟ ಅರ್ಥಗಳಲ್ಲಿ ಹೇತುವಾದವನ್ನು ಮಾಡುವವನು, ಇತರ ಇನ್ನೂ ಎಲ್ಲಾ ಪಾಪಗಳನ್ನು ಮಾಡಿದವನೂ, ಗೋಪೀಚಂದನದ ಸಂಪರ್ಕದಿಂದಲೇ ಪೂತನಾಗುತ್ತಾನೆ; (ತಾನು ಮಾಡಿದ ಪಾಪಪರಿಹಾರವಾಗಿ ಪರಮಪವಿತ್ರ ನಾಗುತ್ತಾನೆ. ಆದಕಾರಣ ಇಂತಹ ಮಹಿಮೆಯಿದ್ದುದರಿಂದ ಗೋಪೀಚಂದನದಿಂದ ಊರ್ಧ್ವಪುಂಡ್ರ ಗಳನ್ನು ಧರಿಸಲೇಬೇಕು) ॥ 277 ॥)

**ಮೂಲ ॥ ಯೋ ದದಾತಿ ದ್ವಿಜಾತಿಭ್ಯಶ್ಚಂದನಂ ಗೋಪಿಮರ್ದಿತಂ ।**
**ಅಪಿ ಸರ್ಷಪ ಮಾತ್ರೇಣ ಪುನಾತ್ಯಾಸಪ್ತಮಂ ಕುಲಂ ॥ ೨೭೮ ॥**

**ಅರ್ಥ ॥** ಯಾವ ಭಕ್ತನು ಸದ್ಬ್ರಾಹ್ಮಣರಿಗೆ ಗೋಪೀಚಂದನವನ್ನು ಸಾಸಿವೆಯಷ್ಟಾದರೂ ದಾನ ಮಾಡುತ್ತಾನೋ, ಆತನು (7) ಏಳು ಕುಲಗಳನ್ನು ಪವಿತ್ರೀಕರಿಸುತ್ತಾನೆ ॥ 278 ॥

**ಮೂಲ ॥ (ನಾ ವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಂ ।**
**ಚಕ್ರಾಂಕಿತಾಯ ದಾತವ್ಯಂ ಹವ್ಯಂ ಕವ್ಯಂ ದ್ವಿಜಾತಯೇ ॥ ೨೭೯ ॥)**

**ಅರ್ಥ ॥** (ಊರ್ಧ್ವಪುಂಡ್ರ, ಚಕ್ರ, ಶಂಖ ಮೊದಲಾದ ವೈಷ್ಣವ ಚಿಹ್ನೆಗಳು ಇಲ್ಲದಿರುವವನಿಗೆ ತಂಡುಲಾದಿಗಳನ್ನು ಕೊಡಬಾರದು. ನೀರಿನ ಬಿಂದುವನ್ನು ಸಹ ಕೊಡಬಾರದು. ಭಗವಚ್ಚಕ್ರ ಶಂಖಾದಿಗಳಿಂದ ಚಿಹ್ನಿತನಾದ ವೈಷ್ಣವನಾದ ಬ್ರಾಹ್ಮಣನಿಗೇನೇ, ದೇವತೆಗಳನ್ನುದ್ದೇಶಿಸಿ ಕೊಡತಕ್ಕ ಹವ್ಯವನ್ನೂ, ಪಿತೃಗಳನ್ನುದ್ದೇಶಿಸಿ ಕೊಡತಕ್ಕ ಕವ್ಯವನ್ನೂ ದಾನಮಾಡಬೇಕು ॥ 279 ॥)

**ಮೂಲ ॥ (ವ್ಯಾಸಃ ॥ ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಂ ।**
**ವಾಮೇ ಶಂಖಂ ಚ ಬಿಭೃಯಾತ್ತದ್ವಿಷ್ಣೋರಿತಿ ವೈ ಋಚಾ ॥ ೨೮೦ ॥**

**ಅರ್ಥ ॥** (ವ್ಯಾಸರು ಹೇಳುತ್ತಾರೆ- ಬ್ರಾಹ್ಮಣರಲ್ಲಿ ವಿಶಿಷ್ಟನಾದವನು ಭಗವಚ್ಚಕ್ರಪ್ರತಿಮಾ ಭೂತವಾದ ಸುದರ್ಶನವನ್ನು ದಕ್ಷಿಣ (ಬಲ) ಭುಜದಲ್ಲಿ ಧರಿಸಬೇಕು. ಎಡ ಭುಜದಲ್ಲಿ ಶಂಖವನ್ನು ಧರಿಸಬೇಕು. (ಅಗ್ನಿಯಲ್ಲಿ ತಪ್ತವಾದ ಸುದರ್ಶನವನ್ನೂ, ಶಂಖವನ್ನೂ ಗುರುಗಳಿಂದ ಧರಿಸಕೊಳ್ಳಬೇಕು. ''ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ'' ಎಂಬೀ ಋಙ್ಮಂತ್ರದಿಂದ ತಪ್ತಚಕ್ರಾದಿಲಾಂಛನವನ್ನು ಧರಿಸಬೇಕು. ॥ 280 ॥)

**ಮೂಲ ॥ (ಉಪವೀತೀ ಬದ್ಧಶಿಖೋ ಬ್ರಾಹ್ಮಣೋ ಭುಜ ಮೂಲಯೋಃ ।**
**ಧಾರಯೇದಬ್ಜ ಚಕ್ರೇ ತು ಪವಿತ್ರಂತ ಇತಿ ಶ್ರುತಿಃ ॥ ೨೮೧ ॥)**

**ಅರ್ಥ ॥** (ಶಿಖಾಗಳನ್ನು ಬಂಧಿಸಿಕೊಂಡ ಉಪವೀತಿಯಾದ ವೈಷ್ಣವಬ್ರಾಹ್ಮಣನು ತನ್ನ ಎರಡು ಭುಜಗಳ ಮೂಲದಲ್ಲಿ (ಗುರುಗಳಿಂದ ಮಂತ್ರಪೂರ್ವಕವಾಗಿ ತಪ್ತಗಳಾದ) ಶಂಖ-ಚಕ್ರಗಳನ್ನು (''ಸುದರ್ಶನ ಮಹಾಜ್ವಾಲ ಕೋಟಿಸೂರ್ಯ ಸಮಪ್ರಭ'' ಇತ್ಯಾದಿ ಮಂತ್ರದಿಂದ ಪ್ರಾರ್ಥಿಸಿ ಗುರುಗಳ ಕೈಯಿಂದ) ಧರಿಸಿಕೊಳ್ಳಬೇಕು. ''ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ । ಅತಪ್ತತನುರ್ನತೇ ದಾಮೋ ಅಶ್ನುತೇ'' ಇವು ಮೊದಲಾದ ಶ್ರುತಿಗಳು ಇದ್ದುದರಿಂದ ತಪ್ತ ಚಕ್ರಾದಿ ಧಾರಣವು ಸರ್ವಕರ್ಮಗಳಿಗೂ ಅಂಗಭೂತವಾದುದರಿಂದ ಸರ್ವರೂ ತಪ್ತ ಚಕ್ರಾದಿಗಳನ್ನು ಧರಿಸಬೇಕು. ॥ 281 ॥)

**ಮೂಲ ॥ (ರುದ್ರಃ ॥ ಪಂಚಾಯುಧಾನಿ ಧಾರ್ಯಾಣಿ**
**ಭಕ್ತಿಶ್ರದ್ಧೋಪಬೃಂಹಿತೈಃ ।**
**ಲಲಾಟೇ ಮೂರ್ಧ್ನಿ ಹೃದ್ಬಾಹ್ವೋ-**
**ರೇಕೈಕಂ ತು ಪೃಥಕ್ ಪೃಥಕ್ ॥ ೨೮೨ ॥)**

**ಅರ್ಥ ॥** (ಹರಿಭಕ್ತಿ, ಸತ್ಕರ್ಮ, ಆಸ್ತಿಕ್ಯ ಬುದ್ಧಿ ಇತ್ಯಾದಿಗಳಿಂದ ಯುಕ್ತರಾದ ಭಕ್ತರಿಂದ ಚಕ್ರ, ಶಂಖ, ಗದಾ, ಪದ್ಮ, ನಾರಾಯಣ ಎಂಬ ಐದು ಆಯುಧಗಳು ಗೋಪೀಚಂದನದಿಂದ ಧರಿಸಲ್ಪಡಬೇಕು. ಲಲಾಟದಲ್ಲಿಯೂ, ಶಿರಸ್ಸಿನಲ್ಲಿಯೂ, ಹೃದಯದಲ್ಲಿಯೂ, ಭುಜಗಳಲ್ಲಿಯೂ ಚಕ್ರ-ಶಂಖ ಮೊದಲಾದವುಗಳನ್ನು ಒಂದೊಂದನ್ನು ಪ್ರತ್ಯೇಕ ಪ್ರತ್ಯೇಕ ಧರಿಸಬೇಕು ॥ 282 ॥)

**ಮೂಲ ॥ (ಲಲಾಟೇ ತು ಗದಾ ಧಾರ್ಯಾ ಮೂರ್ಧ್ನಿ ಚಾಪಂ ಶರಂ ತಥಾ ।**
**ಹೃತ್ಪದ್ಮಂ ನಂದಕಂ ಚೈವ ಶಂಖಚಕ್ರೇ ಭುಜದ್ವಯೇ ॥ ೨೮೩ ॥)**

**ಅರ್ಥ ॥** (ಲಲಾಟದಲ್ಲಿ ಗದೆಮುದ್ರೆಯನ್ನು ಧರಿಸಬೇಕು; ಶಿರಸ್ಸಿನಲ್ಲಿ ಧನುರ್ಬಾಣಗಳ ಆಕಾರ ವನ್ನು ಧರಿಸಬೇಕು; (ಮಾಡಬೇಕು) ಹೃದಯದಲ್ಲಿ ಪದ್ಮವನ್ನು ನಂದಕ(ಕೌಸ್ತುಭಮಣಿ)ವನ್ನು ಧರಿಸಬೇಕು; ಎರಡು ಭುಜಗಳಲ್ಲಿ ಶಂಖ-ಚಕ್ರಗಳನ್ನು ಗೋಪೀಚಂದನದಿಂದ ಧರಿಸಬೇಕು.

**ತಾತ್ಪರ್ಯ ॥** ನಾರಸಿಂಹ ಪುರಾಣದಲ್ಲಿ ರೀತ್ಯಂತರದಿಂದ ಪಂಚಾಯುಧಗಳನ್ನು ಧರಿಸಬೇಕೆಂದು ಹೇಳಲ್ಪಟ್ಟಿದೆ. ''ದಕ್ಷಬಾಹೌ ಸ್ತನೇ ಪಾರ್ಶ್ವೇ ದ್ವೇ ದ್ವೇ ಚಕ್ರೇ ತಥಾ ಹೃದಿ । ಶಂಖಮೇಕಂ ಬಾಹುಮೂಲೇ ಶಂಖ ಚಕ್ರೇ ಗಲೇ ತಥಾ ॥ ಕುಕ್ಷೌ ಚತುಷ್ಟಯೇ ಧಾರ್ಯಮೇಕಂ

ಪೃಷ್ಠೇ ಚ ಮೂರ್ಧನಿ । ವಾಮಪಾರ್ಶ್ವೇ ಸ್ತನೇ ಬಾಹೌ ಗಳಪಾರ್ಶ್ವೇ ಗಳೇಽಪಿ ಚ ॥ ಹೃದಯೇ ಪೃಷ್ಠಮೂಲೇ ಚ ದ್ವೌ ದ್ವೌ ಶಂಖೇ ಚ ಧಾರಯೇತ್ । ಚಕ್ರಮೇಕಂ ಬಾಹುಮೂಲೇ ಹೃದಿ ಪದ್ಮಂ ಚ ಧಾರಯೇತ್ ॥ ದಕ್ಷಿಣೇ ಬಾಹುಮೂಲೇ ಚ ಧರೇತ್ಪದ್ಮದ್ವಯಂ ತಥಾ । ಲಲಾಟೇ ತು ಗದಾ ಧಾರ್ಯಾ ವಾಮಬಾಹೌ ಗದಾದ್ವಯಂ ॥ ಚತುರ್ದಶಸು ಸ್ಥಾನೇಷು ಮುದ್ರಾಂ ನಾರಾಯಣೀಂ ಧರೇತ್ । ಧಾರ್ಯಾಃ ಪಂಚಮಹಾಮುದ್ರಾಃ ಬ್ರಹ್ಮಸ್ಥಾನೇ ವಿಶೇಷತಃ ॥'' ಇವು ಮೊದಲಾದ ವಾಕ್ಯಗಳಲ್ಲಿ ಹೇಳಿದ ಪ್ರಕಾರ ಚಕ್ರ ಶಂಖ ಮೊದಲಾದ ಐದು ಆಯುಧಗಳನ್ನು ಆಯಾಯ ಸ್ಥಳಗಳಲ್ಲಿ ಧರಿಸಬೇಕು. (2) ''ಗೋಪೀ ಚಂದನತೋ ನಿತ್ಯಂ ಲಾಂಛಿತೋ ಯಸ್ಯ ವಿಗ್ರಹಃ। ಶಂಖ ಚಕ್ರ ಗದಾ ಪದ್ಮೈರ್ದೇಹೇ ತಸ್ಯ ಸದಾ ಹರಿಃ ॥'' ಎಂಬ ಪ್ರಮಾಣದಿಂದ ಗೋಪೀಚಂದನದಿಂದ 5 ಮುದ್ರೆಗಳನ್ನು ಧರಿಸಬೇಕು ॥ 283 ॥)

**ಮೂಲ ॥ ಜ್ಞಾನೀ ಚ (ಹ) ಕರ್ಮಾಣಿ ಸದೋದಿತಾನಿ ।**
**ಕುರ್ಯಾದಕಾಮಃ ಸತತಂ ಭವೇತ್ ॥ ೨೮೪ ॥**

**ಅರ್ಥ ॥** ಜ್ಞಾನಿಯಾದವನೂ ಕೂಡ ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟ ಕರ್ಮಗಳನ್ನು ಸರ್ವದಾ ಚೆನ್ನಾಗಿ ಮಾಡುತ್ತಾ ಇರಬೇಕು. ಯಾವಾಗಲೂ ಫಲೇಚ್ಛಾರಹಿತನಾಗಿರಬೇಕು ॥ 284 ॥

**ಮೂಲ ॥ ಅತೀತಾನಾಗತಜ್ಞಾನೀ ತ್ರೈಲೋಕ್ಯ (ಕ್ಯೋ?) ದ್ಧರಣಕ್ಷಮಃ ।**
**ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥ ೨೮೫ ॥**

**ಅರ್ಥ ॥** ತ್ರಿಕಾಲಜ್ಞಾನಿಯಾದವನೂ ಮೂರು ಲೋಕಗಳನ್ನುದ್ಧರಿಸುವ ವಿಷಯದಲ್ಲಿ ಶಕ್ತನಾದವನು ಇಂತಹವನೂ ಸಹ ಶ್ರುತಿ ಸ್ಮೃತಿಗಳಲ್ಲಿ ಪ್ರತಿಪಾದಿಸಲ್ಪಟ್ಟ ಆಚಾರವನ್ನು ಬಿಡಬಾರದು ॥ 285 ॥

**ಮೂಲ ॥ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ।**
**ತದೇವ ವೀರ್ಯವತ್ತರಂ ಭವತಿ ॥ ೨೮೬ ॥**

**ಅರ್ಥ ॥** ಯಾವುದನ್ನು ಜ್ಞಾನದಿಂದಲೂ, ಆಸ್ತಿಕ್ಯ ಬುದ್ಧಿಯಿಂದಲೂ, ರಹಸ್ಯಪ್ರಮೇಯ ದಿಂದಲೂ ಮಾಡುತ್ತಾನೋ, ಅದೇ ಸಫಲವಾಗುತ್ತದೆ. ॥ 286 ॥

**ಮೂಲ ॥ ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ೨೮೭ ॥**

**ಅರ್ಥ ॥** ಚೇತನರ ಸಮುದಾಯವು ಈ ಮನುಷ್ಯಜನ್ಮದಲ್ಲಿ ನೂರು ವರ್ಷ ಪರ್ಯಂತ ಬದುಕುವುದಕ್ಕಾಗಿ ಇಚ್ಛಿಸುವುದಾದರೆ ಭಗವತ್ಪೂಜಾ ರೂಪಗಳಾದ ಸ್ವೋಚಿತ ಕರ್ಮಗಳನ್ನು ಮಾಡಿಕೊಂಡೇ ಇರಬೇಕು. ಹೀಗೆ ಮಾಡಿಕೊಂಡಿರುವ ಕೇವಲ ಮನುಷ್ಯನಾದ ನಿನ್ನಲ್ಲಿ ಪಾಪಕರ್ಮವು ಲೇಪಿಸುವುದಿಲ್ಲ, ಕರ್ಮಾಚರಣೆಯಿಲ್ಲದಿದ್ದರೆ ಪಾಪಕರ್ಮವು ಇಲ್ಲವೆಂಬುದಿಲ್ಲ, ಅಂದರೆ– ಪಾಪಕರ್ಮಗಳ ಲೇಪವು ಆಗುತ್ತದೆ. ॥ 287 ॥

**ಮೂಲ ॥ ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ।**
**ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ೨೮೮ ॥**

**ಅರ್ಥ ॥** ಮಹಾನುಭಾವರಾದವರ ಯಾವುದು ವಿಹಿತಾಚರಣವೋ, ಅದು ಧರ್ಮವು. ಮಹಾನುಭಾವರಾದವರ ಮನಸ್ಸಿನ ತುಷ್ಟಿಯೋ, ಅಂದರೆ- ಯಾವ ಧರ್ಮಗಳನ್ನು ಮಾಡುವ ವಿಷಯದಲ್ಲಿ ಸಂತೋಷವಿದೆಯೋ ಅದೂ ಧರ್ಮವು. ವೇದಶಾಸ್ತ್ರಗಳಲ್ಲಿ ಯಾವುದು ಧರ್ಮವೆಂದು ಹೇಳಲ್ಪಟ್ಟಿದೆಯೋ, ಅದು ಧರ್ಮವು. ಸಾಧ್ವಾಚಾರಾದಿಗಳಿಗೆ ವಿಪರೀತವಾಗಿ ಮಾಡುವುದೇ ಅಧರ್ಮವು ॥ 288 ॥

**ಮೂಲ ॥ (ನಿವೃತ್ತಂ ಕರ್ಮ ಸೇವೇತ ಪ್ರವೃತ್ತಂ ತು ಪರಿತ್ಯಜೇತ್ ।)**
**ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ॥**
**★ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ ॥ ೨೮೯ ॥**

**ಅರ್ಥ ॥** (ಫಲೇಚ್ಛೆಯಿಲ್ಲದೇನೇ ಇರುವ ಕೇವಲ ಭಗವತ್ಪ್ರೀತಿಕರವಾದ ಕರ್ಮವನ್ನು, ಅಧಿಕಾರಿಯು ಸೇವಿಸಬೇಕು. ಅಂದರೆ- ಕೇವಲ ಭಗವತ್ಪ್ರೀತಿಕರವಾದ ಧರ್ಮವನ್ನೇ ಮುಕ್ತಿಯನ್ನು ಬಯಸುವವನು ಆಚರಿಸಬೇಕು. ಪ್ರವೃತ್ತವನ್ನು ಮಾಡಬಾರದು. ಭಕ್ತನು ವಿಷಯಾದಿಗಳನ್ನಪೇಕ್ಷಿಸಿ ಪ್ರವೃತ್ತಕರ್ಮರೂಪ ಧರ್ಮವನ್ನು ಪರಿತ್ಯಾಗ ಮಾಡಬೇಕು.) ಐಹಿಕ ಕಾಮಗಳಿಲ್ಲದಿರುವ ಭಗವನ್ಮಾಹಾತ್ಮ್ಯ ಜ್ಞಾನಪೂರ್ವಕವಾಗಿ ಯಾವುದು ಕರ್ಮವೋ, ಅದು ನಿವೃತ್ತಕರ್ಮವೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ನಿವೃತ್ತಕರ್ಮವನ್ನು ಸೇವಿಸುತ್ತಿರುವವನು, ಅಂದರೆ ಸರ್ವದಾ ಸತ್ಕರ್ಮಗಳನ್ನು ಮಾಡುತ್ತಾ ಇರುವವನು ಸರ್ವದಾ ಏಕಪ್ರಕಾರನಾದ ಗುಣಪೂರ್ಣನಾದ ನಾರಾಯಣನನ್ನು ಹೊಂದುತ್ತಾನೆ. (ಆದಕಾರಣ ಭಗವದ್ಭಕ್ತನು ನಿವೃತ್ತಕರ್ಮವನ್ನೇ ಸೇವಿಸುತ್ತಿರಬೇಕು) ॥ 289 ॥

**ಮೂಲ ॥ ಶ್ರೀಮದಾನಂದತೀರ್ಥಾರ್ಯ ಸಹಸ್ರಕಿರಣೋತ್ಥಿತಾ ।**
**ಗೋತತಿಃ ಸತತಂ ಸೇವ್ಯಾ ಗೀರ್ವಾಣೈಃ ಸಿ (ಶು) ದ್ಧಿದಾ ಭವೇತ್ ॥**
**॥ ೨೯೦ ॥ (೨೯೧) ॥**

**ಅರ್ಥ ॥** ಶ್ರೀಮದಾನಂದತೀರ್ಥಾಚಾರ್ಯರೆಂಬ ಸೂರ್ಯನಿಂದ ಪ್ರಕಾಶಿಸಲ್ಪಟ್ಟ ಕಿರಣ ಸಮುದಾಯರೂಪವಾದ ಈ ಗ್ರಂಥವು ದೇವತೆಗಳಿಂದ ಸರ್ವದಾ ಸೇವ್ಯವಾಗಬೇಕು. ಈ ಗ್ರಂಥವು ದೇವತೆಗಳಿಗೂ ಸಿದ್ಧಿಯನ್ನು (ಮನಶ್ಶುದ್ಧಿಯನ್ನು) ಕೊಡತಕ್ಕದ್ದು.

---

(★ ಪ್ರಾಚೀನ ತುಳು ಪುಸ್ತಕದಲ್ಲಿಯೂ, ಕೃಷ್ಣಾಚಾರ್ಯರ ಟೀಕೆಯಲ್ಲಿಯೂ, "ಬ್ರಹ್ಮಾಭ್ಯೇತಿ ಸನಾತನಂ" ಎಂಬ ೨೮೯ನೇ ಶ್ಲೋಕ ಮುಗಿದಮೇಲೆ "ಏತತ್ಪುಣ್ಯಂ ಪರಂ ಗುಹ್ಯಂ ಪವಿತ್ರಂ ಪಾಪನಾಶನಂ । ಆಯುಷ್ಯಂ ಚ ಯಶಸ್ಯಂ ಚ ಕಲಿದುಸ್ಸ್ವಪ್ನನಾಶನಂ ॥" ಎಂಬ ೨೩೩ನೇ ಶ್ಲೋಕ, ಆ ಮೇಲೆ ೨೩೪,೨೩೫,೨೩೬,೨೩೭.೨೩೮.೨೩೯. ಆ ಮೇಲೆ ಗ್ರಂಥಾಂತ್ಯದಲ್ಲಿ "ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ । ಅಮೃತಾಯ ಕೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥" ಎಂಬ ೨೪೦ನೇ ಶ್ಲೋಕ. ಆಮೇಲೆ "ಯಸ್ಯ ತ್ರೀಣ್ಯುದಿತಾನಿ" ಎಂಬ ೨೯೧ನೇ ಶ್ಲೋಕ. ಆಮೇಲೆ "ಶ್ರೀಮದಾನಂದತೀರ್ಥಾರ್ಯಸಹಸ್ರ" ಎಂಬ ೨೯೦ನೇ ಶ್ಲೋಕ. ಹೀಗೆ ಇರುತ್ತವೆ.)

**ತಾತ್ಪರ್ಯ ॥** ಹೇಗೆ ಸೂರ್ಯನ ಕಿರಣಸಮೂಹವು ಸರ್ವರಿಂದಲೂ ಸೇವ್ಯವಾಗುತ್ತದೋ, ಹಾಗೆಯೇ ಶ್ರೀಮದಾಚಾರ್ಯರ ಮುಖಕಮಲದಿಂದ ನಿಸ್ಸೃತವಾದ ದೋಷಲೇಶವಿರಹಿತವಾದ ವಾಕ್ಸಮೂಹರೂಪ ಈ ಗ್ರಂಥವು ದೇವತೆಗಳಿಗೂ ಮನಸ್ಸಿಗೆ ನೈರ್ಮಲ್ಯವನ್ನು ಕೊಡುವುದರಿಂದ ದೇವತೆಗಳು ಸೇವಿಸಬೇಕೆಂದು ಆದಮೇಲೆ ಭಗವದ್ಭಕ್ತರಾದ ಮನುಷ್ಯರು ಸೇವಿಸಬೇಕೆಂದು ಏನು ಹೇಳಬೇಕಾಗಿಯದೆ? ॥ 290 ॥

ತಾನು ಮಾಡಿದ ಗ್ರಂಥಕ್ಕೆ ಆಪ್ತಿಮೂಲತ್ವವನ್ನು ಸಮರ್ಥಿಸುವುದಕ್ಕಾಗಿ ತಾನು ಪರಮಾಪ್ತನೆಂದು ಶ್ರುತಿಪ್ರಸಿದ್ಧವಾದುದರಿಂದ ಆ ಶ್ರುತಿಯನ್ನು ತೋರಿಸುತ್ತಾರೆ-

**ಮೂಲ ॥ ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**
**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ**
**ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥**
**॥ ೨೯೧ ॥ (೨೯೦)**

**ಅರ್ಥ ॥** ಯಾವ ವಾಯುದೇವರಿಗೆ ''ಬಳಿತ್ಥಾ ತದ್ವಪುಷೇ'' ಇತ್ಯಾದಿ ವೇದವಚನದಲ್ಲಿ ಅತ್ಯಾಶ್ಚರ್ಯಕರಗಳಾದ ಅಥವಾ ಕ್ರೀಡಾದಿಗುಣಯುಕ್ತಗಳಾದ ಮೂರು ರೂಪಗಳು ಹೇಳಲ್ಪಟ್ಟಿದ್ದಾವೋ, ವಾಯುದೇವರ ಯಾವ ಮೂಲರೂಪವು ಬಲಾತ್ಮಕವೋ, ಜ್ಞಾನಸ್ವರೂಪವೋ, ಜಗತ್ತಿನ ಭರಣ ಗಮನಗಳನ್ನು ಮಾಡತಕ್ಕುದೋ, ಪೂಜ್ಯವಾಗಿಯೂ ಶ್ರೇಷ್ಠವಾಗಿಯೂ ಇದೆಯೋ, ಈ ಪ್ರಕಾರ ಇರತಕ್ಕುದಾಗಿಯೇ ಮೂರು ರೂಪಗಳ ಅವತಾರಕ್ಕಾಗಿ ಶ್ರೀಹರಿಯಿಂದ ಪ್ರೇರಿತವಾಗಿದೆ. ಅವತೀರ್ಣವೂ ಆಗಿದೆ. ಅಥವಾ ಯಾವ ವಾಯುದೇವರ ಆ ಮೂಲರೂಪವು ಬಲಾದಿರೂಪವೋ, ಅವತಾರಗಳಲ್ಲಿ ವಿಹಿತವಾಗಿಯದೋ ಅಂತಹ ಮೂರು ರೂಪಗಳೂ ಹೀಗೆಯೇ ಇರುತ್ತವೆ. ಅವುಗಳಲ್ಲಿ ಹನುಮದಾಖ್ಯವಾದ ಒಂದನೇ ರೂಪವು ಶ್ರೀರಾಮಚಂದ್ರದೇವರ ವಚನಗಳನ್ನು ಸೀತೆಯ ಸಮೀಪಕ್ಕೆ ತೆಗೆದುಕೊಂಡು ಹೋಗಿರುವುದು. ಅಥವಾ ರಾಮವಿಷಯಕಗಳಾದ ಮೂಲ ರಾಮಾಯಣಾದಿಗಳನ್ನು ಶಿಷ್ಯರಲ್ಲಿ ಉಪದೇಶಿಸಿರುವುದು. ಅಥವಾ ರಾಮನ ಆಜ್ಞೆಯಿಂದೊಡಗೂಡಿರುವುದು. ಭೀಮನೆಂಬುವ ಎರಡನೇ ರೂಪವು ಕುರುಗಳ ಸೈನ್ಯವನ್ನು ವಿನಾಶಗೊಳಿಸುವುದು. ಈ ಮೂರನೇದ್ದಾದ ಯಾವುದು ಮಧ್ವನಾಮಕವೋ (ಸುಖಸಾಧನವಾದ ಶಾಸ್ತ್ರವನ್ನು ನಿರ್ಮಿಸಿರುವುದು) ಇಂತಹ ಆನಂದತೀರ್ಥಾಚಾರ್ಯರಿಂದ ಕೇಶವನ ವಿಷಯವಾಗಿ ಗ್ರಂಥವು ಮಾಡಲ್ಪಟ್ಟಿತು.

**ತಾತ್ಪರ್ಯ ॥** ಪರಮಾಪ್ತರು ಮಾಡಿರುವುದರಿಂದ ಈ ಗ್ರಂಥವನ್ನು ಸಕಲ ಸಜ್ಜನರೂ ಅತ್ಯಾದರದಿಂದ ಸ್ವೀಕರಿಸಬೇಕು ॥ 291 ॥

**ಮೂಲ ॥ (+) ಯಸ್ಸರ್ವಗುಣಸಂಪೂರ್ಣ ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥ ೨೯೨ ॥**

**ಅರ್ಥ ॥** ಯಾರು ಸರ್ವಗುಣಗಳಿಂದ ಪೂರ್ಣನೋ, ಎಲ್ಲಾ ದೋಷಗಳಿಂದಲೂ

ರಹಿತನೋ, ಅಂತಹ ಸರ್ವೋತ್ತಮನಾದ ನನಗೆ ಸುಹೃತ್ತಾದ ಚೆನ್ನಾಗಿ ಪ್ರೀತನೇ ಆದ ಶ್ರೀಹರಿಯು ಮತ್ತೂ ಸಂತುಷ್ಟನಾಗಲಿ ॥ 292 ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತಃ
ಶ್ರೀಕೃಷ್ಣಾಮೃತಮಹಾರ್ಣವಃ ಸಮಾಪ್ತಃ ॥ ಶ್ರೀಃ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಕೃಷ್ಣಾಮೃತಮಹಾರ್ಣವನಾಮಕವಾದ ಗ್ರಂಥವು ಸಂಪೂರ್ಣವಾಯಿತು.

ಶ್ರೀಮಧ್ವಾರ್ಯ ಪ್ರಣೀತ ಶ್ರೀ ಕೃಷ್ಣಾಮೃತಮಹಾರ್ಣವಃ।
ತಂತ್ರಿನಾರಾಯಣಾಖ್ಯೇನ ವ್ಯಾಖ್ಯಾತಃ ಶ್ರೀಶ ತುಷ್ಟಯೇ ॥
ಶ್ರೀಮದಾನಂದತೀರ್ಥಾರ್ಯ ಹೃದಯಾಂಬುಜ ಮಧ್ಯಗಃ ।
ಪ್ರೀತೋಽಸ್ತು ಸರ್ವದಾಽನೇನ ಲೇಖನೇನ ರಮಾಪತಿಃ ॥
ನ ಜಾನಾಮಿ ಪದಾರ್ಥಂ ವಾ ವಾಕ್ಯಾರ್ಥಂ ವಾಽಪಿ ಕುತ್ರಚಿತ್ ।
ಯಥಾಶಕ್ತ್ಯರ್ಥಕಥನಾದ್ದಯಾಂ ಕುರ್ವಂತು ಸಜ್ಜನಾಃ ॥
ಮಮ ಸ್ವಾಮೀ ಹರಿರ್ನಿತ್ಯಃ ನಿರ್ದೋಷಃ ಪೂರ್ಣಚಿತ್ಸುಖಃ ।
ಮಧ್ವೇಶಃ ಶ್ರೀಪತಿಃ ಕೃಷ್ಣಃ ಪ್ರಸನ್ನೋ ಮುಕ್ತಿದೋ ಭವೇತ್ ॥

॥ ಶ್ರೀಃ ॥

# ನಖಸ್ತುತಿಯು

## ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**ಮೂಲ ॥ ಪಾಂತ್ವಸ್ಮಾನ್ ಪುರುಹೂತವೈರಿಬಲವನ್ಮಾತಂಗಮಾದ್ಯದ್ಘಟಾ**
**ಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿತಾಃ ।**
**ಶ್ರೀಮತ್ಕಂಠೀರವಾಸ್ಯಪ್ರತತಸುನಖರಾ ದಾರಿತಾರಾತಿದೂರ**
**ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿಭಾಗ್ಯೈಃ**
**(ನಾಕಿವೃಂದ್ಯೈಃ) ॥ ೧ ॥**

**ಅರ್ಥ ॥** ಪುರುಹೂತವೈರಿಬಲವನ್ಮಾತಂಗಮಾದ್ಯದ್ಘಟಾಕುಂಭೋಚ್ಚಾದ್ರಿವಿಪಾಟನಾಧಿಕ ಪಟುಪ್ರತ್ಯೇಕವಜ್ರಾಯಿತಾಃ, ಪುರುಹೂತ=ಯಾಗಗಳಲ್ಲಿ ಬಹಳವಾಗಿ, ಹೋಮದಲ್ಲಿ ಉದ್ದೇಶಿಸಲ್ಪಡ ತಕ್ಕ ದೇವೇಂದ್ರನ, ವೈರಿ=ವೈರವುಳ್ಳ ದೈತ್ಯರೆಂಬ, ಬಲವತ್=ಸಾಮರ್ಥ್ಯವುಳ್ಳ, ಮಾತಂಗ=ಆನೆಗಳ, ಮಾದ್ಯತ್=ಮದವನ್ನು ಹೊಂದಿದ, ಘಟಾ=ಸಮುದಾಯದ, ಕುಂಭ=ಕುಂಭಸ್ಥಳಗಳೆಂಬ, ಉಚ್ಚ= ಉನ್ನತಗಳಾದ, ಅದ್ರಿ=ಪರ್ವತಗಳ, ವಿಪಾಟನ=ಶೀಳೋಣದರಲ್ಲಿ, ಅಧಿಕ=ಅತ್ಯಂತವಾಗಿ, ಪಟು= ಸಮರ್ಥಗಳಾದ, ಪ್ರತ್ಯೇಕ=ಪ್ರತಿಯೊಂದು, ವಜ್ರಾಯಿತಾ=ವಜ್ರಾಯುಧದಂತೆ ಇರುವ, ಭೂರಿ ಭಾಗ್ಯೈಃ=ಭೂರಿ=ಬಹಳವಾದ, ಭಾಗ್ಯೈಃ=ಭಾಗ್ಯವುಳ್ಳ ಬ್ರಹ್ಮಾದಿ ದೇವತೆಗಳಿಂದ, ದಾರಿತಾರಾತಿದೂರ ಪ್ರಧ್ವಸ್ತಧ್ವಾಂತಶಾಂತಪ್ರವಿತಮನಸಾ, ದಾರಿತ=ತಿರಸ್ಕರಿಸಲ್ಪಟ್ಟ ಅರಾತಿ=ಕಾಮಾದಿಷಡ್ವರ್ಗಗಳುಳ್ಳ, ದೂರ=ದೂರದಿಂದ, ಪ್ರಧ್ವಸ್ತ=ನಿರಾಕರಿಸಲ್ಪಟ್ಟ ಧ್ವಾಂತ=ಅಜ್ಞಾನಾಂಧಕಾರವುಳ್ಳ, ಶಾಂತ=ರಾಗಾದಿ ದೋಷಗಳಿಂದ ಕಲುಷಿತವಾಗದಿರುವ, ಅಥವಾ ಭಗವಂತನಲ್ಲಿರುವ, ಪ್ರವಿತತ=ಚೆನ್ನಾಗಿ ವಿಸ್ತೃತವಾದ, (ತಂತಮ್ಮ ಯೋಗ್ಯತೆಯನ್ನನುಸರಿಸಿ ಭಗವಂತನ ಸ್ವರೂಪ ಗುಣಕರ್ಮಾದ್ಯನೇಕಾರ್ಥಗಳನ್ನು ವಿಷಯೀಕರಿಸುವ) ಮನಸಾ=ಮನಸ್ಸಿನಿಂದ, ಭಾವಿತಾಃ=ಧ್ಯಾನಿಸಲ್ಪಟ್ಟ, ಅಥವಾ ದಾರಿತಾರಾತಿ= ತಿರಸ್ಕರಿಸಲ್ಪಟ್ಟ ಕಾಮಾದಿಷಡ್ವರ್ಗಗಳು ಹೇಗಾದೀತೋ ಹಾಗೆ, ಭಾವಿತಾಃ=ಧ್ಯಾನಿಸಲ್ಪಟ್ಟ ಶ್ರೀಮತ್ಕಂಠೀರವಾಸ್ಯಪ್ರತತಸುನಖರಾಃ, ಶ್ರೀಮತ್=ಮಹಾಲಕ್ಷ್ಮೀಯಿಂದ ನಿರಂತರದಲ್ಲಿಯೂ ಕೂಡಿರುವ, ಕಂಠೀರವಾಸ್ಯ=ಸಿಂಹದ ಮುಖವಿರುವ ನರಸಿಂಹದೇವರ, ಪ್ರತತ=ವ್ಯಾಪ್ತಗಳಾದ, ಅಥವಾ ಪ್ರಖ್ಯಾತಗಳಾದ, ಸು=ಶೋಭನಗಳಾದ, ನಖರಾಃ=ಉಗುರುಗಳು, ಅಸ್ಮಾನ್=ನಮ್ಮನ್ನು, ಪಾಂತು=ರಕ್ಷಿಸಲಿ.

**ತಾತ್ಪರ್ಯ ॥** 1. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ರಜತಪೀಠದಲ್ಲಿ ಒಂದು ದಿನ ಶ್ರೀಕೃಷ್ಣನಿಗೆ ನೈವೇದ್ಯ ಸಮರ್ಪಣೆ ಮಾಡುತ್ತಿರಲು ಶಿಷ್ಯಶ್ರೇಷ್ಠರಾದ ತ್ರಿವಿಕ್ರಮ ಪಂಡಿತಾಚಾರ್ಯರು ಸಾವಕಾಶವಾಗಲು ಕಾರಣವೇನೆಂಬುದನ್ನು ತಿಳಿಯಬೇಕೆಂದಿಚ್ಛಿಸಿ ಕಿಟಕಿಯ ಛಿದ್ರದಲ್ಲಿ ನೋಡುವವರಾದರು. ಆಗ ಹನುಮದ್ಭೀಮ ಮಧ್ವರೂಪಗಳಿಂದ ಪ್ರತ್ಯಕ್ಷರಾದ ರಾಮ ಕೃಷ್ಣ

ವೇದವ್ಯಾಸ ದೇವರಿಗೆ ಪೂಜಿಸತಕ್ಕದ್ದನ್ನು ನೋಡಿ ಅತ್ಯಾಶ್ಚರ್ಯಯುಕ್ತರಾಗಿ 'ಶ್ರೀಮದ್ವಿಷ್ಣ್ವಂಘ್ರಿನಿಷ್ಠಾ' ಇದು ಮೊದಲಾದ (41) ನಲ್ವತ್ತೊಂದು ಶ್ಲೋಕಗಳಿಂದ ವಾಯುದೇವರನ್ನು ಸ್ತುತಿಸಿದರು. ಆಗ ಶ್ರೀಮದಾಚಾರ್ಯರು ತನ್ನ ಸ್ತುತಿಯನ್ನು ಮಾತ್ರ ಸಹಿಸಲಾರದೆ ಆ ವಾಯುಸ್ತುತಿಯಲ್ಲಿರುವ ಪದ್ಯಗಳಿಗೆ ಬೇರೆ ಬೇರೆಯಾಗಿ ಫಲವನ್ನು ಕೊಡಬೇಕೆಂದಿಚ್ಛಿಸಿ ಸರ್ವರಿಗೂ ಸರ್ವಾರಿಷ್ಟನಿವೃತ್ತಿಪೂರ್ವಕ ಶುಭಪ್ರಾಪ್ತಿಯಾಗುವುದಕ್ಕಾಗಿ ಹಿರಣ್ಯಕಶಿಪುವನ್ನು ಸಂಹರಿಸಿ ಆತನ ಕರಳನ್ನು ಮಾಲಿಕೆಯಾಗಿ ಧರಿಸಿಕೊಂಡ ಶ್ರೀನರಸಿಂಹದೇವರ ಸ್ತುತಿರೂಪವಾದ ನಖಸ್ತುತಿಯನ್ನು ನಿರ್ಮಿಸಿದರು. (2) ಸಂಸಾರಕ್ಕೆ ಕಾರಣಗಳಾದ ದುರ್ಜ್ಞಾನ ದುಷ್ಕರ್ಮಗಳಿಗೆ, ಅಭಿಮಾನಿಗಳಾದ ಎಲ್ಲಾ ದೈತ್ಯರನ್ನು ಶ್ರೀನರಸಿಂಹದೇವರ ಉಗುರುಗಳು ಸಂಹರಿಸಿ ತನ್ಮೂಲಕವಾದ ಎಲ್ಲಾ ಅನಿಷ್ಟವನ್ನು ಪರಿಹರಿಸುತ್ತವೆ. ಆದುದರಿಂದಲೇ ಈ ನಖಸ್ತುತಿಯು ಬ್ರಹ್ಮ ರುದ್ರ ಮೊದಲಾದ ಉತ್ತಮಾಧಿಕಾರಿಗಳಿಂದಲೂ ಉಪಾಸ್ಯವಾಗಿದೆ. ಎಂದು ಪ್ರತಿಪಾದಿಸುತ್ತಾ ಎಲ್ಲಾ ಸಜ್ಜನರನ್ನೂ ರಕ್ಷಿಸಲೆಂದು ಆಚಾರ್ಯರು ಪ್ರಾರ್ಥಿಸಿದರು. (3) ಬ್ರಹ್ಮಾದಿಯೋಗಿಗಳ ಭಗವದ್ವಿಷಯಕಗಳಾದ ಅಂತಃಕರಣ ವೃತ್ತಿರೂಪವಾದ ಜ್ಞಾನಪ್ರವಾಹಕ್ಕೆ ಇದೇ ಮೊದಲೆಂದಿಲ್ಲದಿರುವುದರಿಂದ ಅನಾದಿಯಾದ ಪ್ರಯುಕ್ತ ಭಗವದ್ವಿಷಯಕ ವಾದ ಅಜ್ಞಾನವು ದೂರದಿಂದಲೇ ಬ್ರಹ್ಮಾದಿ ದೇವತೆಗಳೂ ಧ್ಯಾನಿಸುತ್ತಾರೆ. ಪ್ರಬಲವಾದ ಶತ್ರುಗಳನ್ನು ಸಂಹರಿಸತಕ್ಕವುಗಳು ಎಂದು ಹೇಳಿರುವುದರಿಂದ ಶ್ರೀನರಸಿಂಹನ ನಖರಗಳು ದೇವೇಂದ್ರನ ವಜ್ರಾಯುಧದಿಂದಲೂ ಶ್ರೇಷ್ಠಗಳೆಂದು ವ್ಯಕ್ತವಾಯಿತು. ॥ 1 ॥

'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಂ' ಎಂದು ಶ್ರುತಿಯಿರುವುದರಿಂದ ಶ್ರೀನರಸಿಂಹದೇವರಿಗೆ ಸಮಾನಿಕರೂ ಉತ್ತಮರೂ ಯಾರೂ ಇಲ್ಲ, ಆತನೇ ಸರ್ವೋತ್ತಮನು, ಇದೇ ಎಲ್ಲಾ ಸಚ್ಛಾಸ್ತ್ರಗಳ ಮುಖ್ಯತಾತ್ಪರ್ಯವು ಎಂಬುದನ್ನು ತಿಳಿಸುತ್ತಾರೆ.

**ಮೂಲ ॥ ಲಕ್ಷ್ಮೀಕಾಂತ ಸಮಂತತೋಽಪಿ ಕಲಯನ್ನೈವೇಶಿತುಸ್ತೇ ಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽ-**
**ಪಾಸ್ತಂ ರಸೋ ಯೋಷ್ಟಮಃ ।**
**ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿ**
**ಸ್ಫುರತ್ಖದ್ಯೋತೋಪಮ ವಿಷ್ಫುಲಿಂಗ**
**ಭಸಿತಾ ಬ್ರಹ್ಮೇಶಶಕ್ರೋತ್ಕರಾಃ ॥ ೨ ॥**

**ಅರ್ಥ ॥** ಹೇ ಲಕ್ಷ್ಮೀಕಾಂತ=ಲಕ್ಷ್ಮೀಪ್ರಿಯನಾದ ಶ್ರೀನರಸಿಂಹನೇ, ಈಶಿತುಃ=ಸರ್ವಸ್ವಾಮಿ ಯಾದ, ತೇ=ನಿನಗೆ, ಸಮಂ=ಸದೃಶವಾದ ವಸ್ತುವನ್ನು, ಸಮಂತತೋಽಪಿ=ಸರ್ವ ಜಗತ್ತಿನಲ್ಲಿಯೂ, ಕಲಯನ್=(ಮನಸ್ಸಿನಿಂದ ಪ್ರಮಾಣಗಳಿಂದಾಗಲೀ) ವಿಚಾರಿಸತಕ್ಕ ನಾನು, ನ ಪಶ್ಯಾಮ್ಯೇವ= ನೋಡುವುದೇ ಇಲ್ಲ, ಯಃ=ಅತ್ಯಂತವಾಗಿ ಅಸತ್ತೆಂದು ಪ್ರಸಿದ್ಧವಾದ, ಅಷ್ಟಮಃ=ಎಂಟನೇದ್ದಾದ, ರಸಃ=ರಸದಂತೆ, ಉತ್ತಮವಸ್ತು=ಶ್ರೀನರಸಿಂಹದೇವರಿಂದ ಶ್ರೇಷ್ಠವಾದ ಪದಾರ್ಥವು, ದೂರತರತಃ= ಅತಿದೂರದಿಂದಲೇ, ಅಪಾಸ್ತಂ=ನಿರಸ್ತವಾಯಿತು. ಬ್ರಹ್ಮೇಶಶಕ್ರೋತ್ಕರಾಃ, ಬ್ರಹ್ಮಾ=ಚತುರ್ಮುಖ ಬ್ರಹ್ಮರು, ಈಶ=ರುದ್ರರು, ಶಕ್ರ=ದೇವೇಂದ್ರರೂ ಇವರ, ಉತ್ಕರಾಃ=ಸಮುದಾಯಗಳು, ಯದ್ರೋಷೋತ್ಕರದಕ್ಷನೇತ್ರಕುಟಿಲ ಪ್ರಾಂತೋತ್ಥಿತಾಗ್ನಿಸ್ಫುರತ್ಖದ್ಯೋತೋಪಮವಿಷ್ಫುಲಿಂಗ ಭಸಿತಾಃ,

ಯತ್=ಯಾವ ನರಸಿಂಹದೇವರ, ರೋಷ=ಕ್ರೋಧಗಳ, ಉತ್ಕರ=ಸಮೂಹವುಳ್ಳ, ದಕ್ಷ=ದಕ್ಷಿಣ ವಾದ, ನೇತ್ರ=ಕಣ್ಣಿನ, ಕುಟಿಲ=ವಕ್ರವಾದ, ಪ್ರಾಂತ=ಅಪಾಂಗ ಪ್ರದೇಶದಿಂದ, ಉತ್ಥಿತಃ=(ಸಂಹಾರ ಕಾಲದಲ್ಲಿ) ಹುಟ್ಟಿದ, ಅಗ್ನಿ=ಬೆಂಕಿಯ, ಸ್ಫುರತ್=ಜ್ವಲಿಸುವ, ಖದ್ಯೋತ=ಜ್ಯೋತಿರಿಂಗಣಗಳಿಗೆ, ಉಪಮಾ=ಸಾದೃಶ್ಯವುಳ್ಳ, ವಿಷ್ಫುಲಿಂಗ=ಬೆಂಕಿಯ ಕಿಡಿಗಳಿಂದ, ಭಸಿತಾಃ=ಭಸ್ಮೀಕೃತರಾಗುತ್ತಾರೋ?

**ತಾತ್ಪರ್ಯ ॥** (1) 'ನೈವ ಪಶ್ಯಾಮಿ' ಎನ್ನುವುದರಿಂದ ನರಸಿಂಹನಿಗೆ ಸದೃಶವಾದ ವಸ್ತುವಿಲ್ಲವೆನ್ನುವುದರಲ್ಲಿ ಯೋಗಿಶ್ರೇಷ್ಠರ ಪ್ರತ್ಯಕ್ಷವು ಪ್ರಮಾಣವೆಂದು ತೋರಿಸಲ್ಪಟ್ಟಿತು. (2) ಲೋಕವೇದಗಳಲ್ಲಿ ಮಧುರ, ಲವಣ, ತಿಕ್ತ, ಆಮ್ಲ, ಕಟು, ಕಷಾಯಗಳೆಂದು ಆರೇ ರಸಗಳು ಪ್ರಸಿದ್ಧಗಳು. ಏಳನೇ ರಸವೇ ಇಲ್ಲ, ಆರು ರಸಗಳಿಂದತಿರಿಕ್ತವಾದ ರಸವು ಮೊದಲ ಕೋಡಿನಂತೆ. ಎಂಟನೇ ರಸವಾದರೂ ಸುತರಾಂ ಹೇಗೆ ಅಪ್ರಸಿದ್ಧವೋ, ಹಾಗೆಯೇ ಶ್ರೀನರಸಿಂಹದೇವರಿಗೆ ಸದೃಶವಾದ ದೇವತೆಯೇ ಇಲ್ಲ, ಉತ್ತಮ ದೇವತೆಯು ಸುತರಾಂ ಅಪ್ರಸಿದ್ಧವು. (3) ಅತೀತಾದ್ಯನಂತ ಬ್ರಹ್ಮಾದಿ ಸಮಸ್ತ ದೇವತೆಗಳು, ಅಸುರರು ಮೊದಲಾದ ಜಗತ್ಸಮೂಹಗಳು ಶ್ರೀನರಸಿಂಹನಿಂದುತ್ತಮ ವಸ್ತುವಿಲ್ಲವೆನ್ನುವುದರಲ್ಲಿ ಶ್ರುತ್ಯನುಸಾರಿಯಾದ ಯುಕ್ತಿಯು ಪ್ರಮಾಣವೆಂದು ತೋರಿಸಲ್ಪಟ್ಟಿತು. ತಥಾಚ ಶ್ರೀನರಸಿಂಹದೇವರ ಕಡೆಗಣ್ಣಿನ ನೋಟದಿಂದಲೇ ಬ್ರಹ್ಮಾದಿ ದೇವತೆಗಳಿಗೆ ಉತ್ಪತ್ತಿ, ಸ್ಥಿತಿ, ಸಂಹಾರಾದಿಗಳಾಗುವುದರಿಂದ ಆತನ ಅಧೀನರೇ. ಆದುದರಿಂದ ಸಮಾನಿಕರೂ ಅಲ್ಲ, ಸುತರಾಂ ಉತ್ತಮಗಳಾಗಲಾರರು, ಆದುದರಿಂದ ಶ್ರೀಹರಿಯೇ ನರಸಿಂಹನೇ ಸರ್ವೋತ್ತಮನಾದುದರಿಂದ ಸರ್ವದಾ ಶ್ರೇಯಸ್ಸನ್ನು ಪಡೆಯಬೇಕೆಂದಿಚ್ಛಿಸುವವರು ಆತನನ್ನೇ ಧ್ಯಾನಿಸಬೇಕು ॥ 2 ॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಾ ಶ್ರೀನಖಸ್ತುತಿಸ್ಸಮಾಪ್ತಾ ।**

**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ**

**ಶ್ರೀನಖಸ್ತುತಿಯು ಸಮಾಪ್ತವಾಯಿತು. ॥ ಶ್ರೀಃ ॥**

॥ ಶ್ರೀಃ ॥

# ತಂತ್ರಸಾರ

## ತಂತ್ರಸಾರ ಉದ್ದೇಶ ಪರಿಚಯ

**ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ಪರ್ಯಾಪ್ತವಾಂಛಿತಃ ।**
**ಅಮರ್ತ್ಯೈರಾಶ್ರಿತಚ್ಛಾಯಂ ಕಲ್ಪದ್ರುಮಮಿವೋತ್ತಮಂ ॥**

**(ಮ.ಸ.೧೫. ಶ್ಲೋ.೭೮.)**

ಕಲ್ಪವೃಕ್ಷದ ನೆರಳು ಆ ದೇವತೆಗಳಿಂದ ಹೇಗೆ ಆಶ್ರಿತವಾಗಿದೆಯೋ ಹಾಗೆಯೇ ಈ ತಂತ್ರಸಾರದ ವರ್ಣ ಪಂಕ್ತಿಗಳು ಭಗವನ್ಮೂರ್ತಿಗಳಿಂದ ತುಂಬಿವೆ ಮತ್ತು ವರ್ಣಾಭಿಮಾನಿಗಳಾದ ಬ್ರಹ್ಮಾದಿ ದೇವತೆಗಳಿಂದ ಆಶ್ರಿತವಾಗಿದೆ. ಮತ್ತು ತಂತ್ರಸಾರದ ಸಿದ್ಧಾಂತವು ದೇವತೆಗಳಿಂದ ಆಶ್ರಿತವಾಗಿದೆ. ಇಂತಹ ಗ್ರಂಥೋತ್ತಮವಾದ ತಂತ್ರ ಗ್ರಂಥಗಳಲ್ಲಿ ಶ್ರೇಷ್ಠವಾದ ತಂತ್ರಸಾರಾಖ್ಯ ಗ್ರಂಥವನ್ನು ಹೊಂದಿದವರು ಸರ್ವಾಭೀಷ್ಟಗಳನ್ನು ಹೊಂದುವುದರಲ್ಲಿ ಸಂಶಯಲೇಶವೂ ಇಲ್ಲ ಎಂದು ಕಲ್ಪವೃಕ್ಷದ ದೃಷ್ಟಾಂತವನ್ನು ಕೊಟ್ಟು ಸುಮಧ್ವವಿಜಯದಲ್ಲಿ ಸಮರ್ಥಿಸಿದ್ದಾರೆ. ಈ ತಂತ್ರಸಾರವು ಸಜ್ಜನರ ಸದಾಚಾರಗಳಿಗೆ (ಜಪಪೂಜಾ ಹೋಮಾದಿಗಳಿಗೆ) ಬಹಳ ಮುಖ್ಯವಾದುದು. ತಂತ್ರಂ ವೈ ವೇದ ಸಮ್ಮಿತಂ = ಈ ಗ್ರಂಥವು ವೇದಗಳಿಗೆ ಸಮಾನವು. ತನೋತಿ ತೇಚ ಎಂಬ ವ್ಯುತ್ಪತ್ತಿಯಿಂದ ಸಜ್ಜನರಿಗೆ ಸರ್ವಾಭೀಷ್ಟಗಳನ್ನು ಕೊಟ್ಟು ಸಂಸಾರ ಬಂಧದಿಂದ ಬಿಡುಗಡೆಯನ್ನು ಮಾಡಿಸುತ್ತದೆ. ಹಾಗೆಯೇ ತತ್ವಜ್ಞಾನವನ್ನು ವಿಸ್ತಾರಗೊಳಿಸಿ ಮುಕ್ತಿಯನ್ನು ಕೊಟ್ಟು ...ಎಂಬ ವ್ಯುತ್ಪತ್ತಿಯಿಂದ ತಂತ್ರ ಎನಿಸಿಕೊಂಡು ಶ್ರೇಷ್ಠವಾದುದು ಅಥವಾ ತಂತ್ರ ಗ್ರಂಥಗಳು ಶ್ರೇಷ್ಠವಾದುದು ತಂತ್ರಸಾರ ಗ್ರಂಥವು. ಶ್ರೀಹರಿಯ ಮೂಲ ರೂಪದಿಂದ ತನ್ನ ಮಗನಾದ ಚತುರ್ಮುಖನಿಗೆ ಉಪದೇಶಿಸಿರುವ ಅತಿವಿಸ್ತೃತವಾಗಿರುವ ತಂತ್ರಸಾರ ಎಂಬ ಗ್ರಂಥದಿಂದ ಕೆಲವು ಮುಖ್ಯ ಭಾಗಗಳನ್ನು ಸಂಗ್ರಹಿಸಿಕೊಂಡು ಶ್ರೀಮದಾಚಾರ್ಯರು ಮೂಲ ತಂತ್ರಸಾರ ಗ್ರಂಥದ ಸಾರ ಸಂಗ್ರಹ ರೂಪವಾದ ಈ ತಂತ್ರಸಾರ ಗ್ರಂಥವನ್ನು ರಚಿಸಿರುವರು. ಇದರಲ್ಲಿ 4 ಅಧ್ಯಾಯಗಳು. 1ನೇ ಅಧ್ಯಾಯದಲ್ಲಿ 75 ಶ್ಲೋಕಗಳು. 2ನೇ ಅಧ್ಯಾಯದಲ್ಲಿ 24 ಶ್ಲೋಕಗಳು. 3ನೇ ಅಧ್ಯಾಯದಲ್ಲಿ 161 ಶ್ಲೋಕಗಳು ಮತ್ತು 4ನೇ ಅಧ್ಯಾಯದಲ್ಲಿ 178 ಶ್ಲೋಕಗಳು. ಒಟ್ಟು 438 ಶ್ಲೋಕಗಳು. 1ನೇ ಅಧ್ಯಾಯದಲ್ಲಿ 50 ಭಗವನ್ಮೂರ್ತಿಗಳು, 24 ಭಗವನ್ಮೂರ್ತಿಗಳ ಲಕ್ಷಣಾದಿಗಳೂ, ಮಹಾಮಂತ್ರಗಳ ಪ್ರಶಂಸೆ, ಪೂಜಾಕ್ರಮ, ಇತ್ಯಾದಿಗಳು. 2ನೇ ಅಧ್ಯಾಯದಲ್ಲಿ 50 ಅಕ್ಷರಗಳ ನ್ಯಾಸಸ್ಥಾನಾದಿಗಳೂ ಕಲಶ ಪೂಜಾ ಕ್ರಮ, ಅನುಯಾಗ ಕ್ರಮ, ಹೋಮಪದ್ಧತಿ, ಕುಂಡದ ಅಳತೆ, ಇತ್ಯಾದಿಗಳೂ, 3ನೇ ಅಧ್ಯಾಯದಲ್ಲಿ ಪ್ರತಿಮಾಲಕ್ಷಣಾದಿಗಳು, ದೇವಾಲಯಕ್ಕೆ ಯೋಗ್ಯ ಸ್ಥಳ, ಚಕ್ರಾಬ್ಜ ಮಂಡಲಾದಿಗಳೂ, ಜೀರ್ಣೋದ್ಧಾರ ವಿಧಿ. ಇತರ ದೇವತೆಗಳ ಪ್ರತಿಷ್ಠೆ ಇತ್ಯಾದಿಗಳೂ 4ನೇ ಅಧ್ಯಾಯದಲ್ಲಿ ಭೂವರಾಹ ಮುಂತಾದ ಮಂತ್ರಗಳೂ ಲಕ್ಷ್ಮೀ ಮಂತ್ರಗಳು ಮುಖ್ಯಪ್ರಾಣ ಮಂತ್ರಾದಿಗಳೂ ಶಿವಪಂಚಾಕ್ಷರ ಕ್ಷಿಪ್ರಪ್ರಸಾದ ಮಂತ್ರ ಇತ್ಯಾದಿಗಳೂ ಗ್ರಂಥದ ಮಹಿಮೆ ಇತ್ಯಾದಿ ಗಳೂ ನಿರೂಪಿತವಾಗಿದೆ.

ಅತ ಏವ 'ವಿಷ್ಣುರ್ವರಿಷ್ಠೋ ದೇವಾನಾಂ ಹ್ರದಾನಾಮುವಧಿರ್ಯಥಾ! ತಥಾ ಸಮಸ್ತ ಶಾಸ್ತ್ರಾಣಾಂ। ಶಾಸ್ತ್ರಮನುತ್ತಮಂ॥' ದೇವತೆಗಳಲ್ಲಿ ವಿಷ್ಣುವು ಹೇಗೆ ಶ್ರೇಷ್ಠನೋ, ಹಾಗೆಯೇ ಸಮಸ್ತ ಶಾಸ್ತ್ರಗಳಲ್ಲಿ ತಂತ್ರಸಾರವು ಶ್ರೇಷ್ಠವು. 'ಅಥ ವಿಷ್ಣೂದಿತೇ ತಂತ್ರಸಾರೇ ಮಂತ್ರಗಣೋಹಿ ಯಃ॥ಞ ಎಂದಂತೆ ವಿಷ್ಣು ಪ್ರೋಕ್ತವಾದ ತಂತ್ರಸಾರ ಗ್ರಂಥದಿಂದ ತಂತ್ರಸಾರ ಸಂಗ್ರಹ ರೂಪವಾದ ಗ್ರಂಥವು ಉದ್ಧೃತವಾಯಿತು. 'ತನ್ನೋತಿ ವಿಪುಲಾನರ್ಥಾಃ' ತಂತ್ರಮಂತ್ರ ಸಮನ್ವಿತಾನ್। ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ॥' ಮಂತ್ರಜ್ಞಾನ, ತಂತ್ರಜ್ಞಾನ, ಮೊದಲಾದ ಅನೇಕಾರ್ಥಗಳನ್ನು ತೋರಿಸುತ್ತಾ ಭಯದಿಂದ ಕಾಪಾಡುವ ಶಾಸ್ತ್ರವು ತಂತ್ರ ಶಾಸ್ತ್ರವೆನಿಸುತ್ತದೆ. ಅತ ಏವ 'ಸರ್ವೇರ್ಥಾಯೇನ ತನ್ಯಂತೇ ತ್ರಾಯಂತೇ ಚ ಭಯಾಜ್ಜನಾಃ।' ಇತಿ ತಂತ್ರಸ್ಯ ತಂತ್ರತ್ವಂ ತತ್ವಜ್ಞಾನಪರಿಚಕ್ಷತೇ॥' ಎಂದು ತಂತ್ರಪದದ ನಿರ್ವಚನ ಮಾಡಿರುತ್ತಾರೆ, ಅಂತಹ ತಂತ್ರಸಾರ ಸಂಗ್ರಹವು ಮಾಧ್ವ ಬಂಧುಗಳ ಸದಾಚಾರಗಳಿಗೆ ಅತ್ಯಪೂರ್ವ. ಅಮೂಲ್ಯಗ್ರಂಥವು. ಪರಮ ಪವಿತ್ರವೂ ಸಾಧಕರಿಗೆ ವಿಶೇಷತಃ ಮಾರ್ಗದರ್ಶಕವೂ ಆಗಿದೆ. ಇದರಿಂದ ಸರ್ವನಿಯಾಮಕ ಪರಮಾತ್ಮನನ್ನು ಆರಾದಿಸುತ್ತಾ ಮಂತ್ರ ಜಪ ಧ್ಯಾನಾದಿಗಳಿಂದ ಅಧ್ಯಾತ್ಮ ಶಕ್ತಿಯನ್ನು ಬೆಳೆಸಿಕೊಂಡು ಮೋಕ್ಷಾದಿ ರುಪ ಪುರುಷಾರ್ಥಗಳನ್ನು ಹೊಂದಲು ಅತ್ಯನುಕೂಲ ಗ್ರಂಥವಿದು.

'ಗ್ರಂಥೋಯಮಪಿ ಬಹ್ವರ್ಥಃ' ಎಂದು ಶ್ರೀಮದಾಚಾರ್ಯರು ಹೇಳಿದ ಹಾಗೆ ಬಹ್ವರ್ಥಗರ್ಭಿತವು ''ಗ್ರಂಥೋಯಂ ಪಾಠಮಾತ್ರೇಣ ಸಕಲಾಭೀಷ್ಟ ಸಿದ್ಧಿದಃ। ಕಿಮು ಜ್ಞಾನಾದನುಷ್ಠಾನಾದುಭಯಸ್ಮಾತ್ಪುನಃ ಕಿಮುಃ।'' ಈ ಗ್ರಂಥವು ಅರ್ಥಾನುಸಂಧಾನವಿಲ್ಲದೇ ಕೇವಲ ಪಠನದಿಂದಲೇ ಸಮಸ್ತ ಅಭೀಷ್ಟಗಳನ್ನು ಕೊಡಬಲ್ಲದು. ಗ್ರಂಥಾರ್ಥ ಪರಿಜ್ಞಾನದಿಂದ ಸರ್ವಾಭೀಷ್ಟಸಿದ್ಧಿಯಾಗುತ್ತದೆಂದು ಬೇರೆ ಹೇಳಬೇಕೆ? ಹೀಗೆ ಇರಲು ಕರ್ಮಾನುಷ್ಠಾನ ಮಾಡುವವನ ಮಹತ್ವವೆಂತಹುದು. ತಥಾಪಿ ಜ್ಞಾನಪೂರ್ವಕ ಕರ್ಮಾನುಷ್ಠಾನ ಮಾಡುವವನ ಮಹತ್ವವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ, ಅಂದರೆ ಆತನು ಸಕಲಾಭೀಷ್ಟಗಳನ್ನು ಹೊಂದುವನು. ಆದಕಾರಣ ಈ ಗ್ರಂಥವು ಆಚಾರ್ಯರು ರಚಿಸಿರುವ ಗ್ರಂಥಗಳಲ್ಲಿ ಅತಿ ಶ್ರೇಷ್ಠವು. ಅಲ್ಲದೆ ಈ ಕೃತಿಯಲ್ಲಿ ಅಜಾದಿ ಮಾತೃಕಾನ್ಯಾಸಗಳ ಅರ್ಥಸಹಿತ ವಿಶೇಷಗಳು ವಿವೃತವಾಗಿದೆ. ಆದಕಾರಣ ಸಜ್ಜನರು ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಬೇಕೆಂಬ ಉದ್ದೇಶದಿಂದ ಶ್ರೀಮದಾಚಾರ್ಯರು ನಿರ್ಮಿಸಿರುವ ಈ ಗ್ರಂಥವನ್ನು ಅರ್ಥಜ್ಞಾನಪೂರ್ವಕವಾಗಿ ಆಗಲೀ, ಮಂತ್ರತುಲ್ಯವಾದ ಪ್ರಯುಕ್ತ ವೇದದ ಹಾಗೆ ನಿತ್ಯ ಪಠನವನ್ನಾದರೂ ಇಟ್ಟುಕೊಂಡು ಹರಿವಾಯುಗಳ ಪ್ರೀತಿಯನ್ನು ಸಂಪಾದಿಸಿ, ಸಕಲಾಭೀಷ್ಟಗಳನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

**ಅಗ್ರಹಾರ ನಾರಾಯಣ ತಂತ್ರಿ**

। ।ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ॥

॥ ಹರಿಃ ಓಂ ॥

**ಲಕ್ಷ್ಮೀನಾರಾಯಣಂ ಪೂರ್ಣಜ್ಞಾನಾದಿಸದ್ಗುಣಂ ।**
**ಮಂತ್ರವರ್ಣಾಭಿಧೇಯಂ ಚ ವಂದೇ ಬ್ರಹ್ಮಾದಿವಂದಿತಂ ॥**
**ಮೂಲ ॥ ಓಂ ॥ ಜಯತ್ಯಬ್ಜ ಭವೇಶೇಂದ್ರವಂದಿತಃ ಕಮಲಾಪತಿಃ ।**
**ಅನಂತವಿಭವಾನಂದಶಕ್ತಿಜ್ಞಾನಾದಿಸದ್ಗುಣಃ ॥ ೧ ॥**

**ಅರ್ಥ ॥** ಬ್ರಹ್ಮ, ರುದ್ರ, ಇಂದ್ರಾದಿದೇವತೆಗಳಿಂದ ಸ್ತೋತ್ರ, ನಮಸ್ಕಾರಾದಿಗಳನ್ನು ಮಾಡಿಸಿಕೊಂಡವನೂ, ಪೂರ್ಣಗಳಾದ ಐಶ್ವರ್ಯ, ಆನಂದ, ಸಾಮರ್ಥ್ಯ, ಜ್ಞಾನ ಮೊದಲಾದ ನಿರ್ದೋಷ ಗುಣಗಳುಳ್ಳವನೂ ಆದ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೇ ಸರ್ವೋತ್ಕೃಷ್ಟನಾಗಿರುತ್ತಾನೆ. ॥1॥

**ವಿ ॥ ಅ ॥** ಶ್ರೀಭಗವಂತನ ಪ್ರೀತಿಗಾಗಿ ಸರ್ವರೂ ಶ್ರೀಪರಮಾತ್ಮನನ್ನು ಪ್ರತಿಪಾದಿಸುವ ಮಂತ್ರ ಜಪ ಪೂಜಾದಿಗಳನ್ನು ತಿಳಿದು ಮಾಡಬೇಕಾಗಿರುವುದರಿಂದ ಕಲಿಯುಗದಲ್ಲಿ ಅಲ್ಪಾಯುಷ್ಯ, ಅಲ್ಪಪ್ರಜ್ಞೆ ಮೊದಲಾದವುಗಳುಳ್ಳ ಜನರಿಗೆ ಅತಿವಿಸ್ತೃತವಾದ ವಿಷ್ಣುವಿನಿಂದ ಹೇಳಲ್ಪಟ್ಟ ತಂತ್ರಸಾರದಲ್ಲಿ ಹೇಳಿದ ಪ್ರಕಾರ ತಿಳಿದು ಮಾಡಲಿಕ್ಕೆ ಸರ್ವಥಾ ಅಶಕ್ಯವಾಗಿರುವುದರಿಂದ ಅಂತಹ ಜನರಿಗೆ ಅನುಗ್ರಹಿಸ ಲೋಸುಗ ಶ್ರೀಮದಾಚಾರ್ಯರು ಆ ತಂತ್ರಸಾರದ ಸಾರಸಂಗ್ರಹರೂಪವಾದ ಈ ಗ್ರಂಥವನ್ನು ರಚಿಸಿ ಭಕ್ತರನ್ನು ಅನುಗ್ರಹಿಸಿರುತ್ತಾರೆ.

''ಅತ್ಯಂತರಂಗಂ ಯತ್ತಸ್ಮಾನ್ನ ಹರೇಃ ಪೃಥಗೀರಿತಾ । ಶ್ರೀಃ ಸ್ವರೂಪ ವಿಭೇದೇಽಪಿ'' ಎಂಬ ಬೃಹದ್ಭಾಷ್ಯ ಪ್ರಮಾಣಾನುಸಾರ ಶ್ರೀರಮಾದೇವಿಯು ಶ್ರೀಹರಿಗೆ ಅತ್ಯಂತ ಪ್ರಿಯಳು ಎಂದು ಸೂಚಿಸುವುದಕ್ಕಾಗಿ ಗ್ರಂಥಾರಂಭದಲ್ಲಿ ವಂದ್ಯಳಾದಾಗ್ಯೂ ಪೃಥಕ್ ನಮಸ್ಕಾರ ಮಾಡಲಿಲ್ಲ. (2) ಕಮಲಾಪತಿ = ಕಾಮತಃ ಲಾತಿ = ನನ್ನ ಇಚ್ಛೆಯಿಂದ ಬ್ರಹ್ಮ ರುದ್ರಾದಿ ದೇವತೆಗಳಿಗೆ ಆಯಾಯ ಪದವಿಗಳನ್ನು ಕೊಡುವುದರಿಂದ ಕಮಲಾ ಎಂದು ಶ್ರುತಿ ಪ್ರಸಿದ್ಧಳಾದ ಲಕ್ಷ್ಮೀದೇವಿಗೆ ಪತಿಯು.

(3) 'ಸರ್ವೇ ಸರ್ವಗುಣಾತ್ಮಾನಃ ಸರ್ವಕರ್ತಾರ ಏವಚ'॥ ಎಂಬ ಪ್ರಮಾಣದಿಂದ ಭಗವದ್ಗುಣಗಳು ಪ್ರಪ್ರತ್ಯೇಕವಾಗಿಯೂ ಅಪರಿಮಿತ ಗುಣಕ್ರಿಯಾದಿಸ್ವರೂಪಗಳು.

ನ ವಿದ್ಯತೇ ಅಂತಃ ಯೇಷಾಂ ತೇ = ನಾಶವಿಲ್ಲದವುಗಳು

ವಿವಿಧಂ ಭವನಂ ಯೇಷಾಂ ತೇ = ಬಹು ಪ್ರಕಾರವುಳ್ಳವುಗಳು.

**ಮೂಲ ॥ ವಿಧಿಂ ವಿಧಾಯ ಸರ್ಗಾದೌ ತೇನ ಪೃಷ್ಟೋಽಬ್ಜಲೋಚನಃ ।**
**ಆಹ ದೇವೋ ರಮೋತ್ಸಂಗವಿಲಸತ್ಪಾದಪಲ್ಲವಃ ॥ ೨ ॥**

**ಅರ್ಥ ॥** ಲಕ್ಷ್ಮೀದೇವಿಯ ತೊಡೆಯಲ್ಲಿ ಪ್ರಕಾಶಮಾನಗಳಾದ ಚಿಗುರು ಎಲೆಗಳಂತೆ ಇರುವ ಪಾದಗಳುಳ್ಳವನು (ಅಂದರೆ ಲಕ್ಷ್ಮೀದೇವಿಯು ತನ್ನ ಕೈಗಳಿಂದ ಚರಣಗಳನ್ನು ಒತ್ತುತ್ತಾ ಇರುತ್ತಾಳೆ.) ತಾವರೆಯಂತೆ ಕಣ್ಣುಗಳುಳ್ಳ, ಶ್ರೀಪರಮಾತ್ಮನು ಸೃಷ್ಟಿಕಾಲದಲ್ಲಿ ಸರ್ವರಿಗಿಂತ ಮೊದಲು ಚತುರ್ಮುಖನನ್ನು ಸೃಷ್ಟಿಸಿ ಅವನಿಂದ ಪ್ರಶ್ನಿಸಿಕೊಂಡವನಾಗಿ ಅವನಿಗೆ ಉಪದೇಶಿಸಿದನು. ॥ 2 ॥

1) ಆಪ್ತಿಮೂಲತ್ವವನ್ನು ಈ ಶ್ಲೋಕದಿಂದ ತೋರಿಸಿದನು. 'ವಿಧಿಂ ವಿಧಾಯ' ಎನ್ನುವುದರಿಂದ ಚತುರ್ಮುಖನು ಪುತ್ರನೆಂದು ಹೇಳಿದುದರಿಂದ ಶ್ರೋತ್ರಾನುಕೂಲ್ಯವು. ಬ್ರಹ್ಮನು ಶ್ರೀಹರಿಗೆ ಪ್ರೀತಿವಿಷಯನು ಅನಾದಿತಃ ಸರ್ವದೋಷರಹಿತನಾದುದರಿಂದ ತತ್ವಜ್ಞಾನಯೋಗ್ಯನೂ ಆಗಿರುವ ಕಾರಣ ಹೇಳುವವರಿಗೆ ಪ್ರೇಮಾಸ್ಪದತ್ವವೂ ತತ್ವಜ್ಞಾನಯೋಗ್ಯತ್ವವೂ ಇದ್ದಕಾರಣ ವಕ್ತ್ರಾನುಕೂಲ್ಯವಿದೆ. ಸರ್ಗಾದೌ ಎಂದು ಹೇಳಿದುದರಿಂದ ಪ್ರಸಂಗಾನುಕೂಲ್ಯವಿದೆ.

2) ಸರ್ವೋತ್ತಮನೂ ಸಕಲಗುಣಪರಿಪೂರ್ಣನೂ ಯಾರು? ಆ ವಿಷಯದಲ್ಲಿ ಏನು ಪ್ರಮಾಣವು? ಜಪ್ಯಮಂತ್ರಗಳು ಯಾವುವು? ಮಂತ್ರಪ್ರತಿಪಾದ್ಯನು ಯಾರು? ಹೇಗೆ ಧ್ಯಾನಿಸಬೇಕು? ಪೂಜ್ಯನು ಯಾರು? ಹೇಗೆ ಪೂಜಿಸಬೇಕು? ಅಜ್ಞರಿಗೆ ಸಾಕ್ಷಾತ್ ಭಗವತ್ಪೂಜೆಯನ್ನು ಮಾಡಲು ಅಶಕ್ಯವಾದುದರಿಂದ ಪ್ರತಿಮೆಯಲ್ಲಿಯೇ ಪೂಜೆ ಮಾಡಬೇಕು. ಆದುದರಿಂದ ಆದಕ್ಕಾಗಿ ಪ್ರತಿಮೆಯು ಎಂತಹುದು? ಹೇಗೆ ನಿರ್ಮಿಸಬೇಕು? ಏನು ಲಕ್ಷಣವು? ''ಅಪ್ರತಿಷ್ಠಿತಬಿಂಬಸ್ಯ ಪೂಜನಂ ಸಿದ್ಧಿಹಾನಿಕೃತ್'' ಎಂದು ಹೇಳಿದುದರಿಂದ ಅವಶ್ಯವಾಗಿ ಪ್ರತಿಷ್ಠಾ ಮಾಡಬೇಕು. ಪ್ರತಿಷ್ಠೆಯನ್ನು ಹೇಗೆ ಮಾಡಬೇಕು? ಇತ್ಯಾದಿ ನಾನಾ ಪ್ರಕಾರಗಳನ್ನು ತಾವು ತಿಳಿದವರಾದಾಗ್ಯೂ ವಿಶೇಷ ಜ್ಞಾನಕ್ಕಾಗಿಯೂ ಲೋಕದಲ್ಲಿ ಪ್ರಸಿದ್ಧಿಗೊಳಿಸುತ್ತಾ ಸಮಸ್ತ ಜನರಿಗೆ ಅನುಗ್ರಹ ಮಾಡಬೇಕೆಂಬ ಇಚ್ಛೆಯಿಂದಲೂ ತೇನ ಪೃಷ್ಟಃ ಬ್ರಹ್ಮನಿಂದ ಪ್ರಶ್ನಿಸಲ್ಪಟ್ಟವನು ಎಂದದ್ದು.

3) ನಾತಿಪ್ರಸನ್ನಹೃದಯೋ ಯದ್ದದ್ಯಾದ್ಗುರರಪ್ಯಸೌ ॥ ನ ತತ್ತಸ್ಯಂ ಭವೇತ್ ಎಂದ ಪ್ರಮಾಣದಿಂದ ಉಪದೇಶಕಾಲದಲ್ಲಿ ಉಪದೇಶಕನು ಪ್ರಸನ್ನನಾಗದಿದ್ದರೆ ಉಪದಿಷ್ಟವಾದುದು ಸಫಲವಾಗುವುದಿಲ್ಲ ಎಂಬ ಅಭಿಪ್ರಾಯದಿಂದ ಪ್ರಸನ್ನನಾಗಿದ್ದಾನೆಂದು ತೋರಿಸುವುದಕ್ಕಾಗಿ ''ಅಬ್ಜಲೋಚನಃ'' ಎಂದೂ ಮತ್ತು ''ರಮೋತ್ಸಂಗವಿಲಸತ್ಪಾದಪಲ್ಲವ'': ಎಂದೂ ಲೋಕನ್ಯಾಯ ದಿಂದ ಹೇಳಿದ್ದಾರೆ. ವಸ್ತುತಸ್ತು ಶ್ರೀಹರಿಗೆ ಅಂಕದಲ್ಲಿ ರಮಾದೇವಿಯ ಸನ್ನಿಧಾನ ಪ್ರಯುಕ್ತ ಸುಖಾತಿಶಯವಿಲ್ಲ. ದೇವಃ= ಇತರಾಪೇಕ್ಷೆಯಿಲ್ಲದೆ ಸ್ವರೂಪಭೂತ ನಿತ್ಯಾಭಿವ್ಯಕ್ತ ಜ್ಞಾನಾದಿವಿಶಿಷ್ಟನು.

**ಮೂಲ ॥ ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ ।**
**ಅಕಾರಾದ್ಯತಿಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ ॥ ೩ ॥**

**ಅರ್ಥ ॥** ನಾನು ಒಬ್ಬನೇ ಸರ್ವಗುಣ ಪರಿಪೂರ್ಣನು (ಬೇರೆ ಯಾರೂ ಇಲ್ಲ) ಪ್ರಣವವು ನನ್ನನ್ನು ಪ್ರತಿಪಾದಿಸುವುದು. ಆ ಈ ಪ್ರಣವವು ಅಕಾರ, ಉಕಾರ, ಮಕಾರ, ನಾದ, ಬಿಂದು, ಘೋಷ, ಶಾಂತ, ಅತಿಶಾಂತ ಎಂಬ 8 ಅಕ್ಷರಗಳುಳ್ಳವೆಂದು ತಿಳಿದಿದೆ. ॥ 3 ॥

1) ''ನಾದಾದ್ವಿನಿರ್ಗತೋಃ ಬಿಂದುಃ ಬಿಂದೋರ್ಜಾತಾ ಕಲಾ ತತಃ'' ಎಂಬ ಪ್ರಮಾಣದಿಂದ ಘೋಷಸ್ಥಾನ ದಲ್ಲಿ ಕಲಾ ಎಂದು ಕ್ವಚಿತ್ ವ್ಯವಹಾರವು.

2) ಪ್ರಣವಕ್ಕೆ 8 ಅಕ್ಷರಗಳೆಂದು ಹೇಳಿದ್ದು ಕೂಡುವುದಿಲ್ಲ, ಪ್ರಣವದ ಅಂಶಗಳಾದ ನಾದಾದಿಗಳು ವರ್ಣಧರ್ಮಗಳು, ವರ್ಣಗಳಲ್ಲ, ನಾದಾದಿಗಳೂ ವರ್ಣಗಳೆಂದು ಹೇಳುವುದಾದರೆ 50 ಅಕ್ಷರಗಳಿಗಿಂತ ಹೆಚ್ಚು ಅಕ್ಷರಗಳಾಗಬೇಕಾಗುವವು. ಆದಕಾರಣ ನಾದಾದಿಗಳು ವರ್ಣಗಳಲ್ಲ, ವರ್ಣಧರ್ಮಗಳೇ ಎಂದರೆ– 'ಸೋಽಯಮಷ್ಟಾಕ್ಷರೋ ಮತಃ' 'ವರ್ಣಾಸ್ತಾರಾರ್ಣಭೇದಿತಾಃ'

'ತಾರೋಽಷ್ಟಾಕ್ಷರಽಭೇದವಾನ್' ಇತ್ಯಾದಿಗಳಲ್ಲಿ ಅಕಾರಾದಿಗಳಲ್ಲಿದ್ದಂತೆಯೇ ನಾದಾದಿಗಳಲ್ಲಿಯೂ ಬಹುಸಲ ಅಕ್ಷರಶಬ್ದ ಪ್ರಯೋಗವಿದೆ. ಬೃಹದ್ಭಾಷ್ಯದಲ್ಲಿಯೂ 'ಚತುರ್ಥಪಾದೋ ಗಾಯತ್ರ್ಯಾಃ ಪ್ರಣವಃ ಸಮುದಾಹೃತಃ । ಅಕಾರಾದ್ಯತಿಶಾಂತಾಂತಃ ಪ್ರಣವೋಽಷ್ಟಾಕ್ಷರೋ ಮತಃ'' ಎಂದು ಗಾಯತ್ರಿಗೆ ಎಂಟು ಅಕ್ಷರಗಳುಳ್ಳ ನಾಲ್ಕು ಪಾದಗಳೆಂದು ಹೇಳುವುದಕ್ಕಾಗಿ ಪ್ರಣವಾಂಶಗಳಾದ ನಾದಾದಿಗಳೂ ಅಕ್ಷರಗಳೆಂದಂಗೀಕರಿಸಿ ಪ್ರಣವಕ್ಕೆ 8 ಅಕ್ಷರಗಳೆಂದು ಹೇಳಿದೆ. ನಾದಾದಿಗಳಿಗೆ ಐವತ್ತು (50)ವರ್ಣಗಳಿಗಿಂತ ಆಧಿಕ್ಯ ಬರುವುದೆಂದರೆ ಪ್ರಣವವ್ಯಕ್ತಗಳಾದ ವರ್ಣಗಳು 50 ಎಂಬ ಅಭಿಪ್ರಾಯದಿಂದ 'ಪಂಚಾಶದ್ವರ್ಣವಾಚ್ಯಾಶ್ಚ ' ಇತ್ಯಾದಿಗಳಲ್ಲಿ ಐವತ್ತು ವರ್ಣಗಳೆಂದು ಹೇಳಿದ್ದು. ಇಲ್ಲವಾದರೆ 'ಏಕಪಂಚಾಶದರ್ಣಾನಾಂ' 'ಮಾತೃಕಾ ಏಕಪಂಚಾಶತ್' ಇತ್ಯಾದಿಗಳಲ್ಲಿ ಐವತ್ತು ಅಕ್ಷರಗಳಿಗಿಂತ ಅಧಿಕವಾದ ಕ್ಷಕಾರಕ್ಕೆ ಅಕ್ಷರತ್ವ ಹೇಳಿದ್ದು ಕೂಡದೆ ಹೋಗಬೇಕಾಗುವುದು.

**ಮೂಲ ॥ ಸ ವಿಶ್ವತೈಜಸ ಪ್ರಾಜ್ಞ ತುರೀಯಾತ್ಮಾಂತರಾತ್ಮನಾಂ ।**
**ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ ॥ ೪ ॥**

**ಅರ್ಥ ॥** ಆ ಎಂಟು ವರ್ಣಗಳುಳ್ಳ ಪ್ರಣವವು (ತನ್ನ ಅವಯವಗಳಾದ 8 ವರ್ಣಗಳಿಂದ) ವಿಶ್ವ ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬೀ ನನ್ನ 8 ರೂಪಗಳನ್ನು ಕ್ರಮವಾಗಿ ಪ್ರತಿಪಾದಿಸುತ್ತದೆ. ॥ 4 ॥

3) ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವಚ ! ಪರಂಜ್ಯೋತಿಃ ಪರಂಬ್ರಹ್ಮ ವಾಸುದೇವ ಇತಿ ಕ್ರಮಾತ್ ॥ ಅಕಾರಾದೇಸ್ತಥಾ ಶಾಂತಾತಿಶಾಂತಸ್ಯ ದೇವತಾಃ ॥ ಎಂದು ಪ್ರಣವ ಕಲ್ಪದಲ್ಲಿ ಹೇಳಿದ ಕೃಷ್ಣಾದಿ ದೇವತೆಗಳು, ಅಕಾರಾದಿಗಳಿಗೆ ದೇವತೆಗಳೆಂದು ಇಟ್ಟುಕೊಳ್ಳಬಹುದೆಂಬ ಅಭಿಪ್ರಾಯದಿಂದ 'ಮದ್ರೂಪಾಣಾಂ ಚ' ಎಂಬಲ್ಲಿ ಚ ಶಬ್ದವು. (4) ಅಥವಾ ಸೃಷ್ಟಿಕರ್ತಾ ಬ್ರಹ್ಮನಾಮಾ ಯೋಽಸೃಜಚ್ಚತುರಾನನಂ । ಅಂತರ್ಯಾಮೀ ವಿರಿಂಚಸ್ಯ ಸೋಽಕಾರಾರ್ಥೋ ಜನಾರ್ದನಃ ॥ ಇತ್ಯಾದಿ ಐತರೇಯಭಾಷ್ಯದಲ್ಲಿ ಹೇಳಿದ ತತ್ವಸಾರಪ್ರಮಾಣ ಪ್ರಕಾರ ಅಕಾರಾದಿಗಳ ಅರ್ಥಗಳನ್ನು ತಿಳಿದುಕೊಳ್ಳಬೇಕು.

**ಮೂಲ ॥ ತದ್ರೂಪಭೇದಾಃ ಪಂಚಾಶನ್ಮೂರ್ತಯೋ ಮಮ ಚಾಪರಾಃ ।**
**ಪಂಚಾಶದ್ವರ್ಣವಾಚ್ಯಾಸ್ತಾ ವರ್ಣಾಸ್ತಾರಾರ್ಣಭೇದಿತಾಃ**
**ದ್ವಿರಷ್ಟಪಂಚಕಚತುಃ ಪಂಚೇತ್ಯೇವಾಷ್ಟವರ್ಗಗಾಃ ॥ ೫ ॥**

**ಅರ್ಥ ॥** ಆ ವಿಶ್ವಾದಿ 8 ರೂಪಗಳಿಂದ ಅಭಿವ್ಯಕ್ತವಾದ 50 ನನ್ನ ರೂಪಗಳಿವೆ. ಆ 50 ಭಗವದ್ರೂಪಗಳನ್ನು ಅಕಾರ ಮೊದಲಾದ 50 ಅಕ್ಷರಗಳು ಪ್ರತಿಪಾದಿಸುತ್ತವೆ. ಆ 50 ಅಕ್ಷರಗಳು ಪ್ರಣವದ 8 ಅಕ್ಷರಗಳಿಂದ ಅಭಿವ್ಯಕ್ತಗಳು. (ದ್ವಿರಷ್ಟ=) 16 ಸ್ವರಾಕ್ಷರಗಳು, (ಪಂಚಕ) ಕ ವರ್ಗವೇ ಮೊದಲಾದುದು 5 ವರ್ಗಗಳು. (25 ಅಕ್ಷರಗಳು) (ಚತುಃ=) ಯ ರ ಲ ವ ಎಂದು 4 ವರ್ಣಗಳು. (ಪಂಚ) ಶ ಷ ಸ ಹ ಳ, ಎಂದು 5 ಅಕ್ಷರಗಳು. ಹೀಗೆ 50 ಅಕ್ಷರಗಳು ಪ್ರಣವದ 8 ಅಕ್ಷರಗಳಿಂದ ಅಭಿವ್ಯಕ್ತಗಳು. ಏವಂಚ ವಿಶ್ವಾದಿ 8 ರೂಪಗಳಿಂದ ಅಜಾದಿ 50 ಭಗವದ್ರೂಪಗಳು ಅಭಿವ್ಯಕ್ತ ಗಳಾದುವು. ॥ 5 ॥

ಭಾಗವತದಲ್ಲಿ 'ತತೋಽಭೂತ್ರಿವೃದೋಂಕಾರಃ' ಎಂದು ಹೇಳಿ ''ತತೋಽಕ್ಷರಸಮಾ-ಮ್ನಾಯಮಸೃಜದ್ಭಗವಾನಜಃ। ಅಂತಸ್ಥೋಷ್ಮಸ್ವರಸ್ಪರ್ಶ ಹ್ರಸ್ವದೀರ್ಘಾದಿ ಲಕ್ಷಣಂ ' ಎಂದು ಪ್ರಣವಾಕ್ಷರದಿಂದಲೇ ಎಲ್ಲಾ ವರ್ಣಗಳಿಗೆ ಅಭಿವ್ಯಕ್ತಿಯೆಂದು ಹೇಳಿದೆ.

**ಮೂಲ ॥ ಅಜ ಆನಂದ ಇಂದ್ರೇಶಾವುಗ್ರ ಊರ್ಜ ಋತಂಭರಃ ॥ ೬ ॥**
**ಋಘಲೃಶೌಲ್ಲೃಜಿರೇಕಾತ್ಮೈರ ಓಜಭೃದೌರಸಃ ।**
**ಅಂತೋಽರ್ಧಗರ್ಭಃ ಕಪಿಲಃ ಖಪತಿರ್ಗರುಡಾಸನಃ ॥ ೭ ॥**

**ಘರ್ಮೋ ಙಸಾರಶ್ಚಾರ್ವಂಗಶ್ಛಂದೋಗಮ್ಯೋ ಜನಾರ್ದನಃ**
**ಝೂಟಿತಾರಿರ್ಞಮಷ್ಟಂಕೀ ಠಲಕೋ ಡರಕೋ ಢರೀ ॥ ೮ ॥**

**ಣಾತ್ಮಾ ತಾರಸ್ಥಭೋ ದಂಡೀ ಧನ್ವೀ ನಮ್ಯಃ ಪರಃ ಫಲೀ।**
**ಬಲೀ ಭಗೋ ಮನುರ್ಯಜ್ಞೋ ರಾಮೋ ಲಕ್ಷ್ಮೀಪತಿರ್ವರಃ ॥ ೯ ॥**

**ಶಾಂತಸಂವಿತ್ ಷಡ್ಗುಣಶ್ಚ ಸಾರಾತ್ಮಾ ಹಂಸಳಾಳುಕೌ ।**
**ಪಂಚಾಶನ್ಮೂರ್ತಯಸ್ತ್ವೇತಾಃ ಮಮಾಕಾರಾದಿಲಕ್ಷಕಾಃ ॥ ೧೦ ॥**

ಅ ॥ ಪ್ರಣವದಲ್ಲಿರತಕ್ಕ ಅಕಾರ ಮೊದಲಾದ 8 ವರ್ಣಗಳ ಮಧ್ಯದಲ್ಲಿ **ಅಕಾರದಿಂದ** ಅಕಾರ ಮೊದಲಾದ 16 ಸ್ವರ ವರ್ಣಾತ್ಮಕ 1 ವರ್ಗವು ಅಭಿವ್ಯಕ್ತವಾಯಿತು.

1) ಅಜ:- ನ ಜಾಯತೇ ಎಂಬ ವ್ಯುತ್ಪತ್ತಿಯಿಂದ ಉತ್ಪತ್ತಿಯಿಲ್ಲದವನು. 2) ಆನಂದ:- ಆನಂದ ಸ್ವರೂಪನು. 3) ಇಂದ್ರ:- ಇದಿ ಪರಮೇಶ್ವರ್ಯೇ ಎಂಬ ಧಾತುವಿನಿಂದ ಪರಮೈಶ್ವರ್ಯವುಳ್ಳವನು. 4) ಈಶಃ- 'ಈಕಾರೇಣೋಚ್ಯತೇ ರಮಾ' ಎಂಬ ಪ್ರಮಾಣಾನುಸಾರ ಈಂ ಶಾಸ್ತಿ ಎಂಬ ವ್ಯುತ್ಪತ್ತಿಯಿಂದ ಲಕ್ಷ್ಮೀದೇವಿಗೆ ನಿಯಾಮಕನು. 5) ಉಗ್ರಃ- ಉಂ ರುದ್ರಂ ಗ್ರಸತಿ ಎಂಬ ವ್ಯುತ್ಪತ್ತಿಯಿಂದ ರುದ್ರನನ್ನು ಭಕ್ಷಿಸುವವನು ಅಥವಾ ದೈತ್ಯರಿಗೆ ಕ್ರೂರನಾದ ನರಸಿಂಹ ಸ್ವರೂಪನು. 6) ಊರ್ಜ :- ಊರ್ಜ ಬಲಪ್ರಾಣನಯೋಃ ಎಂಬ ಧಾತುವಿನಿಂದ ಸಾಮರ್ಥ್ಯ ಕ್ರಿಯೆಯುಳ್ಳವನು. 7) ಋತಂ ಭರ :- ಋತಂ ಬಿಭರ್ತಿ ಎಂಬ ವ್ಯುತ್ಪತ್ತಿಯಿಂದ ಸತ್ಯವಾದ ಜಗತ್ತನ್ನು ಧರಿಸಿಕೊಂಡಿರುವನು. 8) ಋಘಃ- ಋಂ ದನುಂ ಘಾರಯತಿ ಎಂಬ ವ್ಯುತ್ಪತ್ತಿಯಿಂದ ಘೃ ಕ್ಷರಣ ದೀಪ್ತ್ಯೋಃ ದೀಪಯತಿ ದನುವಿನ ಮಗನನ್ನು ಸಂಹರಿಸಿ ದನುವಿಗೆ ಅಂತಃಕ್ಲೇಶವನ್ನು ಕೊಟ್ಟವನು. 9) ಲೃಶ:-ಲೃಕಾರೋ ದೇವಮಾತಾ ಸ್ಯಾತ್ ಎಂಬ ಧನಂಜಯ ಕೋಶದಿಂದ ಅದಿತಿ ದೇವಿಗೆ ಸುಖವನ್ನು ಕೊಟ್ಟವನು. 10) ಲೄಜಿ:- ಲೄಕಾರಃ ಪೂರ್ವದೇವಾನಾಂ ಜನನೀ ಸ್ಮರ್ಯತೇ ಬುಧೈಃ ॥ ಎಂಬ ಧನಂಜಯ ಕೋಶದಿಂದ ಮಗನನ್ನು ಸಂಹರಿಸಿದುದರಿಂದ ದಿತಿ ದೇವಿಯನ್ನು ಗೆದ್ದವನು. ಜೇತಾ ಜಶ್ಚ ಸಮಾಖ್ಯಾಃ ಎಂಬ ಕೋಶದಿಂದ ಲೄಜಃ ಎಂದೇ ಆಗಬೇಕಿತ್ತು. ಆದಾಗ್ಯೂ ತೃತೀಯೋಽತಿಶಯೇ ಎಂಬ ಸೂತ್ರದಿಂದ ಅತಿಶಯ ಎಂಬ ಅರ್ಥದಲ್ಲಿ ಇಕಾರ ಎಂದು ಲೄಜಿಃ ಎಂದಾಗುತ್ತದೆ. 11) ಏಕಾತ್ಮಾ:- ಮುಖ್ಯಸ್ವಾಮಿಯು. 12) ಐರಃ- ಐಕಾರಃ ಸ್ಯಾನ್ಮಹೇಶ್ವರಃ ಎಂಬ ಧನಂಜಯ ಕೋಶದಿಂದ ಐಕಾರ ವಾಚ್ಯನಾದ ರುದ್ರನನ್ನು ರಮಿಸುವವನು. (ಸಂತೋಷಗೊಳಿಸುವವನು) 13) ಓಜಭೃತ್ :- ಓಜಃ ಬಿಭರ್ತಿ ಎಂಬ

ವ್ಯುತ್ಪತ್ತಿಯಿಂದ ಸರ್ವಸಾಮರ್ಥ್ಯವನ್ನೂ ಧರಿಸಿರುವವನು. 14) ಔರಸ :- ಔಕಾರ ಉಚ್ಯತೇ ಬ್ರಹ್ಮಾ ಎಂಬ ಧನಂಜಯದಿಂದ ಔಃ = ಬ್ರಹ್ಮನು, ರಸಃ ವೀರ್ಯಂ ಅಪತ್ಯಂ ಯಸ್ಯ ಸಃ ಚತುರ್ಮುಖ ಬ್ರಹ್ಮನು ಮಗನಾಗಿ ಉಳ್ಳವನು. 15) ಅಂತ:- ಅಂತಯತಿ ನಾಶಯತಿ ಎಂಬ ವ್ಯುತ್ಪತ್ತಿಯಿಂದ ಪ್ರಳಯಕಾಲದಲ್ಲಿ ಸರ್ವನಾಶಕನು. 16) ಅರ್ಧಗರ್ಭ:- ಆ, ಚೆನ್ನಾಗಿ, ಋದ್ಧಾಃ, ಅಭಿವೃದ್ಧರಾದ ಬ್ರಹ್ಮಾದಿ ದೇವತೆಗಳು ಗರ್ಭೇ ಯಸ್ಯ ಸಃ ಎಂಬ ವ್ಯುತ್ಪತ್ತಿಯಿಂದ ಗರ್ಭದಲ್ಲಿ ಅಭಿವೃದ್ಧರಾದ ಬ್ರಹ್ಮಾದಿ ದೇವತೆಗಳುಳ್ಳವನು, **ಉಕಾರದಿಂದ** 17) ಕಪಿಲ :- ಕಃ ಸುಖಸ್ವರೂಪನು, ಪಿಃ, ಪಾಲ್ಯತೇ, ಜಗತ್ ಅನೇನ, ಲಃ, ಲೀಯತೇ, ಜಗತ್ ಅನೇನ ಎಂಬ ವ್ಯುತ್ಪತ್ತಿಯಿಂದ ಸುಖಸ್ವರೂಪನು, ಸಮಸ್ತ ಜಗದ್ರಕ್ಷಕನು ಸಂಹಾರಕರ್ತನು. ಕಶ್ಚಾಸೌ ಪಿಶ್ಚಾಸೌ ಲಶ್ಚಾಸೌ ಎಂದು ಕರ್ಮಧಾರಯ ಸಮಾಸವು. 'ಸುಖಾದನಂತಾತ್ಪಾಲನಾಲ್ಲೀಯನಾಚ್ಚ ತಂ ದೇವಂ ಕಪಿಲಮುದಾಹರಂತಿ,' ಎಂದು ಶ್ರುತಿಯು. 18) ಖಪತಿ:- ಸಮಸ್ತ ಇಂದ್ರಿಯಗಳಿಗೆ ಅಧಿಪತಿಯು. 19) ಗರುಡಾಸನ:- ಗರುಡವಾಹನನು. 20) ಘರ್ಮ:- ಶತ್ರುಗಳಿಗೆ ಸಂತಾಪಕರನು. 21) ಙಸಾರ:- ಙಕಾರೋ ವಿಷಯಃ ಸ್ಮೃತಃ ಎಂಬ ಧನಂಜಯ ಕೋಶದಿಂದ ಸಮಸ್ತ ವಿಷಯಗಳಲ್ಲಿ ಶ್ರೇಷ್ಠನು, **ಮಕಾರದಿಂದ** 22) ಚಾರ್ವಂಗ:- ಚಾರೂಣಿ ಅಂಗಾನಿ ಯಸ್ಯ ಸಃ ಎಂಬ ವ್ಯುತ್ಪತ್ತಿಯಿಂದ ಸುಂದರ ಅಂಗಗಳುಳ್ಳವನು. 23) ಛಂದೋಗಮ್ಯ:- ವೇದೈಕವೇದ್ಯನು. 24) ಜನಾರ್ದನ:- ನ ಜಾಯತೇ ಇತಿ ಜನಃ ಉತ್ಪತ್ತಿಯಿಲ್ಲದವನು. (ನಞಗೆ ಪರನಿಪಾತವು) ಅರ್ದಯತಿ ಸಂಸಾರಮಿತಿ ಸಂಸಾರಪರಿಹಾರಕನು. ಜನಶ್ಚಾಸೌ ಅರ್ದನಶ್ಚ ಜನಾರ್ದನಃ. 25) ಝೂಟಿತಾರಿ:- ಝೂಟಿತಾಃ ದ್ರಾವಿತಾಃ ಅರಯೋ ಯೇನ ಸಃ ಶತ್ರುಗಳನ್ನು ದೂರಕ್ಕೆ ಓಡಿಸಿದವನು. 26) ಞಮಃ ಞಕಾರೇ ಗಾಯಕೇ ಪ್ರೋಕ್ತಃ ಎಂಬ ಧನಂಜಯ ಕೋಶದಿಂದ ಞಂ ವೇದಾದಿಗಳಿಂದ ತನ್ನನ್ನು ಗಾನ ಮಾಡುವವನನ್ನು ಮಾನಯತಿ ಮಾನಿಸುವವನು. **ನಾದದಿಂದ** 27) ಟಂಕೀ:- ಪಾಷಾಣಗಳನ್ನು ಭೇದಿಸಲಿಕ್ಕೆ ಕಾರಣವಾದ ಆಯುಧವುಳ್ಳವನು. 28) ಠಲಕ:-ಠೋ ಮಹೇಶಃ ಸಮಾಖ್ಯಾತಃ ಲ ಇಂದ್ರೇ ಲವಣೇ ಚ ಸ್ಯಾತ್ ಎಂಬ ಧನಂಜಯ ಕೋಶದಿಂದ ಠಲಯೋ ಕಂ ಸುಖಂ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ ರುದ್ರ ಇಂದ್ರರಿಗೆ ಸುಖವನ್ನುಂಟು ಮಾಡುವವನು ಠಕಲಃ ಎಂಬ ಪಾಠದಲ್ಲಿ ರುದ್ರ ಬ್ರಹ್ಮರನ್ನು ಭಕ್ತತ್ವೇನ ಸ್ವೀಕರಿಸುವವನು. 29) ಡರಕ:- ಬೃಹದ್ಧ್ವನೌಚ ಡಃಪ್ರೋಕ್ತಃ ತಥಾ ಚಂದ್ರಸ್ಯ ಮಂಡಲೇ। ರಶ್ಚ ರಾಮೇಽನಲೇ ವಜ್ರೇಕಃ ಪ್ರಕಾಶ ಉದೀರಿತಃ॥ ಎಂಬ ಧನಂಜಯ ಕೋಶದಿಂದ ಡರಯೋಃ ಕಃ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ ಚಂದ್ರಮಂಡಲ ಅಗ್ನಿಗಳಿಗೆ ಪ್ರಕಾಶದಾಯಕನು. 30) ಢರೀ:- ನಿರ್ಗುಣೇಢಃ ಪ್ರಕೀರ್ತಿತಃ ಎಂಬ ಧನಂಜಯ ಕೋಶದಿಂದ ಢಂ = ಸತ್ವರಜಸ್ತಮೋಗುಣಗಳು ಇಲ್ಲದಿರುವ, ಮುಕ್ತರ ಸಮುದಾಯವನ್ನು ರಮಯತಿ, ಸಂತೋಷಗೊಳಿಸುವವನು ಅಥವಾ ಢರಃ ಅಸ್ಯಾಸ್ತಿ ಎಂಬ ವ್ಯುತ್ಪತ್ತಿಯಿಂದ ಚತುರ್ಮುಖನು ಪರಿಚಾರಕನಾಗಿವುಳ್ಳವನು. 31) ಣಾತ್ಮಾ:- ಣಶ್ಚ ನಿರ್ವೃತಿ ವಾಚಕಃ ಎಂಬ ವಚನದಿಂದ ಸುಖಸ್ವರೂಪನು. **ಬಿಂದುವಿನಿಂದ** 32) ತಾರ:- ತಾರಯತಿ ಅನಿಷ್ಟನಿಚಯಂ ಭಕ್ತರ ಅನಿಷ್ಟಸಮುದಾಯವನ್ನು ದಾಟಿಸುವವನು ಪರಿಹರಿಸುವವನು. 33) ಥಭ:- ಶಿಲೋಚ್ಚಯೇ ಥಕಾರಃ ಸ್ಯಾತ್ ಎಂಬ ಧನಂಜಯ ಕೋಶದಿಂದ ಥಂ ಬಿಭರ್ತೀತಿ, ಶ್ರೇಷ್ಠ ಗೋವರ್ಧನ ಪರ್ವತವನ್ನು ಧರಿಸಿದವನು. 34) ದಂಡೀ:- ಗೋಸಂಚರಣಾದಿ ಕ್ರೀಡೆಯಲ್ಲಿ ಕೋಲನ್ನು ಹಿಡಿದುಕೊಂಡವನು. 35) ಧನ್ವೀ:- ಧನುರ್ಧಾರಿಯು. 36) ನಮ್ಯ:- ಸಮಸ್ತರಿಂದ

ನಮಸ್ಕರಿಸಲ್ಪಡುವವನು. **ಘೋಷದಿಂದ** 37) ಪರ:- ಪೃಪಾಲನ ಪೂರಣಯೋಃ, ಪಿಪರ್ತೀತಿ ಪರಃ ಸರ್ವಗುಣಪರಿಪೂರ್ಣನು, ಪರಃಸ್ವೋ ಹರಿರುದ್ದಾಮಃ ಎಂದು 4 ನಾಮಗಳು.' ವಿಷ್ಣೋರ್ಗುಹ್ಯಂ ತು ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ' ಎಂಬ ವಚನದಿಂದ ಶ್ರೀವಿಷ್ಣುವೇ ಪರನು. 38) ಫಲೀ:- ಭಕ್ತರಿಗೆ ಇಷ್ಟ ಫಲವನ್ನು ಕೊಡುವವನು. 39) ಬಲೀ:- ಬಲವುಳ್ಳವನು. 40) ಭಗ:- ಸಮಗ್ರ ಐಶ್ವರ್ಯಾದಿ ಸ್ವರೂಪನು. 41) ಮನು:- ಮನು ಅವಬೋಧನೇ, ಜ್ಞಾನಸ್ವರೂಪನು. **ಶಾಂತದಿಂದ** 42) ಯಜ್ಞ:- ಇಜ್ಯತೇ ಇತಿ ಸರ್ವರಿಂದ ಪೂಜಿಸಲ್ಪಡುವವನು ಯಜ ದೇವ ಪೂಜಾ ಇತ್ಯಾದಿ. 43) ರಾಮ:- ರಮತೇ ಇತಿ , ರಃ, ನ ವಿದ್ಯತೇ ಮಾ ಪರಿಚ್ಛೇದೋ ಯಸ್ಯ ರಶ್ಚಾಸೌ ಅದುಶ್ಚ ಕ್ರೀಡಾದಿ ಗುಣವಿಶಿಷ್ಟನು ಪರಿಮಿತಿಯಿಲ್ಲದವನು. ಅಥವಾ ರಮಯತೀತಿ ರಾಮಃ ಆನಂದರೂಪೋ ನಿಷ್ಪರಿಮಾಣ ಏಷಃ ಲೋಕಶ್ಚೈತಸ್ಮಾದ್ರಮತೇ ತೇನ ರಾಮಃ ಎಂದು ಶ್ರುತಿಯು. 44) ಲಕ್ಷ್ಮೀಪತಿ:- ಲಕ್ಷ್ಮೀದೇವಿಗೆ ಸ್ವಾಮಿಯು. 45) ವರ:- ವ್ರೀಯತೇ ಇತಿ ಭಕ್ತರಿಂದ ಅಂಗೀಕರಿಸಲ್ಪಡುವವನು. **ಅತಿಶಾಂತದಿಂದ,** 46) ಶಾಂತಸಂವಿತ್– ಶಾಂತಾ ಸಂವಿತ್‌ಯಸ್ಯ ಸುಖಸ್ವರೂಪವಾದ ಜ್ಞಾನವುಳ್ಳವನು 47) ಷಡ್ಗುಣ:- ಐಶ್ವರ್ಯಾದಿ ಷಡ್ಗುಣಗಳುಳ್ಳವವನು. 48) ಸಾರಾತ್ಮಾ:- ಉತ್ಕೃಷ್ಟವಾದ ದೇಹವುಳ್ಳವನು. 49) ಹಂಸ:- ಹನ ಹಿಂಸಾಗತ್ಯೋಃ ಎಂಬ ಧಾತುವ್ಯಾಖ್ಯಾನದಿಂದ, ಹಂತಿ ಜಾನಾತಿ ಸರ್ವಂ ಹಂ, ಸರ್ವಜ್ಞನು, ಸರ್ವಸಾರತ್ವಾತ್ ಸಃ ಸರ್ವಶ್ರೇಷ್ಠನು. (ಸರ್ವೋತ್ತಮನು.) 50) ಳಾಳುಕ : ''ಳಕಾರ ಶ್ಚಾಮೃತೇ ಸ್ಮೃತಃ'' ಇತಿ ಧನಂಜಯ ಕೋಶದಿಂದ ಳೌ ಮುಕ್ತಿಯಲ್ಲಿ ಅಳು ಬ್ರಹ್ಮೇಂದ್ರರಿಗೆ ಕಃ- ಸುಖವನ್ನು ಕೊಟ್ಟವನು. 'ಅಕಾರಸ್ತು ಪಿತಾಮಹೇ' ಅ =ಚತುರ್ಮುಖ ಬ್ರಹ್ಮನು. 'ಇಂದ್ರೇ ವಿರೋಚನೇ ಚೈವ ಉಃ. ದೇವೇಂದ್ರನು, ಕಂ ಸುಖೇ ಚ ಪ್ರಕೀರ್ತಿತಃ' ತಥಾಚ ಳಾಳು- ಮುಕ್ತರಾದ ಬ್ರಹ್ಮೇಂದ್ರರಿಗೆ, ಕಂ, ಸುಖವು ಯಸ್ಮಾತ್ ಮುಕ್ತರಾದ ಬ್ರಹ್ಮೇಂದ್ರರಿಗೆ ಸುಖವನ್ನು ಕೊಡುವವನು.

ಹೀಗೆ ನನ್ನ ಐವತ್ತು ಮೂರ್ತಿಗಳು ಅಕಾರ ಮೊದಲಾದ ಪ್ರಣವಭೇದಗಳು ನನ್ನ ಲಕ್ಷಣಗಳನ್ನು ಪ್ರತಿಪಾದಿಸುವವುಗಳು.

**ಮೂಲ ॥ ನಾರಾಯಣಾಷ್ಟಾಕ್ಷರಶ್ಚ ತಾರಾಷ್ಟಾಕ್ಷರಭೇದವಾನ್ ।**
**ಆದ್ಯೈಸ್ತಾರಚತುರ್ವರ್ಣೈರ್ಭಿನ್ನಾ ವ್ಯಾಹೃತಯಃ ಕ್ರಮಾತ್ ॥ ೧೧ ॥**

**ಅರ್ಥ ॥** 'ಓಂ ನಮೋ ನಾರಾಯಣಾಯ' ಎಂಬ 8 ಅಕ್ಷರಗಳುಳ್ಳ ಮಂತ್ರವು ಪ್ರಣವಮಂತ್ರದ 8 ಅಕ್ಷರಗಳಿಂದಲೇ ಅಭಿವ್ಯಕ್ತವು. (ಅಂದರೆ ನಾರಾಯಣಾಷ್ಟಾಕ್ಷರದ 8 ಅಕ್ಷರಗಳು ಪ್ರಣವದ 8 ಅಕ್ಷರಗಳ ಅರ್ಥವನ್ನು ಕ್ರಮದಿಂದ ಹೇಳುತ್ತವೆ.) ಅಕಾರ ಉಕಾರ ಮಕಾರ ನಾದಗಳೆಂಬ ಪ್ರಣವದ ಪ್ರಥಮ 4 ವರ್ಣಗಳಿಂದ ಕ್ರಮವಾಗಿ ಭೂಃ, ಭುವಃ, ಸ್ವಃ, ಭೂರ್ಭುವಃಸ್ವಃ ಎಂಬೀ 4 ವ್ಯಾಹೃತಿಗಳು ಅಭಿವ್ಯಕ್ತಗಳಾಗಿವೆ. ॥ 11 ॥

**ಮೂಲ ॥ ಅನಿರುದ್ಧಾದಿಕಾಸ್ತಾಸಾಂ ದೇವತಾವ್ಯುತ್ಕ್ರಮೇಣ ವಾ ।**
**ತಾಶ್ಚತುರ್ಮೂರ್ತಯಸ್ತ್ವೇವ ದ್ವಾದಶಾರ್ಣಪದೋದಿತಾಃ ॥ ೧೨ ॥**

**ಅರ್ಥ ॥** ಆ ಭೂರಾದಿ 4 ವ್ಯಾಹೃತಿಗಳಿಂದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ

ಎಂಬ 4 ಭಗವದ್ರೂಪಗಳು ಈ ಕ್ರಮದಿಂದ ಅಥವಾ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂದು ವ್ಯುತ್ಕ್ರಮದಿಂದ ಪ್ರತಿಪಾದ್ಯಗಳು. ಅನಿರುದ್ಧ ಮೊದಲಾದ ಆ 4 ಭಗವದ್ರೂಪಗಳೇ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರದ ಓಂಕಾರಾದಿ 4 ಪದಗಳಿಂದ (ಅಂದರೆ ಓಂಕಾರದಿಂದ ವಾಸುದೇವ, ನಮಃ ಪದದಿಂದ ಸಂಕರ್ಷಣ, ಭಗವತೇ ಎಂಬ ಪದದಿಂದ ಪ್ರದ್ಯುಮ್ನ, ವಾಸುದೇವಾಯ ಎಂಬ ಪದದಿಂದ ಅನಿರುದ್ಧ ಎಂದು) ವಾಸುದೇವಾದಿ ಕ್ರಮದಿಂದಲೇ ಪ್ರತಿಪಾದಿಸಲ್ಪಡುತ್ತದೆ.॥ 12 ॥

**ಮೂಲ ॥ ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿಭ್ಯಸ್ತಥೈವ ಚ ।**
**ವಿಭೇದೋ ದ್ವಾದಶಾರ್ಣಾನಾಂ ಕೇಶವಾದ್ಯಾಶ್ಚ ದೇವತಾಃ ॥ ೧೩ ॥**

**ಅರ್ಥ ॥** ನಾರಾಯಣಾಷ್ಟಾಕ್ಷರ ಮಂತ್ರದಲ್ಲಿರತಕ್ಕ 8 ಅಕ್ಷರಗಳಿಂದಲೂ, ಭೂರಾದಿ 4 ವ್ಯಾಹೃತಿಗಳಿಂದಲೂ, ಹೀಗೆ 12 ಅಕ್ಷರಗಳಿಂದ ವಾಸುದೇವ ದ್ವಾದಶಾಕ್ಷರ ಮಂತ್ರದಲ್ಲಿರತಕ್ಕ 12 ಅಕ್ಷರಗಳು ಅಭಿವ್ಯಕ್ತಗಳಾದುವು. ಆ 12 ಅಕ್ಷರಗಳು ಕ್ರಮದಿಂದ ಕೇಶವ ಮೊದಲಾದ 12 ಭಗವದ್ರೂಪಗಳನ್ನು ಪ್ರತಿಪಾದಿಸುತ್ತವೆ. ॥ 13 ॥

**ಮೂಲ ॥ ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ತುನಃ ।**
**ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್ ॥ ೧೪ ॥**

**ಅರ್ಥ ॥** ನಾರಾಯಣಾಷ್ಟಾಕ್ಷರ ಮಂತ್ರದಲ್ಲಿರತಕ್ಕ 8 ಅಕ್ಷರಗಳಿಂದಲೂ, ಮೂರಾವರ್ತಿ ಉಚ್ಚರಿಸಿದ ವ್ಯಾಹೃತಿಗಳಿಂದಲೂ, ತಿರುಗಿ ಒಂದಾವರ್ತಿ ಉಚ್ಚರಿಸಿದ ವ್ಯಾಹೃತಿಯಿಂದಲೂ (ಅಂದರೆ 16 ವ್ಯಾಹೃತಿಗಳಿಂದಲೂ) ಹೀಗೆ 24 ಅಕ್ಷರಗಳಿಂದ ವೇದಗಳನ್ನಧ್ಯಯನ ಮಾಡುವವರಿಗೆ ಬ್ರಾಹ್ಮಣ್ಯ ವನ್ನು ಸಂಪಾದಿಸಿ ಕೊಟ್ಟು ವೇದಗಳನ್ನು ಪೋಷಿಸುವುದರಿಂದ ವೇದಮಾತೃ ಎನಿಸಿಕೊಂಡ 24 ಅಕ್ಷರಗಳುಳ್ಳ ಗಾಯತ್ರೀ ಎಂಬ ಮಂತ್ರವು ಅಭಿವ್ಯಕ್ತವಾಯಿತು. ॥ 14 ॥

**ಮೂಲ ॥ ಚತುರ್ವಿಂಶನ್ಮೂರ್ತಯೋಽಸ್ಯಾಃ ಕಥಿತಾ ವರ್ಣದೇವತಾಃ।**
**ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ ॥ ೧೫ ॥**

**ಅರ್ಥ ॥** ಕೇಶವಾದಿ 12, ಸಂಕರ್ಷಣಾದಿ 12, ಹೀಗೆ 24 ಭಗವನ್ಮೂರ್ತಿಗಳು ಗಾಯತ್ರಿಯ 24 ಅಕ್ಷರಗಳಿಗೆ ಪ್ರತಿಪಾದ್ಯದೇವತೆಗಳು ಕೇವಲ ವಿಷ್ಣುಪ್ರತಿಪಾದಕವಾದ 3 ವರ್ಗಗಳುಳ್ಳ ಪುರುಷಸೂಕ್ತವು ಗಾಯತ್ರಿಯಿಂದ ಅಭಿವ್ಯಕ್ತವಾದುದು. (ಅಂದರೆ ಪುರುಷಸೂಕ್ತವು 3 ವರ್ಗಗಳಿಂದ ಗಾಯತ್ರಿಯ 3 ಪಾದಗಳ ಅರ್ಥಗಳನ್ನು ಹೇಳುತ್ತದೆ.) ವೇದಗಳು ಪುರುಷಸೂಕ್ತದಿಂದ ಅಭಿವ್ಯಕ್ತಗಳು. (ಅಂದರೆ ಪುರುಷಸೂಕ್ತಕ್ಕೆ ವ್ಯಾಖ್ಯಾನ ರೂಪಗಳು.) ॥ 15 ॥

**ಮೂಲ ॥ ವೈದಿಕಾಃ ಸರ್ವಶಬ್ದಾಶ್ಚ ತಸ್ಮಾತ್ಸರ್ವಾಭಿದೋಽಸ್ಮ್ಯಹಂ ।**
**ಪಂಚಾಂಶದ್ವರ್ಣಭಿನ್ನಾಶ್ಚ ಸರ್ವಶಬ್ದಾ ಅತೋಽಪಿ ಚ ॥ ೧೬ ॥**

**ಅರ್ಥ ॥** ಪುರಾಣ ಇತಿಹಾಸಾದಿ ರೂಪಗಳಾದ ಸಂಸ್ಕೃತಶಬ್ದಗಳೆಲ್ಲವೂ ವೇದಗಳಿಂದಲೇ ಅಭಿವ್ಯಕ್ತಗಳು, (ವೇದಗಳಿಗೆ ವ್ಯಾಖ್ಯಾನ ರೂಪಗಳು.) ವೈದಿಕ ಲೌಕಿಕ ಎಲ್ಲಾ ಶಬ್ದಗಳೂ ಪ್ರಣವ

ವ್ಯಾಖ್ಯಾನುಭೂತಗಳಾದ 50 ಅಕ್ಷರಗಳಿಂದಲೇ ಅಭಿವ್ಯಕ್ತಗಳು. ಧ್ವನ್ಯಾತ್ಮಕ ಶಬ್ದಗಳೂ ಭಗವದ್ವಾಚಕಗಳು. ಆದಕಾರಣದಿಂದಲೂ ನಾನೇ ಸರ್ವಶಬ್ದವಾಚ್ಯನು. ॥ 16 ॥

**ಅವ ॥** ''ಯೋ ಹ ವಾ ಅವಿದಿತಾರ್ಷಚ್ಛಂದಃ' ಇತ್ಯಾದಿ ಶ್ರುತಿಯಿಂದ ಋಷಿ ಛಂದಸ್ಸು ದೇವತೆಗಳ ಜ್ಞಾನಾವಶ್ಯಕವಾದ ಕಾರಣ ಅವುಗಳನ್ನು ಆಚಾರ್ಯರು ನಿರೂಪಿಸುತ್ತಾರೆ:-

**ಮೂಲ ॥ ಋಷಿಶ್ಚ ದೇವತೈಕೋಽಹಂ ತಾರಾದೀನಾಂ ವಿಶೇಷತಃ ।**
**ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮತಾ ॥ ೧೭ ॥**

**ಅರ್ಥ ॥** ಪ್ರಣವ ಮೊದಲಾದ ಸಮಸ್ತ ಮಂತ್ರಗಳಿಗೂ ನಾನೇ ಮುಖ್ಯವಾಗಿ ದ್ರಷ್ಟೃ ಮತ್ತು ಪ್ರತಿಪಾದ್ಯ ದೇವತೆಯು. ನನ್ನನ್ನಾಶ್ರಯಿಸಿರುವ ಲಕ್ಷ್ಮಿಯಿಂದ ಅಭಿಮನ್ಯಮಾನವಾದ ದೈವೀಗಾಯತ್ರಿಯು ಪ್ರಣವ ಅಷ್ಟಾಕ್ಷರಗಳಿಗೆ ಛಂದಸ್ಸು (ಸಮಸ್ತ ಮಂತ್ರಗಳಿಗೂ ಮುಖ್ಯತಃ ಶ್ರೀಹರಿಯೇ ದ್ರಷ್ಟೃ, ಪ್ರತಿಪಾದ್ಯ ದೇವತೆ. ಲಕ್ಷ್ಮೀಸೂಕ್ತ, ವಾಯುಸೂಕ್ತ, ಇತ್ಯಾದಿಗಳಲ್ಲಿಯೂ ಲಕ್ಷ್ಮ್ಯಾದಿಗಳು ಅಮುಖ್ಯತಃ ಪ್ರತಿಪಾದ್ಯರು. ಶ್ರೀಹರಿಯೊಬ್ಬನೇ ಮುಖ್ಯಪ್ರತಿಪಾದ್ಯನು.) ॥ 17 ॥

**ಮೂಲ ॥ ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ ।**
**ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥ ೧೮ ॥**

**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।**
**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥ ೧೯ ॥**
**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಶ್ಶೇಷಶಕ್ತಿಮಾನ್ ।**
**ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರಶಂಖವರಾಭಯೈಃ ॥ ೨೦ ॥**

**ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ।**
**ತಾದೃಗ್ರೂಪಾಶ್ಚ ಪಂಚಾಶಜ್ಜ್ಞಾನಮುದ್ರಾಭಯೋದ್ಯತಾಃ ॥ ೨೧ ॥**

**ಅರ್ಥ ॥** ಉದಯಿಸುವ ಸೂರ್ಯನಂತೆ ಪ್ರಕಾಶಿಸುವವನೂ, ಜ್ಞಾನಾನಂದಾತ್ಮಕ ದೇಹವುಳ್ಳವನೂ, ಬಲ ಕೈ ಮೊದಲಾದ 4 ಕೈಗಳಲ್ಲಿ ಕ್ರಮವಾಗಿ ಚಕ್ರ, ಶಂಖ, ಗದಾ, ಪದ್ಮಗಳನ್ನು ಧರಿಸಿರುವವನೂ, (ಎಡಬಲ ಪಾರ್ಶ್ವಗಳಲ್ಲಿ) ಶ್ರೀದೇವಿ ಭೂದೇವಿಯರಿಂದ ಆಲಿಂಗಿತನೂ, ವಿಶ್ವ ತೈಜಸ ಮೊದಲಾದ 8 ಮೂರ್ತಿಗಳ ನಡುವೆ ಇರುವವನೂ ಅಥವಾ ಐದು ಆವರಣಭೂತಗಳಾದ ತನ್ನ ರೂಪಗಳ ನಡುವೆ ಇರುವವನೂ. 6ನೇ ಆವರಣಭೂತರಾದ ಬ್ರಹ್ಮ, ವಾಯು, ರುದ್ರ, ಶೇಷ, ಗರುಡರಿಂದಲೂ, 7ನೇ ಆವರಣಭೂತರಾದ ಇಂದ್ರ ಮೊದಲಾದ 10 ಮಂದಿ ಲೋಕಪಾಲಕರಿಂದಲೂ, ಪರಮಭಕ್ತಿಯಿಂದ ಸರ್ವೋತ್ತಮನೆಂದು ಸೇವಿಸಲ್ಪಡುವವನೂ, ನಿತ್ಯವಾದ ಪರಿಪೂರ್ಣ ಶಕ್ತಿಯುಳ್ಳವನೂ, ಸರ್ವೇಶ್ವರನೂ ಆದ ನನ್ನನ್ನು ಸರ್ವದಾ ಧ್ಯಾನಿಸಬೇಕು. (ಎಂದು ಚತುರ್ಮುಖನನ್ನು ಕುರಿತು ಶ್ರೀನಾರಾಯಣನ ವಾಕ್ಯವು) ದೀಪದಂತೆ ಪ್ರಕಾಶವುಳ್ಳವುಗಳೂ, ಸಮಸ್ತ ಆಭರಣಗಳಿಂದ ಅಲಂಕೃತಗಳೂ, ಚಕ್ರ, ಶಂಖ, ವರ, ಅಭಯ ಮುದ್ರೆಗಳನ್ನು ಕೈಗಳಿಂದ

ಶ್ರೀಕೃಷ್ಣನು ಭೀಷ್ಮಾಚಾರ್ಯರಲ್ಲಿ ಸನ್ನಿಹಿತನಾಗಿ ಅವರ ಮೂಲಕ ಮುಕ್ತಿಯನ್ನು ಹೊಂದಿಸಲಿಕ್ಕೆ ಮುಖ್ಯ ಕಾರಣವಾದ ಉತ್ತಮ ಜ್ಞಾನವನ್ನುಪದೇಶಿಸಿದನು. ಮತ್ತು ಋಗಾದಿ ಪ್ರಸಿದ್ಧ ನಾಲ್ಕು ವೇದಗಳಲ್ಲಿ ಹೇಳದಿರುವ ಕೆಲವು ಭಗವದ್ಗುಣಗಳನ್ನು ಪ್ರತಿಪಾದಿಸುವುದೂ, ಪಾಂಡವರ ಚರಿತ್ರೆ ಪ್ರತಿಪಾದಕವೂ, ಬಹ್ವರ್ಥ ಸಹಸ್ರನಾಮಗಳಿಂದ ಕೂಡಿದ್ದು ಇತಿಹಾಸ ರೂಪವು ಆದ ಭಾರತವನ್ನು ಪ್ರಸಿದ್ಧ ಋಗಾದಿಗಳಿಗಿಂತಲೂ ಉತ್ತಮವನ್ನಾಗಿ ಪಾಂಡವರಿಗೆ ಉಪದೇಶಿಸಿದನು. ॥

ವಿ ॥ ''ಅಧಿಕಂ=ಋಗಾದಿವೇದಾಪೇಕ್ಷಯಾ ಉತ್ತಮಂ..... ಗುಣೋತ್ತರಂ=ಉತ್ತರಾಃ= ಉತ್ಕೃಷ್ಟಾಃ ಗುಣಾಃ=ಭಗವದ್ಗುಣಾಃ ಪ್ರತಿಪಾದ್ಯಾ=ಯಸ್ಯ ಸಃ=ಗುಣೋತ್ತರಃ=ತಂ ಋಗಾದಿವೇದಾನುಕ್ತ ಸ್ವಗುಣಪ್ರತಿಪಾದಕಮಿತಿಯಾವತ್. ಸ್ವನಾಮಧಿಕಂ=ಸ್ವಸ್ಯ ನಾಮಾನಿ=ವಿಶ್ವಂ ವಿಷ್ಣುಃ=ಇತ್ಯಾದಿ ಸಹಸ್ರನಾಮಾನಿ ಧೀಯಂತೆ ಅಸ್ಮಿನ್ನಿತಿ ಸ್ವನಾಮಧಿಃ ಸ್ವನಾಮಧಿರೇವ ಸ್ವನಾಮಧಿಕಃ.... ತಥಾ ಚ ಭಾರತರೂಪೋ ವೇದಃ ಪ್ರಸಿದ್ಧವೇದಾನುಕ್ತಸ್ವಗುಣಪ್ರತಿಪಾದಕತ್ವಾತ್ ಪ್ರತ್ಯೇಕಂ ಬಹ್ವರ್ಥ ಸಹಸ್ರನಾಮವತ್ತ್ವಾಚ್ಚ ಋಗಾದ್ಯಪೇಕ್ಷಯೋತ್ತಮಃ ಇತಿ ಪ್ರತಿಪಾದಿತವಾನಿತಿ ಭಾವಃ'' ಎಂದು ಯಾದುಪತ್ಯದಲ್ಲಿದೆ. ॥ 65 ॥

**ಮೂಲ ॥ ತೇನಾವಾಪಿ ಸುಜಾತ್ಯೈರ್ಹಯಮೇಧಸ್ತುರಗಾವರ್ತನೇಽಪಿ ಸುಜಾತ್ಯೈಃ ।**
**ಪಾಂಡುಸುತೈಸ್ಸವಸೂಕ್ತೈರಾಪ್ತೈರ್ವ್ಯಾಸಾತ್ಮನಾ ಚ ಸುಸವಸೂಕ್ತೈಃ ॥ ೬೬ ॥**

**ಅರ್ಥ ॥** ಸಮೀಚೀನವಾದ ಜ್ಞಾನವನ್ನು ಹೊಂದಿದವರೂ, ಭೂಮಿಯಲ್ಲಿ ಯಜ್ಞಕ್ಕಾಗಿ ಕುದುರೆಯನ್ನು ಬಿಟ್ಟು ಕೆಡಕು ಇಲ್ಲದೆ ಹೊಂದಿದವರೂ, ಅಶ್ವಮೇಧ ಯಜ್ಞಕ್ಕಾಗಿ ಧನಾಧಿಪ ರುದ್ರ ದೇಹಾಂತರ್ಗತ ಪರಶುರಾಮನಿಂದ ದ್ರವ್ಯವನ್ನು ಹೊಂದಿದವರೂ, ಅಥವಾ ಧನಾಧಿ ಪರುದ್ರಾಂತರ್ಗತನಾದ ಪರಶುರಾಮನೇ ಕಾರ್ಯಕರ್ತನಾಗಿ ಉಳ್ಳವರೂ, ಶ್ರೀಪರಶುರಾಮನನ್ನೇ ಶರಣುಹೊಂದಿ ದ್ರವ್ಯವನ್ನು ಪಡೆದವರೂ, ಯಜ್ಞವನ್ನು ಮಾಡಲಿಕ್ಕೆ ಉಪಯುಕ್ತವಾದ ಜ್ಞಾನವುಳ್ಳವರೂ ಆದ ಪಾಂಡವರು ಶ್ರೀಕೃಷ್ಣ ವೇದವ್ಯಾಸರ ಅನುಗ್ರಹದಿಂದ ಅಶ್ವಮೇಧ ಯಜ್ಞವನ್ನು ಮಾಡಿದರು. ॥ 66 ॥

**ಮೂಲ ॥ ತದನು ಸುಪಾಂಡುತನೂಜೈಃ**
**ರೇಮೇ ಕ್ಷ್ಮಾಂ ಪಾಲಯನ್ ಸುಪಾಂಡುತನೂಜೈಃ ।**
**ಅನುಪಮಸುಖರೂಪೋ ಜಃ ಪರಮಃ ಶ್ರೀವಲ್ಲಭಃ ಸತಿ ಸುಖರೂಪೋಽಜಃ**
**॥ ೬೭ ॥**

**ಅರ್ಥ ॥** ಅಸದೃಶಸುಖಸ್ವರೂಪ ಶರೀರವುಳ್ಳವನೂ, ಸರ್ವೋತ್ತಮನೂ, ಆಕಾಶದಂತೆ ಸಮಸ್ತ ಪದಾರ್ಥಗಳಲ್ಲಿ ಪ್ರವಿಷ್ಟನೆಂದು ಜ್ಞೇಯನೂ, ನಿತ್ಯಮುಕ್ತನೂ, ಲಕ್ಷ್ಮೀರಮಣನೂ ಆದ ಶ್ರೀಕೃಷ್ಣನು ಶುದ್ಧಬಾಹುದೇಹಗಳಿಂದ ಸ್ವರೂಪ ದೇಹವನ್ನು ಹೊಂದಿರುವ ಪಾಂಡವರಿಂದ ಭೂಮಿಯನ್ನು ರಕ್ಷಿಸುತ್ತಾ ಕ್ರೀಡಿಸುತ್ತಿದ್ದನು. ॥ 67 ॥

**ಮೂಲ ॥ ಸುಗತಿಂ ಚರಮಾಮದದಾನ್ನಿಜಯೋಗ್ಯಾಂ**
**ಜ್ಞಾನಿಸುತತಿಂ ಪರಮಾಮದದಾತ್ ।**

**ಪಾರ್ಥಾನಾಂ ಸಯದೂನಾಂ ಸ**
**ಪಿತೃಪ್ರೇಷ್ಯಾದಿನಾಮಿನಾಂ ಸಯದೂನಾಮ್ ॥ ೬೮ ॥**

**ಅರ್ಥ ॥** ಲಯಕಾಲದಲ್ಲಿ ವಾಯು ಶೇಷ ಮೊದಲಾದ ದೇವತೆಗಳಿಂದ ಕೂಡಿದ ಗರುಡಾದಿಗಳನ್ನು ಸಂಹರಿಸುವ ಚತುರ್ಮುಖನಿಗೂ ಸಂಹಾರಕನಾದ ಶ್ರೀಕೃಷ್ಣನು ವಸುದೇವಾದಿ ಪಿತೃಗಳೂ ಉದ್ಧವಾದಿ ದೂತರೂ, ಪ್ರದ್ಯುಮ್ನಾದಿ ಪುತ್ರರೂ, ಬಲರಾಮಾದಿ ಭ್ರಾತೃಗಳೂ ಇರುವ ಯಾದವರಿಂದ ಕೂಡಿದ ಪಾಂಡವರಿಗೆ ಜ್ಞಾನಿಗಳಾದ ಇತರ ದೇವತೆಗಳಿಗಿಂತಲೂ ಉತ್ತಮವಾದ ಸ್ವಯೋಗ್ಯವಾದ ಸಾಯುಜ್ಯ ರೂಪವಾದ ಪ್ರಶಸ್ತಗತಿಯನ್ನು ಕೊಟ್ಟನು. ॥ 68 ॥

**ಮೂಲ ॥ ರೇಮೇ ತತ್ರಾಪಿ ಸುಖೀ ಪರಮೋಽನಂತೋ ನನಂದ ತತ್ರಾಪಿ ಸುಖೀ ।**
**ಪ್ರಾಣೇನೇಂದಿರಯಾ ಚ ಪ್ರಯುತೋ ನಿತ್ಯಂ ಮಹಾಗುಣೇಂದಿರಯಾ ಚ ॥**
**॥ ೬೯ ॥**

**ಅರ್ಥ ॥** ಸರ್ವಥಾ ದುಃಖಸ್ಪರ್ಶವಿಲ್ಲದವನೂ ಸರ್ವೋತ್ತಮನೂ ದೇಶ ಕಾಲ ಗುಣಗಳಿಂದ ಅಂತಶೂನ್ಯನೂ ನಿತ್ಯಾಭಿವ್ಯಕ್ತ ಆನಂದವುಳ್ಳವನೂ, ಮುಖ್ಯಪ್ರಾಣ, ರಮಾದೇವಿಯಲ್ಲಿ ಇತರ ದೇವತೆಗಳಿಗಿಂತ ಉತ್ಕೃಷ್ಟ ಸಂಬಂಧವಿರುವವನೂ ಪ್ರಾಣನಿಗಿಂತಲೂ ಉತ್ಕೃಷ್ಟ ಗುಣಗಳುಳ್ಳ ಲಕ್ಷ್ಮೀದೇವಿಯಿಂದ ಕೂಡಿದವನೂ, ಆದ ಶ್ರೀಕೃಷ್ಣನು ಪಾಂಡವರೊಡನೆ ಕ್ರೀಡಿಸುತ್ತಿದ್ದು ವೈಕುಂಠಾದಿ ಸ್ಥಾನಗಳಲ್ಲಿಯೂ ಮಹಾಗುಣಗಳುಳ್ಳವನಾಗಿಯೇ ರಮೆಯೊಡನೆ ಕ್ರೀಡಿಸುತ್ತಿದ್ದನು. ॥ 69 ॥

**ಮೂಲ ॥ ಏವಂ ಸರ್ವಾಣಿ ಹರೇರೂಪಾಣಿ ಶ್ರೀಪತೇಃ ಸುಪರ್ವಾಣಿಹರೇಃ ।**
**ಪೂರ್ಣಸುಖಾನಿ ಸುಭಾಂತಿ ಪ್ರತತಾನಿ ನಿರಂತರಾಣಿ ಸುಭಾಂತಿ ॥ ೭೦ ॥**

**ಅರ್ಥ ॥** ದೇವತೆಗಳಿಗೆ ಮುಖ್ಯಾಶ್ರಯನೂ, ದೈತ್ಯರನ್ನು ಸ್ಥಾನಭ್ರಷ್ಟರನ್ನಾಗಿ ಮಾಡುವ ಪ್ರಯುಕ್ತ ಹರಿ ಎನಿಸಿಕೊಂಡವನೂ ಆದ ಶ್ರೀಕೃಷ್ಣನ ಸಂಪೂರ್ಣ ಸುಖಸ್ವರೂಪಗಳೂ ಉತ್ಕೃಷ್ಟ ಪ್ರಭೆಯುಳ್ಳವುಗಳೂ, ಚೆನ್ನಾಗಿ ವ್ಯಾಪ್ತಗಳೂ ಪರಸ್ಪರ ಭೇದವಿಲ್ಲದವುಗಳೂ ಲಕ್ಷ್ಮ್ಯಾದಿಗಳ ಹೃದಯ ದೊಳಗೂ, ಹೊರಗೂ ಸಮೀಪದಲ್ಲಿಯೂ ಇರುವವುಗಳೂ ಆದ ಮತ್ಸ್ಯಾದಿ ಎಲ್ಲಾ ಭಗವದ್ರೂಪಗಳನ್ನು ಭಾರತಪ್ರತಿಪಾದ್ಯ ಕೃಷ್ಣ ರೂಪದಂತೆ ಜ್ಞಾನಿಗಳು ತಿಳಿಯಬೇಕು. ॥ 70 ॥

**ಮೂಲ ॥ ರಾಮ ರಾಮ ಮಹಾಬಾಹೋ ಮಾಯಾ ತೇ ಸುದುರಾಸದಾ ।**
**ವಾದ ಸಾದದ ಕೋ ಲೋಕೇ ಪಾದಾವೇವ ತವಾಸಜೇತ್ ॥ ೭೧ ॥**

**ಅರ್ಥ ॥** ದುಷ್ಟ ಶಿಕ್ಷಕನೂ, ಭಕ್ತರ ತಾಪತ್ರಯ ಪರಿಹಾರಕನೂ, ಕ್ರೀಡಾರೂಪನೂ, ಸಾಕಲ್ಯೇನ ತಿಳಿಯಲಶಕ್ಯನೂ, ಮಹಾಬಲಿಷ್ಠನೂ, ಮಹಾಜ್ಞಾನವುಳ್ಳವನೂ, ಆಜಾನುಪರಿಮಿತ ಬಾಹುಗಳುಳ್ಳವನೂ, ಆದ ಶ್ರೀಹರಿಯೇ ನಿನ್ನ ಮಹಿಮೆಯು ಮುಕ್ತಬ್ರಹ್ಮಾದಿಗಳಿಗೂ ಹೊಂದಲಸಾಧ್ಯವು. ಜ್ಞಾನದಾಯಕನೂ, ಇಂದ್ರಿಯಗಳಿಗೆ ಭೋಗದಾಯಕನೂ, ದೇವತೆಗಳ ಶತ್ರುಗಳಾದ ದೈತ್ಯಾದಿಗಳಿಗೆ ತಮಃಪ್ರಾಪಕನೂ ಆದ ಶ್ರೀಹರಿಯೇ ಸತ್ಯಾದಿ ಲೋಕಗಳಲ್ಲಿರತಕ್ಕ ಬ್ರಹ್ಮನೂ ಕೂಡಾ ನಿನ್ನ ಪಾದಗಳನ್ನಾಶ್ರಯಿಸುತ್ತಿರುವನು. ॥ 71 ॥

**ಮೂಲ ॥ ಚೇತ್ಸವಾತವ ವೇದಾಪಾऽಕೇ ಲೋಕೋದದ ಸಾದವ ।**
**ದಾಸರಾದುಸುತೇಯಾಮಾಹೋವಾಹಾ ಮಮ ರಾಮ ರಾಃ ॥ ೭೨ ॥**

**ಅರ್ಥ ॥** ಸರ್ವರನ್ನು ಜಯಿಸುವವನೂ, ಮುಖ್ಯಪ್ರಾಣನಿಂದ ಸಹಿತವಾದ ಸರ್ವಜಗತ್ಪ್ರವರ್ತಕನೂ, ವ್ಯಾಸರೂಪದಿಂದ ವೇದವಿಭಾಜಕನೂ, ಸಾಕಲ್ಯೇನ ವೇದಾಗೋಚರನೂ, ಸರ್ವಗುಣ ಪರಿಪೂರ್ಣನೂ, ಸರ್ವದೋಷವಿದೂರನೂ, ಸರ್ವಜಗದ್ಭಿನ್ನನೂ, ಜಗತ್ತಿಗೆ ಜ್ಞಾನದಾಯಕನೂ, ಭಕ್ತರ ಭಯಪರಿಹಾರಕನೂ ಶಾಸ್ತ್ರದಸ್ಯುಗಳದಾಹಕನೂ, ಅಥವಾ ಭಗವದ್ಭಕ್ತರಿಗೆ ಸುಖದಾಯಕನೂ ಸೌರ, ಶೈವ, ಗಾಣಪತ, ಶಾಕ್ತೇಯ ಮತನಿರಾಸಕನೂ, ಅನಿಂದ್ಯನೂ, ಕದಾಚಿತ್ ಮೇಷರೂಪ ಶಂಕರನೇ ವಾಹನನಾಗಿ ಉಳ್ಳವನೂ, ಇಂತಹ ಶ್ರೀರಾಮನೇ ನೀನೇ ನನಗೆ ಧನರೂಪನು. ॥ 72 ॥

**ಮೂಲ ॥ ದೇವಾನಾಂ ಪತಯೇ ನಿತ್ಯಂ ಮತಂ ಯಸ್ಯ ನ ಜಾನತೇ ।**
**ತಸ್ಮೈ ದೇವ ನಮಸ್ಯೇऽಹಂ ಭವತೇऽಸುರಮಾರಯೇ ॥ ೭೩ ॥**

**ಅರ್ಥ ॥** ದೇವಶ್ರೇಷ್ಠರೂ ಕೂಡಾ ಯಾವ ಬುದ್ಧರೂಪಿಯಾದ ಶ್ರೀಹರಿಯ ಸಿದ್ಧಾಂತವನ್ನು ಸರ್ವದಾ ಸಂಪೂರ್ಣ ತಿಳಿಯುವುದಿಲ್ಲವೋ, (ದೇವತೆಗಳು ದಾನವಾದಿಗಳು ತಿಳಿಯುವುದಿಲ್ಲವೆಂಬುದು ಸುತರಾಂ ಸಿದ್ಧ-) ಬುದ್ಧರೂಪಿ ಶ್ರೀಹರಿಯೇ ನಾನು ಅಂತಹ, ಅಸುರಘಾತಕನೂ, ಇಂದ್ರಿಯಾಭಿಮಾನಿಗಳಾದ ದೇವತೆಗಳಿಗೆ ಜ್ಞಾನದಾಯಕನೂ, ಆದ ನಿನ್ನನ್ನು ಸದಾ ನಮಸ್ಕರಿಸುವೆನು. ॥ 73 ॥

**ಮೂಲ ॥ ಸಮಸ್ತದೇವಜನಕ ವಾಸುದೇವಪರಾಮೃತ ।**
**ವಾಸುದೇವ ಪರಾಮೃತ ಜ್ಞಾನಮೂರ್ತೇ ನಮೋऽಸ್ತು ತೇ ॥ ೭೪ ॥**

**ಅರ್ಥ ॥** ಕಲಿಯುಗಾಂತ್ಯದಲ್ಲಿ ದುಷ್ಟರಾಜರಿಗೆ ಘಾತುಕನೂ, ಸುಖ ಜ್ಞಾನ ಪ್ರಾಣ ಕ್ರೀಡಾದಿ ಮೋಕ್ಷಗಳನ್ನು ಕೊಡುವವನೂ, ಅತ್ಯಂತ ಸುಖ ಸ್ವರೂಪನೂ, ಸರ್ವೋತ್ತಮನೂ, ಮರಣ ರಹಿತನೂ, ಜ್ಞಾನಸ್ವರೂಪನೂ, ವಿಶೇಷಜ್ಞಾನ ಸುಖಗಳಿರುವುದರಿಂದ ವಾಸುದೇವನೆನಿಸಿಕೊಂಡವನೂ, ಆದ ಕಲ್ಕಿರೂಪಿಯಾದ ಶ್ರೀಹರಿಯೇ ನಿನಗೆ ನಮಸ್ಕಾರವು. ಅಥವಾ ಸರ್ವದೇವೋತ್ಪಾದಕನೂ, ಸರ್ವರಿಂದುತ್ತಮೋತ್ತಮನೂ, ಶಶ್ವದೇಕಪ್ರಕಾರನೂ, ಆದಿಯುಗಾದಿಗಳನ್ನೂ ಮಾಡಿರುವ ವಾಸುದೇವನಾಮಕನೂ, ಉತ್ತಮರಿಗೆ ಮೋಕ್ಷದಾಯಕನೂ, ಜ್ಞಾನಸ್ವರೂಪಿಯೂ ಆದ ಶ್ರೀಹರಿಯೇ ನಿನಗೆ ನಮಸ್ಕಾರವು. ॥ 74 ॥

**ಮೂಲ ॥ ದೇವಾದೇ ದೇವಲೋಕಪ ಪೂರ್ಣಾನಂದಮಹೋದಧೇ ।**
**ಸರ್ವಜ್ಞೇಶ ರಮಾನಾಥ ದೇವಾದೇऽದೇऽವಲೋಕಪ ॥ ೭೫ ॥**

**ಅರ್ಥ ॥** ಆದಿದೇವನೂ, ಮಹಾಪತ್ತುಗಳಿಂದಲೂ ದೇವಸಮೂಹರಕ್ಷಕನೂ, ಪೂರ್ಣಾನಂದದಿಂದ ಸಮುದ್ರತುಲ್ಯನೂ, ತನ್ನಲ್ಲಿಯೂ ಪರರಲ್ಲಿಯೂ ಇರುವ ಸಮಸ್ತ ವಿಶೇಷವಿಷಯಗಳ ಜ್ಞಾನವುಳ್ಳವನೂ, ಸರ್ವಸ್ವಾಮಿಯೂ, ಸರ್ವಪ್ರೇರಕನೂ ಕ್ರೀಡಾದಿ ಗುಣವಿಶಿಷ್ಟನೂ,

ಸರ್ವಸೃಷ್ಟ್ಯಾದಿಕರ್ತನೂ, ವಿನಾಶವಿಲ್ಲದವನೂ, ಮುಕ್ತರಿಗೂ ಸುಖವನ್ನಿತ್ತು ರಕ್ಷಿಸುವವನೂ, ಅಂತಹ ಲಕ್ಷ್ಮೀಪತಿಯಾದ ಶ್ರೀಹರಿಯೇ ನೀನು ನಮ್ಮನ್ನು ರಕ್ಷಿಸು. ॥ 75 ॥

**ಮೂಲ ॥ ಯೋ ನಿರ್ಮಮೇಽಶೇಷಪುರಾಣವಿದ್ಯಾಂ**
**ಯೋನಿರ್ಮಮೇಶೇಷಪುರಾಣವಿದ್ಯಾಂ ।**
**ಯೋಽನಿರ್ಮಮೇಽ ಶೇಷಪುರಾಣವಿದ್ಯಾಂ ಯೋ**
**ನಿರ್ಮಮೇಶೇ ಷಪುರಾಣವಿದ್ಯಾಮ್ ॥ ೭೬ ॥**

**ಅರ್ಥ ॥** ಶುಕಾಚಾರ್ಯರಲ್ಲಿ ಆವಿಷ್ಟರಾದ ಸೂತ್ರ ಎಂದು ಹೆಸರುಳ್ಳ ವಾಯುದೇವರ ಜನಕನೂ, ಚೆನ್ನಾಗಿ ಲಕ್ಷ್ಮೀಶೇಷರನ್ನು ಅಥವಾ ರೋಮಹರ್ಷಣ ಪೈಲರಲ್ಲಿರತಕ್ಕ ಕಾಮಶೇಷರನ್ನು ಪವಿತ್ರೀಕರಿಸುವವನೂ, ಸರ್ವಜ್ಞನೂ, ಬಲಸ್ವರೂಪಿಯಾದ ಮುಖ್ಯಪ್ರಾಣನನ್ನು ಚೆನ್ನಾಗಿ ತಿಳಿದವನೂ, ಕಾಮವಿಲ್ಲದವನೂ, ಅಕಾರವಾಚ್ಯನಾದ ಶ್ರೀವಿಷ್ಣುವಿನ ಭೃತ್ಯರಿಗೆ ಶರೀರಗಳನ್ನು ಹೊಂದಿಸಿಕೊಟ್ಟವನೂ, ಮಮತಾ ಇಲ್ಲದಿರುವವರಿಗೆ ನಿಯಾಮಕನೂ, ಪ್ರಾಣನಿಗೆ ಶರೀರವನ್ನು ಹೊಂದಿಸಿಕೊಟ್ಟ ಶ್ರೀಹರಿಯನ್ನು ತಿಳಿದಿರುವ ಶುಕ್ರಾಚಾರ್ಯರಲ್ಲಿರುವ ಅಶೇಷಪುರಾಣ ವಿದ್ಯೆಗಳಿಗೆ ಅಭಿಮಾನಿಯಾದ ಲಕ್ಷ್ಮೀಭಾರತಿಯರಿಗೆ ಉತ್ಪಾದಕನೂ, ಆದ ಲಕ್ಷ್ಮೀಪತಿಯಾದ ಶ್ರೀವೇದವ್ಯಾಸ ರೂಪಿಯಾದ ಶ್ರೀವಿಷ್ಣುವು ಹಿಂದೆ ಹೇಳಿದ ಗುಣವಿಶಿಷ್ಟನೆಂದು ವೇದಾದಿಗಳಿಂದ ತಿಳಿಯಲ್ಪಟ್ಟಿರುತ್ತಾನೆ. ಅಂತಹ ವಿಷ್ಣುಸ್ವರೂಪರಾದ ವೇದವ್ಯಾಸರನ್ನು ಶರಣು ಹೊಂದುವೆನು. ನನ್ನನ್ನು ರಕ್ಷಿಸು. ॥ 76 ॥

**ಮೂಲ ॥ ಅನಂತಪಾರಾಮಿತವಿಕ್ರಮೇಶ ಪ್ರಭೋ ರಮಾಪಾರಮನಂತಪಾರ ।**
**ಮಹಾಗುಣಾಢ್ಯಾಪರಿಮೇಯಸತ್ವ ರಮಾಲಯಾಶೇಷಮಹಾಗುಣಾಢ್ಯ ॥**
**॥ ೭೭ ॥**

**ಅರ್ಥ ॥** ದೇಶ ಕಾಲ ಗುಣಗಳಿಂದ ಪರಿಚ್ಛೇದವಿಲ್ಲದವನೂ, ಅಸಂಖ್ಯೇಯಾದ್ಭುತ ಅನಾದಿ ಪರಾಕ್ರಮಗಳುಳ್ಳವನೂ, ಸರ್ವಸಮರ್ಥನೂ, ಸರ್ವಜಗತ್ಸ್ವಾಮಿಯೂ, ಚೆನ್ನಾಗಿ ಲಕ್ಷ್ಮೀಪಾಲಕನೂ, ಪ್ರಕೃತ್ಯಾದಿ ನಿತ್ಯವಸ್ತುಗಳಿಗೆ ಪಾಲಕನೂ, ನಾಶವಿಲ್ಲದವನೂ, ಬಲಜ್ಞಾನ ಮೊದಲಾದ ಮಹಾಗುಣಪೂರ್ಣನೂ, ಅನಂತಬಲಜ್ಞಾನಸಮುದಾಯ ಸ್ವರೂಪನೂ, ರಮಾದಿಗಳಿಗಿಂತ ಸ್ವಭಾವತಃ ಸರ್ವಗುಣಗಳ ಆಧಿಕ್ಯವುಳ್ಳವನೂ, ಚತುರ್ಮುಖಾದಿಗಳೂ ಭೃತ್ಯರಾಗಿ ಉಳ್ಳವನೂ, ಇಂತಹ ಶ್ರೀನಿವಾಸನೇ (ನಿನ್ನನ್ನು ನಾನು ಶರಣು ಹೊಂದುವೆ. ನನ್ನನ್ನು ರಕ್ಷಿಸು.) ॥ 77 ॥

**ಮೂಲ ॥ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ।**
**ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ॥ ೭೮ ॥**

**ಅರ್ಥ ॥** ಸರ್ವಪ್ರಕಾಶಕನೂ, ಸರ್ವಜ್ಞನೂ, ಭೂಮ್ಯಾದಿಸರ್ವವಸ್ತುಗಳಿಗೆ ಆಧಾರನೂ, ಭಕ್ತರಿಗೆ ಸರ್ವಾಭೀಷ್ಟದಾಯಕನೂ, ತತ್ತದ್ಯೋಗ್ಯತಾನುಸಾರ ಸರ್ವಧರ್ಮಗಳನ್ನು ಮಾಡಿಸುವವನೂ, ಪ್ರಕೃತ್ಯಾದಿಗಳಿಗೆ ಉಪಾದಾನಕಾರಣತ್ವಪ್ರದನೂ ಸ್ವಕೀಯರ ಅತಿ ಸಮೀಪವರ್ತಿಯೂ, ಸುರಾದಿಗಳಿಂದ ಸೇವ್ಯನೂ, ಸುರಾದಿಗಳಿಗೆ ಅಭೀಷ್ಟದಾಯಕನೂ, ತತ್ತದ್ಯೋಗ್ಯತಾನುಸಾರ

ನಾನಾಪ್ರಕಾರವಾಗಿ ಪ್ರೇರೇಪಿಸುವವನನೂ, ಸಜ್ಜನರಿಂದ ವಿಶೇಷತಃ ನಮ್ಮನೂ ಸರ್ವಜಗದ್ವಿಲಕ್ಷಣನೂ, ಸರ್ವೋತ್ತಮನೂ, ಸರ್ವಸ್ವತಂತ್ರನೂ, ಆನಂದಪೂರ್ಣನೂ, ಸರ್ವದಾ ಸದುಪದೇಶಕನೂ, ಸರ್ವಪೂಜ್ಯನೂ, ಮುಕ್ತಿಯಲ್ಲಿ ಆನಂದ ವಿಸ್ತಾರಕರ್ತನೂ, ತಾನೇ ಪೂಜಿಸಿಕೊಳ್ಳುವವನೂ, ದುರ್ಜನರ ವಿನಾಶಕನೂ, ಸರ್ವತ್ರ ವ್ಯಾಪ್ತನೂ, ಭಕ್ತರಿಂದ ಗಾನಮಾಡಲ್ಪಡುವವನೂ, ದುರ್ಜನರಿಗೆ ಚೆನ್ನಾಗಿ ಮೋಹಕನೂ, ಸರ್ವರ ಹೃದಯದಲ್ಲಿ ಸಂಚರಿಸುವವನೂ, ಸರ್ವಗುಣಪೂರ್ಣನೂ, ಭಕ್ತರ ಹೃದಯದಲ್ಲಿರತಕ್ಕ ಅಜ್ಞಾನತಮೋವಿದಾರಕನೂ, 'ನಾನೇ ಸರ್ವೇಶನು ನನ್ನಿಂದ ಬೇರೆ ಸರ್ವೇಶನಿಲ್ಲ'ವೆಂದು ಹೇಳುವವರನ್ನು ನಾಶಗೊಳಿಸುವವನೂ, ಬ್ರಹ್ಮಾದಿಗಳಿಂದಲೂ ಸಂಪೂರ್ಣತಿಳಿಯಲಶಕ್ಯನೂ, ಸರ್ವರು ಮಾಡತಕ್ಕ ಕರ್ಮಗಳಿಗೆ ಸಾಕ್ಷಿಯಾದವನೂ, ಸಜ್ಜನರಿಂದ ಸ್ತುತ್ಯನೂ, ದೇವಾದಿಗಳಲ್ಲಿ ಅತಿಸುಂದರ ಸ್ವರೂಪಿಯೂ, ಬ್ರಹ್ಮಾದಿಗಳಿಗೆ ತತ್ತ್ವೋಪದೇಶಕನೂ, ಭಕ್ತರಿಂದ ಸ್ಮರಿಸಲ್ಪಡುವವನೂ, ಭಕ್ತರಿಂದ ಕೇಳಲ್ಪಡುವವನೂ, ಭಗವದ್ಭಕ್ತರಿಗೆ ಆಹ್ಲಾದವನ್ನುಂಟುಮಾಡುವವನೂ, ಆದ ಶ್ರೀಹರಿಯೇ (ನಿನ್ನನ್ನು ನಾನು ಶರಣು ಹೊಂದುವೆ. ನನ್ನನ್ನು ರಕ್ಷಿಸು.) ॥ 78 ॥

**ಮೂಲ ॥ ನೈವ ಪರಃ ಕೇಶವತಃ ಪರಮಾದಸ್ಮಾತ್ಸಮಶ್ಚ ಸುಕೇಶವತಃ ।**
**ಸೋಽಯಂ ಶಪಥವರೋ ನಃ ಶಶ್ವತ್ಸಂಧಾರಿತಃ ಸುಶಪಥವರೋಽನಃ ॥**
**॥ ೭೯ ॥**

**ಅರ್ಥ ॥** ಗರುಡಧ್ವಜನೂ, ಸರ್ವೋತ್ತಮನೂ, ಬ್ರಹ್ಮರುದ್ರರಿಗೆ ಪ್ರೇರಕನೂ ಆದ ಶ್ರೀಹರಿಗಿಂತ ಇನ್ನೊಬ್ಬರು ಸರ್ವೋತ್ತಮರಿಲ್ಲ. ಈ ಅರ್ಥವು ಶ್ರುತಿಯುಕ್ತಿಗಳಿಂದ ತಪ್ತಪರಶುಧಾರಣಾದಿ ರೂಪಶಪಥದಿಂದ ಅವತಾರದಲ್ಲಿಯೂ ನಿಶ್ಚಿತವಾಗಿದೆ. ಏಕೆಂದರೆ ಮುಖ್ಯಪ್ರಾಣನೂ ಪೂರ್ಣಸುಖಸ್ವರೂಪಿಯಾದ ಶ್ರೀಹರಿಯ ಆಜ್ಞಾನುಸಾರವೇ ಮೋಕ್ಷದಾಯಕನು. ಆದಕಾರಣ ಮುಖ್ಯಪ್ರಾಣನ ಅವತಾರಭೂತರಾದ ನಾವೂ ಮೋಕ್ಷಪ್ರದನಾದ ಶ್ರೀಹರಿಯ ಮಾರ್ಗೋಪದೇಶಕರಾದ ಕಾರಣ ಹೀಗೆ ನಿಶ್ಚಯಿಸಿರುವೆವು ॥ 79 ॥

**ಮೂಲ ॥ ಕೃಷ್ಣಕಥೇಯಂ ಯಮಿತಾ ಸುಖತೀರ್ಥೇನೋದಿತಾಽನೇನೇಯಂ ಯಮಿತಾ**
**ಭಕ್ತಿಮತಾ ಪರಮೇಶೇ ಸರ್ವೋದ್ರೇಕಾತ್ಸದಾ ನುವತಾಽಽಪ ರಮೇಶೇ ॥**
**॥ ೮೦ ॥**

**ಅರ್ಥ ॥** ಮುಖ್ಯಪ್ರಾಣನ ಅವತಾರಭೂತರಾದ ತನಗೆ ಪ್ರೇರಕನೂ, ಸರ್ವೋತ್ತಮ ಸ್ವಾಮಿಯೂ, ಆದ ಲಕ್ಷ್ಮೀಪತಿಯಾದ ಶ್ರೀಹರಿಯಲ್ಲಿ ಸರ್ವೋತ್ತಮನೆಂದು ಭಕ್ತಿಯಿರುವವನೂ, ಸರ್ವದಾ ಸ್ತುತಿಸುವವನೂ, ಆದ ಆನಂದದಾಯಕಶಾಸ್ತ್ರವನ್ನು ನಿರ್ಮಿಸಿರುವ ಪೂರ್ಣಪ್ರಜ್ಞಾಚಾರ್ಯರು ಮಾಡಿರುವ ಯಮಕ ಮಾಲಿಕಾರೂಪವಾದ (ಹಿಂದೆ ಹೇಳಿದ ವರ್ಣಗಳನ್ನೇ ತಿರುಗಿ ಒಟ್ಟಿಗೆ ಅಥವಾ ಸ್ಥಾನ ಭೇದದಿಂದ ಹೇಳುವಿಕೆಯು ಯಮಕವು) ಈ ಶ್ರೀಕೃಷ್ಣ ಕಥೆಯು ಲಕ್ಷ್ಮೀಪತಿಯಾದ ಅಕಾರವಾಚ್ಯನಾದ ಯಾವ ಶ್ರೀವಿಷ್ಣುವನ್ನು ಪ್ರತಿಪಾದಿಸುತ್ತದೋ ಅಂತಹ ಶ್ರೀವಿಷ್ಣುವನ್ನು ನಾನು ಹೊಂದಿರುವೆನು. (ಅಂದರೆ ಶ್ರೀವಿಷ್ಣುವು ನನ್ನಲ್ಲಿಯೇ ವಿಶೇಷತಃ ಸನ್ನಿಹಿತನಾಗಿರುತ್ತಾನೆ.)॥80॥

ಮೂಲ ॥ ಇತಿ ನಾರಾಯಣನಾಮಾ ಸುಖತೀರ್ಥಸುಪೂಜಿತಃ

ಸು ನಾರಾಯಣನಾ ಮಾ ।

ಪೂರ್ಣಗುಣೈರಧಿಕ ಪೂರ್ಣಜ್ಞಾನೇಚ್ಛಾಭಕ್ತಿಭಿಃ ಸ್ವಧಿಕಪೂರ್ಣಃ ॥ ೮೧ ॥

**ಅರ್ಥ ॥** ಆನಂದಾದಿಗುಣಪೂರ್ಣನೂ, ಸರ್ವೋತ್ತಮನೂ, ದೋಷವಿರುದ್ಧ ಗುಣಾಶ್ರಯನೂ, ಆದ ಶ್ರೀಹರಿಯೇ ನಾರಾಯಣನಾಮ ಪ್ರತಿಪಾದ್ಯನೂ, ಲಕ್ಷ್ಮೀ ಬ್ರಹ್ಮಾದಿಗಳಿಗೆ ಆಧಾರಭೂತನೂ, ಪರಮಪುರುಷನೂ, ಉತ್ತಮರಾದ ಬ್ರಹ್ಮಾದಿಗಳಲ್ಲಿ ಸನ್ನಿಹಿತನೂ, ಆದ ನೀನು ಹಿಂದೆ ಹೇಳಿದ ಪ್ರಕಾರ ಪೂರ್ಣಜ್ಞಾನ ಇಚ್ಛಾ ಪರಮ ಭಕ್ತಿಗಳಿಂದ ಆನಂದತೀರ್ಥನಾಮಕನಾದ ನನ್ನಿಂದ ಭಕ್ತಿಪೂರ್ವಕವಾಗಿ ಪೂಜಿಸಲ್ಪಟ್ಟ ಪ್ರಯುಕ್ತ ನನ್ನನ್ನು ರಕ್ಷಿಸು. ॥ 81 ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ
ಶ್ರೀಮದ್ಯಮಕಭಾರತಂ ಸಂಪೂರ್ಣಂ ॥

ಸುರಶಿಖಾಮಣಿ ಮಧ್ವವಿನಿರ್ಮಿತಂ ಯಮಕಭಾರತಮೇತದಶೇಷತಃ ।
ವಿವರಿತುಂ ನ ಹಿ ಶಕ್ಯಮಥಾಪಿ ತತ್ಕರುಣಯಾ ಕೃತಿರೀಷದಿಯಂ ಮಯಾ ॥
ತಂತ್ರಿ ನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ ।
ಭೂಯಾತ್ಕುಸುಮಮಾಲೇವ ಪ್ರೀತ್ಯೈ ಮಾಧವಮಧ್ವಯೋಃ ॥
ವ್ಯಾಸಂ ಸರ್ವಗುಣಾವಾಸಂ ವಾಸವೀನಂದನಂ ಪ್ರಭುಂ ।
ಶ್ರೀನಿವಾಸಂ ಸದಾ ವಂದೇ ಭಾಸಮಾನಂ ಹೃದಂಬರೇ ॥

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ಕರ್ಮನಿರ್ಣಯ ಟೀಕೋಕ್ತಾನಿ ಋಗ್ವೇದ ಬ್ರಾಹ್ಮಣ ಚತುರ್ಥ ಪಂಚಿಕಾದ್ಯಾಧ್ಯಾಯಾದಿಮ ಖಂಡಾನಿ ಲಿಖ್ಯಂತೇ

## ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ || ಹರಿಃ ಓಂ ||

★ಓಂ ದೇವಾ ವೈ ಪ್ರಥಮೇನಾಹ್ನೇಂದ್ರಾಯ ವಜ್ರಂ ಸಮಭರಂ ಸ್ತಂ ದ್ವಿತೀಯೇನಾಹ್ನಾಸಿಂ ಚ ಸ್ತಂ ತೃತೀಯೇನಾಹ್ನಾ ಪ್ರಾಯಚ್ಛಂಸ್ತಂ ಚತುರ್ಥೇಽಹನ್ ಪ್ರಾಹರತ್ತಸ್ಮಾಚ್ಚತುರ್ಥೇಽಹನ್ ಷೋಳಶಿನಂ ಶಂ ಸತಿ ವಜ್ರೋ ವಾ ಏಷ ಯತ್ ಷೋಳಶೀ ತದ್ಯಚ್ಚತುರ್ಥೇಽಹನ್ ಷೋಳಶಿನಂ ಶಂಸತಿ ವಜ್ರಮೇವ ತತ್ಪ್ರಹರತಿ ದ್ವಿಷತೇ ಭ್ರಾತೃವ್ಯಾಯ ವಧಂ ಯೋಽಸ್ಯಃ ಸ್ತೃತ್ಯಸ್ತ ಸ್ಮೈಸ್ತರ್ತವೈ ವಜ್ರೋ ವೈ ಷೋಳಶೀ ಪಶವ ಉಕ್ಥಾನಿ ತಂ ಪರಸ್ತಾದುಕ್ಥಾನಾಂ ಪರ್ಯಾಸ್ಯ ಶಂ ಸತಿ ತಂ ಯತ್ಪರಸ್ತಾದುಕ್ಥಾನಾಂ ಪರ್ಯಾಸ್ಯ ಶಂ ಸತಿ ವಜ್ರೇಣೈವ ತತ್ ಷೋಳ ಶಿ ನಾ ಪಶೂನ್ಪರಿಗಚ್ಛತಿ ತಸ್ಯಾತ್ಪಶವೋ ವಜ್ರೇಣೈವ ಷೋಳಶಿನಾ ಪರಿಗತಾ ಮನುಷ್ಯಾನಭ್ಯುಪಾವರ್ತಂ ತೇ ತಸ್ಮಾದಶ್ವೋ ವಾ ಪುರುಷೋ ವಾ ಗೌರ್ವಾ ಹಸ್ತೀ ವಾ ಪರಿಗತ ಏವ ಸ್ವಯಮಾತ್ಮನೇಽತ ಏವ ವಾಚಾಭಿಷಿದ್ಧ ಉಪಾವರ್ತತೇ ವಜ್ರಮೇವ ಷೋಳಶಿನಂ ಪಶ್ಯನ್ವಜ್ರೇಣೈವ ಷೋಳಶಿನಾ ಪರಿಗತೋ ವಾಗ್ಘಿ ವಜ್ರೋ ವಾಕ್ ಷೋಳಶೀ ತದಾಹುಃ ಕಿಂ ಷೋಳಶಿನಃ ಷೋಳಶಿತ್ವಮಿತಿ ಷೋಳಶಃ ಸ್ತೋತ್ರಾಣಾಂ ಷೋಳಶಃ ಶಸ್ತ್ರಾಣಾಂ ಷೋಳಶಭಿರಕಷರೈರಾದತ್ತೇ ಷೋಳಶಭಿಃ ಪ್ರಣೌತಿ ಷೋಳಶ ಪದಾನ್ನಿವಿದಂ ದಧಾತಿ ತತ್ ಷೋಳಶಿನಃ ಷೋಳಶಿತ್ವಂ ದ್ವೇ ವಾ ಅಕ್ಷರೇ ಅತಿರಿಚ್ಯತೇ ಷೋಳಶಿನೋಽನುಷ್ಟುಭಮಭಿಸಂಪನ್ನಸ್ಯ ವಾಚೋ ವಾವ ತೌ ಸ್ತನೌ ಸತ್ಯಾನೃತೇ ವಾವ ತೇ ಅವತ್ಯೇನಂ ಸತ್ಯಂ ನೈನಮನೃತಂ ಹಿನಸ್ತಿ ಯ ಏವಂ ವೇದ || ಖಂಡಃ || 1 ||

ಗೌರಿವೀತಂ ಷೋಳಶಿ ಸಾಮ ಕುರ್ವೀತ ತೇಜಸ್ಕಾಮೋ ಬ್ರಹ್ಮವರ್ಚಸಕಾಮಸ್ತೇಜೋ ವೈ ಬ್ರಹ್ಮವರ್ಚಸಂ ಗೌರಿವೀತಂ ತೇಜಸ್ವೀ ಬ್ರಹ್ಮವರ್ಚಸೀ ಭವತಿ ಯ ಏವಂ ವಿದ್ವಾನ್ಗೌರಿವೀತಂ ಷೋಳಶಿ ಸಾಮ ಕುರುತೇ ನಾನದಂ ಷೋಳಶಿ ಸಾಮ ಕರ್ತವ್ಯಮಿತ್ಯಾಹುರಿಂದ್ರೋ ವೈ ವೃತ್ರಾಯ ವಜ್ರಮುದಯಚ್ಛತ್ತಮಸ್ಮೈ ಪ್ರಾಹರತ್ತಮಭ್ಯಹನತ್ಸೋಽಭಿಹತೋವ್ಯನದದ್ಯದ್ವ್ಯನದತ್ತನ್ನಾನದಂ ಸಾಮಾಭವತ್ತನ್ನಾನದಸ್ಯ ನಾನದತ್ವಮಭ್ರಾತೃವ್ಯಂ ವಾ ಏತದ್ಭ್ರಾತೃವ್ಯಹಾ ಸಾಮ ಯನ್ನಾನದಮಭ್ರಾತೃವ್ಯೋ ಭ್ರಾತೃವ್ಯಹಾ ಭವತಿ ಯ ಏವಂ ವಿದ್ವಾನ್ನಾನದಂ ಷೋಳಶಿ ಸಾಮ ಕುರುತೇ ತದ್ಯದಿ ನಾನದಂ

---

★ ಐತರೇಯ (ಋಗ್ವೇದ) ಬ್ರಾಹ್ಮಣದಲ್ಲಿ ಎಂಟು ಪಂಚಿಕೆಗಳು. ೧ನೇ ಸಂಚಿಕೆಯಲ್ಲಿ ೫ ಅಧ್ಯಾಯಗಳು. ೨ನೇ ಪಂಚಿಕೆಯಲ್ಲಿಯೂ ೫ ಅಧ್ಯಾಯಗಳು. ಹೀಗೆಯೇ ಪ್ರತಿ ಪಂಚಿಕೆಗಳಲ್ಲಿಯೂ ಐದೈದು ಅಧ್ಯಾಯಗಳು. ಅದರಲ್ಲಿ 'ದೇವಾ ವೈ ಪ್ರಥಮೇನಾಹ್ನಾ' ಇತ್ಯಾದಿಗಳು ೪ನೇ ಪಂಚಿಕೆಯಲ್ಲಿ ೧ನೇ ಅಧ್ಯಾಯದಲ್ಲಿ ೧ನೇ ಖಂಡವು. 'ಗೌರಿವೀತಂ' ಎನ್ನುವುದು ೨ನೇ ಖಂಡವು. 'ಅಥಾತಃ ಛಂದಾಂಸಿ' ಎನ್ನುವುದು ೩ನೇ ಖಂಡವು. 'ಮಹಾನಾಮ್ನೀನಾಂ' ಎನ್ನುವುದು ೪ನೇ ಖಂಡವು. ಈ ೪ ಖಂಡಗಳನ್ನು ಕರ್ಮನಿರ್ಣಯ ಟೀಕೆಯಲ್ಲಿ ಪ್ರತಿಪಾದಿಸಿರುವುದರಿಂದ ಇಲ್ಲಿ ಛಾಪಿಸಿರುತ್ತೇವೆ.

ಕುರ್ಯುರವಿಹೃತಃ ಷೋಳಶೀ ಶಂಸ್ತವ್ಯೋ ವಿಹೃತಾಸು ಹಿ ತಾಸು ಸ್ತುವತೇ ಯದಿ ಗೌರಿವೀತಂ ವಿಹೃತಃ ಷೋಳಶೀ ಶಂಸ್ತವ್ಯೋ ವಿಹೃತಾಸು ಹಿ ತಾಸು ಸ್ತುವತೇ ॥ ಖಂಡಃ ॥ 2 ॥

ಅಥಾತಶ್ಛಂದಾಂಸ್ಯೇವ ವ್ಯತಿಷಜತ್ಯಾತ್ವಾ ವಹಂತು ಹರಯ ಉಪೋಷು ಶೃಣುಹೀ ಗಿರ ಇತಿ ಗಾಯತ್ರೀಶ್ಚ ಪಂಕ್ತೀಶ್ಚ ವ್ಯತಿಷಜತಿ ಗಾಯತ್ರೋ ವೈ ಪುರುಷಃ ಪಾಂಕ್ತಾಃ ಪಶವಃ ಪುರುಷಮೇವ ತತ್ಪಶುಭಿರ್ವ್ಯತಿಷಜತಿ ಪಶುಷು ಪ್ರತಿಷ್ಠಾಪಯತಿ ಯದು ಗಾಯತ್ರೀ ಚ ಪಂಕ್ತಿಶ್ಚ ತೇ ದ್ವೇ ಅನುಷ್ಟುಭೌತೇನೋ ವಾಚೋ ರೂಪಾದನುಷ್ಟುಭೋ ರೂಪಾದ್ವಪ್ರರೂಪಾನ್ನೈತಿ ಯದಿಂದ್ರ ಪೃತನಾಜ್ಯೇಽಯಂ ತೇ ಅಸ್ತು ಹರ್ಯತ ಇತ್ಯುಷ್ಣಿಹಶ್ಚ ಬೃಹತೀಶ್ಚ ವ್ಯತಿಷಜತ್ಯೌಷ್ಣಿಹೋ ವೈ ಪುರುಷೋ ಬಾರ್ಹತಾಃ ಪಶವಃ ಪುರುಷಮೇವ ತತ್ಪಶುಭಿರ್ವ್ಯತಿಷಜತಿ ಪಶುಷು ಪ್ರತಿಷ್ಠಾಪಯತಿ ಯದುಷ್ಣಿಕ್ಚ ಬೃಹತೀ ಚ ತೇ ದ್ವೇ ಅನುಷ್ಟು ಭೌತೇನೋ ವಾಚೋ ರೂಪಾದನುಷ್ಟುಭೋ ರೂಪಾದ್ವಪ್ರ ರೂಪಾನ್ನೈತ್ಯಾಧೂರ್ಷ್ವಸ್ಮೈ ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣ ಇತಿ ದ್ವಿಪದಾಂ ಚ ತ್ರಿಷ್ಟುಭಂ ಚ ವ್ಯತಿಷಜತಿ ದ್ವಿಪಾದ್ವೈ ಪುರುಷೋ ವೀರ್ಯಂ ತ್ರಿಷ್ಟುಪ್ಪುರುಷಮೇವ ತದ್ವೀರ್ಯೇಣ ವ್ಯತಿಷಜತಿ ವೀರ್ಯೇ ಪ್ರತಿಷ್ಠಾಪಯತಿ ತಸ್ಮಾತ್ಪುರುಷೋ ವೀರ್ಯೇ ಪ್ರತಿಷ್ಠಿತಃ ಸರ್ವೇಷಾಂ ಪಶೂನಾಂ ವೀರ್ಯವತ್ತಮೋ ಯದು ದ್ವಿಪದಾ ಚ ವಿಂಶತ್ಯಕ್ಷರಾ ತ್ರಿಷ್ಟುಪ್ಚ ತೇ ದ್ವೇ ಅನುಷ್ಟುಭೌ ತೇನೋ ವಾಚೋ ರೂಪಾದನುಷ್ಟುಭೋರೂಪಾದ್ವಪ್ರರೂಪಾನ್ನೈತ್ಯ ಏಷ ಬ್ರಹ್ಮಾ ಪ್ರತೇಮಹೇ ವಿದಥೇ ಶಂಸಿಷಂ ಹರೀ ಇತ್ಯೇಪದಾಶ್ಚ ಜಗತೀಶ್ಚ ವ್ಯತಿಷಜತಿ ದ್ವಿಪಾದ್ವೈ ಪುರುಷೋ ಜಾಗತಾಃ ಪಶವಃ ಪುರುಷಮೇವ ತತ್ಪಶುಭಿರ್ವ್ಯತಿಷಜತಿ ಪಶುಷು ಪ್ರತಿಷ್ಠಾಪಯತಿ ತಸ್ಮಾತ್ಪುರುಷಃ ಪಶುಷು ಪ್ರತಿಷ್ಠಿತೋಽತ್ತಿ ಚೈನಾನಧಿ ಚ ತಿಷ್ಠತಿ ವಶೇ ಚಾಸ್ಯ ಯದು ದ್ವಿಪದಾ ಚ ಷೋಳಶಾಕ್ಷರಾ ಜಗತೀ ಚ ತೇ ದ್ವೇ ಅನುಷ್ಟುಭೌ ತೇನೋ ವಾಚೋ ರೂಪಾದನುಷ್ಟುಭೋ ರೂಪಾದ್ವಪ್ರ ರೂಪಾನ್ನೈತಿ ತ್ರಿಕದ್ರುಕೇಷು ಮಹಿಷೋ ಯವಾಶಿರಂ ಪ್ರೋಷ್ಟಸ್ಮೈ ಪುರೋರಥಮಿತ್ಯತಿಚ್ಛಂದಸಃ ಶಂಸತಿ ಚ್ಛಂದಸಾಂ ವೈ ಯೋ ರಸೋತ್ಯಕ್ಷರತ್ಸೋಽತಿಚ್ಛಂದಸಮಭ್ಯತ್ಯಕ್ಷರತ್ತದತಿಚ್ಛಂದಸೋಽತಿ ಚ್ಛಂದಸ್ತ್ವಂ ಸರ್ವೇಭ್ಯೋ ವಾ ಏಷ ಚ್ಛಂದೋಭ್ಯಸ್ಸನ್ನಿರ್ಮಿತೋ ಯತ್ ಷೋಳಶೀ ತದ್ಯದತಿಚ್ಛಂದಸಃ ಶಂಸತಿ ಸರ್ವೇಭ್ಯ ಏವೈನಂ ತಚ್ಛಂದೋಭ್ಯಃ ಸಂ ನಿರ್ಮಿಮೀತೇ ಸರ್ವೇಭ್ಯಶ್ಛಂದೋಭ್ಯಃ ಸ ನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ॥ ಖಂಡಃ ॥ 3 ॥

ಮಹಾನಾಮ್ನೀನಾಮುಪಸರ್ಗಾನುಪಸೃಜತ್ಯಯಂ ವೈ ಲೋಕಃ ಪ್ರಥಮಾ ಮಹಾನಾಮ್ನ್ಯಂತರಿಕ್ಷಲೋಕೋ ದ್ವಿತೀಯಾಸೌ ಲೋಕಸ್ತೃತೀಯಾ ಸರ್ವೇಭ್ಯೋ ವಾ ಏಷ ಲೋಕೇಭ್ಯಸ್ಸನ್ನಿರ್ಮಿತೋ ಯತ್ ಷೋಳಶೀ ತದ್ಯನ್ಮಹಾನಾಮ್ನೀನಾಮುಪಸರ್ಗಾನುಪಸೃಜತಿ ಸರ್ವೇಭ್ಯ ಏವೈನಂ ತಂ ಲೋಕೇಭ್ಯಸ್ಸನ್ನಿರ್ಮಿಮೀತೇ ಸರ್ವೇಭ್ಯೋ ಲೋಕೇಭ್ಯಸ್ಸಂನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ॥ ಪ್ರಪ್ರವಸ್ತ್ರಿಷ್ಟುಭಮಿಷಮರ್ಚತ ಪ್ರಾರ್ಚತ ಯೋ ವ್ಯತೀರಂಫಾಣಯದಿತಿ ಪ್ರಜ್ಞಾತಾನುಷ್ಟುಭಃ ಶಂ ಸಂ ತಿ ತದ್ಯಥೇಹ ಚೇಹ ಚಾಪಥೇನ ಚರಿತ್ವಾ ಪಂಥಾನಂ ಪರ್ಯವೇಯಾತ್ತಾದೃಕ್ತದ್ಯತ್ಪ್ರಜ್ಞಾತಾಽನುಷ್ಟುಭಃ ಶಂಸತಿ ಸ ಯೋ ವ್ಯಾಪ್ತೋ ಗತಶ್ರೀರಿವ ಮನ್ಯೇತಾ ವಿಹೃತಂ ಷೋಳಶಿನಂ ಶಂಸಯೇನ್ನೇಚ್ಛಂದಸಾಂ ಕೃಚ್ಛ್ರಾದವ ಪದ್ಯಾ ಇತ್ಯಥ ಯಃ ಪಾಪ್ಮಾನಮಪಜಿಘಾಂಸುಃ ಸ್ಯಾದ್ವಿಹೃತಂ ಷೋಳಶಿನಂ ಶಂಸಯೇದ್ವ್ಯತಿಷಕ್ತ ಇವ ವೈ ಪುರುಷಃ ಪಾಪ್ಮನಾ ವ್ಯತಿಷಕ್ತಮೇವಾಸ್ಮೈ ತತ್ಪಾಪ್ಮಾನಂ ಶಮಲಮಪಹಂತ್ಯಪಾಪ್ಮಾನಂ ಹತೇ ಯ ಏವಂ ವೇದೋದ್ಯದ್ಬ್ರಧ್ನಸ್ಯ

ವಿಷ್ಟಪಮಿತ್ಯುತ್ತಮಯಾ ಪರಿದಧಾತಿ ಸ್ವರ್ಗೋ ವೈ ಲೋಕೋ ಬ್ರಧ್ನಸ್ಯ ವಿಷ್ಟಪಂ ಸ್ವರ್ಗಮೇವ ತಂ ಲೋಕಂ ಯಜಮಾನಂ ಗಮಯತ್ಯಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ ಸರ್ವೇಭ್ಯೋ ವಾ ಏಷ ಸವನೇಭ್ಯಸ್ಸಂನಿರ್ಮಿತೋ ಯತ್ ಷೋಳಶೀ ತದ್ಯದಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ ಪೀತವದ್ವೈ ಪ್ರಾತಃ ಸವನಂ ಪ್ರಾತಃ ಸವನಾದೇವೈನಂ ತತ್ಸಂನಿರ್ಮಿಮೀತೇಽಥೋ ಇದಂ ಸವನಂ ಕೇವಲಂ ತ ಇತಿ ಮಾಧ್ಯಂದಿನಂ ವೈ ಸವನಂ ಕೇವಲಂ ಮಾಧ್ಯಂದಿನಾದೇವೈನಂ ತತ್ಸ ವನಾತ್ಸಂ ನರ್ಮಿಮೀತೇ ಮಮದ್ಧಿ ಸೋಮಂ ಮಧುಮಂತಮಿಂದ್ರೇತಿ ಮದ್ವದ್ವೈ ತೃತೀಯ ಸವನಂ ತೃತೀಯ ಸವನಾದೇವೈನಂ ತತ್ಸಂನಿರ್ಮಿಮೀತೇ ಸತ್ರಾವೃಷನ್ ಜಠರ ಆವೃಷಸ್ವೇತಿ ವೃಷಣ್ವದ್ವೈ ಷೋಳಶಿನೋ ರೂಪಂ ಸರ್ವೇಭ್ಯೋ ವಾ ಏಷ ಸವನೇಭ್ಯಸ್ಸಂ ನಿರ್ಮಿತೋ ಯತ್ ಷೋಳಶೀ ತದ್ಯದಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಜಯತಿ ಸರ್ವೇಭ್ಯ ಏವೈನಂ ತತ್ಸವನೇಭ್ಯಃ ಸಂನಿರ್ಮಿಮೀತೇ ಸರ್ವೇಭ್ಯಃ ಸವನೇಭ್ಯಃ ಸನ್ನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ಮಹಾನಾಮ್ನೀನಾಂ ಪಂಚಾಕ್ಷರಾನುಪಸರ್ಗಾನುಪಸೃಜತ್ಯೇಕಾದಶಾಕ್ಷರೇಷು ಪಾದೇಷು ಸರ್ವೇಭ್ಯೋ ವಾ ಏಷ ಛಂದೋಭ್ಯಃ ಸಂನಿರ್ಮಿತೋ ಯತ್ ಷೋಳಶೀ ತದ್ಯನ್ಮಹಾನಾಮ್ನೀನಾಂ ಪಂಚಾಕ್ಷರಾನುಪಸರ್ಗಾನುಪಸೃಜತ್ಯೇಕಾದಶಾಕ್ಷರೇಷು ಪಾದೇಷು ಸರ್ವೇಭ್ಯ ಏವೈನಂ ತಚ್ಛಂದೋಭ್ಯಃ ಸಂನಿರ್ಮಿಮೀತೇ ಸರ್ವೇಭ್ಯಶ್ಛಂದೋಭ್ಯಸ್ಸಂನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ॥ ಖಂಡಃ ॥ 4 ॥

**ಋಗ್ವೇದ ಬ್ರಾಹ್ಮಣ ಚತುರ್ಥಪಂಚಿಕಾಯಾಂ ಚತುರ್ಥ ಖಂಡಃ ಸಂಪೂರ್ಣಃ ॥**

## ಅಥೈತರೇಯೋಪನಿಷಚ್ಚತುರ್ಥಾರಣ್ಯಕಂ

★ ॥ ಓಂ ॥ ವಿದಾಮಘನ್ವಿದಾ ಗಾತುಮನುಶಂಸಿಷೋ ದಿಶಃ ॥ ಶಿಕ್ಷಾ ಶಚೀನಾಂ ಪತೇ ಪೂರ್ವೀಣಾಂ ಪುರೂವಸೋ । ಆಭಿಷ್ಟ್ವಮಭಿಷ್ಟಿಭಿಃ ಪ್ರಚೇತನ ಪ್ರಚೇತಯ ॥ ಇಂದ್ರ ದ್ಯುಮ್ನಾಯ ನ ಇಷ ಏವಾಹಿ ಶಕ್ರಃ। ರಾಯೇ ವಾಜಾಯ ವಜ್ರಿವಃ ಶವಿಷ್ಠ ವಜ್ರಿನ್ನೃಂಜಸೇ ॥ ಮಂಹಿಷ್ಠ ವಜ್ರಿನ್ನೃಂಜಸ ಆಯಾಹಿ ಪಿಬ ಮತ್ಸ್ವ । ವಿದಾ ರಾಯಃ ಸುವೀರ್ಯಂ ಭುವೋ ವಾಜಾನಾಂ ಪತಿರ್ವಶಾಂ ಅನು ॥ ಮಂಹಿಷ್ಠ ವಜ್ರಿನ್ನೃಂಜಸೇ ಯಃ ಶವಿಷ್ಠಃ ಶೂರಾಣಾಂ । ಯೋ ಮಂಹಿಷ್ಠೋ ಮಘೋನಾಂ ಚಿಕಿತ್ವೋ ಅಭಿ ನೋನಯ ॥ ಇಂದ್ರೋ ವಿದೇ ತಮು ಸ್ತುಷೇ ವಶೀ ಹಿ ಶಕ್ರಃ। ತಮೂತಯೇ ಹವಾಮಹೇ ಜೇತಾರಮಪರಾಜಿತಂ ॥ ಸ ನಃ ಪರ್ಷದತಿದ್ವಿಷಃ ಕ್ರತುಶ್ಛಂದ ಋತಂ ಬೃಹತ್। ಇಂದ್ರಂ ಧನಸ್ಯ ಸಾತಯೇ ಹವಾಮಹೇ ಜೇತಾರಮಪರಾಜಿತಂ ॥ ಸ ನಃ ಪರ್ಷದತಿದ್ವಿಷಃ ಸ ನಃ ಪರ್ಷದತಿಸ್ರಿಧಃ । ಪೂರ್ವಸ್ಯ ಯತ್ತೇ ಅದ್ರಿವಃ ಸುಮ್ನ ಆಧೇಹಿ ನೋ ವಸೋ ॥ ಪೂರ್ತಿಃ ಶವಿಷ್ಠ ಶಸ್ಯತ ಈಶೇ ಹಿ ಶಕ್ರಃ । ನೂನಂ ತಂ

---

★ ಐತರೇಯೋಪನಿಷತ್ತಿನಲ್ಲಿ ಐದು ಆರಣ್ಯಕಗಳು. 'ತಾ ನದೇನ ವಿಹರಂತಿ' ಇತ್ಯಾದಿಗಳು ೧ನೇ ಆರಣ್ಯಕವು. 'ಏಷ ಪಂಥಾ ಏತತ್ಕರ್ಮ' ಇತ್ಯಾದಿಗಳು ೨ನೇ ಆರಣ್ಯಕವು. 'ಅಥಾತಃ ಸಂಹಿತಾಯಾಃ' ಇತ್ಯಾದಿಯು ೩ನೇ ಆರಣ್ಯಕವು. ಈ ೨ನೇ ೩ನೇ ಆರಣ್ಯಕಗಳು ಐತರೇಯ ಭಾಷ್ಯದಲ್ಲಿ ವ್ಯಾಖ್ಯಾತಗಳಾಗಿವೆ. ಪು.೩೩೩-೭೧೩. 'ವಿದಾ ಮಘವನ್ ವಿದಾ' ಇತ್ಯಾದಿಯು ಐತರೇಯ ಚತುರ್ಥಾರಣ್ಯಕೋಪನಿಷತ್ತಿನಲ್ಲಿ ೧ನೇ ಅಧ್ಯಾಯವು. ೪ನೇ ಆರಣ್ಯಕದಲ್ಲಿ ಒಂದೇ ಅಧ್ಯಾಯವು.

ನವ್ಯಂ ಸನ್ಯಸೇ ಪ್ರಭೋ ಜನಸ್ಯ ವೃತ್ರಹನ್॥ ಸ ಮನ್ಯೇಷು ಬ್ರವಾವಹೈ ಶೂರೋ ಯೋ ಗೋಷು ಗಚ್ಛತಿ। ಸಖಾ ಸುಶೇವೋ ಅದ್ವಯಾಃ॥ ಏವಾಹ್ಯೇವೈ ವಾಹ್ಯಗ್ನಾಂ 3 ಇ ॥ ಏವಾಹ್ಯೆ ವೈವಾಹೀಂದ್ರಂ ॥ ಏವಾಹ್ಯೈವೈವಾಹಿ ವಿಷ್ಣಾಂ 3 ಉ ॥ ಏವಾಹ್ಯೈವೈವಾಹಿ ಪೂಷನ್ ॥ ಏವಾಹ್ಯೈವೈವಾಹಿ ದೆ ವಾಃ ॥ ಏವಾ ಹಿ ಶಕ್ರೋ ವಶೀ ಹಿ ಶಕ್ರೋ ವಶಾಂ ಅನು। ಆಯೋ ಮನ್ಯಾಯ ಮನ್ಯವ ಉಪೋ ಮನ್ಯಾಯ ಮನ್ಯವೇ॥ ಉಪೇಹಿ ವಿಶ್ವಧಾ॥ ವಿದಾ ಮಘವನ್ವಿದೋಂ 3 ॥ 1 ॥

॥ ಇತಿ ಚತುರ್ಥಾರಣ್ಯಕೇ ಪ್ರಥಮೋಽಧ್ಯಾಯಃ ॥

## ಅಥ ಕರ್ಮನಿರ್ಣಯ ಮೂಲಭೂತ ವೇದಭಾಗಃ

ಓಂ ॥ ಗಾಯತ್ರೀ ಛಂದಃ ॥ 1 ॥ 1 ॥ 29 ॥ ಆತ್ವಾ ವಹಂತು ಹರಯೋ ವೃಷಣಂ ಸೋಮ ಪೀತಯೇ । ಇಂದ್ರ ತ್ವಾ ಸೂರ ಚಕ್ಷಸಃ ॥ ಇಮಾ ಧಾನಾ ಘೃತಸ್ನುವೋ ಹರೀ ಇಹೋ ಪವಕ್ಷತಃ । ಇಂದ್ರಂ ಸುಖತಮೇ ರಥೇ॥ ಇಂದ್ರಂ ಪ್ರಾತರ್ಹವಾಮಹ ಇಂದ್ರಂ ಪ್ರತ್ಯಯದ್ಧ್ವರೇ। ಇಂದ್ರಂ ಸೋಮಸ್ಯ ಪೀತಯೇ ॥ ಪಂಕ್ತಿ ಛಂದಃ ॥ 1 ॥ 6 ॥ 3 ॥ ಉಪೋಷು ಶೃಣುಹೀ ಗಿರೋ ಮಘವನ್ಮಾ ತಥಾ ಇವ । ಯದಾ ನಃ ಸೂನೃತಾವತಃ ಕರ ಆದರ್ಥಯಾ ಸ ಇದ್ಯೋಜಾನ್ವಿಂದ್ರ ತೇ ಹರೀ ॥ ಸುಸಂದೃಶಂ ತ್ವಾ ವಯಂ ಮಘವನ್ವಂದಿಷೀ ಮಹಿ । ಪ್ರನೂನಂ ಪೂರ್ಣಬಂಧುರಃ ಸ್ತುತೋ ಯಾಹಿ ವಶಾಂ ಅನು ಯೋಜಾನ್ವಿಂದ್ರ ತೇ ಹರೀ ॥ ಸಘಾತಂ ವೃಷಣಂ ರಥಮಧಿತಿಷ್ಠಾತಿ ಗೋವಿಂದಂ॥ ಯಃ ಪಾತ್ರಂ ಹಾರಿಯೋಜನಂ ಪೂರ್ಣಮಿಂದ್ರ ಚಿಕೇತತಿ ಯೋಜಾನ್ವಿಂದ್ರ ತೇ ಹರೀ ॥ ಉಷ್ಣಿಕ್ ಛಂದಃ ॥ 6 ॥ 1 ॥ 5 ॥ ಯದಿಂದ್ರ ಪೃತನಾಜ್ಯೇ ದೇವಾಸ್ತ್ವಾ ದಧಿರೇ ಪುರಃ। ಆದಿತ್ತೇ ಹರ್ಯತಾ ಹರೀವ ವಕ್ಷತುಃ ॥ 6 ॥ 1 ॥ 6 ॥ ಯದಾ ವೃತ್ರಂ ನದೀ ವೃತಂ ಶವಸಾ ವಜ್ರಿನ್ನವಧೀಃ। ಆದಿತ್ತೇ ಹರ್ಯತಾ ಹರೀವ ವಕ್ಷತುಃ॥ ಯದಾ ತೇ ವಿಷ್ಣುರ್ರೋಜಸಾ ತ್ರೀಣಿ ಪದಾ ವಿಚಕ್ರಮೇ। ಆದಿತ್ತೇ ಹರ್ಯತಾ ಹರೀವ ವಕ್ಷತುಃ ॥ ಬೃಹತೀ ಛಂದಃ ॥ 3 ॥ 3 ॥ 8 ॥ ಅಯಂ ತೇ ಅಸ್ತು ಹರ್ಯತಃ ಸೋಮ ಆಹರಿಭಿಸ್ಸುತಃ । ಜುಷಾಣ ಇಂದ್ರ ಹರಿಭಿರ್ನ ಆಗಹ್ಯಾತಿಷ್ಠ ಹರಿತಂ ರಥಂ ॥ ಹರ್ಯನ್ನುಷಸಮರ್ಚಯಃ ಸೂರ್ಯಂ ಹರ್ಯನ್ನರೋಚಯಃ। ವಿದ್ವಾಂಶ್ಚಿಕಿತ್ವಾನ್ಹರ್ಯಶ್ವ ವರ್ಧಸ ಇಂದ್ರ ವಿಶ್ವಾ ಅಭಿಶ್ರಿಯಃ ॥ ದ್ಯಾಮಿಂದ್ರೋ ಹರಿಧಾಯ ಸಂ ಪೃಥಿವೀಂ ಹರಿವರ್ಪಸಂ। ಆಧಾರಯದ್ಧರಿತೋರ್ಭೂರಿ ಭೋಜನಂ ಯಯೋರಂತರ್ಹರಿಶ್ಚರತ್॥ ದ್ವಿಪಾದಾ ಋಕ್ ॥ 5 ॥ 3 ॥ 25 ॥ ಅಧೂರ್ಷ್ವಸ್ಮೈದಧಾತಾಶ್ವಾನಿಂದ್ರೋ ನ ವಜ್ರೀ ಹಿರಣ್ಯಬಾಹುಃ । ಏಷ ಬ್ರಹ್ಮಾಯ ಋತ್ವಿಯ ಇಂದ್ರೋ ನಾಮ ಶ್ರುತೋ ಗೃಣೇ ॥ ವಿಶ್ರುತಯೋ ಯಥಾ ಪಥೋ ಇಂದ್ರ ತ್ವದ್ಯೇತಿ ರಾತಯಃ । ತ್ವಾಮಿಚ್ಛವಸಸ್ಪತೇ ಯಂತಿ ಗಿರೋ ನ ಸಂಯತಃ॥ ತ್ರಿಷ್ಟುಪ್ಛಂದಃ ॥ 5 ॥ 3 ॥ 13 ॥ ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣೋರ್ವಾಚೀನೋ ಹರಿಭಿರ್ಯಾಹಿ ತೂಯಂ । ಅಸ್ಮಿನ್ನೂಷು ಸವನೇ ಮಾದಯಸ್ವೋಪಬ್ರಹ್ಮಾಣಿ ಶೃಣವ ಇಮಾ ನಃ । ಜಗತೀ ಛಂದಃ ॥ 8 ॥ 5 ॥ 5 ॥ ಪ್ರತೇಮಹೇ ವಿದಥೇ ಶಂಸಿಷಂ ಹರೀ ಪ್ರತೇವನ್ವೇ ವನುಷೋ ಹರ್ಯತಂ ಮದಂ। ಘೃತಂ ನ ಯೋ ಹರಿಭಿಶ್ಚಾರು ಸೇಚತ ಆತ್ವಾ ವಿಶಂತು ಹರಿವರ್ಪಸಂ ಗಿರಃ ॥ ಹರಿಂ ಹಿ ಯೋನಿಮಭಿಯೇ ಸಮಸ್ವರನ್ ಹಿನ್ವಂತೋ ಹರೀ ದಿವ್ಯಂ ಯಥಾ ಸದಃ। ಆಯಂ ಪೃಣಂತಿ ಹರಿಭಿರ್ನ ಧೇನವ ಇಂದ್ರಾಯ ಶೂಷಂ ಹರಿವಂತಮರ್ಚತ ॥ ಸೋ ಅಸ್ಯ ವಜ್ರೋ ಹರಿತೊ ಯ ಆಯಸೋ ಹರಿರ್ನಿಕಾಮೋ ಹರಿರಾಗಭಸ್ತ್ಯೋಃ । ದ್ಯುಮ್ನೀ ಸುಶಿಪ್ರೋ

ಹರಿಮನ್ಯು ಸಾಯಕ ಇಂದ್ರೇ ನಿರೂಪಾ ಹರಿತಾ ಮಿಮಿಕ್ಷಿರೇ॥ 3 ॥ ಅತಿ ಛಂದಃ ॥ 2 ॥ 6 ॥ 28 ॥ ತ್ರಿಕದ್ರುಕೇಷು ಮಹಿಷೋ ಯವಾಶಿರಂ ತು ವಿಶುಷ್ಮಸ್ತ್ಪ ಪತ್ಸೋಮಮಪಿಬದ್ವಿಷ್ಣುನಾ ಸುತಂ ಯಥಾ ವಶತ್। ಸ ಈಂ ಮಮಾದ ಮಹಿ ಕರ್ಮ ಕರ್ತವೆ ಮಹಾಮುರುಂ ಸೈನಂ ಸಶ್ಚದ್ದೇವೋ ದೇವಂ ಸತ್ಯಮಿಂದ್ರಂ ಸತ್ಯಮಿಂದುಃ॥ 1 ॥ ಅಧಿತ್ವಿಷೀ ಮಾ ಅಭ್ಯೋಜಸಾ ಕ್ರಿವಿಂ ಯುಧಾ ಭವಧಾ ರೋದಸೀ ಅಪೃಣದಸ್ಯ ಮಜ್ಮನಾ ಪ್ರವಾವೃಧೇ। ಅಧತ್ತಾನ್ಯಂ ಜಠರೇ ಪ್ರೇವರಿಚ್ಯತ ಸೈನಂ ಸಶ್ಚದ್ದೇವೋ ದೇವಂ ಸತ್ಯಮಿಂದ್ರಂ ಸತ್ಯಮಿಂದುಃ ॥ 1 ॥ 2 ॥ ಸಾಕಂ ಜಾತಃ ಕ್ರತುನಾ ಸಾಕಮೋಜಸಾ ವವಕ್ಷಿಥ ಸಾಕಂ ವೃದ್ಧೋ ವೀರ್ಯೈಸ್ಸಾಸಹಿರ್ಮೃಧೋ ವಿಚರ್ಷಣಿಃ। ದಾತಾ ರಾಧ ಸ್ತುವತೇ ಕಾಮ್ಯಂ ವಸು ಸೈನಂ ಸಶ್ಚದ್ದೇವೋ ದೇವಂ ಸತ್ಯಮಿಂದ್ರಂ ಸತ್ಯಮಿಂದುಃ ॥ 3 ॥ ವೇಪಶಕ್ವರ್ಯಃ ॥ 8 ॥ 7 ॥ 21 ॥ ಪ್ರೋಷ್ವಸ್ಮೈ ಪುರೋರಥಮಿಂದ್ರಾಯ ಶೂಷಮರ್ಚತ। ಅಭೀಕೇ ಚಿದುಲೋಕಕೃತ್ಸಂಗೇ ಸಮತ್ಸು ವೃತ್ರಹಾಸ್ಮಾಕಂ ಬೋಧಿ ಚೋದಿತಾ ನಭಂತಾಮನ್ಯಕೇಷಾಂ ಜ್ಯಾಕಾ ಅಧಿಧನ್ವಸು ॥ 1 ॥ ತ್ವಂ ಸಿಂಧೂಂ ರವಾಸೃಜೋ ಧರಾಚೋ ಅಹನ್ನಹಿಂ। ಅಶತ್ರುರಿಂದ್ರ ಜಜ್ಞಿಷೇ ವಿಶ್ವಂ ಪುಷ್ಯಂತಿ ವಾರ್ಯಂ ತಂ ತ್ವಾ ಪರಿಷ್ವಜಾಮಹೇ ನಭಂ ತಾಮನ್ಯಕೇಷಾಂ ಜ್ಯಾಕಾ ಅಧಿಧನ್ವಸು ॥ 2 ॥ ವಿಷು ವಿಶ್ವಾ ಅರಾತಯೋರ್ಯೋನ ಶಂ ತನೋ ಧಿಯಃ। ಅಸ್ತಾಸಿ ಶತ್ರವೇ ವಧಂ ಯೋ ನ ಇಂದ್ರ ಜಿಘಾಂ ಸತಿ ಯಾತೇರಾತಿರ್ದದಿರ್ವಸು ನಭಂತಾಮನ್ಯಕೇಷಾಂ ಜ್ಯಾಕಾ ಅಧಿಧನ್ವಸು ॥ 3 ॥ 6 ॥ 5 ॥ 5 ॥ ಪ್ರಪ್ರವಸ್ತ್ರಿಷ್ಟುಭಮಿಷಂ ಮಂದದ್ವಿರಾಯೇಂದವೇ । ಧಿಯಾ ವೋ ಮೇಧಸಾತಯೇ ಪುರಂಧ್ಯಾ ವಿವಾಸತಿ ॥ 1 ॥ ನದಂ ವ ಓದತೀನಾಂ ನದಂ ಯೋಯುವತೀನಾಂ । ಪತಿಂ ವೋ ಅಘ್ನ್ಯಾನಾಂ ಧೇನೂನಾಮಿಷುಧ್ಯಸಿ ॥ 2 ॥ ತಾ ಅಸ್ಯ ಸೂದದೋ ಹಸಃ ಸೋಮಂ ಶ್ರೀಣಂತಿ ಪೃಶ್ನಯಃ । ಜನ್ಮನ್ದೇವಾನಾಂ ವಿಶಸ್ತ್ರಿಷ್ವಾರೋಚನೇ ದಿವಃ ॥ 3 ॥ 6 ॥ 5 ॥ 6 ॥ ಅರ್ಜತ ಪಾರ್ಚತ ಪ್ರಿಯ ಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥ 1 ॥ ಆವಸ್ವರಾತಿ ಗರ್ಗರೋ ಗೋಧಾ ಪರಿ ಸ ನಿಷ್ವಣತ್। ಪಿಂಗಾ ಪರಿ ಚ ನಿಷ್ಕದದಿಂದ್ರಾಯ ಬ್ರಹ್ಮೋದ್ಯತಂ ॥ 2 ॥ ಆಯತ್ಪತಂ ತ್ಯೇನ್ಯಸ್ಸುದುಘಾ ಅನಪಸ್ಫುರಃ । ಅಪಸ್ಫುರಂ ಗೃಭಾಯತ ಸೋಮಮಿಂದ್ರಾಯ ಪಾತವೇ ॥ 3 ॥ 6 ॥ 5 ॥ 7 ॥ ಯೋ ವ್ಯತೀ ರಂಫಾಣಯತ್ಸುಯುಕ್ತಾಂ ಉಪ ದಾಶುಷೇ । ತಕ್ವೋ ನೇತಾ ತದಿದ್ವಪುರುಪಮಾ ಯೋ ಅಮುಚ್ಯತ ॥ 1 ॥ ಅತೀದು ಶಕ್ರ ಓಹತ ಇಂದ್ರೋ ವಿಶ್ವಾ ಅತಿದ್ವಿಷಃ । ಭಿನತ್ಕನೀನ ಓದನಂ ಪಚ್ಯಮಾನಂ ಪರೋ ಗಿರಾ ॥ 2 ॥ ಅರ್ಭಕೋ ನ ಕುಮಾರಕೋಽಧಿ ತಿಷ್ಠನ್ನವಂ ರಥಂ। ಸ ಪಕ್ಷನ್ಮಹಿಷಂ ಮೃಗಂ ಪಿತ್ರೇ ಮಾತ್ರೇ ವಿಭುಕ್ರತುಂ ॥ 3 ॥ ಏತಾಸ್ಸರ್ವಾಃ ಪ್ರಜ್ಞಾತಾನುಷ್ಟುಭಃ ॥ 6 ॥ 5 ॥ 6 ॥ ಉದ್ಯದ್ಬ್ರಧ್ನಸ್ಯ ವಿಷ್ಟಪಂ ಗೃಹಮಿಂದ್ರಶ್ಚ ಗನ್ವಹಿ । ಮಧ್ವಃ ಪೀತ್ವಾ ಸಚೇವಹಿ ತ್ರಿಃ ಸಪ್ತ ಸಂಖ್ಯುಃ ಪದೇ ॥ ಇತಿ ಶ್ರೀ ಪರಿದಧ್ಯಾತ್ ॥ 8 ॥ 5 ॥ 8 ॥ ಅಪಾಃ ಪೂರ್ವೇಷಾಂ ಹರಿವಃ ಸುತಾನಾಮಥೋ ಇದಂ ಸವನಂ ಕೇವಲಂ ತೇ । ಮಮದ್ಧಿ ಸೋಮಂ ಮಧುಮಂತಮಿಂದ್ರ ಸತ್ರಾ ವೃಷನ್ಜಠರ ಆವೃಷಸ್ವ ॥ ॥ ಇತಿ ಋಙ್ಮಂತ್ರಃ ಸಂಪೂರ್ಣಃ ॥

॥ ಇತಿ ಶ್ರೀಮತ್ಕರ್ಮನಿರ್ಣಯಃ ಮೂಲಭೂತ ವೇದಭಾಗಃ ॥

॥ ಸಂಪೂರ್ಣಃ ॥

॥ ಶ್ರೀಃ ॥

# ಕರ್ಮನಿರ್ಣಯವು

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**ಮೂಲ ॥ ಯ ಇಜ್ಯತೇ ವಿಧೀಶಾನ ಶಕ್ರ ಪೂರ್ವೈಸ್ಸದಾ ಮಖೈಃ ।**
**ರಮಾಪ್ರಣಯಿನೇ ತಸ್ಮೈ ಸರ್ವಯಜ್ಞಭುಜೇ ನಮಃ ॥ ೧ ॥**

**ಅರ್ಥ ॥** ಯಾವನು ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳಿಂದ ಸರ್ವದಾ ಯಜ್ಞಗಳಿಂದ ಪೂಜಿಸಲ್ಪಡುತ್ತಾನೋ, ಅಂತಹ ಸರ್ವ ಯಾಗಗಳನ್ನು ಭೋಗಿಸುವ ಲಕ್ಷ್ಮೀಪತಿಯಾದ ಶ್ರೀಪರಮಾತ್ಮನಿಗೋಸ್ಕರ ನಮಸ್ಕಾರವು.

**ತಾತ್ಪರ್ಯ ॥** (1) ''ದೇವತೆಗಳಿಗೆ ಜ್ಞಾನ, ಕರ್ಮಗಳಲ್ಲಿ ಅಧಿಕಾರವಿಲ್ಲ, ಏಕೆಂದರೆ- ಅವರಿಗೆ ಯಜ್ಞಫಲವಾದ ಪದವಿಯು ಪ್ರಾಪ್ತವಾಗಿರುವುದರಿಂದ ರಾಗ(ಫಲಾಪೇಕ್ಷೆ)ವಿಲ್ಲ. ಯಾರಿಗೆ ಎಲ್ಲಿ ರಾಗವಿಲ್ಲವೋ ಅವನು ಅದರಲ್ಲಿ ಅಧಿಕಾರಿಯಾಗಲಾರನು. ವಿರಕ್ತನು ವ್ಯಾಪಾರದಲ್ಲಿ ಅಧಿ ಕಾರಿಯಲ್ಲವಷ್ಟೆ! ಸ್ತ್ರೀಯರಂತೆಯೇ ಉಪನಯನವಿಲ್ಲದಿರುವುದರಿಂದಲೂ ಅಧಿಕಾರವಿಲ್ಲ. ಉಪನೀತರಿಗೇನೇ ಅಧಿಕಾರವಿರುವುದು. ಪಶ್ವಾದಿಗಳಂತೆಯೇ ಮನುಷ್ಯತ್ವವಿಲ್ಲದಿರುವುದರಿಂದಲೂ ಅಧಿಕಾರವಿಲ್ಲ'' ಎಂದು ಕೆಲವರು ಆಶಂಕಿಸುವರು. ಅವರ ಮತವನ್ನು ನಿರಾಕರಿಸುವುದಕ್ಕೋಸ್ಕರ ಪೂರ್ವಾರ್ಧದಿಂದ 'ಬ್ರಹ್ಮಾದಿದೇವತೆಗಳು ಯಾಗಗಳಿಂದ ಶ್ರೀಹರಿಯನ್ನು ಪೂಜಿಸುತ್ತಾರೆಂದು' 'ಸರ್ವಯಜ್ಞ ಭುಜೇ' ಎನ್ನುವುದರಿಂದ ಹೇಳಿದ್ದನ್ನೇ ವಿವರಿಸಿದರು. ಅಂದರೆ, ದೇವತೆಗಳು ಅಪರೋಕ್ಷಜ್ಞಾನಿಗಳೇ; ಅವರು ಮಾಡತಕ್ಕ ಯಾಗಾದಿಗಳಿಗೆ ಆಯಾಯ ಪದಪ್ರಾಪ್ತಿಯು ಫಲವಲ್ಲ, ಮುಕ್ತಿಯಲ್ಲಿರುವ ಆನಂದಾತಿಶಯರೂಪವಾದ ಫಲಾಂತರವೇ ಇದೆ. ಆ ಫಲದಲ್ಲಿ ಅಪೇಕ್ಷೆಯಿದೆ. ''ಸಪತ್ನೀಂ ಮೇ ಪರಾಧಮ'' ಇತ್ಯಾದಿ ವೇದವಾಕ್ಯಗಳಲ್ಲಿ ಶಚ್ಯಾದ್ಯುತ್ತಮ ಸ್ತ್ರೀಯರಿಗೂ ವೇದವಿದ್ಯಾಧಿಕಾರವು ದೃಷ್ಟವಾದ ಪ್ರಯುಕ್ತ ಸ್ತ್ರೀಯರಂತೆ ಉಪನಯನವಿಲ್ಲದಿರುವುದರಿಂದ ವೇದವಿದ್ಯಾಧಿಕಾರವಿಲ್ಲವೆಂದು ಹೇಳಿದ್ದು ಸರಿಯಲ್ಲ, ಅಲ್ಲದೆ ''ಸ್ತ್ರೀಣಾಂ ಪ್ರಧಾನಕರ್ಮೈವ ಯಥೋಪನಯನಂ ತಥಾ'' ಎಂದಿರುವುದರಿಂದ ಸ್ತ್ರೀಯರಿಗೆ ವಿವಾಹವೇ ಉಪನಯನತುಲ್ಯವು, ಎಂದು ಹೇಳಿದರೆ ''ದೇವಾ ಏವ ಬ್ರಹ್ಮಚಾರಿಣ; ದೇವಾ ಏವ ಗೃಹಸ್ಥಾಃ'' ಎಂಬ ಶ್ರುತಿಯಲ್ಲಿ ಬ್ರಹ್ಮಚರ್ಯಾದ್ಯಾಶ್ರಮಗಳು ಇವೆ ಎಂದು ಹೇಳಿರುವುದರಿಂದ ಉಪನಯನವಿಲ್ಲದಿರುವ ಪ್ರಯುಕ್ತ ಅಧಿಕಾರವಿಲ್ಲವೆಂದು ಹೇಳಿದ್ದು ಸರಿಯಲ್ಲ. ''ಅಯಮಗ್ನೇ ಜರಿತಾ'' ಇತ್ಯಾದಿ ಮಂತ್ರಗಳಲ್ಲಿ ಜರಿತರಿ ಮೊದಲಾದ ಪಕ್ಷಿಗಳಿಗೂ ಅಧಿಕಾರವಿದ್ದುದರಿಂದ ಮನುಷ್ಯತ್ವವಿಲ್ಲದಿರುವುದರಿಂದ ದೇವತೆಗಳಿಗೆ ಅಧಿಕಾರವಿಲ್ಲವೆನ್ನುವುದು ಸರಿಯಲ್ಲ. ಆದುದರಿಂದ ವಿಶಿಷ್ಟಬುದ್ಧ್ಯಾದಿಗಳೇ ಅಧಿಕಾರಕ್ಕೆ ಪ್ರಯೋಜಕ ಗಳಾದುದರಿಂದ ಅವುಗಳು ದೇವತೆಗಳಿಗೂ ಇರುವುದರಿಂದ ಅಧಿಕಾರವು ಇರುತ್ತದೆಂದು ಸಿದ್ಧವಾಗುವುದು. (2) ಈ ವಿಷಯವು ''ತದುಪರ್ಯಪಿ ಬಾದರಾಯಣಃ ಸಂಭವಾತ್''

(ಬ್ರ.ಸೂ.ಅಧ್ಯಾ.1.ಪಾ.3.ಅಧಿ.8) ಇತ್ಯಾದಿ ಸೂತ್ರಗಳಲ್ಲಿ ವಿಶದೀಕೃತವಾಗಿದೆ. (3) ಕರ್ಮನಿರ್ಣಯ ವನ್ನು ಜೈಮಿನ್ಯಾಚಾರ್ಯರು ಪೂರ್ವ (ಕರ್ಮ) ಮೀಮಾಂಸಾದಲ್ಲಿಯೇ ಮಾಡಿರುವುದರಿಂದ ಈ ಪ್ರಕರಣವು ಏತಕ್ಕೆಂದರೆ- ಜೈಮಿನ್ಯಾಚಾರ್ಯರು ಕರ್ಮಸ್ವರೂಪವನ್ನು ಮಾತ್ರ ನಿರ್ಣಯಿಸಿರುವರು. ವಿಷಯ ವೈರಾಗ್ಯ, ಈಶ್ವರಜ್ಞಾನ, ಭಕ್ತಿಸಮರ್ಪಣಾದಿರೂಪವಾದ ಇತಿಕರ್ತವ್ಯತಾ (ಅಂಗ) ವನ್ನು ನಿರೂಪಿಸಲಿಲ್ಲ. ಅವುಗಳಿಗೆ ಅಂಗಭೂತಗಳಾದ ಮಂತ್ರಗಳು ಭಗವತ್ಪರಗಳೆಂದೂ ನಿರೂಪಿಸಲಿಲ್ಲ. ಅಂತಃಕರಣ ಶುದ್ಧಿಯಾಗಿ ಈಶ್ವರ ಸಾಕ್ಷಾತ್ಕಾರವೇ ಮುಖ್ಯಫಲವೆಂದೂ ನಿರೂಪಿಸಲಿಲ್ಲ. ಅವುಗಳನ್ನು ನಿರೂಪಿಸುವುದಕ್ಕಾಗಿ ಈ ಪ್ರಕರಣವನ್ನು ಶ್ರೀಮದಾಚಾರ್ಯರು ರಚಿಸಿದರು. ಈ ವಿಷಯವು ''ಅನ್ಯಾರ್ಥಂ ತು ಜೈಮಿನಿಃ'' (ಬ್ರ.ಸೂ.ಅಧ್ಯಾ.1 ಪಾ.4.ಅಧಿ.5) ಇತ್ಯಾದಿ ಸೂತ್ರಗಳಲ್ಲಿ ಸಿದ್ಧವಾಗಿದೆ. ತಥಾ ಚ ಈ ಪ್ರಕರಣಕ್ಕೆ ನಾರಾಯಣನು ಮುಖ್ಯ ವಿಷಯನು. ಕರ್ಮಾದಿಗಳು ಅಮುಖ್ಯವಿಷಯವು. ನಾರಾಯಣನ ಜ್ಞಾನವು ಮುಖ್ಯ ಪ್ರಯೋಜನವು. ಕರ್ಮಾದಿಗಳ ಜ್ಞಾನವು ಅಮುಖ್ಯ ಪ್ರಯೋಜನವು. ಪ್ರಯೋಜನಗಳನ್ನು ಇಚ್ಛಿಸುವವನೇ ಅಧಿಕಾರಿಯು. ಯಥಾ ಯೋಗ್ಯವಾಗಿ ಸಂಬಂಧವನ್ನು ತಿಳಿಯತಕ್ಕುದು. (4) ಈ ಪ್ರಕಾರ ಶ್ರೀಮದಾಚಾರ್ಯರು ''ಮಹಾನಾಮ್ನೀನಾಮುಪಸರ್ಗಾನುಪಸ್ರಜತಿ'' ಇವು ಮೊದಲಾದ ಖಂಡಗಳನ್ನು ವ್ಯಾಖ್ಯಾನಮಾಡ ಬೇಕೆಂಬುವ ವ್ಯಾಜದಿಂದ ಕರ್ಮನಿರ್ಣಯವನ್ನು ಮಾಡಲಿಚ್ಛಿಸಿದವರಾಗಿ ವಿಘ್ನವಿಘಾತಾದಿಗಳಿಗೆ ಕಾರಣವಾದ ಇಷ್ಟದೇವತಾನಮಸ್ಕಾರವನ್ನು ನಿಬಂಧಿಸಿದರು. ॥ 1 ॥

(1) ಬ್ರಾಹ್ಮಣ (ವಿಧಾಯಕವಾದ ವಾಕ್ಯ) ದ ಮಧ್ಯದಲ್ಲಿರತಕ್ಕ ಈ ಖಂಡವನ್ನೇ ವ್ಯಾಖ್ಯಾನಮಾಡಲು ಕಾರಣವೇನೆಂದು ಪ್ರಶ್ನೆಮಾಡಿದರೆ- ಸಂಪ್ರದಾಯಾಭಿಜ್ಞರು ಹೀಗೆ ಹೇಳುವರು. ''ಕರ್ಮಕಾಂಡದಲ್ಲಿ ಶ್ರೀಮದಾಚಾರ್ಯರಿಗೆ ಪಾಂಡಿತ್ಯ ಉಂಟೋ ಇಲ್ಲವೋ? ಎನ್ನುವುದನ್ನು ಪರೀಕ್ಷಿಸುವುದಕ್ಕಾಗಿ ಮಾತ್ಸರ್ಯವುಳ್ಳ ಕೆಲವು ವಿದ್ವಾಂಸರು ಈ ಖಂಡವನ್ನು ವ್ಯಾಖ್ಯಾನಮಾಡಲಿಕ್ಕೆ ಪ್ರೇರಿಸಿದರು. ಆಗ ಶ್ರೀಮದಾಚಾರ್ಯರು ತಕ್ಷಣವೇ ವ್ಯಾಖ್ಯಾನಮಾಡಿದರು. ಆಮೇಲೆ ಶಿಷ್ಯರ ಪ್ರಾರ್ಥನಾನುಸಾರವಾಗಿ ಗ್ರಂಥರೂಪವಾಗಿ ಬರೆದಿಟ್ಟರು. ಈ ವಿಷಯವು ಮಧ್ವವಿಜಯದಲ್ಲಿ ನಿರೂಪಿಸಲ್ಪಟ್ಟಿದೆ (ಸರ್ಗ 16 ಶ್ಲೋಕ 41-46) ಋಗ್ವೇದ ಬ್ರಾಹ್ಮಣ ಚತುರ್ಥ ಪಂಚಕದಲ್ಲಿ ''ಮಹಾ ನಾಮ್ನೀನಾಂ'' ಎನ್ನುವುದು 4ನೇ ಖಂಡವು. ಅದಕ್ಕೆ ಒಂದನೇ ಖಂಡವನ್ನಾರಂಭಿಸಿ ಹೀಗೆ ಸಂಗತಿಯು. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ಅಪ್ತೂರ್ಯಾಮ, ವಾಜಪೇಯ ಹೀಗೆ 7 ಸಂಸ್ಥೆ (ಸೋಮಯಾಗವಿಶೇಷ)ಗಳು. ಅವುಗಳಲ್ಲಿ 'ಷೋಡಶೀ' ಎನ್ನುವುದು 4ನೇ ಸಂಸ್ಥೆಯು. ಅದರಲ್ಲಿ 'ಷೋಳಶೀ'ಎಂಬ ಶಸ್ತ್ರ (ಶಂಸನೀಯಮಂತ್ರ)ವಿದೆ. ಅದನ್ನು 4ನೇ ದಿನ ಸ್ತುತಿಸಬೇಕೆಂಬ ವಿಷಯದಲ್ಲಿ ಯುಕ್ತಿಯನ್ನೂ, ಲಕ್ಷಣವನ್ನೂ ಹೇಳುವುದಕ್ಕಾಗಿ ''ದೇವಾ ವೈ ಪ್ರಥಮೇನಾಹ್ನೇಂದ್ರಾಯ ವಜ್ರಂ ಸಮಭರಂಸ್ತಂ ದ್ವಿತೀಯೇನಾಹ್ನಾಸಿಂಚಂಸ್ತಂ ತೃತೀಯೇನಾಹ್ನಾಪ್ರಾಯಚ್ಛಂಸ್ತಂ ಚತುರ್ಥೇಽಹನ್ ಪ್ರಾಹರತ್ತಸ್ಮಾಚ್ಚತುರ್ಥೇಽಹನ್ ಷೋಳಶಿನಂ ಶಂಸತಿ'' ಎನ್ನುವ 1ನೇ ಖಂಡವು ಪ್ರವೃತ್ತವಾಗಿದೆ. ಅಂದರೆ- ದೇವತೆಗಳು ಇಂದ್ರನಿಗೆ ಕೊಟ್ಟ ವಜ್ರಾಯುಧವನ್ನು 4ನೇ ದಿನ ಇಂದ್ರನು ವೃತ್ರಾಸುರನ ಶಿರಸ್ಸಿಗೆ ಹಾಕಿರುವುದರಿಂದ ಷೋಳಶೀ ಶಸ್ತ್ರವೂ 4ನೇ ದಿನ ಸ್ತುತಿಗೆ ಅರ್ಹವು. ವಜ್ರವು ಹೀಗೆ ಇದ್ದರೂ ಷೋಳಶೀ ಶಸ್ತ್ರವನ್ನು 4ನೇ ದಿನ ಏಕೆ ಶಂಸಿಸಬೇಕೆಂದರೆ- ಷೋಳಶೀಶಸ್ತ್ರವೂ ವಜ್ರಾಯುಧದಂತೆ ಶತ್ರು ಸಂಹಾರಕ್ಕೆ ಸಾಧನವಾಗಿರುವ

ಪ್ರಯುಕ್ತ 4ನೇ ದಿನವೇ ಸ್ತುತಿಸಬೇಕೆಂಬುವ ಅಭಿಪ್ರಾಯದಿಂದ ಖಂಡಶೇಷದಲ್ಲಿ ''ವಜ್ರೋ ವಾ ಏಷ ಯತ್‌ಷೋಳಶೀ ತದ್ಯಚ್ಚತುರ್ಥೇಽಹನ್ ಷೋಳಶಿನಂ ಶಂಸಿತಿ ವಜ್ರಮೇವ ತತ್ಪ್ರಹರತಿ ದ್ವಿಷತೇ ಭ್ರಾತೃವ್ಯಾಯ ವಧಂ'' ಎಂದು ಯುಕ್ತಿಯು ಹೇಳಲ್ಪಟ್ಟಿದೆ. ಷೋಡಶೀನಾಮಕ ಶಸ್ತ್ರಕ್ಕೆ ''ತದಾಹುಃ ಕಿಂ ಷೋಳಶಿನಃ ಷೋಳಶಿತ್ವಮಿತಿ ಷೋಳಶಭಿರಕ್ಷರೈರಾದತ್ತೇ'' ಅರ್ಧ ಋಕ್ಕಿನಲ್ಲಿ 16 ಅಕ್ಷರಗಳಿರ ಬೇಕೆನ್ನುವ ಲಕ್ಷಣವು ಉಕ್ತವಾಯಿತು.

(2ನೇ ಖಂಡವಿಚಾರ) ಗೌರವೀತ, ನಾನದ, ಸಾಮಗಳನ್ನನುಸರಿಸಿರುವ ಷೋಳಶೀ ಶಸ್ತ್ರವು ವಿಹೃತ (ಸಂಸೃಷ್ಟ) ಅವಿಹೃತ (ಅಸಂಸೃಷ್ಟ) ಎಂದು 2 ವಿಧವು. ತನ್ನ ಸ್ಥಾನದಿಂದ ವಿಭಾಗಮಾಡಿ ಬೇರೆ ಕಡೆಗೆ ಒಯ್ಯುವುದು ವಿಹರಣವು (ಕೂಡಿಸುವಿಕೆ) ಅದರಿಂದೊಡಗೂಡಿರುವುದು ವಿಹೃತವು. (ಸಂಸೃಷ್ಟವು) ಇದ್ದಹಾಗೆ ಇರುವುದು ಅವಿಹೃತವು (ಅಸಂಸೃಷ್ಟವು). ಇದರಿಂದ ''ಗೌರವೀತಂ ಷೋಡಶಿ ನಾಮ ಕುರ್ವೀತ '' ಎಂದು ಪ್ರತಿಪಾದಿಸಲ್ಪಟ್ಟದೆ.

1ನೇ ವಿಹೃತ ಪಕ್ಷದಲ್ಲಿ ಯಾವ ಋಕ್ಕುಗಳಿಗೆ ಯಾವ ಋಕ್ಕುಗಳನ್ನು ಕೂಡಿಸಬೇಕೋ ಅದನ್ನು ತೋರಿಸುವುದಕ್ಕಾಗಿ ''ಅಥಾತಃ ಛಂದಾಂಸ್ಯೇವ ವ್ಯತಿಷಜತಿ'' ಇವು ಮೊದಲಾದ ಗ್ರಂಥಗಳು ಅಂದರೆ- (3ನೇ ಖಂಡ) ಪ್ರವೃತ್ತಗಳಾಗಿವೆ. ಅದರ ಮಧ್ಯದಲ್ಲಿ ''ತ್ರಿಕದ್ರುಕೇಷು ಮಹಿಷೋ ಯವಾಶಿರಂ ಪ್ರೋಷ್ಟಸ್ಮೈ ಪುರೋರಥಮಿತ್ಯತಿ ಚ್ಛಂದಸಃ ಶಂಸತಿ'' ಎಂದು ಹೇಳಲ್ಪಟ್ಟಿದೆ. ''ಅತಿ ಜಗತೀ, ಅತೀಶಕ್ವರೀ, ಶಕ್ವರೀ'' ಎಂಬ 3 ಛಂದಸ್ಸುಗಳಿಗೆ 'ಅತಿಛಂದಃ' ಎಂದು ಹೆಸರು. 'ತ್ರಿಕದ್ರುಕೇಷು' ಎನ್ನುವ ಋಕ್ಕು ಅತಿಜಗತೀ ಛಂದಸ್ಸುಳ್ಳದ್ದು. 'ಮಹಿಷಃ' 'ಯವಾಶಿರಂ' ಎನ್ನುವ ಎರಡು ಋಕ್ಕುಗಳು ಅತಿಶಕ್ವರೀ ಛಂದಸ್ಸುಳ್ಳವುಗಳು. 'ಪ್ರೋಷ್ಟಸ್ಮೈ' ಎನ್ನುವ 3 ಋಕ್ಕುಗಳುಳ್ಳ ಮಂತ್ರವು 'ಶಕ್ವರೀ' ಛಂದಸ್ಸುಳ್ಳದ್ದು.

'ತ್ರಿಕದ್ರುಕೇಷು' ಇತ್ಯಾದಿ ಅತಿ ಛಂದಸ್ಸುಗಳನ್ನು ಷೋಡಶೀ ಶಸ್ತ್ರವನ್ನಾಗಿ ಸ್ತುತಿಸಬೇಕೆನ್ನುವುದು ಅಯುಕ್ತವು. ಏಕೆಂದರೆ- ''ಷೋಡಶಭಿರಕ್ಷರೈರಾದತ್ತೇ'' ಎಂದು ಷೋಡಶೀ ಶಸ್ತ್ರಕ್ಕೆ ಅರ್ಧ ಋಕ್ಕಿನಲ್ಲಿ 16 ಅಕ್ಷರಗಳು ಬೇಕು ಎಂದು ಲಕ್ಷಣವು ಹೇಳಲ್ಪಟ್ಟದೆ. ಈ ಋಕ್ಕುಗಳಿಗೆ ಹೆಚ್ಚು ಅಕ್ಷರಗಳಿವೆ. ಆದಾಗ್ಯೂ ಕಥಂಚಿತ್ ಕೂಡಬಹುದು. 'ತ್ರಿಕದ್ರುಕೇಷು' ಎನ್ನುವ 1ನೇದ್ದು ಮೂರು ಋಕ್ಕುಗಳುಳ್ಳ ಮಂತ್ರವಾಗಿದೆ. ಅದರಲ್ಲಿರುವ ಋಕ್ಕುಗಳು 16 ಅಕ್ಷರಗಳುಳ್ಳ ನಾಲ್ಕು ಪಾದ ಉಳ್ಳವುಗಳು. ಅದರಲ್ಲಿ 2 ಪಾದಗಳನ್ನೇ ಅರ್ಧ ಋಕ್ಕುಗಳನ್ನಾಗಿ ಮಾಡಿ ಒಂದೊಂದು ಋಕ್ಕನ್ನು ಎರಡೆರಡಾಗಿ ಕೂಡಿಸಬೇಕು. ''ಪ್ರೋಷ್ಟಸ್ಮೈ' ಎನ್ನುವ ಎರಡನೇದ್ದು 3 ಋಕ್ಕುಗಳುಳ್ಳ ಮಂತ್ರವಾಗಿದೆ. ಅದರಲ್ಲಿಯೂ ಎರಡೆರಡು ಪಾದಗಳನ್ನು ಅರ್ಧ ಋಕ್ಕುಗಳನ್ನಾಗಿ ಮಾಡಿ ಒಂದೊಂದು ಋಕ್ಕನ್ನು ಎರಡೆರಡಾಗಿ ಕೂಡಿಸಬೇಕು. ಅದೂ ಅಯುಕ್ತವು. 3 ಋಕ್ಕುಗಳುಳ್ಳ 1ನೇ ಮಂತ್ರದಲ್ಲಿ ಯದ್ಯಪಿ ಒಂದನೇ ಋಕ್ಕನ್ನು ಎರಡು ಋಕ್ಕುಗಳನ್ನಾಗಿ ಮಾಡಲು ಶಕ್ಯವಾಗುವುದು. ಏಕೆಂದರೆ 16 ಅಕ್ಷರಗಳುಳ್ಳ ನಾಲ್ಕು ಪಾದಗಳಿವೆ. ಎರಡನೇ ಮೂರನೇ ಋಕ್ಕುಗಳಲ್ಲಾದರೂ 3ನೇ ಪಾದಗಳಲ್ಲಿ ಹನ್ನೆರಡೇ ಅಕ್ಷರಗಳು ಇರುವುದರಿಂದ ಹಾಗೆ ಮಾಡಲು ಶಕ್ಯವಲ್ಲ. ಏಕೆಂದರೆ- 4 ಅಕ್ಷರಗಳು ಕಮ್ಮಿ ಆಗಿವೆ. ''ನ ವಾ ಏಕೇನಾಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ'' ಒಂದು ಅಕ್ಷರವು ಎರಡು ಅಕ್ಷರಗಳಾಗಲೀ ಕಡಿಮೆಯಾದರೂ, ಹೆಚ್ಚಾದರೂ ಬಾಧಕವಿಲ್ಲ ಎಂದಿದ್ದರೂ ನಾಲ್ಕು ಅಕ್ಷರಗಳು ಕಮ್ಮಿಯಾದುದಕ್ಕೆ ಯಾವುದೂ ಗತಿಯಿಲ್ಲ.

'ಪ್ರೋಷ್ಠಸ್ತ್ರೈ' ಎನ್ನುವ 2ನೇ ತೃಚದಲ್ಲಿರುವ 'ಪ್ರೋಷ್ಠಸ್ತ್ರೈ' ಇವು ಮೊದಲಾದ ಋಕ್ಕುಗಳು 8 ಅಕ್ಷರಗಳುಳ್ಳ 7 ಪಾದಗಳುಳ್ಳವುಗಳಾಗಿವೆ. ಅದರಲ್ಲಿ 8 ಅಕ್ಷರಗಳು ಕಮ್ಮಿಯಾದುದರಿಂದ ಹಿಂದಿನ ಪ್ರಕಾರವು ಸರ್ವಥಾ ಕೂಡಲಾರದು. ಈ ಆಶಂಕೆಗಳನ್ನು ಸಮಾಧಾನಗೊಳಿಸಿ ಶಸ್ತ್ರದ ಅವಶಿಷ್ಟಾಂಶವನ್ನು (ಪ್ರಪ್ರವಃ ಇತ್ಯಾದಿಗಳಿಂದ ಶಸ್ತ್ರಶೇಷವುಕ್ತವಾಗಿದೆ) ಸಮಾಪ್ತಿಗೊಳಿಸುವುದಕ್ಕಾಗಿ 'ಮಹಾನಾಮ್ನೀನಾಂ' ಇತ್ಯಾದಿ 4ನೇ ಖಂಡವು ಪ್ರವೃತ್ತವಾಗಿದೆ. ಅದರಲ್ಲಿ ''ಮಹಾನಾಮ್ನೀನಾಮುಪ ಸರ್ಗಾನುಪಸೃಜತಿ'' ಎಂಬ 1ನೇ ವಾಕ್ಯವನ್ನು ಸಂಕ್ಷೇಪದಿಂದ ವ್ಯಾಖ್ಯಾನಮಾಡುತ್ತಾರೆ-

**ಮೂಲ ॥ ಮಹಾನಾಮ್ನೀನಾಮೃಚಾಮುಪಸರ್ಗಾ ಯೇ ಉಪಸರ್ಜನ ಭೂತಾಸ್ತಾನುಪಸೃಜತಿ ಸಂಯೋಜಯತಿ ॥ ೨ ॥**

**ಅರ್ಥ ॥** 'ಮಹಾನಾಮ್ನೀ' ಎಂದು ಹೆಸರುಳ್ಳ ಋಗ್ವಿಶೇಷಗಳಿಗೆ (ಉಪಸರ್ಗಾಃ ಅಂದರೆ ಯೇ ಉಪಸರ್ಜನಭೂತಾಃ) ವಿಶೇಷಣಭೂತಗಳಾದ ವರ್ಣಗಳಿವೆಯೋ, ಆ ವರ್ಣಗಳನ್ನು (ಉಪಸೃಜತಿ ಅಂದರೆ- ಸಂಯೋಜಯತಿ) ಅತಿಛಂದಸ್ಸುಗಳಿಂದ ಕೂಡಿಸುತ್ತಾರೆ. ಅಂದರೆ- ಅತಿಜಗತೀ, ಅತಿಶಕ್ವರೀ, ಶಕ್ವರೀ ಎಂಬೀ ಅತಿ ಛಂದಸ್ಸುಗಳಿಂದ ಬದ್ಧಗಳಾದ ವಾಕ್ಯಗಳಿಗೆ ಅನುಷ್ಟುಪ್ತ್ವವು ಸಿದ್ಧಿಸುವುದಕ್ಕಾಗಿ ಅತಿ ಛಂದಸ್ಸುಗಳಿಂದ ಕೂಡಿಸುತ್ತಾರೆ. ಇದನ್ನು ಮೇಲೆ ವಿವರಿಸುವರು. ॥ 2 ॥

ಋಕ್ಕುಗಳಿಗೆ 'ಮಹಾನಾಮ್ನೀ' ಎಂಬ ಹೆಸರು ಹೇಗೆಂದರೆ-

**ಮೂಲ ॥ (೧) ಮಹನ್ನಾಮ ಯಾಸ್ವೃಕ್ಷು ವಿದ್ಯತೇ ತಾ ಮಹಾನಾಮ್ನಃ ।**
**(೨) ಪರಸ್ಯ ಬ್ರಹ್ಮಣೋ ಯನ್ನಾಮೇಂದ್ರಾದಿಕಂ ತನ್ಮಹಾರ್ಥತ್ವಾನ್ಮಹತ್ ।**
**(೩) ಮಹದ್ಧಿ ತತ್ಪರಂ ಬ್ರಹ್ಮ । (೪) ಅಶೇಷ ಗುಣಪೂರ್ತೇಃ ॥ ೩ ॥**

**ಅರ್ಥ ॥** (1) ಮಹತ್ತಾದ ನಾಮಧೇಯವು ಯಾವ ಋಕ್ಕುಗಳಲ್ಲಿದೆಯೋ, ಆ ಋಕ್ಕುಗಳು 'ಮಹಾನಾಮ್ನೀ' ಎನ್ನಿಸುತ್ತವೆ. (2) (ಅದು ಯಾರ ನಾಮಧೇಯವು? ಯಾವುದದು? ಯಾವ ಕಾರಣದಿಂದ 'ಮಹತ್' ಎನ್ನಿಸುತ್ತದೆಂದರೆ- ) ಪರಬ್ರಹ್ಮನಿಗೆ ಇಂದ್ರ ಮೊದಲಾದ ಯಾವ ನಾಮಧೇಯವಿದೆಯೋ, ಅದು ಮಹಾರ್ಥವಿರುವುದರಿಂದ 'ಮಹತ್' ಎನ್ನಿಸುತ್ತದೆ. (3) (ಪರಬ್ರಹ್ಮನ ನಾಮಧೇಯಕ್ಕೆ ಮಹಾರ್ಥತ್ವವು ಹೇಗೆಂದರೆ- ಯಾರಿಗೆ ಇದು ನಾಮಧೇಯವೋ.) ಆ ಪರಬ್ರಹ್ಮನು ಯಾವ ಕಾರಣದಿಂದ ಮಹತ್ ಎನ್ನಿಸುತ್ತಾನೋ, (ಆದಕಾರಣ ನಾಮಧೇಯಕ್ಕೆ ಮಹಾರ್ಥತ್ವವು ಯುಕ್ತವು) (4) (ಪರಬ್ರಹ್ಮನಿಗೆ ಮಹತ್ವವೇ ಯಾವ ಕಾರಣದಿಂದ ಎಂದರೆ-) ಎಲ್ಲಾ ಗುಣಗಳಿಂದ ಪೂರ್ಣನಾದ ಪ್ರಯುಕ್ತ ಅಥವಾ ಎಲ್ಲಾ ಗುಣಗಳಿಗೆ ಅವನಲ್ಲಿ ಪೂರ್ತಿ ಇದ್ದ ಪ್ರಯುಕ್ತ.

ತಾತ್ಪರ್ಯ ॥ ಸರ್ವದೇಶಕಾಲಗಳಲ್ಲಿ ವ್ಯಾಪ್ತಿಯಿರುವುದರಿಂದ ಆಕಾಶಾದಿಗಳಿಗೆ ಮಹತ್ವವು ಅಂಗೀಕೃತವಾಗಿದೆ. ''ಮಹರ್ಷಯಃ ಸಪ್ತಪೂರ್ವೇ'' ಎಂದು ವಸಿಷ್ಠಾದಿಗಳಿಗೆ ಜ್ಞಾನಾದಿಗುಣಗಳು ಪೂರ್ಣಗಳಾದುದರಿಂದ ಮಹತ್ವವು ಉಕ್ತವಾಗಿದೆ. ಸರ್ವಗುಣಗಳಿಂದಲೂ ಪರಿಪೂರ್ಣನಾದ ಈ ಪರಬ್ರಹ್ಮನಿಗೆ ಮಹತ್ವವು ಏಕೆ ಕೂಡಲಾರದು? ಸುತರಾಂ ಪರಬ್ರಹ್ಮನು 'ಮಹತ್' ಎನ್ನಿಸುತ್ತಾನೆ ॥ 3॥

ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಮಾಯಾವಾದಿಗಳ ವಿಪ್ರತಿಪತ್ತಿಯನ್ನುದ್ಭಾವಿಸುತ್ತಾರೆ-

**ಮೂಲ ॥ ತತ್ರೈಕ ಆಹುರಗುಣಂ ಬ್ರಹ್ಮೇತಿ** ॥ ೪ ॥

**ಅರ್ಥ ॥** ಬ್ರಹ್ಮನಿಗೆ ಗುಣಪರಿಪೂರ್ಣತ್ವವಿದ್ದುದರಿಂದ ಮಹತ್ವವದೆ ಎಂದು ಹೇಳಿ ನಾಮಧೇಯಕ್ಕೆ ಮಹಾರ್ಥತ್ವವನ್ನಂಗೀಕರಿಸಿ 'ಮಹಾನಾಮ್ನೀ' ಎನ್ನುವ ಶಬ್ದವನ್ನು ವ್ಯಾಖ್ಯಾನ ಮಾಡುವ ಕಾಲದಲ್ಲಿ ಕೆಲವರು (ಮಾಯಾವಾದಿಗಳು) ಬ್ರಹ್ಮನು ನಿರ್ಗುಣನೆಂದು ಹೇಳುವರು.

**ತಾತ್ಪರ್ಯ ॥** (1) ''ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ'' ಇವು ಮೊದಲಾದ ಶ್ರುತಿಗಳಿಂದ ಬ್ರಹ್ಮನು ನಿರ್ಗುಣನು, ಗುಣಗಳಿವೆ ಎಂದು ಸಾಧಿಸತಕ್ಕ ಪ್ರಮಾಣ ಯಾವುದೂ ಇಲ್ಲ. ಯಾವ ಗುಣಗಳೂ ಇಲ್ಲದಿರುವವನಿಗೆ ಸರ್ವಗುಣಗಳಿಂದ ಪರಿಪೂರ್ಣತ್ವವದೆ ಎನ್ನುವುದು ಹೇಗೆ ತಾನೇ ಸಂಭವಿಸಬಹುದು? ತಥಾ ಚ ಅಶೇಷಗುಣಪೂರ್ತಿಯೂ ಸಿದ್ಧಿಸದಿರುವುದರಿಂದ ಬ್ರಹ್ಮನಿಗೆ ಮಹತ್ವವನ್ನು ಸಾಧಿಸಲಶಕ್ಯವು. ಮತ್ತೆ ಬ್ರಹ್ಮನಿಗೆ ಸರ್ವ ಪದಾರ್ಥಗಳ ಸ್ವರೂಪತ್ವವಿದ್ದುದರಿಂದಲೇ ಮಹತ್ವವನ್ನು ಹೇಳಬೇಕು. ಹೀಗೆ ಮಾಯಾವಾದಿಗಳು ಆಶಂಕಿಸುವರು ॥ 4 ॥

ಮಾಯಾವಾದಿಗಳು ಈ ವಿಪ್ರತಿಪತ್ತಿಗಳನ್ನು ನಿಷೇಧಿಸುತ್ತಾರೆ-

**ಮೂಲ ॥ ನ ತದ್ಯುಕ್ತಂ । ಶ್ರುತಿಯುಕ್ತಿವಿರೋಧಾತ್** ॥ ೫ ॥

**ಅರ್ಥ ॥** ಶ್ರುತಿಯಿಂದಲೂ, ಯುಕ್ತಿಗಳಿಂದಲೂ ವಿರೋಧವಿದ್ದ ಪ್ರಯುಕ್ತ ಸರ್ವಾತ್ಮಕತ್ವದಿಂದ ಬ್ರಹ್ಮನಿಗೆ ಮಹತ್ವಸಾಧನವು ಕೂಡುವುದಿಲ್ಲ. (ಬ್ರಹ್ಮನು ಸಗುಣನು, ಅಶೇಷಗುಣ ಪರಿಪೂರ್ಣನು ಎನ್ನುವಲ್ಲಿ ಅನೇಕ ಪ್ರಮಾಣಗಳಿವೆ ಎಂದೂ ಈ ಹೇತುವಿನಿಂದಲೇ ಸಿದ್ಧವಾಯಿತು.)

**ತಾತ್ಪರ್ಯ ॥** ಯದ್ಯಪಿ ಬ್ರಹ್ಮನು ಸಗುಣನೆನ್ನುವ ವಿಷಯದಲ್ಲಿ ಅಪರೋಕ್ಷಜ್ಞಾನಿಗಳಾದ ಬ್ರಹ್ಮಾದಿಗಳಿಗೆ ಪ್ರತ್ಯಕ್ಷವಿದೆ ಎಂದು ಹೇಳಲು ಶಕ್ಯವಾಗುವುದು. ಆದಾಗ್ಯೂ ಅವರಿಗೆ ಪ್ರತ್ಯಕ್ಷವಿದೆ ಎನ್ನುವುದು ಶ್ರುತ್ಯಾದಿಗಳಿಂದಲೇ ಸಾಧಿಸಬೇಕು. ಆದಕಾರಣ ಪ್ರಯತ್ನ ಗೌರವವಿದ್ದುದರಿಂದ ಹಾಗೆ ಹೇಳಲಿಲ್ಲ. ಇಲ್ಲವಾದರೆ ''ಶ್ರುತಿಯುಕ್ತಿ ಪ್ರತ್ಯಕ್ಷವಿರೋಧಾತ್'' ಎಂದು ಹೇಳಬೇಕಿದ್ದಿತು ॥ 5 ॥

ಬ್ರಹ್ಮನಿಗೆ ನಿರ್ಗುಣತ್ವವಿರೋಧಿಯಾದ ಸಗುಣತ್ವವನ್ನು ಪ್ರತಿಪಾದಿಸುವ ಶ್ರುತಿಯೂ, ಅಶೇಷಗುಣಪರಿಪೂರ್ಣತ್ವವನ್ನು ಪ್ರತಿಪಾದಿಸುವ ಶ್ರುತಿಯೂ ಯಾವುದೆಂದರೆ-

**ಮೂಲ ॥ ತಥಾ ಹಿ ಶ್ರುತಿಃ ॥ (೧) ಸತ್ಯಂ ಜ್ಞಾನಮನಂತಂ ಬ್ರಹ್ಮ ॥ (ತೈ.ಉ.ವಲ್ಲೀ.೨; ವ.೨;ಪು.೧೨೩.) (೨) ವಿಜ್ಞಾನಮಾನಂದಂ ಬ್ರಹ್ಮ ॥ (ಬೃ.ಉ.ಅ.೫; ಖಂ ೯; ಮ.೨೮.) (೩) ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ । ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ ॥ (ಅಥ.ಉ.ಖಂ.೧; ಮ.೯; ಪು.೨೫೩.) (೪) ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ । ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥ (ಅಥ.ಉ.ಖಂ.೩.ಮ.೨; ಪು.೨೬೫.) (೫) ಏತಾವಾನಸ್ಯ ಮಹಿಮಾಽತೋಜ್ಯಾಯಾಂಶ್ಚ ಪುರುಷಃ ॥ (ಋ.ಪು.ಸೂ.ವ.೧) (೬) ಯೋ ನಃ ಪಿತಾ ಜನಿತಾ ಯೋ ವಿಧಾತಾ**

ಧಾಮಾನಿ ವೇದ ಭವನಾನಿ ವಿಶ್ವಾ ॥ (ಋ.ಅಷ್ಟ.೮; ಅಧ್ಯಾ.೪;ವರ್ಗ ೧೭.) (೭) ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥ (ಬೃ.ಉ. ಅಧ್ಯಾ.೭;ಬ್ರಾ.೧) (೮) ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ ॥ (ಛಾ.ಉ.ಅಧ್ಯಾ.೩; ಖಂ.೧೪; ಮಂ.೨೪.) (೯) ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ॥ (ಋ.ಅಷ್ಟ.೨; ಅಧ್ಯಾ.೨; ವರ್ಗ.೨೪.) (೧೦) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ । ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ॥ (ಋ.ಅಷ್ಟ.೫; ಅಧ್ಯಾ.೬; ವರ್ಗ.೨೪.) ಇತ್ಯಾದಿಕಾ ॥ ೬ ॥

**ಅರ್ಥ ॥** ಸಗುಣತ್ವವನ್ನೂ, ಸರ್ವಗುಣಪರಿಪೂರ್ಣತ್ವವನ್ನೂ, ಹೇಳತಕ್ಕ ಶ್ರುತಿಯು (ಹೇಳಲ್ಪಡು ತ್ತದೆ.) (1) ಬ್ರಹ್ಮನು ಸತ್ಯನು, (ಅಂದರೆ- ಇತರಾಧೀನವಲ್ಲದ ಸ್ವರೂಪವಿರುವವನು, ಪ್ರಪಂಚದ ಸ್ಥಿತಿಗೆ (ಸತ್ತಾಕ್ಕೆ) ಕಾರಣಭೂತನು) ಸರ್ವವಿಷಯಕ ಜ್ಞಾನಸ್ವರೂಪನು, ಅನಂತನು, (ಅಂದರೆ- ದೇಶಕಾಲಗುಣಗಳಿಂದ ಇಯತ್ತಾ ಇಲ್ಲದಿರುವವನು, ವ್ಯಾಪ್ತನು, ನಿತ್ಯನು ಮತ್ತು ಗುಣಪರಿಪೂರ್ಣನು) (2) ಬ್ರಹ್ಮನು ಸರ್ವವಿಷಯಕಜ್ಞಾನಸ್ವರೂಪನು, ಅಪರಿಚ್ಛಿನ್ನವಾದ ಆನಂದಸ್ವರೂಪನು . (3) ಯಾವ ಶ್ರೀಹರಿಯು ಸರ್ವವಸ್ತುಗಳನ್ನು ವಿಷಯೀಕರಿಸುವುದರಿಂದ ಪ್ರಪಂಚದಲ್ಲಿರುವ ಸಾಮಾನ್ಯಾಕಾರ, ವಿಶೇಷಾಕಾರಗಳನ್ನು ವಿಷಯೀಕರಿಸುವ ಜ್ಞಾನವುಳ್ಳವನೋ, ಅಥವಾ ಸರ್ವವಿತ್=ಸರ್ವವನ್ನೂ ಹೊಂದಿದವನು. ಅಂದರೆ- ಆಪ್ತಕಾಮನು, ಸರ್ವಜ್ಞನಾ ದುದರಿಂದಲೂ, ಆಪ್ತಕಾಮನಾದುದರಿಂದಲೂ ಯಾವ ಶ್ರೀಹರಿಯ ತಪಸ್ಸು ಜ್ಞಾನಸ್ವರೂಪವೋ, ಆಲೋಚನರೂಪವಾದುದು ಸಂತಾಪರೂಪವಾದದ್ದಾಗಲೀ ಅಲ್ಲ, ಏಕೆಂದರೆ- ಅಜ್ಞನಷ್ಟೆ ಆಲೋಚಿಸುವನು. ಆಪ್ತಕಾಮನಲ್ಲದಿದ್ದವನೇ ಸಂತಾಪಪಡುವನು, ಆ ಪರಬ್ರಹ್ಮನಿಂದ ಈ ಚತುರ್ಮುಖನು ಬ್ರಹ್ಮನೂ, ನಾಮವೂ, ರೂಪವೂ ಅನ್ನವೂ ಹುಟ್ಟುತ್ತದೆ. ತತ್ತದಭಿಮಾನಿ ದೇವತೆ ಗಳೂ ಹುಟ್ಟುತ್ತಾರೆ. (4) ಆ ಬ್ರಹ್ಮನು ಅದ್ಭುತನು, ನಿಯತವಾದ ಪರಿಚ್ಛಿನ್ನಪರಿಮಾಣವಿಲ್ಲದವನು. ಅಂದರೆ- (ಬಾಹ್ಯಃ ಆಭ್ಯಂತರಃ) ಮಹತ್ಪರಿಮಾಣವುಳ್ಳವನೂ, ಪರಿಚ್ಛಿನ್ನಪರಿಮಾಣವುಳ್ಳವನೂ ಆಗಿರುತ್ತಾನೆ. ಷಡ್ಗುಣಪೂರ್ಣನು, ಉತ್ಪತ್ತಿ ರಹಿತನು, ★ಷೋಡಶಕಲಾವಿರಹಿತನು, ಶುದ್ಧನು, ''ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ। ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ॥ ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಂ।.'' ಎಂದು ಸ್ಕಾಂದದಲ್ಲಿ ಹೇಳಿದ ಪ್ರಕಾರ ಜಡಪ್ರಕೃತಿಯಿಂದುತ್ತಮವಾದ ಚೇತನಪ್ರಕೃತಿಯಿಂದ (ಮಹಾಲಕ್ಷ್ಮೀಯಿಂದ) ಉತ್ತಮನು. (5) ಈ ಹರಿಗೆ ಸಹಸ್ರಶೀರ್ಷತ್ವ, ವಿಶ್ವವ್ಯಾಪ್ತತ್ವ, ಮುಕ್ತಾಮುಕ್ತಸರ್ವನಿಯಂತೃತ್ವ ಮೊದಲಾದ ಹಿಂದೆ

★ ಕಲೆಗಳ ವಿಷಯವು ಷಟ್ಪ್ರಉ.ಪು.೨೩೬ -೨೩೬ ರವರೇಗೆ ವಿಶದೀಕೃತವಾಗಿದೆ.

ಹೇಳಲ್ಪಟ್ಟ ಮಹಿಮೆಯು ಮಾತ್ರವಲ್ಲ, ಹಿಂದೆ ಹೇಳಲ್ಪಟ್ಟ ಮಹಿಮೆಯಿಂದಲೂ ಜ್ಞಾನ-ಆನಂದ-ಬಲ-ಐಶ್ವರ್ಯ-ಅಪ್ರಾಕೃತ=ಲೋಕಸ್ವಾಮಿತ್ವ ಮೊದಲಾದವುಗಳಿಂದಲೂ ಶ್ರೇಷ್ಠನು. (6) ಯಾವ ಶ್ರೀನಾರಾಯಣನು ನಮಗೆ (ಸರ್ವಪ್ರಾಣಿಗಳಿಗೂ) ತಂದೆಯು. ''ಜನಿತಾ ಚೋಪನೇತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥'' ಎಂದೀ ರೀತಿಯಾಗಿ ಪಿತೃತ್ವವು ಲೋಕದಲ್ಲಿ ಅನೇಕವಿಧವಾಗಿದ್ದರೂ ಈತನೇ ಮುಖ್ಯವಾಗಿ ಜನಕನು; ಅಂದರೆ- ಉತ್ಪಾದಕನು, ಸರ್ವ ಜಗದ್ಧಾರಕನು ಮತ್ತು ಪೋಷಕನು; ಸರ್ವ ಜಗತ್ತನ್ನು ನಿರ್ಮಾಣ ಮಾಡುವವನು, ಸರ್ವಜ್ಞನಾಗಿಯೂ ಇರುವವನು, ಜೀವಸ್ವರೂಪಗಳನ್ನೂ ಭುವನಗಳಲ್ಲಿರತಕ್ಕ ಗೃಹಗಳನ್ನೂ ತಿಳಿದಿದ್ದಾನೆ. (7) ಮೂಲರೂಪವೂ ಪೂರ್ಣವು; ಈ ಅವತಾರರೂಪವೂ ಪೂರ್ಣವು. ಪೂರ್ಣವಾದ ಮೂಲರೂಪದಿಂದ ಪೂರ್ಣವಾದ ಅವತಾರರೂಪವು ಆವಿರ್ಭೂತವಾಗುತ್ತದೆ. ಪೂರ್ಣವಾದ ಮೂಲರೂಪದ, ಪೂರ್ಣವಾದ ಅವತಾರರೂಪವು ಯಾವುದೋ ಅದನ್ನು ತನ್ನಲ್ಲಿ ಏಕೀಕರಿಸಿ ಪೂರ್ಣವಾದ ಮೂಲರೂಪವೇ ಇರುತ್ತದೆ. (8) ಸರ್ವ ಕರಣಗಳ ಶಕ್ತಿಪ್ರದನೂ, ಸರ್ವ ವಿಷಯೇಚ್ಛಾವುಳ್ಳವನೂ, ಸರ್ವ ಶುಭಗಂಧಸ್ವರೂಪನೂ, ಸರ್ವ ಶುಭರಸಸ್ವರೂಪನೂ, ಈ ಎಲ್ಲ ಜಗತ್ತನ್ನು ಹೊಂದಿದವನೂ, ಲೌಕಿಕರಂತೆ ನಿರರ್ಥಕವಾದ ವಾಕ್ಯವಿಲ್ಲದಿರುವವನೂ, ಅಥವಾ ಅನೃತವಾಕ್ಯವಿಲ್ಲದಿರುವವನೂ, ಆತ್ಮಸಂಭಾವನಾವಿಲ್ಲದಿರುವವನೂ, ಅಥವಾ ಮಿಥ್ಯಾಜ್ಞಾನ ವಿಲ್ಲದಿರುವವನು. ತಥಾ ಚ ಚಿದಾನಂದಾದ್ಯಾತ್ಮಕಗಳಾದ ಸರ್ವಗಂಧಾದಿಗಳುಳ್ಳವನು. (9)ಯಾವಾತನು ಶ್ರೀಹರಿಯ ಸಾಮರ್ಥ್ಯಗಳನ್ನು ಸಂಪೂರ್ಣವಾಗಿ ಹೇಳುತ್ತಾನೋ? ಯಾವ ಚತುರ್ಮುಖನು ಪೃಥಿವೀ ಪರಮಾಣುಗಳನ್ನು ಎಣಿಕೆಮಾಡುತ್ತಾನೋ, ಅವನು ಸಹ ವರ್ಣಿಸಲಿಕ್ಕೆ ಅಶಕ್ತನು; ತಥಾಚ ಅಗಣಿತಗುಣಪರಿಪೂರ್ಣನು ಶ್ರೀವಿಷ್ಣುವೇ. (10) ಜ್ಞಾನಾನಂದಾತ್ಮಕವಾದ ಶರೀರದಿಂದ ಅಪರಿಚ್ಛಿನ್ನ (ಪುಷ್ಪ)ನಾದ ಶ್ರೀಹರಿಯೇ! ನೀನು ಪರಿಮಿತಿಯಿಂದ ಅತಿಕ್ರಮಿಸಿದವನು. ಅಂದರೆ, ಪೂರ್ಣವಾಗಿ ತಿಳಿಯಲಶಕ್ಯನು.ನಿನ್ನ ಜಗತ್ಸೃಷ್ಟ್ಯಾದಿ ಮಹಿಮೆಯನ್ನು ಯಾರೂ (ಮುಕ್ತರೂ, ಅಮುಕ್ತರೂ) ಹೊಂದಲಾರರು. ಅಂದರೆ- ನೀನು ಅಪರಿಮಿತ ಮಹಿಮೆಯುಳ್ಳವನು. ಸರ್ವಲೋಕವ್ಯಾಪ್ತನಾದ ಎಲೋ ದೇವನೇ! ಹುಟ್ಟುವವನೂ, ಹುಟ್ಟಿದವನೂ, ಯಾರೊಬ್ಬನೂ ನಿನ್ನ ಮಹಿಮೆಯ ಆಚೆಯ ದಡವನ್ನು ಹೊಂದಲಾರನು. ಅಂದರೆ- ಯಾರೊಬ್ಬನೂ ನಿನ್ನ ಸಮಾನಿಕನಿಲ್ಲ, ನಿನ್ನ ಗುಣಗಳನ್ನು ಸಂಪೂರ್ಣವಾಗಿ ತಿಳಿದವನು ಯಾರೂ ಇಲ್ಲ, ಇವೇ ಮೊದಲಾದ ಶ್ರುತಿಗಳು. ಅಂದರೆ- ಬ್ರಹ್ಮವಿಷಯಕವಾಗಿ ಪರಸಮ್ಮತವಾದ ಎಲ್ಲಾ ಶ್ರುತಿಗಳೂ ಸಗುಣತ್ವವಿಷಯದಲ್ಲಿ ಪ್ರಮಾಣ ಗಳಾಗಿರುತ್ತವೆ. ಯಾವುದೊಂದು ಶ್ರುತಿಯೂ ಬ್ರಹ್ಮನಿಗೆ ಗುಣಗಳನ್ನು ಪ್ರತಿಪಾದಿಸದಿರುವುದೂ, ದೋಷಗಳನ್ನು ನಿಷೇಧಿಸದಿರುವುದೂ ಇರುವುದಿಲ್ಲ, ಅಂದರೆ- ಎಲ್ಲಾ ಶ್ರುತಿಗಳೂ ಗುಣಗಳನ್ನು ವಿಧಿಸುವುದಾಗಿಯೂ ಅಥವಾ ದೋಷಗಳನ್ನು ನಿಷೇಧಿಸುವುದಾಗಿಯೂ ಇರುತ್ತವೆ. ॥ 6 ॥

ಈಗ ಬ್ರಹ್ಮನು ಸಗುಣನೆನ್ನುವ ವಿಷಯದಲ್ಲಿ ಯುಕ್ತಿಯನ್ನು ಹೇಳುತ್ತಾರೆ.-

**ಮೂಲ ॥ ಯುಕ್ತಿಶ್ಚ । ಬುದ್ಧಿಪೂರ್ವಂ ಸರ್ವಕರ್ತೃತ್ವಾತ್ ಸರ್ವಜ್ಞ-**
**ತ್ವಾದಯೋ ಗುಣಾ ಯುಕ್ತಾಃ ॥ ೭ ॥**

**ಅರ್ಥ ॥** (''ಬ್ರಹ್ಮ=ಪರಬ್ರಹ್ಮನು, ಸಾರ್ವಜ್ಞಾದಿ ಗುಣೋಪೇತಂ=ಸರ್ವಜ್ಞತ್ವ ಮೊದಲಾದ

ಗುಣಗಳಿಂದ ಕೂಡಿದವನು,ಬುದ್ಧಿಪೂರ್ವಂ ಸರ್ವಕರ್ತೃತ್ವಾತ್=ಬುದ್ಧಿ ಪೂರ್ವಕವಾಗಿ ಸರ್ವಕರ್ತನಾದ ಪ್ರಯುಕ್ತ, ಯದೇವಂ ನ ತದೇವಂ ನ=ಯಾರು ಸರ್ವಜ್ಞತ್ವಾದಿಗುಣಗಳಿಂದ ಯುಕ್ತನಲ್ಲವೋ, ಅವನು ಬುದ್ಧಿಪೂರ್ವಕವಾಗಿ ಸರ್ವಕರ್ತನಲ್ಲ, ಯಥಾ ಯಜ್ಞದತ್ತಃ= ಯಜ್ಞ ದತ್ತನಂತೆ ಎಂದು ಕೇವಲ ವ್ಯತಿರೇಕ್ಯನುಮಾನವು ಇದರಿಂದ ಹೇಳಲ್ಪಟ್ಟಿತೆಂದು ನರಹರಿತೀರ್ಥರು ವ್ಯಾಖ್ಯಾನ ಮಾಡಿರುವರು. ಅದು ಅಷ್ಟು ಸ್ವರಸವಲ್ಲವೆಂದಭಿಪ್ರಾಯದಿಂದ ಟೀಕಾಚಾರ್ಯರು ಬೇರೆ ರೀತಿಯಾಗಿ ಉಪಪಾದಿಸುವರು.) ''ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್''=ಘಟವು ಕಾರ್ಯವಾದುದರಿಂದ ಹೇಗೆ ಸಕರ್ತೃಕವೋ, ಹಾಗೆಯೇ ಸರ್ವಪ್ರಪಂಚವೂ ಕಾರ್ಯವಾದುದ ರಿಂದ ಕರ್ತೃಸಹಿತವಾಗಿದೆ ಎಂಬೀ ಯುಕ್ತಿಯೂ ಕೂಡ (ಬ್ರಹ್ಮನಿಗೆ ಸಗುಣತ್ವವಿಷಯದಲ್ಲಿದೆ.) ಬುದ್ಧಿಪೂರ್ವಕವಾಗಿಯೇ ಸರ್ವವಸ್ತುಗಳಿಗೆ ಕರ್ತನಾದುದರಿಂದ ಸರ್ವಜ್ಞತ್ವ ಮೊದಲಾದ ಗುಣಗಳು ಯುಕ್ತಗಳಾಗಿವೆ.

**ತಾತ್ಪರ್ಯ ॥** (1) ಪ್ರಸಿದ್ಧಕರ್ತನಿಲ್ಲದಿರುವ ಕ್ಷಿತ್ಯಾದಿಗಳಿಗೆ ಕಾರ್ಯತ್ವಾನುಮಾನದಿಂದ ಸಕರ್ತೃಕತ್ವವು ಮಾತ್ರ ಸಿದ್ಧಿಸುವುದು. ಬ್ರಹ್ಮನಿಗೆ ಸಗುಣತ್ವವು ಸಿದ್ಧಿಸುವುದಿಲ್ಲವೆಂದರೆ- ಯಾವ ಯುಕ್ತಿಯಿಂದ ಸರ್ವಜಗತ್ತಿಗೆ ಕರ್ತನು ಸಿದ್ಧನಾಗುತ್ತಾನೋ, ಆತನಿಗೆ ಸರ್ವಜ್ಞತ್ವ ಮೊದಲಾದ ಗುಣಗಳು ಆ ಯುಕ್ತಿಯಿಂದಲೇ ಸಿದ್ಧಗಳಾಗುತ್ತವೆ. ಏಕೆಂದರೆ- ಆ ಗುಣಗಳು ಸರ್ವಕರ್ತೃತ್ವದಲ್ಲಿಯೇ ಅಂತರ್ಗತಗಳಾಗಿವೆ. (2) ಈ ಅನುಮಾನದಿಂದ ಸರ್ವಕರ್ತನು ಸಿದ್ಧಿಸುವನು. ಒಬ್ಬನೇ ಎಂದು ಕಲ್ಪಿಸಿದರೆ ಲಾಘವವಿದೆ. ಅನೇಕರೆಂದು ಕಲ್ಪಿಸಿದರೆ ಗೌರವವಿದೆ. ಆದಪ್ರಯುಕ್ತವೂ, ಅನೇಕರೆಂದು ಕಲ್ಪಿಸಲಿಕ್ಕೆ ಪ್ರಮಾಣ ಇಲ್ಲದಿರುವುದರಿಂದಲೂ ಆ ಕರ್ತನು ಒಬ್ಬನೆಂದೇ ಅಂಗೀಕರಿಸಬೇಕು. ಆ ಕರ್ತನು ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇವು ಮೊದಲಾದ ಶ್ರುತಿಗಳಿಂದಲೂ, ''ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ'' ಪ್ರಲಯಕಾಲದಲ್ಲಿ ವಾಸುದೇವನೇ ಇದ್ದನು. ಬ್ರಹ್ಮನೂ, ರುದ್ರನೂ ಇರಲಿಲ್ಲ, ಇತ್ಯಾದಿ ಸ್ಮೃತಿಗಳಲ್ಲಿ ಹೇಳಿದ ಪ್ರಕಾರ ಬ್ರಹ್ಮಾದಿಗಳು ಪ್ರಲಯಕಾಲದಲ್ಲಿಲ್ಲದಿರುವುದರಿಂದ ಅವರಲ್ಲಿ ಆದಿಕಾಲೀನವಾದ ಸರ್ವಕರ್ತೃತ್ವರೂಪ ಲಕ್ಷಣವು ಸರ್ವಥಾ ಕೂಡದಿರುವುದರಿಂದಲೂ, ಪರಬ್ರಹ್ಮನೆಂದೇ ಅಂಗೀಕರಿಸಬೇಕು. ಕರ್ತೃತ್ವವೆಂದರೆ- ಕಾರ್ಯ ಕಾರಕ ಕ್ರಿಯಾ ಫಲ ಇವುಗಳ ಜ್ಞಾನ, ಇಚ್ಛೆ, ಪ್ರಯತ್ನರೂಪವಾದುದು. ಆದಕಾರಣ ಸರ್ವಕರ್ತನೆಂದರೆ- ಸರ್ವಜ್ಞನು, ಸತ್ಯಕಾಮನು, ಸತ್ಯಸಂಕಲ್ಪನು, ಸಮಸ್ತಶಕ್ತಿಯುಕ್ತನೆಂದೇ ಹೇಳಿದ ಹಾಗಾಯಿತು. ಇದರಿಂದ ಬ್ರಹ್ಮನಿಗೆ ಸಗುಣತ್ವವು ಸಿದ್ಧವೇ ಆಯಿತು. ॥ 7 ॥

ಇದೇ ವಿಷಯದಲ್ಲಿ ಪುರಾಣ ಸಮ್ಮತಿಯನ್ನು ಹೇಳುತ್ತಾರೆ—

**ಮೂಲ ॥ ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಂ ॥**
**ಇತಿ ಭಾಗವತೇ** **॥ ೮ ॥** (ಸ್ಕಂ.3; ಅಧ್ಯಾ.33;ಶ್ಲೋ.12)

**ಅರ್ಥ ॥** (''ಭೇದದೃಷ್ಟ್ಯಾಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ'' ಎಂದು ಪೂರ್ವಾರ್ಧವು. ''ಸ ಸಂಗತ್ಯ ಪುನಃ ಕಾಲೆ ಕಾಲೇನೇಶ್ವರಮೂರ್ತಿನಾ'' ಎಂದು ಉತ್ತರ ಶ್ಲೋಕ ದಲ್ಲಿರುವ 'ಸಂಗತ್ಯ' ಎನ್ನುವುದರಿಂದ ಅನ್ವಯವು. ಜೀವೇಶ್ವರಾದಿ ವಿಷಯಕವಾದ ಐದು ವಿಧ ಭೇದ ಜ್ಞಾನದಿಂದಲೂ, ಪೂರ್ಣಜ್ಞಾನದಿಂದಲೂ ಫಲಾಭಿಸಂಧಿರಹಿತವಾದ ಜ್ಞಾನೋತ್ತರಕಾಲೀನವಾದ

ಕರ್ಮದಿಂದಲೂ,) ಜಗತ್ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಜ್ಞಾನ ಐಶ್ವರ್ಯಾದ್ಯನಂತಗುಣಗಳಿಂದೊಡಗೂಡಿದವನೂ, ಸ್ವಾಭಾವಿಕವಾಗಿಯೇ ಸರ್ವಗುಣಪರಿಪೂರ್ಣನೂ, ಭಕ್ತರಲ್ಲಿ ದಯೆಯಿಂದ ಪುರುಷಾಕಾರವನ್ನು ಸ್ವೀಕರಿಸಿದವನೂ, ಕ್ಷರಾಕ್ಷರ ಪುರುಷರನ್ನತಿಕ್ರಮಿಸಿರುವುದರಿಂದ ಪುರುಷೋತ್ತಮನೂ ಆದ ಶ್ರೀಹರಿಯನ್ನು (ಬ್ರಹ್ಮಾದಿ ಜೀವರು ಪ್ರಲಯದಲ್ಲಿ ಪ್ರವೇಶಮಾಡಿ ಸಂಸಾರದೆಶೆಯಲ್ಲಿ ನೀಚೋಚ್ಚಭಾವದಿಂದ ಅತ್ಯಂತವಾಗಿ ಪರಸ್ಪರ ಭಿನ್ನರಾಗಿಯೇ ಹೇಗೆ ಇರುವರೋ, ಹಾಗೆಯೇ ಮುಕ್ತ್ಯನಂತರದಲ್ಲಿಯೂ ಇದ್ದು ಶ್ವೇತದ್ವೀಪದಲ್ಲಿ ಪ್ರಾದುರ್ಭೂತರಾದ ಆನಂದವುಳ್ಳವರಾಗುತ್ತಾರೆ.) ಎಂದು ಭಾಗವತದಲ್ಲಿರುತ್ತದೆ. ॥ 8 ॥

ನಿರ್ಗುಣತ್ವಪ್ರತಿಪಾದಕಗಳಾದ ಶ್ರುತಿಗಳಿಂದ ವಿರೋಧವಿದ್ದ ಪ್ರಯುಕ್ತ ಈ ಅನುಮಾನದಿಂದ ಬ್ರಹ್ಮನಿಗೆ ಸಗುಣತ್ವವು ಸಿದ್ಧಿಸುವುದಿಲ್ಲವೆಂದರೆ-

**ಮೂಲ ॥ ನ ಚೈಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವ-ಭೂತಾಂತರಾತ್ಮಾ। ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚೇತ್ಯಾದಿ ವಿರೋಧಃ ॥ ಸತ್ವಾದಿ ಗುಣಾಭಾವೋಕ್ತೇಸ್ತತ್ರ। ಅನ್ಯಥೈಕೋ ದೇವಃ ಸರ್ವಭೂತೇಷು ಗೂಢ ಇತ್ಯಾದೀನಾಮಪಿ ಗುಣತ್ವಾತ್ಸ್ವೋಕ್ತಿವಿರೋಧಃ ॥ ೯ ॥**

**ಅರ್ಥ ॥** ಪ್ರಧಾನನು, ಅಥವಾ ತನ್ನ ಅವಯವ ಗುಣ ಕ್ರಿಯಾದಿಗಳಿಂದ ಭೇದವಿರಹಿತನು, ಕ್ರೀಡಾದಿಗುಣ ವಿಶಿಷ್ಟನು, ಸರ್ವಪ್ರಾಣಿಗಳಲ್ಲಿ ಗುಪ್ತನಾಗಿರುವವನು, ಸರ್ವತ್ರ ವ್ಯಾಪಿಸಿಕೊಂಡಿರುವವನು, ಬ್ರಹ್ಮ ರುದ್ರ ಮೊದಲಾದ ಸರ್ವ ಪ್ರಾಣಿಗಳಲ್ಲಿ ಅಂತರ್ಗತನಾಗಿ ನಿಯಮನಾದಿಗಳನ್ನು ಮಾಡುವವನು, ಸರ್ವ ಕರ್ಮಗಳಿಗೂ ಅಧಿಪತಿಯು, ಸರ್ವ ಪ್ರಾಣಿಗಳಿಗೂ ಆಶ್ರಯನು, ಸರ್ವ ವಸ್ತುಗಳನ್ನು ಸಾಕ್ಷಾತ್ ತಿಳಿಯುವವನು, ಜ್ಞಾನ ಸ್ವರೂಪನು, ಸಮಾಧಿಕರಿಲ್ಲದಿರುವವನು, ಅಥವಾ ಜಡಾಮಿಶ್ರನು, ಅಂದರೆ- ಪ್ರಾಕೃತದೇಹವಿಲ್ಲದಿರುವವನು, ಸತ್ವರಜಸ್ತಮೋಗುಣಗಳಿಲ್ಲದಿರುವವನು, ಅಥವಾ ಪ್ರಾಕೃತಗುಣಗಳಿಲ್ಲದಿರುವವನು, ಇವು ಮೊದಲಾದ ಶ್ರುತಿಗಳಿಂದ ವಿರೋಧವಿಲ್ಲ. (ಏಕೆ ವಿರೋಧವಿಲ್ಲವೆಂದರೆ-) ಆ ಶ್ರುತಿಯಲ್ಲಿ ಪ್ರಾಕೃತ ಸತ್ವ-ರಜ-ಸ್ತಮೋಗುಣಗಳೇ ಇಲ್ಲವೆಂದು ಹೇಳಿರುವುದರಿಂದ (ಅಂದರೆ- 'ಕೇವಲಃ' ಎನ್ನುವುದರಿಂದ ಶರೀರವಿಲ್ಲವೆಂದು ಪ್ರತಿಪಾದಿಸಲು ಆ ವಿಷಯದಲ್ಲಿ ಹೇತುವು ಯಾವುದೆಂದು ಆಕಾಂಕ್ಷಾ ಬರಲು ಶರೀರಸಂಬಂಧಕ್ಕೆ ಕಾರಣಗಳಾದ ಪ್ರಾಕೃತ ಸತ್ವ-ರಜ-ಸ್ತಮೋಗುಣಗಳು ಇಲ್ಲವೆಂದು ಆ ಶ್ರುತಿಯಲ್ಲಿ ನಿರ್ಗುಣಪದದಿಂದ ಹೇಳಲ್ಪಡುತ್ತದೆ. ಆದಕಾರಣ 'ನಿರ್ಗುಣಃ' ಎಂಬ ಶ್ರುತಿಯು ''ಸತ್ಯಂ ಜ್ಞಾನಮನಂತಂ ಬ್ರಹ್ಮ'' ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಜ್ಞಾನ ಆನಂದಾದಿ ಶುಭಗುಣಗಳನ್ನು ನಿಷೇಧಿಸುವುದಿಲ್ಲ, ಆದಪ್ರಯುಕ್ತ ಭಿನ್ನವಿಷಯಕವಾದ ಪ್ರಯುಕ್ತ ನಿರ್ಗುಣಶ್ರುತಿಯಿಂದ ಸರ್ವಜ್ಞತ್ವಾದಿ ಗುಣಗಳನ್ನು ಸಾಧಿಸುವ ಅನುಮಾನಕ್ಕೆ ವಿರೋಧವಿಲ್ಲ. ಯಾವ ಗುಣಗಳೂ ಇಲ್ಲವೆಂದೇ ನಿರ್ಗುಣಶ್ರುತಿಗೆ ಅರ್ಥವನ್ನು ಏಕೆ ಮಾಡಬಾರದು? ಅರ್ಥಾಂತರವನ್ನು ಏತಕ್ಕೆ ಕಲ್ಪಿಸುವುದೆಂದರೆ-) ಯಾವ ಗುಣಗಳೂ ಇಲ್ಲವೆಂಬ ಅರ್ಥವನ್ನಂಗೀಕರಿಸಿದರೆ ''ಏಕೋ ದೇವಃ ಸರ್ವಭೂತೇಷು ಗೂಢಃ'' ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವ ಏಕತ್ವ ದೇವತ್ವಾದಿಗಳಿಗೂ

ಗುಣತ್ವವಿದ್ದುದರಿಂದ ತನ್ನ ವಾಕ್ಯದಿಂದಲೇ ವಿರೋಧವು. (ಅಂದರೆ, 'ಏಕೋ ದೇವಃ' ಇದು ಮೊದಲಾದ ಪದಗಳಿಂದ ಹೇಳಲ್ಪಟ್ಟ ಏಕತ್ವಾದಿಗಳೂ ಗುಣಗಳಾದುದರಿಂದ ಶ್ರುತಿಯು ತಾನೇ ಏಕತ್ವಾದಿ ಗುಣಗಳನ್ನು ಹೇಳಿ ಪುನಃ ಯಾವ ಗುಣಗಳೂ ಇಲ್ಲವೆಂದು ಪ್ರತಿಪಾದಿಸಿದರೆ ''ನನ್ನ ತಾಯಿಯು ಗೊಡ್ಡು'' ಎನ್ನುವುದರಂತೆ ತನ್ನ ವಚನದಿಂದಲೇ ವಿರುದ್ಧವಾಯಿತು.) ಆದಕಾರಣ ಬೇರೆ ಅರ್ಥವನ್ನು ಹೇಳಬೇಕು. ॥ 9 ॥

ಹಾಗಾದರೆ ಅನುಮಾನಕ್ಕೆ ಈ ಶ್ರುತಿಯಿಂದ ವಿರೋಧ ಬಾರದೆ ಇದ್ದರೂ ''ಬ್ರಹ್ಮ ನಿರ್ಗುಣಂ ಪೃಥಿವ್ಯಾದ್ಯತಿರಿಕ್ತತ್ವಾತ್ ಗುಣಾದಿವತ್'' ಬ್ರಹ್ಮನು ನಿರ್ಧರ್ಮಕನು, ಪೃಥಿವ್ಯಾದಿಗಳಿಂದ ಅತಿರಿಕ್ತನಾದ ಪ್ರಯುಕ್ತ ಗುಣಾದಿಗಳಂತೆಯೇ ಎಂಬ ಅನುಮಾನವಿರೋಧವು ಬರುವುದೆಂದರೆ-

**ಮೂಲ ॥ ನ ಚ ನಿರ್ವಿಶೇಷಂ ನಾಮ ಕಿಂಚಿದಸ್ತಿ । ನಿರ್ವಿಶೇಷತ್ವೋಕ್ತೇರೇವ ವ್ಯಾಹತತ್ವಾತ್ । ನಿರ್ವಿಶೇಷತ್ವೇನ ವಿಶಿಷ್ಟಂ ತನ್ನವೇತ್ಯುಕ್ತೇ ಯದ್ಯವಿಶಿಷ್ಟಂ ತರ್ಹಿ ನ ವಿಶೇಷನಿರಾಕರಣಂ । ವಿಶೇಷವತ್ತ್ವಮೇವ ಭವತಿ । ಯದಿ ತೇನ ವಿಶಿಷ್ಟಂ ಸ ಏವ ವಿಶೇಷ ಇತಿ ವ್ಯಾಹತಿಃ ॥ ೧೦ ॥**

**ಅರ್ಥ ॥** (1) ನಿರ್ಧರ್ಮಕನು (ನಿರ್ಗುಣನು) ಎಂದು ಪ್ರಸಿದ್ಧವಾದುದು ಯಾವುದೂ ಇಲ್ಲ, (2) ನಿರ್ವಿಶೇಷತ್ವವೆನ್ನುವ ವಚನಕ್ಕೇನೇ ವ್ಯಾಹತಿಯಿದ್ದುದರಿಂದ, (ಅಂದರೆ- ಪ್ರಮಾಣಾಂತರ ಗಳಿಂದ ವ್ಯಾಹತಿಯು ಸುತರಾಂ ಇದೆ. ಅದು ಹೊರತು ನಿರ್ವಿಶೇಷತ್ವ ವಚನವೇ ವ್ಯಾಹತವು. (3) ಹೇಗೆಂದರೆ- (ಇದು ನಿರ್ಧರ್ಮಕವು ಎಂದು ಹೇಳತಕ್ಕ ನಿನ್ನನ್ನು ಕುರಿತು ಬ್ರಹ್ಮನು) ವಿಶೇಷಾಭಾವರೂಪವಾದ ನಿರ್ವಿಶೇಷತ್ವದಿಂದ ವಿಶಿಷ್ಟನೋ ಅಲ್ಲವೋ? ಎಂದು (ನಾವು) ಕೇಳುವಾಗ ನಿರ್ವಿಶೇಷತ್ವವೆನ್ನುವ ವಿಶೇಷದಿಂದ ವಿಶಿಷ್ಟವಾಗಲಿಲ್ಲವೆಂದು ಹೇಳಿದ್ದಾದರೆ ನೀನು ಆ ವಸ್ತುವಿನ ವಿಶೇಷ (ಧರ್ಮ)ದ ನಿರಾಕರಣೆಯನ್ನು ಮಾಡಲಿಲ್ಲವೆಂದು ಆಗುವುದು. ವಿಶೇಷವಿದೆ ಎನ್ನುವುದೇ ಸುಸ್ಥವಾಯಿತು. ನಿರ್ವಿಶೇಷತ್ವದಿಂದ ವಿಶಿಷ್ಟವಾಗಿದೆ ಎಂದು ಹೇಳುವುದಾದರೆ ವಿಶೇಷಾನುಭಾವರೂಪವಾದುದೇ (ವಿಶೇಷವಿಲ್ಲವೆನ್ನುವುದೇ) ವಿಶೇಷವು (ಅಂಗೀಕೃತವಾಯಿತು. ತನ್ನ ಕ್ರಿಯೆಯಿಂದಲೇ) ವ್ಯಾಹತಿಯು (ಬರುವುದು) ॥ 10 ॥

ಆಗಲಿ; ಚಿಂತಿಲ್ಲ, ಹಿಂದಿನ ಅನುಮಾನವು 'ಬ್ರಹ್ಮನು ನಿರ್ಧರ್ಮಕನು' ಎನ್ನುವಲ್ಲಿ ಪ್ರಮಾಣವಾಗದಿದ್ದರೂ ''ಏಕಧೈವಾನುದ್ರಷ್ಟವ್ಯಂ'' ಇದು ಮೊದಲಾದ ಶ್ರುತಿಯೂ ''ವಿಶೇಷವತ್ತ್ವಂ ಕುತಶ್ಚಿದ್ವ್ಯಾವೃತ್ತಂ ಧರ್ಮತ್ವಾದ್ರೂಪವತ್'' ವಿಶೇಷವುಳ್ಳತನವು ಯಾವುದೋ ಒಂದು ವಸ್ತುವಿನಿಂದ ಹೊರಟು ಹೋಗಿದೆ; ಧರ್ಮವಾದ ಪ್ರಯುಕ್ತ, ರೂಪದಂತೆ, (ಯಾವುದರಿಂದ ಹೊರಟು ಹೋಗಿಯದೇ ಆ ವಸ್ತುವೇ ವಿಶೇಷವಿಲ್ಲದಿರುವುದು.) ಇವು ಮೊದಲಾದ ಅನುಮಾನಗಳೂ ಪ್ರಮಾಣಗಳಾಗುವುವು. ಎಂದರೆ-

**ಮೂಲ ॥ (೧) ನ ಚ ನಿರ್ವಿಶೇಷತ್ವೇ ಕಿಂಚಿನ್ಮಾನಂ ॥**
**(೨) ಅಶೇಷ ವಿಶೇಷ ವಚನಾನುಭವ ಯುಕ್ತಿವಿರೋಧಶ್ಚ ॥ ೧೧ ॥**

**ಅರ್ಥ ॥** (1) ನಿರ್ಧರ್ಮಕತ್ವವಿಷಯದಲ್ಲಿ (ಅಂದರೆ ಬ್ರಹ್ಮನು ನಿರ್ಗುಣನು ನಿರ್ಧರ್ಮಕನು

ಎನ್ನುವಲ್ಲಿ) ಯಾವುದೊಂದು ಪ್ರಮಾಣವೂ ಇಲ್ಲ. (ವ್ಯಾಹತಿಯಿದ್ದುದರಿಂದಲೇ.) (''ಏಕಧೈವಾನುದ್ರಷ್ಟವ್ಯಂ'' ಇವು ಮೊದಲಾದ ಶ್ರುತಿಗಳಾದರೂ ವಿಶೇಷಶಕ್ತಿಯಿಂದ ಬ್ರಹ್ಮನಿಗೆ ಅನೇಕರೂಪಗಳಿದ್ದರೂ ಅವುಗಳಿಗೆ ಭೇದವಿಲ್ಲವೆಂದು ಪ್ರತಿಪಾದಿಸತಕ್ಕವುಗಳು.) (2) (ಬ್ರಹ್ಮನು ನಿರ್ಧರ್ಮಕನು ಎನ್ನುವಲ್ಲಿ ಶಂಕಿಸಲ್ಪಡತಕ್ಕ ಎಲ್ಲಾ ಶ್ರುತಿಗಳಿಗೂ ಅನುಮಾನಗಳಿಗೂ) ವಿಶೇಷವನ್ನು ಪ್ರತಿಪಾದಿಸುವ ಎಲ್ಲಾ ವಚನ, ಅನುಭವ, ಯುಕ್ತಿ ಇವುಗಳಿಂದ ವಿರೋಧವೂ ಇದೆ.

**ತಾತ್ಪರ್ಯ ||** 'ಯಸ್ಸರ್ವಜ್ಞಃ ಸರ್ವವಿತ್' ಇತ್ಯಾದಿ ವಚನಗಳೂ ಧರ್ಮವಿಷಯದಲ್ಲಿ ಪುರಾಣಪ್ರಸಿದ್ಧವಾಗಿರುವ ಹಿರಣ್ಯಗರ್ಭಾದಿಗಳ ಪ್ರತ್ಯಕ್ಷವೂ 'ಬುದ್ಧಿಪೂರ್ವಂ ಸರ್ವಕರ್ತೃತ್ವಾತ್'' ಇತ್ಯಾದಿ ಯುಕ್ತಿಯೂ ಇವುಗಳಿಂದ ವಿರೋಧವಿದೆ ಎಂದು ತಿಳಿಯಬೇಕು. ಅಂತೂ ನಿರ್ಧರ್ಮಕನೆಂದು ಪ್ರತಿಪಾದಿಸತಕ್ಕ ಶ್ರುತ್ಯನುಮಾನಗಳು ಪ್ರಬಲಗಳಾದ ಪ್ರತ್ಯಕ್ಷ ಅನುಮಾನ ಆಗಮಗಳಿಂದ ಬಾಧಿತಗಳಾಗಿವೆ. ಆದುದರಿಂದ ಅವುಗಳು ಸಗುಣತ್ವಸಾಧಕ ಅನುಮಾನಕ್ಕೆ ಪ್ರತಿಪಕ್ಷಗಳಾಗಲಾರವು. || 11 |

ಮಾಯಾವಾದಿಗಳು ಆಶಂಕಿಸುವರು. ಪಾರಮಾರ್ಥಿಕವಾಗಿ ಬ್ರಹ್ಮನಲ್ಲಿ ಧರ್ಮಗಳಿಲ್ಲ. ಮಾಯಾಕಲ್ಪಿತವಾದ ಈಶ್ವರತ್ವವಿದೆ. ಜಗತ್ಕರ್ತೃತ್ವ ಮೊದಲಾದ ಮಿಥ್ಯಾವಿಶೇಷಗಳಿವೆ. ನೀವು (ದ್ವೈತಿಗಳು) ಹೇಳಿದ ಗುಣಸಾಧಕ ವಚನಾದಿಗಳೆಲ್ಲವೂ ಆ ಮಿಥ್ಯಾಭೂತಗಳಾದ ಗುಣಗಳನ್ನು ಸಾಧಿಸುತ್ತವೆ. ನಾವು ಹೇಳಿದ ಶ್ರುತ್ಯನುಮಾನಗಳು ಪಾರಮಾರ್ಥಿಕವಾಗಿ ಗುಣಗಳಿಲ್ಲ ಎಂಬುವ ವಿಷಯವನ್ನು ಸಾಧಿಸುತ್ತವೆ. ಆದ ಕಾರಣ ನಮ್ಮ ಶ್ರುತ್ಯನುಮಾನಗಳು ನೀವು ಹೇಳಿದ ಶ್ರುತ್ಯಾದಿಗಳಿಂದ ಬಾಧಿಸಲ್ಪಡಲಾರವು, ಎಂದಾಶಂಕಿಸಿದರೆ?

**ಮೂಲ || (೧) ನ ಚ ಮಿಥ್ಯಾ ವಿಶೇಷವತ್ । ವ್ಯಾಹತೇಃ ||**
**(೨) ಮಿಥ್ಯಾ ವಿಶೇಷ ಇತ್ಯುಕ್ತೇ ಹ್ಯಸದ್ವಿಶೇಷ ಇತ್ಯೇವ ಭವತಿ ||**
**(೩) ತಥಾಚಾವಿಶೇಷವಿಶಿಷ್ಟಪಕ್ಷೋಕ್ತದೋಷ ಏವ || ೧೨ ||**

**ಅರ್ಥ ||** (1) (ಬ್ರಹ್ಮನು) ಮಿಥ್ಯಾಭೂತವಾದ ವಿಶೇಷವಿರುವವನು ಎಂದೇ ಹೇಳಲಿಕ್ಕೆ ಶಕ್ಯವಾಗುವುದಿಲ್ಲ. ವ್ಯಾಹತವಾದ ಪ್ರಯುಕ್ತ. (2) ಏಕೆಂದರೆ- ಮಿಥ್ಯಾಭೂತವಾದ ವಿಶೇಷವು ಎಂದು ಹೇಳಿದರೆ ವಿಶೇಷವಿಲ್ಲವೆಂದೇ ಹೇಳಿದ ಹಾಗಾಯಿತು. (ಮಿಥ್ಯಾಶಬ್ದಕ್ಕೆ ಅಸತ್ (ಇಲ್ಲ) ಎಂದೇ ಅರ್ಥವು. ಬೇರೆ ಅರ್ಥಗಳಿಲ್ಲ. ವತ್ ಎಂಬ 'ಮತುಪ್' ಪ್ರತ್ಯಯಕ್ಕೆ 'ಅಸ್ತಿ=ಇರುತ್ತದೆ' ಎಂದರ್ಥವು. 'ಅಸತ್ ಅಸ್ತಿ=ಇಲ್ಲದಿರುವುದು ಇರುತ್ತದೆ' ಎನ್ನುವುದು ವ್ಯಾಹತಿಗೆ ಮುಖ್ಯೋದಾಹರಣೆಯು.) (3) ತಥಾಚ ಅವಿಶೇಷವಿಶಿಷ್ಟನು ಎನ್ನುವ ಪಕ್ಷದಲ್ಲಿ ಹೇಳಿದ ದೋಷವು ಸಿದ್ಧವೇ ಆಯಿತು. ಅಂದರೆ ವಿಶೇಷವಿಲ್ಲ ಎಂಬ ಪಕ್ಷದಲ್ಲಿ ಹೇಳಿದ ದೋಷವೇ ಬಂತು.

**ತಾತ್ಪರ್ಯ ||** ಬ್ರಹ್ಮನು ನಿರ್ವಿಶೇಷನು ಎಂದು ಹೇಳಿದರೆ ವಿಶೇಷವಿದೆ ಎಂದು ಪ್ರತಿಪಾದಿಸುವ ಪ್ರಮಾಣವಿರೋಧವಿದೆ ಎಂದು ದೋಷ ಹೇಳುವಾಗ ಪುನಃ ಬ್ರಹ್ಮನು ವಿಶೇಷರಹಿತನು ಎನ್ನುವ ವಚನದಿಂದ ಆ ದೋಷವು ಪರಿಹೃತವಾಗಲಿಲ್ಲ ಮತ್ತು ದೃಢೀಕೃತವೇ ಆಯಿತು. || 12 ||

ಮಾಯಾವಾದಿಗಳು ಆಶಂಕಿಸುವರು. ಮಿಥ್ಯಾವಿಶೇಷಶಬ್ದದಿಂದ ನಾವು ಅನಿರ್ವಚನೀಯ

ವಿಶೇಷವನ್ನು ಹೇಳುತ್ತೇವೆ. ಅಸತ್ತಾದವಿಶೇಷ (ವಿಶೇಷವಿಲ್ಲದಿರುವುದು) ಎಂದು ಹೇಳುವುದಿಲ್ಲ, ತಥಾಚ ವ್ಯಾಹತಿಯಿಲ್ಲ ಎಂದರೆ-

**ಮೂಲ ॥ (೧) ನ ಚಾನಿರ್ವಚನೀಯ ವಿಶೇಷ ಇತಿ ಭವತಿ ॥**
**(೨) ಅನಿರ್ವಚನೀಯಾಸಿದ್ಧೇಃ ॥**
**(೩) ನ ಹಿ ತತ್ರ ಪ್ರತ್ಯಕ್ಷಮಸ್ತಿ ॥**
**(೪) ಮಿಥ್ಯಾಶಬ್ದಸ್ತ್ವಭಾವ ವಾಚ್ಯೇವ ॥**
**(೫) ತದನ್ಯತ್ರ ಪ್ರಮಾಣಾಭಾವಾತ್ ॥ ೧೩ ॥**

**ಅರ್ಥ ॥** (1) (ಮಿಥ್ಯಾವಿಶೇಷಶಬ್ದದಿಂದ) ಅನಿರ್ವಚನೀಯ ವಿಶೇಷವು ಎನ್ನುವುದು ಯುಕ್ತವಾಗುವುದಿಲ್ಲ, (ಏಕೆಂದರೆ ಬ್ರಹ್ಮನ ಜಗತ್ಕರ್ತೃತ್ವಾದಿಗಳು ಅನಿರ್ವಾಚ್ಯಗಳು ಎನ್ನುವಲ್ಲಿ ಪ್ರಮಾಣವಿರುತ್ತಿದ್ದರೆ ಆಗಬಹುದು. ಅಂತಹ ಪ್ರತ್ಯಕ್ಷವಾಗಲೀ ಆಗಮವಾಗಲೀ ಇಲ್ಲ, ''ಅದ್ಭುತತ್ವಾದನಿರ್ವಾಚ್ಯಂ'' ಎನ್ನುವ ಆಗಮದಿಂದ ಅನಿರ್ವಾಚ್ಯವೆನ್ನುವ ಪದವು ಬೇರೆ ರೀತಿಯಾಗಿ ವ್ಯಾಖ್ಯಾತವಾಗಿದೆ.) (2) ಹಾಗಾದರೆ (''ಬ್ರಹ್ಮಣಃ ಜಗತ್ಕರ್ತೃತ್ವಾದಿಕಮನಿರ್ವಚನೀಯಂ ದೃಶ್ಯತ್ವಾತ್''=ಬ್ರಹ್ಮಸಂಬಂಧಿಯಾದ ಜಗತ್ಸ್ರಷ್ಟೃತ್ವ ಮೊದಲಾದುದು ಅನಿರ್ವಚನೀಯವು ತೋರುವ ಪ್ರಯುಕ್ತ, ಇದು ಮೊದಲಾದ ಅನುಮಾನವು ಪ್ರಮಾಣವಾಗಲಿ ಎಂದರೆ) ಅನಿರ್ವಚನೀಯವೇ ಸಿದ್ಧಿಸದಿರುವುದರಿಂದ, (ಅನಿರ್ವಚನೀಯವಾದ ವಸ್ತುವಿದೆ ಎನ್ನುವಲ್ಲಿ ದೃಷ್ಟಾಂತವಿಲ್ಲದಿರುವುದರಿಂದ ಅನುಮಾನವು ಯುಕ್ತವಲ್ಲ.) (3) ಆ ಅನಿರ್ವಚನೀಯಾರ್ಥದಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲ, (ಅಂದರೆ ಯಾರೊಬ್ಬನೂ ಇದು ನೀಲವು ಎನ್ನುವುದರಂತೆ ಇದು ಅನಿರ್ವಚನೀಯವು ಎಂದು ಪ್ರತ್ಯಕ್ಷ ಪ್ರಮಾಣದಿಂದ ತಿಳಿದುಕೊಳ್ಳುವುದಿಲ್ಲವಷ್ಟೆ!) (4)(ಚಿಪ್ಪನ್ನು ನೋಡಿ ಬೆಳ್ಳಿಯೆಂದು ತಿಳಿದವನು ಭ್ರಾಂತಿ ಹೊರಟುಹೋದೊಡನೆ ''ಮಿಥ್ಯೈವೇದಂ ರಜತಂ' ಈ ಬೆಳ್ಳಿಯು ಮಿಥ್ಯಾಭೂತವಾದುದೇ ಎಂದು ವ್ಯವಹಾರಮಾಡುತ್ತಾನೆ. 'ಮಿಥ್ಯಾ' ಅನಿರ್ವಚನೀಯ ಎನ್ನುವುದು ಎರಡೂ ಪರ್ಯಾಯಪದಗಳು. ನಿವೃತ್ತವಾದ ಭ್ರಾಂತಿಯುಳ್ಳವನು 'ರಜತವು ಮಿಥ್ಯೆ' ಯೆಂದು ವ್ಯವಹಾರ ಮಾಡಿರುವುದರಿಂದ ವ್ಯವಹಾರಕ್ಕೆ ಕಾರಣವಾದ ಅನಿರ್ವಚನೀಯತ್ವ ರೂಪವಾದ ಮಿಥ್ಯಾತ್ವವನ್ನು ವಿಷಯೀಕರಿಸುವ ಪ್ರತ್ಯಕ್ಷವನ್ನು ಅನುಮೇಯಿಸಬಹುದು. 'ಭ್ರಾಂತ್ಯುತ್ಥಿತಃ ರಜತಾನಿರ್ವಚನೀಯತ್ವವಿಷಯಕ ಪ್ರತ್ಯಕ್ಷವಾನ್ ಮಿಥ್ಯೈವ ರಜತಮಿತಿ ವ್ಯವಹರ್ತೃತ್ವಾತ್'= ಭ್ರಮೆಯಿಂದ ಎಚ್ಚೆತ್ತವನು ರಜತಕ್ಕೆ ಅನಿರ್ವಚನೀಯತ್ವವನ್ನು ವಿಷಯೀಕರಿಸುವ ಪ್ರತ್ಯಕ್ಷವುಳ್ಳವನು, ಮಿಥ್ಯೆಯೇ ಆದ ರಜತವನ್ನು ತಿಳಿದೆನು ಎಂದು ವ್ಯವಹಾರ ಮಾಡುವುದರಿಂದ, ಆದಕಾರಣ ಪ್ರತ್ಯಕ್ಷವಿಲ್ಲವೆನ್ನುವುದು ಹೇಗೆ ಕೂಡಬಹುದೆಂದರೆ) 'ಮಿಥ್ಯಾ' ಎನ್ನುವ ಶಬ್ದವಾದರೂ ಅಭಾವವಾಚಕವೇ. ಅಂದರೆ ಅಸತ್=ಇಲ್ಲದಿರುವುದು ಎನ್ನುವುದರನ್ನೇ ಹೇಳುತ್ತದೆ. ತಥಾ ಚ 'ಮಿಥ್ಯೈವ ರಜತಂ'=ಎನ್ನುವುದಕ್ಕೆ ಬೆಳ್ಳಿಯಿಲ್ಲ, ರಜತಾತ್ಯಂತಾಭಾವವದೆ ಎಂದರ್ಥವು. (5) ಏಕೆಂದರೆ, ಅಸತ್ ಎನ್ನುವುದರಿಂದ ಇತರವಾದ ಅನಿರ್ವಚನೀಯರೂಪವಾದ ವಸ್ತುವಿದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ. (ಶುಕ್ತಿರಜತಾದಿಗಳು ಅನಿರ್ವಚನೀಯ ಎಂದು ಪ್ರತಿಪಾದಿಸತಕ್ಕ ಆಗಮವು ಇರುವುದಿಲ್ಲ.) ॥ 13 ॥

ಹಾಗಾದರೆ 'ಶುಕ್ತಿರಜತಾದಿಕಂ ಅನಿರ್ವಚನೀಯಂ ಬಾಧ್ಯತ್ವಾತ್ ವ್ಯತಿರೇಕೇಣ ಬ್ರಹ್ಮವತ್' ಶುಕ್ತಿರಜತ ಮೊದಲಾದುದು ಅನಿರ್ವಚನೀಯವು ಬಾಧ್ಯವಾದ ಪ್ರಯುಕ್ತ, ವ್ಯತಿರೇಕದಿಂದ ಬ್ರಹ್ಮನಂತೆ, ಎಂಬುವ ಅನುಮಾನವು ಪ್ರಮಾಣವೆಂದರೆ-

**ಮೂಲ ॥ (೧) ನ ಚಾನ್ಯತ್ಪ್ರಮಾಣಂ ॥**
**(೨) ಪ್ರತಿಜ್ಞಾ ವ್ಯಾಹತೇಃ ॥**
**(೩) ನ ಹಿ ಸದಂತರಾದಸತಶ್ಚಾನ್ಯತ್ಸದಸದ್ವಿಲಕ್ಷಣಂ ಪ್ರಸಿದ್ಧಂ ॥ ೧೪ ॥**

**ಅರ್ಥ ॥** (1) ಪ್ರತ್ಯಕ್ಷ ಆಗಮಗಳಿಂದ ಇತರವಾದ ಅನುಮಾನವು ಪ್ರಮಾಣವಾಗುವುದಿಲ್ಲ, (2) ಏಕೆಂದರೆ ಪ್ರತಿಜ್ಞೆಗೆ ವ್ಯಾಹತಿಬರುವುದರಿಂದ, ಅಂದರೆ ಅನಿರ್ವಚನೀಯತ್ವವೆಂದರೆ ನಿರ್ವಚನ ವಿಲ್ಲದಿರುವುದು ಎಂದರೆ 'ನಾನು ಮೂಕನು' ಎನ್ನುವುದರಂತೆ ಪ್ರತಿಜ್ಞೆಗೆ ತನ್ನ ಕ್ರಿಯೆಯಿಂದಲೇ ವಿರೋಧವು. ಸದಸತ್ತುಗಳಿಂದ ವಿಲಕ್ಷಣವೆಂದೂ 'ಬಂಜೆಯು ಮಕ್ಕಳುಳ್ಳವಳು' ಎನ್ನುವುದರಂತೆ ಪ್ರತಿಜ್ಞೆಗೆ ತನ್ನ ಮಾತಿನಿಂದಲೇ ವ್ಯಾಹತಿಯು ಬರುವುದು. (3) (ಅಲ್ಲದೆ ಸದಸದ್ವೈಲಕ್ಷಣವನ್ನು ಸಾಧಿಸಿದರೆ ಅಪ್ರಸಿದ್ಧವಿಶೇಷಣತ್ವವೂ ಆದೆ ಎಂದು ನಿರೂಪಿಸುತ್ತಾರೆ.) ಸದಂತರ ವಿಲಕ್ಷಣದಿಂದಲೂ, ಅಸದ್ವಿಲಕ್ಷಣದಿಂದಲೂ ಇತರವಾದುದು ಸದಸದ್ವಿಲಕ್ಷಣವು ಪ್ರಸಿದ್ಧವಲ್ಲವಷ್ಟೆ !

**ತಾತ್ಪರ್ಯ ॥** ಯದ್ಯಪಿ ಘಟಾದಿಗಳು ಸದಂತರ (ಬೇರೊಂದು ಸತ್)ಗಳಾದ ಘಟಾದಿಗಳಿಂದಲೂ ಅಸತ್(ಶಶವಿಷಾಣಾದಿ)ನಿಂದಲೂ ವಿಲಕ್ಷಣವಾದುದು ಎನ್ನುವ ಸದಸದ್ವಿಲಕ್ಷಣವು ಪ್ರಸಿದ್ಧವು. ಆದರೆ ಇದು (ಸದಂತರದಿಂದ ವಿಲಕ್ಷಣವಾಗಿದ್ದು ಅಸತ್ತಿನಿಂದ ವಿಲಕ್ಷಣವಾದುದು ಎನ್ನುವುದು) ಮಾಯಾವಾದಿಗಳಿಗೆ ಸಮ್ಮತವಲ್ಲ, ಅವರು ಬೇರೆಯೇ ಒಡಂಬಡುವರು. ಸತ್ ಎಂದೂ, ಅಸತ್ ಎಂದೂ ನಿರೂಪಸಲಿಕ್ಕೆ ಬಾರದಿರುವುದು. ಅದು ಅಪ್ರಸಿದ್ಧವೇ ಆಗಿರುತ್ತದೆ. ॥14॥

ಜಗತ್ತು ಸದಸದ್ವಿಲಕ್ಷಣವೆನ್ನುವ ಪ್ರತಿಜ್ಞೆಯು ಸ್ವವ್ಯಾಹತವೂ ಆಗಿರುತ್ತದೆ ಎಂದು ನಿರೂಪಿಸುತ್ತಾರೆ-

**ಮೂಲ ॥ ಅಸನ್ನ ಭವತೀತ್ಯುಕ್ತೇ ದ್ವೌ ನಞ್ ಪ್ರಕೃತಮರ್ಥಂ ಸಾತಿಶಯಂ ಗಮಯತಃ ಇತಿ ಸದೇವ ಭವತಿ ॥ ೧೫ ॥**

**ಅರ್ಥ ॥** (ಶುಕ್ತಿರಜತಾದಿಗಳು) ಅಸತ್ತಾಗುವುದಿಲ್ಲ ಎಂದು ಹೇಳಿದರೆ ಸತ್ ಎಂದೇ ಉಕ್ತವಾಯಿತು. ಏಕೆಂದರೆ- ಎರಡು ನಞ್‌ಗಳು ಪ್ರಕೃತವಾದ ಅರ್ಥವನ್ನು (ಅಸತ್ತಲ್ಲವೆನ್ನುವಾಗ ಸತ್ತೇ ಸರಿ ಎನ್ನುವ) ಸಾತಿಶಯವನ್ನು ಹೊಂದಿಸುತ್ತವೆ ಎನ್ನುವ ವ್ಯಾಪ್ತಿಯಿಂದ ತಥಾಚ ಪುನಃ ಸತ್ತಲ್ಲ ಎಂದು ಹೇಳುವವನಿಗೆ ಸ್ವವ್ಯಾಹತಿಯು ಹೇಗೆ ತಾನೇ ಇರಲಾರದು? ಹೀಗೆಯೇ ಸತ್ತಲ್ಲ ಎಂದು ಹೇಳಿದರೆ ಅಸತ್ತೆಂದೇ ಉಕ್ತವಾಯಿತು. ಪುನಃ ಅಸತ್ತಲ್ಲವೆಂದು ಹೇಳುವವನಿಗೆ ಸ್ವವ್ಯಾಹತಿಯು ಹೇಗೆ ಬಾರದೆ ಹೋಗುವುದು? ॥ 15 ॥

ಪ್ರಾಗಭಾವಪ್ರತಿಯೋಗಿಯಾಗುವುದಿಲ್ಲವೆಂದು ಹೇಳಿದರೆ ಧ್ವಂಸಪ್ರತಿಯೋಗಿ ಎಂದಾಗಲೀ ಅತ್ಯಂತಾಸತ್ ಎಂದಾಗಲೀ ಪ್ರಾಪ್ತವಾಗುವುದು; ಸತ್ ಎಂದು ಪ್ರಾಪ್ತವಾಗುವುದಿಲ್ಲ, ಆದಕಾರಣ ಅಸತ್ ಆಗುವುದಿಲ್ಲ ಎಂದು ಹೇಳಿದರೆ ಸತ್ ಎಂದೇ ಪ್ರಾಪ್ತವಾಗುವುದು ಎನ್ನುವ ವ್ಯಾಪ್ತಿಯು ಸಿದ್ಧಿಸುವುದಿಲ್ಲ, ಎಂದರೆ -

**ಮೂಲ ॥ ಅಸದಂತರಂ ವಾ ವಿಶೇಷವಿವಕ್ಷಾಯಾಂ ॥ ೧೬ ॥**

**ಅರ್ಥ ॥** ವಿಶೇಷವಿವಕ್ಷಾ ಇದ್ದರೇನೇ ಅಸದ್ಭಿನ್ನವೆಂದು ಲಭಿಸುವುದು.

**ತಾತ್ಪರ್ಯ ॥** (1) ಒಂದನೇ ನಞರ್ಥದಿಂದ ಕೂಡಿದ್ದಕ್ಕೆ ಒಂದನೇ ನಞಾರ್ಥರೂಪವಾದ ವಿಶೇಷಣದಿಂದ ಬೇರೆಯಾದ ವಿಶೇಷಣವು ವಿವಕ್ಷಿತವಾಗಿದ್ದರೇನೇ ಪುನಃ ಪ್ರಾಕ್ತ್ವಾದಿರೂಪವಾದ, ವಿವಕ್ಷಿತವಾದ ವಿಶೇಷಣಾಂತರಕ್ಕೆ ನಞರ್ಥಸಂಬಂಧವಿದ್ದರೆ ಅಸತ್ತಿನಿಂದ ಬೇರೆ ಎಂದೇ ಸಿಗುವುದು. ವಿಶೇಷವಿವಕ್ಷಾಮಾಡದಿದ್ದರೆ ಸಿಗುವುದಿಲ್ಲ. ಪ್ರಕೃತದಲ್ಲಿ ಆದರೂ 'ಅಸನ್ನ ಭವತಿ' ಎನ್ನುವಲ್ಲಿದ್ದ ಸತ್ತಿನಲ್ಲಿ ಅಸತ್ ಎನ್ನುವ ಒಂದನೇ ನಞಾರ್ಥರೂಪವಾದ ವಿಶೇಷಣದಿಂದ ಬೇರೆಯಾದ ವಿಶೇಷಣವನ್ನು ವಿವಕ್ಷಿಸುವುದಿಲ್ಲ. ಆದಕಾರಣ ವ್ಯಭಿಚಾರವಿಲ್ಲ. (2) ತಥಾಚ ಪ್ರಕೃತದಲ್ಲಿ ಅಸತ್ತು ಅಲ್ಲ, ಅಘಟವಲ್ಲ, ಎಂದು ನಿಷೇಧವನ್ನು ನಿಷೇಧಿಸುವಾಗ ಸತ್ತೆ, ಘಟವೇ ಎಂದುಕ್ತವಾಯಿತು. ಎರಡನೇ ನಿಷೇಧವು ವಿಶೇಷಣೀಭೂತವಾದ ನಿಷೇಧದಿಂದಲೇ ಸಂಬಂಧಿಸಲ್ಪಡುತ್ತದೆ. 'ಪ್ರಾಗಸನ್ನ ಭವತಿ' ಪ್ರಾಗಭಾವಪ್ರತಿಯೋಗಿಯಾಗುವುದಿಲ್ಲ, ಇತ್ಯಾದಿಗಳಲ್ಲಾದರೂ ಪ್ರಾಕ್ತ್ವಾದಿಗಳಿಂದಲೇ ಸಂಬಂಧಿಸಿಕೊಳ್ಳುವುದರಿಂದ ಅಸದಂತರ (ಬೇರೊಂದು ಅಸತ್ತು) ಎಂದೇ ಸಿಗುವುದು. ॥ 16 ॥

ಹೀಗೆ ಸದಸದ್ವೈಲಕ್ಷಣ್ಯ ಶಬ್ದಕ್ಕೆ ಅರ್ಥಭೂತವಾದ ಸತ್ವಾಸತ್ವ ಪ್ರತಿಷೇಧವನ್ನು ಸಿದ್ಧವನ್ನಾಗಿ ಮಾಡಿ ದೂಷಣವು ಹೇಳಲ್ಪಟ್ಟಿದೆ. ಈಗ ಸದಸದ್ವೈಲಕ್ಷಣ್ಯ ಶಬ್ದಾರ್ಥವನ್ನು ದೂಷಿಸಲಿಕ್ಕೆ ಪರರ ಹತ್ತಿರ ಪ್ರಶ್ನೆ ಮಾಡುತ್ತಾರೆ-

**ಮೂಲ ॥ (೧) ಕಿಂ ಚೈತದ್ವೈಲಕ್ಷಣ್ಯಂ । ಭೇದೋಽಭೇದೋ ಭೇದಾಭೇದೋ ವಾ ॥**
**(೨) ನ ತಾವದ್ಭೇದಃ ಅನಂಗೀಕಾರಾತ್ ॥ ೧೭ ॥**

**ಅರ್ಥ ॥** ಮತ್ತು ಏತದ್ವೈಲಕ್ಷಣ್ಯವೆಂದರೆ 1 ಭೇದವೋ, 2 ಅಭೇದವೋ, 3 ಭೇದಾಭೇದವೋ, (4 ಭೇದಾಭೇದವೈಲಕ್ಷಣ್ಯವೋ,) (1) ಭೇದವೆಂದು ಹೇಳಕೂಡದು, ಅಂಗೀಕರಿಸದಿರುವುದರಿಂದ.

ತಾ ॥ ಬ್ರಹ್ಮನು ಹೊರತು ಸತ್ಪದಾರ್ಥವಿಲ್ಲದಿರುವುದರಿಂದ ಶುಕ್ತಿರಜತಾದಿಗಳು ಬ್ರಹ್ಮನಿಂದ ಭಿನ್ನವೆಂದರೂ ಪ್ರತಿಜ್ಞಾರ್ಥವು ಆಗುವುದು. ಭೇದವನ್ನು ಪರರು ಎಲ್ಲಿಯೂ ಅಂಗೀಕರಿಸದಿರುವುದರಿಂದ ಅಪಸಿದ್ಧಾಂತವು ॥ 17 ॥

ನಾವು ಪಾರಮಾರ್ಥಿಕ ಭೇದವನ್ನೇ ಅಂಗೀಕರಿಸುವುದಿಲ್ಲ. ವ್ಯಾವಹಾರಿಕವನ್ನು ಅಂಗೀಕರಿಸುತ್ತೇವೆ. ಆದಕಾರಣ ಅದೇ ವೈಲಕ್ಷಣ್ಯಶಬ್ದಾರ್ಥವಾಗಲಿ ಎಂದರೆ ಈ ವ್ಯಾವಹಾರಿಕ ಶಬ್ದವು ತಮ್ಮ ಸಿದ್ಧಾಂತಾನುಸಾರಿವಾಗಿ ಅನಿರ್ವಚನೀಯ ಎನ್ನುವ ಅರ್ಥವನ್ನು ಹೇಳುತ್ತದೋ, ಅಥವಾ ವ್ಯವಹಾರಕ್ಕೆ ವಿಷಯವಾದುದು ಎನ್ನುವ ಅರ್ಥವನ್ನು ಹೇಳುತ್ತದೋ? ಅದರಲ್ಲಿ ಪ್ರಥಮಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ-

**ಮೂಲ ॥ ವ್ಯಾವಹಾರಿಕ ಭೇದಶ್ಚಾನಿರ್ವಾಚ್ಯ ಸಿದ್ಧೌ ವಕ್ತವ್ಯಃ ॥ ೧೮ ॥**

**ಅರ್ಥ ॥** ವ್ಯಾವಹಾರಿಕಭೇದವಾದರೂ ಅನಿರ್ವಾಚ್ಯವು ಸಿದ್ಧಿಸಿದರೆ ಹೇಳಬೇಕು.

**ತಾತ್ಪರ್ಯ ॥** (1) ಹೀಗೆ ಇಟ್ಟುಕೊಂಡರೆ ಅಪ್ರಸಿದ್ಧವಿಶೇಷಣತ್ವವು ಬರುವುದು (2) ಹಾಗಾದರೆ ಪಾರಮಾರ್ಥಿಕ ಅನಿರ್ವಚನೀಯ ಈ ಎರಡು ಭೇದಗಳಲ್ಲಿ ಅನುಗತವಾದ ಭೇದತ್ವಾವಚ್ಛಿನ್ನವು ಸಾಧ್ಯವು. ಪಾರಮಾರ್ಥಿಕ ಭೇದವೆಂದಾಗಲೀ ಅನಿರ್ವಿಚನೀಯವೆಂದಾಗಲೀ ಹೇಳುವುದಿಲ್ಲ, ಆದಕಾರಣ ಯಾವ ದೋಷವೂ ಇಲ್ಲವೆಂದು ಹೇಳಕೂಡದು. ಪಾರಮಾರ್ಥಿಕ ಅನಿರ್ವಚನೀಯ ಭೇದಸಾಮಾನ್ಯವು ಸಿದ್ದಿಸಲಿಲ್ಲ, 2ನೇದ್ದು (ವ್ಯವಹಾರವಿಷಯತ್ವಾರ್ಥಕವೇ) ಕೂಡುವುದಿಲ್ಲ, ಶುಕ್ತಿರಜತಾದಿಗಳಿಗೆ ಬ್ರಹ್ಮನಿಂದ ಭೇದವು ವ್ಯಾವಹಾರಿಕ (ವ್ಯವಹಾರಸಿದ್ಧವು) ವೆಂದಂಗೀಕರಿಸಿದರೆ ಸತ್ಯವೆಂದಾಗುವುದು. 'ವಿಮತೋ ಭೇದಃ ಸತ್ಯಃ ವ್ಯಾವಹಾರಿಕತ್ವಾತ್'=ಶುಕ್ತಿರಜತಾದಿಗಳಿಗೆ ಬ್ರಹ್ಮನಿಂದ ಭೇದವು ಸತ್ಯವು. ವ್ಯಾವಹಾರಿಕವಾದ ಪ್ರಯುಕ್ತ, ಎಂದು ಪ್ರಯೋಗವು ॥ 18 ॥

ಸತ್ಯನಾದ ಬ್ರಹ್ಮನು ಸಪಕ್ಷನಾಗಿದ್ದುದರಿಂದ ಅವನಲ್ಲಿ ವ್ಯಾವಹಾರಿಕತ್ವಾಖ್ಯಹೇತುವು ಇಲ್ಲದಿರುವ ಪ್ರಯುಕ್ತ ಅಸಾಧಾರಣಾನೈಕಾಂತಿಕವೆಂದರೆ –

**ಮೂಲ ॥ ನ ಚಾವ್ಯಾವಹಾರಿಕ್ಕಂ ಕಿಂಚಿತ್ ।**
**ನ ಚಾಶೇಷವ್ಯವಹಾರನಿವೃತ್ತೌ ಕಿಂಚಿನ್ಮಾನಂ ॥ ೧೯ ॥**

**ಅರ್ಥ ॥** ವ್ಯಾವಹಾರಿಕವಾಗದಿರುವುದು ಯಾವುದೊಂದು ಸತ್ತು ಇರುವುದಿಲ್ಲ, ಏಕೆಂದರೆ, ಸತ್ಯದಿಂದ ಅಶೇಷ ವ್ಯವಹಾರದ ನಿವೃತ್ತಿಯಲ್ಲಿ ಅಂದರೆ, ಸತ್ಯವು ಅಶೇಷವ್ಯವಹಾರಕ್ಕೆ ವಿಷಯವಲ್ಲ ವೆನ್ನುವಲ್ಲಿ ಯಾವ ಪ್ರಮಾಣವೂ ಇಲ್ಲ,

**ತಾತ್ಪರ್ಯ ॥** ಯಾರೊಬ್ಬನು ಆ ವಿಷಯದಲ್ಲಿ ಯಾವುದಾದರೊಂದು ಪ್ರಮಾಣ ಹೇಳಿದರೆ ಸ್ವಕ್ರಿಯಾವಿರೋಧವು ಬರುವುದು. ॥ 19 ॥

ಆಗಲಿ; ಚಿಂತಿಲ್ಲ, ಸತ್ತಾದುದು ವ್ಯಾವಹಾರಿಕವಾಗಲಿ. ಮಿಥ್ಯೆಯಾದ ಶುಕ್ತಿರಜತಾದಿಗಳು ವ್ಯಾವಹಾರಿಕಗಳಾದುದರಿಂದ ವ್ಯಭಿಚಾರವೆಂದರೆ–

**ಮೂಲ ॥ ನ ಚ ಮಿಥ್ಯಾತಥ್ಯಯೋಃ ಸಾಮಾನ್ಯಂ ವ್ಯಾವಹಾರಿಕತ್ವಂ ಧೂಮ-**
**ಬಾಷ್ಪಯೋರ್ಧೂಮತ್ವವತ್ ॥ ೨೦ ॥**

**ಅರ್ಥ ॥** ಸತ್ಯಧೂಮ, ಬಾಷ್ಪಾರೋಪಿತಧೂಮ ಈ ಎರಡರಲ್ಲಿ ಧೂಮತ್ವ ಸಾಮಾನ್ಯವು ಹೇಗೆ ಸಿದ್ಧವಾಗಲಿಲ್ಲವೋ ಹಾಗೆಯೇ ಮಿಥ್ಯಾಸತ್ಯಗಳಲ್ಲಿ ಸಾಧಾರಣವಾದ ವ್ಯಾವಹಾರಿಕತ್ವವೂ ಇಲ್ಲ,

**ತಾತ್ಪರ್ಯ ॥** ಶುಕ್ತ್ಯಾದಿಗಳೇ ವ್ಯಾವಹಾರಿಕವು. ರಜತಾದಿಗಳಲ್ಲಾದರೂ ವ್ಯಾವಹಾರಿಕತ್ವವು ಕಲ್ಪಿತವಾದುದು. ಕಲ್ಪಿತವಾದ ಹೇತುವು ವಿಪಕ್ಷದಲ್ಲಿದ್ದುದರಿಂದ ವ್ಯಭಿಚಾರವೆಂದೆನ್ನಕೂಡದು. ಹಾಗಿದ್ದರೆ ಮರದ ಮೇಲೆ ತೋರುವ ಮಂಜನ್ನು ಧೂಮವೆಂದು ಭ್ರಮಿಸಿದಾಗ ಅಂತಹ ಆರೋಪಿತವಾದ ಧೂಮತ್ವವುಳ್ಳ ಬಾಷ್ಪವು ಹ್ರದಯದಲ್ಲಿದ್ದುದರಿಂದ ಧೂಮರೂಪಹೇತುವಿಗೂ ವ್ಯಭಿಚಾರವು ಪ್ರಸಕ್ತವಾಗುವುದು. ॥ 20 ॥

ಅಭೇದವೆನ್ನುವ 2ನೇ ಪಕ್ಷವನ್ನು ದೂಷಿಸುತ್ತಾರೆ–

**ಮೂಲ ॥ (೧) ನ ಚಾಭೇದೋऽನಂಗೀಕಾರಾದೇವಃ ॥**
**(೨) ತಥೈವೋಭಯಂ ॥**
**(೩) ಅಭೇದೇ ಚಾನಿರ್ವಾಚ್ಯ ಬ್ರಹ್ಮಣೋಸ್ತಚ್ಛಬ್ದಯೋಃ ಪರ್ಯಾಯತ್ವಂ ॥**
**॥ ೨೧ ॥**

**ಅರ್ಥ ॥** (1) (ಏತದ್ವೈಲಕ್ಷಣ್ಯವೆಂದರೆ) ಅಭೇದವೆಂದನ್ನಕೂಡದು, ಅಂಗೀಕರಿಸದಿರುವುದ ರಿಂದಲೇ (2) ಹಾಗೆಯೇ ಭೇದಾಭೇದವೆನ್ನುವುದು ಪರರಿಂದ ಅಂಗೀಕೃತವೇ ಆಗಲಿಲ್ಲ. (3) (ಪರರು ಅಭೇದಪಕ್ಷವನ್ನಂಗೀಕರಿಸದಿರಲಿಕ್ಕೆ ಹೇತುವನ್ನು ಸೂಚಿಸಿಕೊಂಡೇ ಬೇರೆ ದೋಷವನ್ನು ಹೇಳುತ್ತಾರೆ.) ಅನಿರ್ವಾಚ್ಯ ಬ್ರಹ್ಮರಿಗೆ ಭೇದವಿಲ್ಲದಿದ್ದರೆ ಆ ಶಬ್ದಗಳಿಗೆ ಪರ್ಯಾಯತ್ವವು ಬರುವುದು.

**ತಾತ್ಪರ್ಯ ॥** ವಿರುದ್ಧಸ್ವಭಾವವುಳ್ಳ ಅನಿರ್ವಾಚ್ಯ ಬ್ರಹ್ಮರಿಗೆ ಭೇದವಿಲ್ಲದಿದ್ದರೆ ಶುಕ್ತಿರಜತಾದಿ ಗಳೆಲ್ಲವೂ ಬ್ರಹ್ಮನಲ್ಲಿ ಆರೋಪಿತವು. ಇದು ಮೊದಲಾದ ವ್ಯವಹಾರವೇ ಕೂಡಲಾರದು ॥ 21 ॥

ಪುನಃ ಶಂಕಿಸುತ್ತಾರೆ. ''ಸತ್ಯಂ ಜ್ಞಾನಮನಂತಂ ಬ್ರಹ್ಮ'' ಇದು ಮೊದಲಾದ ವಾಕ್ಯವು ವಿಶಿಷ್ಟಾರ್ಥವನ್ನು ಪ್ರತಿಪಾದಿಸುವುದಿಲ್ಲ. ಯದ್ಯಪಿ ಸತ್ಯಾದಿ ಪದಗಳು ಬ್ರಹ್ಮಸ್ವರೂಪವನ್ನು ಮಾತ್ರ ಪ್ರತಿಪಾದಿಸುತ್ತವೆ. ಆದರೂ ವಾಚ್ಯವಾದ ಅರ್ಥವು ಬೇರೆ ಬೇರೆಯಾದುದರಿಂದ ಪರ್ಯಾಯಗಳಲ್ಲ. ಲಕ್ಷಣಾವೃತ್ತಿಯಿಂದ ಬ್ರಹ್ಮನಲ್ಲಿ ತಾತ್ಪರ್ಯವಿರತಕ್ಕವುಗಳು. ಒಂದೇ ಪದದಿಂದ ಬ್ರಹ್ಮನು ಲಕ್ಷಿತನಾದ ಪ್ರಯುಕ್ತ ಬೇರೆ ಪದಗಳಿಗೆ ವೈಯರ್ಥ್ಯವೆಂದೆನ್ನಕೂಡದು. ಪ್ರತಿಪಾದ್ಯವಾದ ಅರ್ಥಕ್ಕೆ ಭೇದವಿಲ್ಲ ದಿದ್ದರೂ ಸತ್ಯಾದಿಪದಗಳಿಂದ ವ್ಯಾವರ್ತ್ಯಗಳಾದ ಆರೋಪಿತ ಅಸತ್ಯತ್ವಾದಿಗಳಿಗೆ ಭೇದವಿದೆ. ಅಂದರೆ, ಅಸತ್ಯತ್ವದ ವ್ಯಾವೃತ್ತಿಯೇ ಸತ್ಯಪದದಿಂದ ತಿಳಿಯುವುದು. ಇದೇ ರೀತಿಯಾಗಿ 'ಶುಕ್ತಿರಜತಾದಿಗಳೆಲ್ಲವೂ ಬ್ರಹ್ಮನು' ಇತ್ಯಾದಿಗಳಲ್ಲಿಯೂ ಏಕೆ ಹೇಳಬಾರದು? ಅಂದರೆ ಇಲ್ಲಿಯೂ ವಾಚ್ಯವಾದ ಅರ್ಥಕ್ಕೆ ಭೇದವಿದ್ದ ಪ್ರಯುಕ್ತ ಪರ್ಯಾಯವಾದುದರಿಂದ ವ್ಯವಹಾರ ಕೂಡುವುದಿಲ್ಲವೆಂದೆನ್ನಕೂಡದು. ಎಂದಾಶಂಕಿಸಿದರೆ-

**ಮೂಲ ॥ ನ ಚ ವ್ಯಾವರ್ತ್ಯ ವಿಶೇಷೇಣಾಪರ್ಯಾಯತ್ವಂ ಕ್ವಚಿತ್ ॥ ೨೨ ॥**

**ಅರ್ಥ ॥** ಸತ್ಯಜ್ಞಾನಾದಿ ಯಾವ ವಾಕ್ಯದಲ್ಲಿಯೂ (ಸತ್ಯಾದಿಪದಗಳಿಗೆ ಲಾಕ್ಷಣಿಕತ್ವವಿದ್ದ ಪ್ರಯುಕ್ತ) ಪರ್ಯಾಯತ್ವವಿಲ್ಲವೆನ್ನುವುದು ವ್ಯಾವರ್ತ್ಯಗಳಾದ ಆರೋಪಿತಗಳಾದ ಅಸತ್ಯತ್ವಾದಿಗಳಿಗೆ ಭೇದವಿದ್ದುದರಿಂದ (ವೈಯರ್ಥ್ಯವಿಲ್ಲವೆನ್ನುವುದು) ಹೇಳಕೂಡದು. ಆದರಂತೆ ಇದು ಎಂಬ ಅತಿದೇಶವು ಸುತರಾಂ ಕೂಡಲಾರದು. ॥ 22 ॥

ಸತ್ಯಾದಿ ಪದಗಳು ಅಸತ್ಯಾದಿಗಳಿಂದ ವ್ಯಾವೃತ್ತಿಫಲವುಳ್ಳವುಗಳಾಗಿ ಬ್ರಹ್ಮನಲ್ಲಿ ವ್ಯಾವೃತ್ತಿವಿಶಿಷ್ಟತ್ವ ರೂಪವಾದ ಅತಿಶಯವನ್ನು (1) ಪ್ರತಿಪಾದಿಸುತ್ತವೋ (2) ಇಲ್ಲವೋ, 1ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ-

**ಮೂಲ ॥ (೧) ವ್ಯಾವರ್ತ್ಯ ವಿಶೇಷಸ್ತದ್ವ್ಯಾವೃತ್ತೇ ಬ್ರಹ್ಮಣಿ ವಿಶೇಷಮಾಪಾದಯತಿ ಚೇದ್ವಿಶಿಷ್ಟವಾಕ್ಯಾರ್ಥತಾ ॥ (೨) ನ ಚೇನ್ನ ಬ್ರಹ್ಮಜ್ಞಾನಾರ್ಥಿನೇ ಪದಾಂತರಂ ವಾಚ್ಯಂ ಅಸಂಗತತ್ವಾತ್ ॥ ೨೩ ॥**

**ಅರ್ಥ ||** ವ್ಯಾವರ್ತ್ಯವಿಶೇಷವಾದ ಅಸತ್ಯಾದಿಗಳು ಸತ್ಯಾದಿ ಪದಗಳಿಂದ ವ್ಯಾವರ್ತಿಸಲ್ಪಟ್ಟದ್ದಾಗಿ ಅಸತ್ಯಾದಿಗಳಿಂದ ವ್ಯಾವೃತ್ತನಾದ ಬ್ರಹ್ಮನಲ್ಲಿ ಬ್ರಹ್ಮಪದದಿಂದ ತಿಳಿಯಲ್ಪಟ್ಟ ಬ್ರಹ್ಮನಿಂದ ಅಸತ್ಯಾದಿ ವ್ಯಾವೃತ್ತಿ ವೈಶಿಷ್ಟ್ಯರೂಪವಾದ ಅತಿಶಯವನ್ನು ಪ್ರತಿಪಾದಿಸುತ್ತದೆ ಎಂದರೆ (ಸತ್ಯತ್ವಾದಿಗಳಿಂದ ವೈಶಿಷ್ಟ್ಯವನ್ನು ಪ್ರತಿಪಾದಿಸದಿದ್ದರೂ ಅಸತ್ಯಾದಿಗಳಿಂದ ವ್ಯಾವೃತ್ತಿವೈಶಿಷ್ಟ್ಯವನ್ನು ಪ್ರತಿಪಾದಿಸುವುದರಿಂದ ವಿಶಿಷ್ಟಕ್ಕೆ ವಾಕ್ಯಾರ್ಥತ್ವವು ಪ್ರಾಪ್ತವಾಯಿತು.) (2ನೇದ್ದನ್ನು ದೂಷಿಸುತ್ತಾರೆ.) ಅಲ್ಲವಾದರೆ ಬ್ರಹ್ಮಜ್ಞಾನವನ್ನಪೇಕ್ಷಿಸುವವನಿಗೆ ಬ್ರಹ್ಮಪದದಿಂದ ಬೇರೆ ಪದವು ಹೇಳಲ್ಪಡಬಾರದು.

**ತಾತ್ಪರ್ಯ ||** ಬ್ರಹ್ಮಜ್ಞಾನವನ್ನರ್ಥಿಸತಕ್ಕವನನ್ನು ಕುರಿತು ಏನಾದರೊಂದು ಬ್ರಹ್ಮನಲ್ಲಿ ವಿಧಿಸಬೇಕು. ಅಥವಾ ನಿಷೇಧಿಸಬೇಕು. ಕೇವಲ ಸ್ವರೂಪವು ಸಿದ್ಧವೇ ಆಗಿರುತ್ತದೆ. ಸತ್ಯತ್ವಾದಿಗಳನ್ನು ವಿಧಿಸುವುದು, ಅಸತ್ಯತ್ವಾದಿಗಳನ್ನು ನಿಷೇದಿಸುವುದು, ಇದರಿಂದ ಬೇರೆ ಹೇಳಿದರೆ ಅಂದರೆ, ಈ ಎರಡರಲ್ಲಿ ಯಾವುದನ್ನೂ ತಿಳಿಸದೆ ಬ್ರಹ್ಮಸ್ವರೂಪವನ್ನು ಮಾತ್ರ ತಿಳಿಸಿದರೆ ಚೂತವನ್ನು ಕೇಳಿದವನೊಡನೆ ನಿಂಬವನ್ನು ಹೇಳಿದವನಂತೆ ಅಸಂಗತವೇ ಆಗುವುದು || 23 ||

ಸತ್ಯಾದಿಪದಗಳಿಂದ ಆಪಾತತಃ ಧರ್ಮಧರ್ಮಿಭಾವವು ಪ್ರತೀತವಾಗುವುದು. ನಿರ್ಧರ್ಮಕತ್ವಪ್ರತಿಪಾದಕಗಳಾದ 'ಏಕಮೇವಾದ್ವಿತೀಯಂ' ಇತ್ಯಾದಿ ವಾಕ್ಯಗಳಿಂದ ಆ ಪ್ರತೀತಿಯು ತಿರಸ್ಕೃತವಾಗೋಣ ಪದಗಳು ವ್ಯರ್ಥಗಳೆಂದು ಸಂಶಯವು ಪ್ರಾಪ್ತವಾಗಲು ವ್ಯಾವೃತ್ತಿವಿಶಿಷ್ಟ ಬ್ರಹ್ಮಸ್ವರೂಪವು ತಿಳಿಯುತ್ತದೆ. ಆಮೇಲೆ ವ್ಯಾವೃತ್ತಿರೂಪವಾದ ವಿಶೇಷವೂ ಮಿಥ್ಯೆಯೆಂದು ಪ್ರತಿಪಾದಿಸಲ್ಪಡುತ್ತದೆ. ಆದುದರಿಂದ ಶುದ್ಧಬ್ರಹ್ಮನೇ ಸಿದ್ಧಿಸುವ ಪ್ರಯುಕ್ತ ಯಾವ ದೋಷವೂ ಇಲ್ಲವೆಂದರೆ–

**ಮೂಲ || (೧) ಮಿಥ್ಯಾ ವಿಶೇಷಸ್ಯ ಚಾಸಿದ್ಧಿರುಕ್ತಾ ||**
**(೨) ಅತೋऽನ್ಯೋನ್ಯಾಶ್ರಯತಾऽನವಸ್ಥಿತಿಶ್ಚಕ್ರಕಂ ವಾ ||**
**(೩) ಭೇದಾಭೇದ ವಿಲಕ್ಷಣಮಪ್ಯುಕ್ತರೀತ್ಯೈವಾಪಾಕೃತಂ || ೨೪ ||**

**ಅರ್ಥ ||** (1) ಮಿಥ್ಯೆಯಾದ ವಿಶೇಷಕ್ಕೆ ಅಸಿದ್ಧಿಯು ಹೇಳಲ್ಪಟ್ಟದೆ. ಅಂದರೆ, ಮಿಥ್ಯೆಯಾದ ವಿಶೇಷವು ಸಿದ್ಧಿಸುವುದಿಲ್ಲವೆಂದು ಹಿಂದೆ ಹೇಳಿರುತ್ತದೆ. (2) ಆದಕಾರಣ ಅನ್ಯೋನ್ಯಾಶ್ರಯತ್ವವು, ಅವನಸ್ಥಾದೋಷವು, ಚಕ್ರಕಾಶ್ರಯವಾಗಲೀ (ಬರುವುದು.) (3) ಭೇದಾಭೇದವಿಲಕ್ಷಣವೆನ್ನುವುದೂ ಕೂಡ ವೈಲಕ್ಷಣ್ಯಶಬ್ದಾರ್ಥವನ್ನು ನಿರ್ವಚನಮಾಡಲಿಕ್ಕೆ ಬಾರದಿರುವುದರಿಂದಲೇ ತಿರಸ್ಕೃತವಾಯಿತು.

**ತಾತ್ಪರ್ಯ ||** (1) ಬ್ರಹ್ಮನಲ್ಲಿರುವ ವಿಶೇಷಗಳು ಮಿಥ್ಯೆಗಳೆಂದು ಸಿದ್ಧಿಸುವುದಕ್ಕಾಗಿ ''ಬ್ರಹ್ಮನಿಷ್ಠಂ ಜಗತ್ಕರ್ತೃತ್ವಾದಿಕಂ ಅನಿರ್ವಚನೀಯಂ ದೃಶ್ಯತ್ವಾತ್'' ಎಂಬ ಅನುಮಾನವನ್ನು ಹೇಳಿರುವರು. ಅನುಮಾನವು ಸಿದ್ಧಿಸುವುದಕ್ಕಾಗಿ ಮಿಥ್ಯಾವಿಶೇಷವನ್ನು ಅಂಗೀಕರಿಸಿರುವುದರಿಂದ ಅನ್ಯೋನ್ಯಾಶ್ರಯವು. (2) ಅನ್ಯೋನ್ಯಾಶ್ರಯವನ್ನು ಪರಿಹರಿಸಿ ಅನುಮಾನವು ಸಿದ್ಧಿಸುವುದಕ್ಕಾಗಿ ಅಂಗೀಕೃತಗಳಾದ ಮಿಥ್ಯಾವಿಶೇಷಗಳಿಗೆ ಭೇದವನ್ನಂಗೀಕರಿಸಿದರೆ ಅನವಸ್ಥೆಯು. ಅಂದರೆ, ಅಸತ್ಯತ್ವಾದಿ ವ್ಯಾವೃತ್ತಿರೂಪ ಧರ್ಮಗಳಿಗೂ ಮಿಥ್ಯಾತ್ವವನ್ನು ಅನುಮಾನಾಂತರದಿಂದ ಸಾಧಿಸಬೇಕು ಆ ಅನುಮಾನಾನಂತರವು ದೃಷ್ಟಾಂತವಿಲ್ಲದಿರುವುದರಿಂದ ಅಯುಕ್ತವೆಂದು ಹೇಳೋಣ,

ಶುಕ್ತಿರಜತಾದಿಗಳು ಸಪಕ್ಷಗಳೆಂದು ಸಿದ್ಧಿಸುವುದಕ್ಕಾಗಿ ಅದರಲ್ಲಿಯೂ ಅನುಮಾನದಿಂದ ಅನಿರ್ವಾಚ್ಯತ್ವವನ್ನು ಸಾಧಿಸಬೇಕು. ಅದರಲ್ಲಿಯೂ ಅನುಮಾನಾಂತರದಿಂದ ಹೀಗೆ ಅನವಸ್ಥೆಯು. (3) ಬಾಧ್ಯತ್ವಾನುಮಾನದಿಂದ ಶುಕ್ತಿರಜತಾದಿಗಳಿಗೆ ಅನಿರ್ವಾಚ್ಯತ್ವವು ಸಿದ್ಧಿಸುವುದು. ಶುಕ್ತಿರಜತಾದಿ ರೂಪ ದೃಷ್ಟಾಂತದಿಂದ ಅಸತ್ಯತ್ವಾದಿ ವ್ಯಾವೃತ್ತಿರೂಪವಾದ ಮಿಥ್ಯಾವಿಶೇಷವು ಸಿದ್ಧಿಸುವುದು. ಹಿಂದೆ ಹೇಳಿದ ಪ್ರಕಾರ ಪದಗಳಿಗೆ ವೈಯರ್ಥ್ಯವಿಲ್ಲದಿರುವುದರಿಂದ ಅದರಂತೆ ಅಪರ್ಯಾಯ ವ್ಯವಹಾರವು ಕೂಡುವುದರಿಂದ ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವನ್ನು ಸಾಧಿಸಿದರೆ ದೋಷವಿಲ್ಲದಿರುವುದ ರಿಂದ ಬಾಧ್ಯತ್ವಾನುಮಾನವು ಸಿದ್ಧಿಸುವುದು. ಹೀಗೆ ಚಕ್ರಕಾಶ್ರಯವು ॥ 24 ॥

ಹೀಗೆ ಸದ್ವೈಲಕ್ಷಣ್ಯವನ್ನು ನಿರಾಕರಿಸಿ ಈಗ ಅಸದ್ವೈಲಕ್ಷಣ್ಯವನ್ನು ನಿರ್ವಚನ ಮಾಡಲಿಕ್ಕೆ ಅಶಕ್ಯವಾದುದರಿಂದ ಅನುಮಾನವು ಅಸಾಧುವೆಂದು ಪ್ರತಿಪಾದಿಸುತ್ತಾರೆ–

**ಮೂಲ ॥ (೧) ಕಿಂ ಚಾಸದ್ವಿಲಕ್ಷಣಮಿತ್ಯತ್ರಾಭಾವಾನ್ಯ ವಿರೋಧಾನಾಂ ಮಧ್ಯೇ ನಞಃ ಕೋಽರ್ಥಃ ॥ (೨) ಯದ್ಯಭಾವೋ ನ ॥ (೩) ಅಸದ್ವಿಲಕ್ಷಣತ್ವಂ ಭಾವತ್ವಮೇವ ಜಗತಃ ಸ್ಯಾತ್ ॥ (೪) ನ ಚ ಸತೋಽನ್ಯಸ್ಮಾದಸತೋ ವಿಲಕ್ಷಣಂ ಜಗತ್ ॥ ೨೫ ॥**

**ಅರ್ಥ ॥** (1) ಮತ್ತು ಅಸದ್ವಿಲಕ್ಷಣ ಎನ್ನುವಲ್ಲಿ 'ಅಭಾವ ಅನ್ಯ ವಿರೋಧಃ' ಇವುಗಳ ಮಧ್ಯದಲ್ಲಿ ನಞಗೆ ಯಾವ ಅರ್ಥವು. (2) ಅಭಾವವೆಂದು ಹೇಳುವುದಾದರೆ ಅದು ಕೂಡುವುದಿಲ್ಲ. (4) (ಏಕೆಂದರೆ) ಅಸದ್ವಿಲಕ್ಷಣತ್ವವೆಂದರೆ ಪ್ರಪಂಚಕ್ಕೆ ಭಾವತ್ವವೇ ಬರುವುದು. (ಅಂದರೆ ಅಭಾವವು ನಞರ್ಥವಾದರೆ ಅಸತ್ ಎಂದರೆ ಸತ್ತಿನ ಅಭಾವವೆಂದಾಗುವುದು. ತಥಾಚ ಧರ್ಮಿಯಾದ ಜಗತ್ತಿಗೆ ಅಸದ್ವಿಲಕ್ಷಣತ್ವವೆಂದರೆ ಭಾವತ್ವವೇ ಪ್ರತಿಜ್ಞಾತವಾಯಿತು. ಅರ್ಥಾಂತರತ್ವವು) (4) ಸತ್ತಿನಿಂದ ಬೇರೆಯಾದುದು ಅಸತ್ ಎನಿಸುತ್ತದೆ. ಅಂತಹ ಅಸತ್ತಿನಿಂದ ವಿಲಕ್ಷಣವಾದ ಶುಕ್ತಿರಜತ ಮೊದಲಾದ ಪ್ರತಿಜ್ಞಾತವಾಗುತ್ತದೆ ಎಂಬ ಪಕ್ಷವೂ ಕೂಡುವುದಿಲ್ಲ. ॥ 25 ॥

ಆ ಪಕ್ಷವೂ ಏಕೆ ಕೂಡುವುದಿಲ್ಲವೆಂದರೆ– ಸತ್ ಶಬ್ದದಿಂದ ಪರಮಾರ್ಥವಾದ ಬ್ರಹ್ಮರೂಪ ವನ್ನು ಇಟ್ಟುಕೊಂಡು ಅದರಿಂದ ಬೇರೆಯಾದ ನಿರುಪಾಖ್ಯವಾದ ಶಶಶೃಂಗಾದಿಯು ಅಸತ್ತೆಂದು ಹೇಳಲ್ಪಡುತ್ತದೋ, ಅಥವಾ ಸತ್ ಶಬ್ದದಿಂದ ಭಾವವನ್ನಿಟ್ಟುಕೊಂಡು ಅದರಿಂದ ಬೇರೆಯಾದ ಅಭಾವವು ಅಸತ್ತೆಂದು ಹೇಳಲ್ಪಡುತ್ತದೋ ಅವುಗಳಲ್ಲಿ ಒಂದನೇದ್ದು ಕೂಡದಿರಲಿಕ್ಕೆ ಕಾರಣವನ್ನು ಹೇಳುತ್ತಾರೆ–

**ಮೂಲ ॥ (೧) ಅಸತೋಽನ್ಯತ್ವಾದಿ ಧರ್ಮಾನಂಗೀಕಾರಾತ್ । ಬ್ರಹ್ಮಣಶ್ಚ ॥ (೨) ಅಸತೋಽನಿರ್ವಚನೀಯತ್ವಾಂಗೀಕಾರಾಚ್ಚ ನ ವೈಲಕ್ಷಣ್ಯಂ ತತೋಽನಿರ್ವಾಚ್ಯಸ್ಯ ॥ ೨೬ ॥**

**ಅರ್ಥ ॥** (1) ಅಸತ್ತಿಗೆ ಅನ್ಯತ್ವ ಮೊದಲಾದ ಧರ್ಮಗಳನ್ನಂಗೀಕರಿಸದಿರುವುದರಿಂದ (ಆದಿಪದದಿಂದ ವ್ಯಾವರ್ತಕ ಧರ್ಮವನ್ನು ಇಟ್ಟುಕೊಳ್ಳಬೇಕು.) ಪರಮಾರ್ಥವಾದ ಬ್ರಹ್ಮನಿಗೆ ಅನ್ಯತ್ವವನ್ನು ಕುರಿತು ಪ್ರತಿಯೋಗಿತ್ವವನ್ನಂಗೀಕರಿಸದಿರುವುದರಿಂದ (ಅಂದರೆ ನಿರುಪಾಖ್ಯವಾದ

ಅಸತ್ತಿಗೆ ಬ್ರಹ್ಮಪ್ರತಿಯೋಗಿಕವಾದ ಅನ್ಯೋನ್ಯಾಭಾವಾಧಿಕರಣತ್ವ ಮೊದಲಾದ ಧರ್ಮಗಳನ್ನಂಗೀಕರಿಸದಿರುವುದರಿಂದಲೂ, ಬ್ರಹ್ಮನಿಗೆ ನಿರುಪಾಖ್ಯದಲ್ಲಿರತಕ್ಕ ಅನ್ಯೋನ್ಯಾಭಾವಪ್ರತಿಯೋಗಿತ್ವ ಮೊದಲಾದ ಧರ್ಮಗಳನ್ನಂಗೀಕರಿಸದಿರುವುದರಿಂದ) (2) ಅಭಾವಕ್ಕೆ ಅನಿರ್ವಚನೀಯತ್ವವನ್ನಂಗೀಕರಿಸಿರುವುದರಿಂದಲೂ ಅನಿರ್ವಾಚ್ಯವೆಂದು ಸಾಧಿಸಲಿಷ್ಟವಾದುದಕ್ಕೆ ಅದರಿಂದ ವೈಲಕ್ಷಣ್ಯವಿಲ್ಲವು. (ಅಂದರೆ– ಅಭಾವವೂ ಸರ್ವ ಜಗತ್ತಿನಲ್ಲಿಯೇ ಸೇರಿರುವುದರಿಂದ ಅನಿರ್ವಚನೀಯವೆಂದಂಗೀಕರಿಸಿರುವ ಪ್ರಯುಕ್ತ ಅನಿರ್ವಾಚ್ಯವೆಂದು ಸಾಧಿಸಲಿಷ್ಟವಾದ ಶುಕ್ತಿರಜತಾದಿ ಜಗತ್ತಿಗೆ ಅಭಾವದಿಂದ ವೈಲಕ್ಷಣ್ಯರೂಪವಾದ ಅನಿರ್ವಚನೀಯತ್ವವು ಕೂಡುವುದಿಲ್ಲ, ಗೋವು ಗೋವಿನಿಂದ ವಿಲಕ್ಷಣವೆನ್ನುವುದು ಯುಕ್ತವಾಗುವುದಿಲ್ಲವಷ್ಟೇ!) ॥ 26 ॥

ಅನಿರ್ವಚನೀಯದಿಂದಲೂ ಶುಕ್ತಿರಜತ ಮೊದಲಾದ ಸರ್ವ ಜಗತ್ತಿಗೆ ವೈಲಕ್ಷಣ್ಯವನ್ನು ಅಂಗೀಕರಿಸತಕ್ಕ ಮಂದನಿಗೆ ಅನಿಷ್ಟವನ್ನು ಹೇಳುತ್ತಾರೆ–

**ಮೂಲ ॥ (೧) ತಥಾಪಿ ಚೇದ್ವೈಲಕ್ಷಣ್ಯಂ ನಾನಿರ್ವಚನೀಯತ್ವಂ ಜಗತಃ ॥ (೨) ನ ಚ ವಿರೋಧಃ । ವಿರೋಧಿನೋರನ್ಯತರ ನಿಷೇಧೇಽನ್ಯತರ ವ್ಯಾಪ್ತತ್ವಾನುಭವಾತ್ ॥ (೩) ಅವಿದ್ಯಮಾನಂ ನ ಭವತೀತ್ಯುಕ್ತೇ ವಿದ್ಯ-ಮಾನಮಿತ್ಯೇವ ಹಿ ಸರ್ವಲೋಕಾನುಭವಃ ॥ (೪) ಅತೋಽನಂತಗುಣೋ ಭಗವಾನ್ನಾರಾಯಣ ಇತಿ ಸಿದ್ಧಂ ॥ ೨೭ ॥**

**ಅರ್ಥ ॥** (1) ಹಾಗಿದ್ದರೂ ವೈಲಕ್ಷಣ್ಯವನ್ನು ಅಂಗೀಕರಿಸಿದರೆ ಜಗತ್ತಿಗೆ ಅನಿರ್ವಾಚ್ಯತ್ವವಿಲ್ಲವು. (ಗೋವಿನಿಂದ ವಿಲಕ್ಷಣವಾದುದಕ್ಕೆ ಅಗೋತ್ವವಿದ್ದಂತೆಯೇ) (2) ವಿರೋಧವೂ ನಞರ್ಥವಾಗುವುದಿಲ್ಲ, ವಿರೋಧಿಗಳ ಮಧ್ಯದಲ್ಲಿಯೇ ಒಂದನ್ನ ನಿಷೇಧಿಸಿದರೆ ಮತ್ತೊಂದರಿಂದ ವ್ಯಾಪ್ತತ್ವಾನುಭವವಿದ್ದುದರಿಂದ (ಅಂದರೆ ನಞಗೆ ವಿರೋಧವೆನ್ನುವ ಅರ್ಥವನ್ನಂಗೀಕರಿಸಿದರೆ ಅಸತ್ ಎಂದರೆ, ಸತ್ತಿಗೆ ವಿರೋಧಿಯಾದುದು ಎಂದುಕ್ತವಾಯಿತು. ವಿಲಕ್ಷಣವೆಂದರೆ ಪ್ರತಿಷೇಧವು. ಅಂತೂ ಸತ್ತಾದ ಪದಾರ್ಥಕ್ಕೆ ವಿರೋಧಿಯಲ್ಲವೆಂದು ಪ್ರತಿಜ್ಞೆಯ ಅರ್ಥವು. ಬಾಧ್ಯತ್ವಾನುಮಾನದಿಂದ ಮೊದಲು ಅನಿರ್ವಚನೀಯತ್ವರೂಪ ಕೋಟಿಯು ಪ್ರಸಕ್ತವಾಗಲೇ ಇಲ್ಲ, ವಿರೋಧಿಗಳಾದ ಎರಡರ ಮಧ್ಯದಲ್ಲಿಯೇ ಒಂದನ್ನ ನಿಷೇಧಿಸಿದರೆ ಮತ್ತೊಂದರಿಂದ ವ್ಯಾಪ್ತಿಯು ಅನುಭೂತವಾಗಿದೆ. ಅದರಿಂದ ಪಕ್ಷವಾದುದು ಸತ್ತಾಗಬೇಕಾಯಿತು. ಹೇಗೆಂದರೆ–) (3) ಇಲ್ಲದಿರುವುದು ಆಗುವುದಿಲ್ಲವೆಂದರೆ ಇರತಕ್ಕುದೆಂದೇ ಸರ್ವಜನರಿಗೂ ಅನುಭವವು. (4) ಆದಕಾರಣ ಸರ್ವ ಪೂಜ್ಯನಾದ ನಾರಾಯಣನು ಅನಂತಗುಣಗಳುಳ್ಳವನೆಂದು ಸಿದ್ಧವಾಯಿತು ॥ 27 ॥

ಹಿಂದೆ ಮಹಾನಾಮ್ನೀ ಋಕ್ಕುಗಳು ಮಹಾಗುಣಗಳುಳ್ಳ ಈಶ್ವರನನ್ನು ಪ್ರತಿಪಾದಿಸುತ್ತವೆ ಎಂದುಕ್ತವಾಗಿವೆ. ಇನ್ನು ಪರಬ್ರಹ್ಮನಿಗೆ ಗುಣಪರಿಪೂರ್ಣತ್ವವನ್ನು ಸಾಧಿಸುವರು. ಆ ವಿಷಯದಲ್ಲಿ ಪ್ರಾಭಾಕರರು ಹೀಗೆ ಅನ್ನುತ್ತಾರೆ. ಪದಗಳೇ ಇತರಾನ್ವಿತವಾದ ಅರ್ಥವನ್ನು ಹೇಳುವವುಗಳಾಗಿ ವಾಕ್ಯವಾಗುವುದು. ಅವುಗಳಿಗೆ ಕಾರ್ಯಾನ್ವಿತವಾದ ಅರ್ಥದಲ್ಲಿಯೇ ವ್ಯುತ್ಪತ್ತಿಯು (ವಾಚ್ಯವಾಚಕಭಾವಜ್ಞಾನವು) ಸರ್ವಪ್ರಾಣಿಗಳಿಗೂ ಸಿದ್ಧವು. ವ್ಯುತ್ಪತ್ತಿಗೆ ವೃದ್ಧರ ಪ್ರವೃತ್ತಿಯೇ ಮುಖ್ಯಹೇತುವು. ಪ್ರವೃತ್ತಿಯು ಕಾರ್ಯಜ್ಞಾನದಿಂದ ಸಾಧ್ಯವು. ಕೇವಲ ಸಿದ್ಧಾರ್ಥದಲ್ಲಿ (ಅಂದರೆ

ಕಾರ್ಯಾನನ್ವಿತದಲ್ಲಿಯೂ ಕಾರ್ಯಾತಿರಿಕ್ತದಲ್ಲಿಯೂ) ವ್ಯುತ್ಪತ್ತಿಗೆ ಉಪಾಯವು ಇರುವುದಿಲ್ಲವಾದುದರಿಂದ, ಸಿದ್ಧಾರ್ಥದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವಿಲ್ಲದಿರುವುದರಿಂದ ಮಹಾನಾಮ್ನೀ ಋಕ್ಕುಗಳಿಂದ ಈಶ್ವರಾದಿಗಳು ಸಿದ್ಧಿಸುವುದಿಲ್ಲ ಎಂಬ ಪ್ರಾಭಾಕರರ ಮತವನ್ನು ದೂಷಿಸುತ್ತಾರೆ-

**ಮೂಲ ॥ (೧) ನ ಚ ಸಿದ್ಧೇಽರ್ಥೇ ವಾಕ್ಯಸ್ಯ ಪ್ರಾಮಾಣ್ಯಾಭಾವಾದೀಶ್ವರಾದ್ಯಸಿದ್ಧಿಃ ॥ (೨) ಸಿದ್ಧಾತಿರಿಕ್ತ ಕಾರ್ಯಾಭಾವಾತ್ ॥ (೩) ಲಿಙಾದ್ಯರ್ಥಸ್ತ್ವಿಷ್ಟ-ಸಾಧನತ್ವಮೇವ ॥ (೪) ನ ಹಿ ಕರ್ತವ್ಯತ್ವಂ ನಾಮೇಷ್ಟ-ಸಾಧನತ್ವಾದನ್ಯತ್ಕಿಂಚಿದಸ್ತಿ ॥ (೫) ತನ್ಮಾನಾಭಾವಾತ್ ॥ (೬) ಶಬ್ದಸ್ತು ನ ತದ್ವಕ್ತೀತ್ಯುಕ್ತಂ ॥ ೨೮ ॥**

**ಅರ್ಥ ॥** (1) ಸಿದ್ಧಾರ್ಥದಲ್ಲಿ ವಾಕ್ಯಕ್ಕೆ (ಪ್ರಮಾಣಾಂತರದಿಂದ ಸಿದ್ಧವಾದ ಅರ್ಥವನ್ನು ತಿಳಿಸಿಕೊಡುವುದಾದರೆ 'ಅನಧಿಗತಾರ್ಥಗಂತೃತ್ವರೂಪವಾದ ಪ್ರಮಾಣಲಕ್ಷಣವಿಲ್ಲದಿರುವ ಪ್ರಯುಕ್ತ) ಪ್ರಾಮಾಣ್ಯವಿಲ್ಲದಿರುವುದರಿಂದ ಈಶ್ವರಾದಿಗಳಿಗೆ ಅಸಿದ್ಧಿಯು ಇಲ್ಲ. (ಸಿದ್ಧಾರ್ಥದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವಿಲ್ಲದಿದ್ದರೆ ಪ್ರತಿಪಾದ್ಯವಾದದ್ದು ಬೇರೆಯಿಲ್ಲದಿರುವುದರಿಂದ ಸರ್ವಥಾ ಅಪ್ರಾಮಾಣ್ಯವು ಪ್ರಸಕ್ತವಾಗುವುದು.) (2) (ಕಾರ್ಯದಲ್ಲಿ ಪ್ರಾಮಾಣ್ಯವು ಸಂಭವಿಸುವುದರಿಂದ ಈ ಪ್ರಸಂಗವು ಇಲ್ಲವೆಂದರೆ) ಸಿದ್ಧಾರ್ಥದಿಂದ ಬೇರೆಯಾದ ಕಾರ್ಯವು ಇಲ್ಲದಿರುವುದರಿಂದ (3) (ಹಾಗಾದರೆ ಕಾರ್ಯವು ಲಿಙಾದಿ ಪ್ರತ್ಯಯಗಳಿಂದ ಹೇಳಲ್ಪಡುತ್ತದೆ. ಸಿದ್ಧಕ್ಕೆ ಲಿಙಾದ್ಯರ್ಥತ್ವವಿರುವುದಿಲ್ಲ, ಆದಕಾರಣ ಸಿದ್ಧಾತಿರಿಕ್ತವಾದ ಕಾರ್ಯವಿಲ್ಲದಿರುವುದು ಹೇಗೆ ಎಂದರೆ) ಲಿಙಾದಿಗಳಿಗೆ ಅರ್ಥವಾದರೂ ಇಷ್ಟಸಾಧನತ್ವವೇ (ಅಂದರೆ ನಾವು ಸಿದ್ಧವೆಲ್ಲವನ್ನು ಕಾರ್ಯವೆನ್ನುವುದಿಲ್ಲ, ಮತ್ತೆ ಇಷ್ಟಸಾಧನತ್ವವೆನ್ನುವ ಸಿದ್ಧವಿಶೇಷವೇ ಕಾರ್ಯತ್ವವು. ಇಷ್ಟಸಾಧನತ್ವವೇ ಧಾತ್ವರ್ಥದಲ್ಲಿರತಕ್ಕುದು ಲಿಙಾದಿಗಳ ಅರ್ಥವು. ಧಾತ್ವರ್ಥವಾದ ಯಾಗಾದಿಯೇ ಲಿಙಾದಿಗಳಿಗೆ ಅರ್ಥಭೂತವಾದ ಇಷ್ಟಸಾಧನತ್ವದಿಂದ ಕೂಡಿದ್ದಾಗಿ ಕಾರ್ಯವೆನಿಸುತ್ತದೆ.) (4) (ಅಹುದು ಆದರೆ ಈ ಮೂರು ಧರ್ಮಗಳು ಒಂದು ಅರ್ಥದಲ್ಲಿರುವವುಗಳು. (1) ಕೃತಿಸಾಧ್ಯತ್ವವು. (2) ಕೃತ್ಯುದ್ದೇಶ್ಯತ್ವವು. (3) ಇಷ್ಟಸಾಧನತ್ವವು. ಅವುಗಳಲ್ಲಿ ಎರಡೆರಡು ಕೂಡಿದ್ದಾಗಿ ಕಾರ್ಯವೆನಿಸುತ್ತದೆ. ಆದಕಾರಣ 'ಕೃತಿಸಾಧ್ಯತ್ವೇ ಸತಿ ಕೃತ್ಯುದ್ದೇಶ್ಯತ್ವರೂಪವಾದ ಕಾರ್ಯತ್ವವೇ'. ಲಿಙಾದಿಗಳಿಗೆ ಅರ್ಥವು. ಇಷ್ಟಸಾಧನತ್ವವಾದರೂ ಕೃತ್ಯುದ್ದೇಶ್ಯತ್ವದಲ್ಲಿ ನಿಮಿತ್ತ (ಜ್ಞಾಪಕ)ವಾಗಿಯೇ ಇರುತ್ತದೆ ಎಂದರೆ) ಕರ್ತವ್ಯತ್ವವೆಂದರೆ ಇಷ್ಟಸಾಧನತ್ವದಿಂದ ಬೇರೆಯಾದುದು ಯಾವುದೂ ಇರುವುದಿಲ್ಲ. (ಅಂದರೆ ಕೃತಿಸಾಧ್ಯತ್ವವು ಇಷ್ಟಸಾದನತ್ವದಿಂದ ಅತಿರಿಕ್ತವಾಗಿದ್ದರೂ ಕೃತ್ಯುದ್ದೇಶ್ಯವಾದುದು ಬೇರೆ ಯಾವದೂ ಇರುವುದಿಲ್ಲ. ಆದರೆ ಇಷ್ಟಸಾಧನತ್ವ ಕೃತ್ಯುದ್ದೇಶ್ಯತ್ವ ಘಟಕಗಳಾದ ಇಚ್ಛಾಪ್ರಯತ್ನರೂಪಗಳಾದ ಉಪಾಧಿಗಳೇ ಭಿನ್ನಗಳಾಗಿವೆ. ತದ್ವಿಶಿಷ್ಟಗಳಾದ ಧರ್ಮಗಳು ಭಿನ್ನಗಳಾಗುವುದಿಲ್ಲ) (5) (ಏಕೆಂದರೆ) ಧಾತ್ವರ್ಥಾದಿಗಳಲ್ಲಿ ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕೃತ್ಯುದ್ದೇಶ್ಯತ್ವವಿದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ (6) (ಆ ವಿಷಯದಲ್ಲಿ ಲಿಙಾದಿ ಶಬ್ದವು ಪ್ರಮಾಣವಿದೆ ಎಂದರೆ) ಲಿಙಾದಿಶಬ್ದವಾದರೂ ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕರ್ತವ್ಯತ್ವವನ್ನು ಹೇಳುವುದಿಲ್ಲವೆಂದು ಪೂರ್ವಪಕ್ಷದಲ್ಲಿಯೇ ಹೇಳಲ್ಪಟ್ಟಿದೆ. ॥ 28 ॥

ಇಷ್ಟಸಾಧನತ್ವದಿಂದ ಬೇರೆಯಾದ ಕರ್ತವ್ಯತ್ವವನ್ನು ಲಿಙಾದಿಶಬ್ದವು ಹೇಳುವುದಿಲ್ಲವೆಂದು ಪ್ರತಿಜ್ಞಾ ಮಾತ್ರ ನೀವು ಮಾಡಿದ್ದು, ಯಾವುದೊಂದು ನಿಯಾಮಕವನ್ನು ಹೇಳಲಿಲ್ಲ, ಆದಕಾರಣ ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕೃತ್ಯುದ್ದೇಶ್ಯತ್ವವಿದೆ ಎನ್ನುವಲ್ಲಿ ಪ್ರಮಾಣವಾಗಿ ಪರರು ಮಾಡಿದ ಲಿಙಾದಿ ಶಬ್ದೋಪನ್ಯಾಸ ನಿರಾಕರಣವು ಹೇಗೆ ಕೂಡುತ್ತದೆ ಎಂದರೆ-

**ಮೂಲ ॥ ಲಿಙಾದೇರಿಷ್ಟಸಾಧನಾರ್ಥತ್ವೇನೈವ ಕೃತಾರ್ಥತ್ವೇ ತದನ್ಯ-**
**ಕಾರ್ಯಕಲ್ಪನೇ ಕಲ್ಪನಾಗೌರವಂ ಚ ॥ ೨೯ ॥**

**ಅರ್ಥ ॥** ಲಿಙಾದಿಗಳಿಗೆ ಇಷ್ಟಸಾಧನರೂಪವಾದ ಅರ್ಥವಿರೋಣದರಿಂದಲೇ ಕೃತಾರ್ಥತ್ವ ವಿರಲು ಅದರಿಂದ ಇತರವಾದ ಕಾರ್ಯವನ್ನು ಕಲ್ಪಿಸಿದರೆ ಕಲ್ಪನಾ ಗೌರವವು ಇದೆ.

**ತಾತ್ಪರ್ಯ ॥** ಲಿಙಾದಿಗಳು (1) ಇಷ್ಟಸಾಧನತ್ವವನ್ನು ತಿಳಿಸುತ್ತಾ ಕಾರ್ಯತ್ವವನ್ನು ತಿಳಿಸು ವುದೋ, (2) ತಿಳಿಸಿಕೊಡದೇನೇ ಕಾರ್ಯತ್ವವನ್ನು ತಿಳಿಸಿಕೊಡುವುದೋ? (2) ಇಷ್ಟಸಾಧನತ್ವವನ್ನು ತಿಳಿಸಿಕೊಡದೆ ಕಾರ್ಯತ್ವವನ್ನು ತಿಳಿಸಿಕೊಡುತ್ತದೆ ಎನ್ನುವ ಕಲ್ಪದಲ್ಲಿ ಇಷ್ಟಸಾಧನತ್ವವನ್ನು ತಿಳಿಯದೆ ಕಾರ್ಯತ್ವವನ್ನು ಹೇಗೆ ತಿಳಿದಾನು? ಏಕೆಂದರೆ- ಕಾರ್ಯತಾಜ್ಞಾನವು ಇಷ್ಟಸಾಧನತಾಜ್ಞಾನದಿಂದ ಹುಟ್ಟುವುದು ಎಂದು ಪರರೇ (''ಕಿಂತು ಸ್ವಯಂ ಕ್ಲೇಶರೂಪಂ ಕರ್ಮ ಯತ್ಕಾರ್ಯತಾಂ ವ್ರಜೇತ್ । ಫಲಸಾಧನತಾ ತತ್ರ ಕಾರಣಂ ತೇನ ಕಾರ್ಯತಾ ।'' ಎನ್ನುವ ಶ್ಲೋಕದಲ್ಲಿ ಇಷ್ಟಸಾಧನತ್ವದಿಂದ ಕಾರ್ಯತ್ವವು ಅನುಮೇಯವೆಂದುಕ್ತವಾಗಿರುವುದರಿಂದ) ಅಂಗೀಕರಿಸಿರುವರು. ಕಾರ್ಯತಾಜ್ಞಾನವು ಇಷ್ಟಸಾಧನತಾಜ್ಞಾನದಿಂದ ಹುಟ್ಟಿದ್ದಂಗೀಕರಿಸಿದರೆ 'ವಿಷಂ ಭುಂಕ್ಷ್ವ' ವಿಷವನ್ನುಣ್ಣು ಎಂದರೂ ಕಾರ್ಯತಾಜ್ಞಾನವು ಬರಬೇಕಾಗುವುದು. ಬೇರೆ ಪ್ರಮಾಣದಿಂದ ಇಷ್ಟಸಾಧನತಾ ಜ್ಞಾನ ಬರುವುದಾದರೆ ಪ್ರಮಾಣಾಂತರದಿಂದಲೇ ಕಾರ್ಯತಾಜ್ಞಾನವು ಬರುವುದರಿಂದ ಲಿಙಾದಿಗಳು ಅನುವಾದಕಗಳಾಗಬೇಕಾಗುವವು. ಆದಕಾರಣ ಒಂದನೇದ್ದನ್ನು (ಇಷ್ಟಸಾಧನತ್ವವನ್ನು ತಿಳಿಸಿಕೊಟ್ಟೇ ಕಾರ್ಯತ್ವವನ್ನು ತಿಳಿಸುತ್ತದೆ ಎನ್ನುವ ಕಲ್ಪವನ್ನು) ಅಂಗೀಕರಿಸಬೇಕು. ಅದರಲ್ಲಿ ಶಬ್ದಗಳಿಗೆ ಸಾಧುತ್ವವು ಸಿದ್ಧಿಸುವುದಕ್ಕಾಗಿ ಪರೀಕ್ಷಕನು ನ್ಯಾಯಪ್ರಾಪ್ತವಾದ ಅರ್ಥವನ್ನೇ ಕಲ್ಪಿಸಬೇಕು. ಅದರಲ್ಲಿ ಲಿಙಾದಿಗಳು ಕಾರ್ಯತ್ವವನ್ನು ತಿಳಿಸಕೊಡುತ್ತವೆ ಎಂದಂಗೀಕರಿಸಿರುವುದರಿಂದ ಸಂಪ್ರತಿಪನ್ನವಾದ, ಪ್ರಥಮಪ್ರಾಪ್ತ ವಾದ, ಇಷ್ಟಸಾಧನತ್ವರೂಪವಾದ ಅರ್ಥವಿರೋಣದರಿಂದಲೇ ಕಲ್ಪಕಗಳಾದ ಲಿಙಾದಿಗಳು ಕೃತಾರ್ಥಗಳಾಗುತ್ತಿರಲು (ಕ್ಷೀಣಶಕ್ತಿಯುಳ್ಳವುಗಳಾಗುತ್ತಿರಲು) ಇಷ್ಟಸಾಧನತ್ವಾಖ್ಯವಾದ ಕೃತ್ಯುದ್ದೇಶ್ಯತ್ವ ದಿಂದ ಇತರವಾದ ಕೃತಿಸಾಧ್ಯತ್ವಕ್ಕೂ ಲಿಙಾದ್ಯರ್ಥತ್ವವನ್ನು ಕಲ್ಪಿಸಿದರೆ ಕಲ್ಪನಾಗೌರವರೂಪವಾದ ನಿಯಾಮಕವೂ ಇದೆ. ಪ್ರತಿಜ್ಞೆಮಾಡಿದ್ದು ಮಾತ್ರವಲ್ಲ. ॥ 29 ॥

ಅನೇಕಾರ್ಥವಿರುವ ಅಕ್ಷ ಹರಿ ಮೊದಲಾದ ಶಬ್ದಗಳು ಅನೇಕ ಇವೆ. ಹಾಗೆಯೇ ಲಿಙಾದಿಗಳು ಇಷ್ಟಸಾಧನತ್ವ, ಪರರಿಗೆ ಅಭಿಪ್ರೇತವಾದ ಕಾರ್ಯತ್ವ ರೂಪವಾದ ಅನೇಕಾರ್ಥವುಳ್ಳದ್ದೆಂದು ಏಕೆ ಆಗಬಾರದು? ಎಂದರೆ, ಅಕ್ಷಾದಿಶಬ್ದಗಳಿಗೆ ಅನೇಕಾರ್ಥವಿರಲಿಕ್ಕೆ ನಿಯಾಮಕವಿದ್ದಂತೆಯೇ ಪ್ರಕೃತದಲ್ಲಿಯೂ ನಿಯಾಮಕವಿದ್ದರೆ ಆಗಬಹುದಿತ್ತು. ಅಂತಹ ನಿಯಾಮಕವಿಲ್ಲವೆನ್ನುತ್ತಾರೆ-

**ಮೂಲ ॥ (೧) ನ ಚ ತತ್ಕಲ್ಪಕಂ ಕಿಂಚಿತ್ ॥**
**(೨) ವಿಪ್ರತಿಪತ್ತೌ ಚಾನ್ಯಸ್ಮಾನಂ ವಕ್ತವ್ಯಂ ತದ್ಭಾವೇ ॥ ೩೦ ॥**

**ಅರ್ಥ ॥** (1) ಅದನ್ನು ಕಲ್ಪಿಸತಕ್ಕುದು ಯಾವುದೂ ಇಲ್ಲ. (2) (ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕೃತ್ಯುದ್ದೇಶ್ಯತ್ವವಿದೆ ಎನ್ನುವಲ್ಲಿ ಲಿಙಾದಿ ಶಬ್ದವೇ ಪ್ರಮಾಣವಿದ್ದುದರಿಂದ ಪ್ರಮಾಣವಿಲ್ಲವೆನ್ನುವುದು ಹೇಗೆ ಕೂಡುತ್ತದೆ ಎಂದು ಪರರು ಶಂಕಿಸಿದ್ದು, ಲಿಙಾದಿಶಬ್ದಗಳಿಗೇನೇ ಆ ವಿಷಯದಲ್ಲಿ ಪ್ರಾಮಾಣ್ಯವನ್ನಂಗೀಕರಿಸಿ ಕಲ್ಪನಾಗೌರವರೂಪವಾದ ನಿಯಾಮಕವನ್ನು 'ಲಿಙಾದೇಃ' ಎನ್ನುವ ವಾಕ್ಯದಿಂದ ಹೇಳಿದ್ದಾಗಿರುತ್ತದೆ. ವಸ್ತುತಸ್ತು ಲಿಙಾದಿಶಬ್ದವಾಚ್ಯವನ್ನು ವಿಚಾರಮಾಡುವ ಪ್ರಸಂಗದಲ್ಲಿ ಪರರು ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕಾರ್ಯವಿದೆ ಎನ್ನುವಲ್ಲಿ ಶಬ್ದದಿಂದ ಬೇರೆ ಪ್ರಮಾಣವನ್ನೇ ಹೇಳಬೇಕು. ಶಬ್ದವನ್ನು ಹೇಳಿ ಪ್ರಯೋಜನವಿಲ್ಲ. ಲಿಙಾದಿ ಶಬ್ದವು ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕಾರ್ಯತ್ವವನ್ನು ಹೇಳುತ್ತದೆ ಎನ್ನುವಲ್ಲಿ ವಿಪ್ರತಿಪತ್ತಿಯದೆ.) ವಿಪ್ರತಿಪತ್ತಿಯಿದ್ದರೆ ಲಿಙಾದಿಶಬ್ದವು ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕಾರ್ಯತ್ವವನ್ನು ಹೇಳುತ್ತದೆ ಎನ್ನುವಲ್ಲಿ ಬೇರೆ ಪ್ರಮಾಣವನ್ನು ಹೇಳಬೇಕು ॥ 30 ॥

ಹಾಗಾದರೆ ''ವಿಮತಾ ಪ್ರವೃತ್ತಿಃ ಇಷ್ಟಸಾಧನತ್ವಾತಿರಿಕ್ತಕಾರ್ಯತಾಬೋಧಪೂರ್ವಿಕಾ, ಸ್ವತಂತ್ರಪ್ರವೃತ್ತಿತ್ವಾತ್'' ವಿವಾದವಿಷಯವಾದ ಪ್ರವೃತ್ತಿಯು ಇಷ್ಟಸಾಧನತ್ವದಿಂದ ಬೇರೆಯಾದ ಕಾರ್ಯತಾಜ್ಞಾನದಿಂದ ಹುಟ್ಟಿದ್ದು ಸ್ವೇಚ್ಛಾಧೀನವಾದ ಪ್ರವೃತ್ತಿತ್ವವಿರುವುದರಿಂದ ಎಂಬ ಅನುಮಾನವು ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕಾರ್ಯತ್ವವಿದೆ ಎನ್ನುವಲ್ಲಿ ಪ್ರಮಾಣವೆಂದರೆ-

**ಮೂಲ ॥ (೧) ನ ಚಾನುಮಾ । ಅಪ್ರಸಿದ್ಧ ವಿಶೇಷಣತ್ವಾತ್॥ (೨) ನ ಚಾರ್ಥಾಪತ್ತಿಃ । ಅನುಪಪತ್ತ್ಯಭಾವಾತ್॥ (೩) ಕಾರ್ಯಾಭಾವಾದೇವ ಕಾರ್ಯಾನ್ವಯಿನಿ (ಕಾರ್ಯಾನ್ವಯಾನ್ವಯಿನಿ ವಾ) ವ್ಯುತ್ಪತ್ತಿರಿತ್ಯಾದಿ ದೂರತೋ ನಿರಸ್ತಂ ॥೩೧॥**

**ಅರ್ಥ ॥** (1) ಅನುಮಾನವು (ಈ ವಿಷಯದಲ್ಲಿ ಪ್ರಮಾಣವು) ಆಗುವುದಿಲ್ಲ. ಅಪ್ರಸಿದ್ಧವಾದ ವಿಶೇಷಣವುಳ್ಳದ್ದಾದುದರಿಂದ. (2) ಅರ್ಥಾಪತ್ತಿರೂಪಪ್ರಮಾಣವೂ ಆಗುವುದಿಲ್ಲ. ಕೃತಿಸಾಧ್ಯತ್ವ ರೂಪವಾದ ಒಂದರ್ಥದಲ್ಲಿ ಸಮವೇತವಾದ ಇಷ್ಟಸಾಧನತಾಜ್ಞಾನದಿಂದಲೇ ಪ್ರವೃತ್ತಿಯು ಕೂಡುವುದರಿಂದ ಅತಿರಿಕ್ತವಾದ ಕಾರ್ಯವಿದೆ ಎನ್ನುವಲ್ಲಿ ಅನುಪಪತ್ತಿಯು ಇಲ್ಲದಿರುವುದರಿಂದ- (3) ಅತಿರಿಕ್ತವಾದ ಕಾರ್ಯವಿಲ್ಲದಿರುವುದರಿಂದಲೇ ಕಾರ್ಯಾನ್ವಯಿಯಲ್ಲಿ ವ್ಯುತ್ಪತ್ತಿಯು ಇದು ಮೊದಲಾದುದು ಅತಿದೂರದಲ್ಲಿಯೇ ನಿರಸ್ತವಾಯಿತು.

**ತಾತ್ಪರ್ಯ ॥** ಮೂರು ಕಾರ್ಯದಿಂದ ಕೂಡಿಕೊಂಡು ಸಂಬಂಧವು ಕಾರ್ಯದಲ್ಲಿಯೂ ಸಿದ್ಧದಲ್ಲಿಯೂ ಎರಡರಲ್ಲಿಯೂ ಇದೆ. ಕಾರ್ಯಪದಕ್ಕೂ ಸಿದ್ಧಪದಕ್ಕೂ ಕಾರ್ಯದಲ್ಲಿಯೇ ತಾತ್ಪರ್ಯವಿದ್ದುದರಿಂದ ಕಾರ್ಯಪರವಾದ ಪದವು ಕಾರ್ಯಪದವು. ಅದರ ಅರ್ಥವು ಕಾರ್ಯವು. ಅದರ ಸಂಬಂಧವು ಸಿದ್ಧಾರ್ಥದಲ್ಲಿದೆ. ಹಾಗೆಯೇ ಕಾರ್ಯಪರವಾದ ಪದವು ಸಿದ್ಧಪದವು. ಅದರ ಅರ್ಥವು ಸಿದ್ಧರೂಪವಾದುದು. ಅದರ ಸಂಬಂಧವು ಕಾರ್ಯದಲ್ಲಿದೆ ॥ 31 ॥

ಮತ್ತು ಕಾರ್ಯಾನ್ವಿತವಾದ ಸ್ವಾರ್ಥದಲ್ಲಿಯೇ ಸಕಲ ಪದಗಳಿಗೂ ವ್ಯುತ್ಪತ್ತಿಯೆಂದು ಪರರು ಹೇಗೆ ಅಂಗೀಕರಿಸುವರು? 'ಚೈತ್ರ ಜಲಮಾಹರ' ಇತ್ಯಾದಿಗಳಲ್ಲಿ ದೃಷ್ಟವಾದ ಪ್ರಯುಕ್ತ ಎಂದರೆ- ಹಾಗಾದರೆ ಕಾರ್ಯಾನ್ವಯವನ್ನು ಹೊರತು ಕೇವಲ ಸಿದ್ಧಾರ್ಥದಲ್ಲಿಯೂ ವ್ಯುತ್ಪತ್ತಿಯನ್ನಂಗೀಕರಿಸ

ಬೇಕು. ''ಹಸಸಿ, ಹಸಾಮಿ, ಇಯಂ ಮಾತಾ, ಅಯಂ ಪಿತಾ, ಸುರೂಪೋಽಸಿ'' ಇತ್ಯಾದಿಗಳಲ್ಲಿ ದೃಷ್ಟವಾದ ಪ್ರಯುಕ್ತವೇ. ಸಾಮಾನ್ಯಾಕಾರವಾಗಿ ಯೋಗ್ಯದಿಂದ ಇತರದಿಂದೊಡಗೂಡಿದ ಸ್ವಾರ್ಥದಲ್ಲಿ ಶಕ್ತಿಯನ್ನಂಗೀಕರಿಸಿರುವುದರಿಂದ ಕಾರಕಪದಗಳಿಗೆ ಕ್ರಿಯಾನ್ವಿತವಾದ ಸ್ವಾರ್ಥದಲ್ಲಿಯೂ ಕ್ರಿಯಾ ಪದಗಳಿಗೆ ಕಾರಕಾನ್ವಿತವಾದ ಸ್ವಾರ್ಥದಲ್ಲಿಯೂ ವ್ಯುತ್ಪತ್ತಿಯು ಕೂಡುವುದರಿಂದ ಒಂದೇ ಪ್ರಯೋಜಕವು ಸಂಭವಿಸುತ್ತದೆ ಎನ್ನುತ್ತಾರೆ.

**ಮೂಲ ॥ ಕಾರ್ಯಾನ್ವಿತೇ ವ್ಯುತ್ಪತ್ತಿರಿತಿ ವದತೋ ಕಾರ್ಯಾನ್ವಿತೇ ವ್ಯುತ್ಪತ್ತಿರಿತ್ಯುಕ್ತೇ ಕಿಮುತ್ತರಂ ॥ ೩೨ ॥**

**ಅರ್ಥ ॥** ಕಾರ್ಯಾನ್ವಿತವಾದ ಅರ್ಥದಲ್ಲಿ ವ್ಯುತ್ಪತ್ತಿಯು ಎಂದು ಹೇಳುವವನಿಗೆ ಕಾರ್ಯಾನ್ವಿತವಾಗದಿರುವ ಅರ್ಥದಲ್ಲಿ ವ್ಯುತ್ಪತ್ತಿಯು ಎಂದು ಹೇಳಿದರೆ ಏನು ಉತ್ತರವು? ಅಂದರೆ- (ಉತ್ತರವಿಲ್ಲದೆ ಸುಮ್ಮನೆ ಕೂತುಕೊಳ್ಳಬೇಕಾಗುವುದು) ॥ 32 ॥

ಹಾಗಾದರೆ ಎಲ್ಲಿ ಕಾರ್ಯಾನ್ವಯವನ್ನು ಹೊರತೇ ವ್ಯುತ್ಪತ್ತಿಯು ಕಾಣಲ್ಪಡುತ್ತದೆ ಎಂದು ಹೇಳಲ್ಪಡುತ್ತದೋ, ಅಲ್ಲಿಯೂ 'ದ್ವಾರಂ ದ್ವಾರಂ' ಇತ್ಯಾದಿಗಳಲ್ಲಿ 'ಪಿಧೇಹಿ' ಎಂದಧ್ಯಾಹಾರ ಮಾಡುವಂತೆ ಕಾರ್ಯಪದವನ್ನು ಅಧ್ಯಾಹಾರಮಾಡಬೇಕು ಎಂದರೆ, ಹಾಗಾದರೆ ಎಲ್ಲಿ ಕಾರ್ಯಾನ್ವಿತ ದಲ್ಲಿ ವ್ಯುತ್ಪತ್ತಿಯು ಕಾಣಲ್ಪಡುತ್ತದೆ ಎಂದು ಹೇಳಲ್ಪಡುತ್ತದೋ ಅಲ್ಲಿ ಕಾರ್ಯಪದಕ್ಕೆ ಲೋಪ ಮಾಡಬೇಕು; ಅಂದರೆ- ಕಾರ್ಯಪದವನ್ನು ಬಿಟ್ಟುಬಿಡಬೇಕು. ಎಂದು ಹೇಳಲು ಶಕ್ಯವಾಗುತ್ತದೆ ಎಂದು ನಿರೂಪಿಸುತ್ತಾರೆ-

**ಮೂಲ ॥ (೧) ಅಧ್ಯಾಹಾರ ಇತ್ಯುಕ್ತೇ ಲೋಪ ಇತ್ಯುತ್ತರಂ ॥ (೨) ಅಶೇಷ ಸಿದ್ಧಪದಾರ್ಥ ಲೋಪಾಲ್ಲಿಙಾದ್ಯರ್ಥಮಾತ್ರ ಲೋಪ ಏವ ಗರೀಯಾನ್॥ (೩) ಹಸಸಿ ಹಸಾಮೀತ್ಯಾದಿ ಸಿದ್ಧಾರ್ಥ ಏವ ಬಾಲಾನಾಂ ವ್ಯುತ್ಪತ್ತೇಃ ॥ (೪) ಪ್ರಥಮ ಪ್ರಾಪ್ತತ್ವಾನ್ನತತ್ಯಾಗೇ ಕಾರಣಂ ॥ (೫) ತಥೈವ ವ್ಯುತ್ಪತ್ತಿದರ್ಶನಾಚ್ಚ॥ (೬) ಅತಃ ಸಿದ್ಧಾರ್ಥೇ ಪ್ರಾಮಾಣ್ಯಸಿದ್ಧೇಶ್ಚ ಸಿದ್ಧಂ ಮಹಾಗುಣವತ್ವಂ ವಿಷ್ಣೋಃ ॥ ೩೩ ॥**

**ಅರ್ಥ ॥** (1) ಕಾರ್ಯಪದವನ್ನು ಅಧ್ಯಾಹಾರಮಾಡಬೇಕು ಎಂದರೆ- ಲೋಪವೆಂದು ಉತ್ತರವು. (2) (ಈ ಎರಡು ಪಕ್ಷಗಳಿಗೆ ಸಾಮ್ಯಸಹ ಇಲ್ಲ, ಲೋಪಪಕ್ಷವೇ ಶ್ರೇಷ್ಠವು ಎನ್ನುತ್ತಾರೆ.) ಎಲ್ಲಾ ಸಿದ್ಧಪದಾರ್ಥಗಳಿಗೆ ಲೋಪ ಹೇಳುವುದಕ್ಕಿಂತ ಲಿಙಾದ್ಯರ್ಥಗಳಿಗೆ ಮಾತ್ರ ಲೋಪ ಹೇಳು ವುದೇ ಶ್ರೇಷ್ಠವು. (3) ನಗುತ್ತಿ. ನಗುತ್ತೇನೆ. ಇದು ಮೊದಲಾದ ಸಿದ್ಧಾರ್ಥದಲ್ಲಿಯೇ ಬಾಲಕರಿಗೆ ವ್ಯುತ್ಪತ್ತಿಯು ಇದ್ದುದರಿಂದ. (4) ಹೀಗೆ ದೃಷ್ಟವಾದರೂ ಹಾಗೆ ಅಂಗೀಕರಿಸಕೂಡದು ಎಂದರೆ- ಪ್ರಥಮತಃ ವ್ಯುತ್ಪತ್ತಿಯು ಕಾರ್ಯದಲ್ಲಿಯೇ, ಆಮೇಲೆ ಸಿದ್ಧಾರ್ಥಪರವಾದ ವಾಕ್ಯದಿಂದ ಎಷ್ಟು ವ್ಯುತ್ಪತ್ತಿಯಿದೆಯೋ, ಅವೆಲ್ಲವೂ ಕಾರ್ಯದಲ್ಲಿ ವ್ಯುತ್ಪತ್ತಿ ಬಂದ ಮೇಲೆ ಹುಟ್ಟುವುದರಿಂದ ಕಾರ್ಯ ವ್ಯುತ್ಪತ್ತಿಯೇ. ಅದರ ಹಿಂದುಗಡೆಯಿಂದ ಅದನ್ನನುಸರಿಸುವುದು ಅವಶ್ಯವಾದುದು ಎನ್ನುತ್ತೀರೋ ಅಥವಾ ಪ್ರಯೋಜ್ಯ ಪ್ರಯೋಜಕ ವೃದ್ಧರಿಂದ ವ್ಯತಿರಿಕ್ತರಾದ ಸಮೀಪದಲ್ಲಿರುವವರಿಂದ

ಕಾರ್ಯಪದವನ್ನು ಅಧ್ಯಾಹಾರ ಮಾಡಬೇಕು. ಕಾರ್ಯಪದಕ್ಕೆ ಲಕ್ಷಣಾ ಆಗಲೀ ಮಾಡಲ್ಪಡಬೇಕೆಂಬ ಭಿಪ್ರಾಯದಿಂದಲೋ, 1ನೇದ್ದನ್ನು ದೂಷಿಸುತ್ತಾರೆ. (ಬಾಲಕರಿಗೆ ಸಿದ್ಧಾರ್ಥದಲ್ಲಿಯೇ ವ್ಯುತ್ಪತ್ತಿಯು) ಪ್ರಥಮತಃ ಪ್ರಾಪ್ತವಾದ ಪ್ರಯುಕ್ತ ಅದನ್ನು ಬಿಡುವ ವಿಷಯದಲ್ಲಿ ಕಾರಣವಿಲ್ಲ. (5) ಅಧ್ಯಾಹಾರಾದಿಗಳನ್ನು ಹೊರತೇ ವ್ಯುತ್ಪತ್ತಿಯು ದೃಷ್ಟವಾದ ಪ್ರಯುಕ್ತ. (6) ಆದಕಾರಣ ಸಿದ್ಧಾರ್ಥದಲ್ಲಿಯೇ ಪ್ರಾಮಾಣ್ಯವು ಸಿದ್ದಿಸುವ ಪ್ರಯುಕ್ತವೂ (ಮಹಾನಾಮ್ನೀ ಋಕ್ಕುಗಳಿಂದ) ಶ್ರೀವಿಷ್ಣುವಿಗೆ ಮಹಾಗುಣವತ್ವವು ಸಿದ್ಧವಾಗುವುದು ॥ 33 ॥

ಯಾವ ಋಕ್ಕುಗಳಲ್ಲಿ ಮಹಾರ್ಥವುಳ್ಳ ನಾಮವಿದೆಯೋ ಅಂತಹ ಮಹಾನಾಮ್ನೀ ಋಕ್ಕುಗಳು ಯಾವುವು ಎಂದರೆ –

**ಮೂಲ ॥ (೧) ತಾಶ್ಚ ವಿದಾಮಘವನ್ನಿತ್ಯಾದ್ಯಾಃ । (೨) ಹೇ ಮಘವನ್ ಯಶಸ್ವಿನ್ ಮಖಪತ ಇತಿ ವಾ । (೩) ತಂ ವಾ ಏತಂ ಮಘ(ಖ)ವಂತಂ ಸಂತಂ ಮಘವಾನಿತ್ಯಾಚಕ್ಷತೇ ಪರೋಕ್ಷೇಣ । ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷ ದ್ವಿಷಃ । (೪) ತೇಭಿರಿಂದ್ರಂ ಚೋದಯ ದಾತವೇ ಮಘಂ ।)೫) ತನ್ನ ಆಯಾತು ಮಘಾಯ। ಯಶೋ ವಾವ ಮಘಂ। ಮಘಮನು ಪ್ರಾಪತ್ಸಿ । (೬) ಆಮಾಮೇತು ಮಘಂ। ಮಘಮನುಪ್ರಾಪತ್ಸಿ । ಧನಂ ವಾವ ಮಘಮಿತ್ಯಾದಿ ಶ್ರುತಿಭ್ಯಃ। (೭) ಗಾತುಂ ತ್ವಾಂ ಸ್ತೋತುಂ । (೮) ವಿದ ವೇದಯೇತಿ ಸಾಮಾನ್ಯತೋಪೇಕ್ಷಿತಾಶೇಷವೇದನಮುಕ್ತ್ವಾ ತಾತ್ಕಾಲಿಕಾ-ಪೇಕ್ಷಿತಂ ಪ್ರಾರ್ಥಯತಿ । ಗಾತುಂ ವಿದೇತಿ । (೯) ತ್ವಮೇವಾನುಶಂಸಿಷೋ ದಿಶಃ ಮಾರ್ಗಾನ್ । (೧೦) ಆತ್ಮನಃ ಸ್ತುತಿ ಪ್ರಕಾರಾಂಸ್ತ್ವ ಮೇವೋಪದಿಶೇತ್ಯರ್ಥಃ । (೧೧) ಪೂರ್ವೀಣಾಂ ಭಗವತ್ಸಂ-ಪ್ರದಾಯಾಗತಾನಾಂ ಪರಮವಿದ್ಯಾನಾಮರ್ಥೇ ಶಿಕ್ಷ। ಶಚೀನಾಂ ವಿದ್ಯಾನಾಂ ಪತೇ ವಾಚಾಂ ಪತ ಇತಿ ವಾ। ಪುರೋವಸೋ ಬಹುವಿತ್ತ ಬಹುಜ್ಞಾನೇತಿ ವಾ । ಬಹುಷು ವಸತಿ ಬಹೂನಾಮಾವಾಸ ಇತಿ ವಾ ॥ ೩೪ ॥**

**ಅರ್ಥ ॥** (1) ಅವುಗಳು 'ವಿದಾಮಘವನ್' ಇದು ಮೊದಲಾದ ಋಕ್ಕುಗಳು, (2) ಎಲೋ ಮಘವುಳ್ಳವನೇ, ಧನವುಳ್ಳವನೇ, ಯಶಸ್ಸುಳ್ಳವನೇ, ಯಾಗಗಳಿಗೆ ಸ್ವಾಮಿಯೇ ಎಂದಾಗಲೀ, (3) (ಮಘವತ್ ಶಬ್ದಕ್ಕೆ ಅತಿಶಯವಾಗಿ ಮಖ(ಯಾಗ) ಗಳಿಗೆ ಸ್ವಾಮಿಯು ಎನ್ನುವ ಅರ್ಥದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಆ ಈತನನ್ನು ಯಾಗಗಳಿಗೆ ಮುಖ್ಯ ಅಧಿಪತಿಯಾದವನನ್ನಾಗಿ (ಮಘವತ್ ಶಬ್ದಕ್ಕೆ ಯಾಗಸ್ವಾಮಿಯಲ್ಲಿ ಲೋಕಪ್ರಸಿದ್ಧಿಯಿಲ್ಲದಿರುವುದರಿಂದ) ಅಪ್ರಸಿದ್ಧವಾದ ಮಘವಾನ್ ಎನ್ನುವ ಶಬ್ದದಿಂದ (ಜ್ಞಾನಿಗಳು) ಹೇಳುತ್ತಾರೆ. ದೇವತೆಗಳು ಅಪ್ರಸಿದ್ಧವಾದ ಅರ್ಥಕ್ಕೆ ಪ್ರಿಯರಷ್ಟೆ ! ಸ್ಪಷ್ಟಾರ್ಥಕ್ಕೆ ದ್ವೇಷಿಗಳು. (4) (ಮಘಶಬ್ದವು ಧನವಾಚಕವು ಎನ್ನುವಲ್ಲಿ ಪ್ರಯೋಗವನ್ನು ತೋರಿಸುತ್ತಾರೆ.) ಎಲೋ ಸೋಮವೇ ಆಯಾಯ ನಿನ್ನ ಸಂಬಂಧಿಗಳಾದ ಮದಕಾರಣಗಳಾದ ರಸಗಳು ಪಾನಮಾಡಲ್ಪಟ್ಟ ಪ್ರಯುಕ್ತ ನಮಗೆ ದ್ರವ್ಯವನ್ನು ಕೊಡುವುದಕ್ಕಾಗಿ ಇಂದ್ರನನ್ನು ಪ್ರೇರಿಸು. (5)

(ಮಘಶಬ್ದವು ಯಶೋವಾಚಕವು ಎನ್ನುವಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಆ ಬ್ರಹ್ಮನು ನಮ್ಮನ್ನು ಕುರಿತು ಮಘ (ಯಶಸ್ಸು)ವನ್ನು ಕೊಡುವುದಕ್ಕಾಗಿ ಬರಲಿ, ಯಶಸ್ಸೇ ಮಘ ಎನಿಸುತ್ತದೆ. ನೀನೂ ಕೂಡ ನನಗೆ ಯಶಸ್ಸನ್ನು ಕೊಟ್ಟು ಯಶಸ್ಸನ್ನು ಹೊಂದುವಿ. (ಅಂದರೆ ಇಂತಹ ಯಶಸ್ಸನ್ನು ಭಕ್ತನಿಗೆ ಕೊಟ್ಟನೆಂದು ನಿನಗೂ ಯಶಸ್ಸು ಬರುವುದು.) (6) (ಮಘಶಬ್ದವು ಧನವಾಚಕವೆನ್ನುವಲ್ಲಿ ಸ್ಪಷ್ಟ ಪ್ರಮಾಣವನ್ನು ಹೇಳುತ್ತಾರೆ-) ನನ್ನನ್ನು ಧನವು ಹೊಂದಲಿ; ನೀನು ಧನವನ್ನು ಹೊಂದುವಿ; ಧನವೇ ಮಘವೆನ್ನಿಸುತ್ತದೆ. ಇವು ಮೊದಲಾದ ಶ್ರುತಿಗಳಿಂದ (7) ('ಗಾತುಂ' ಎನ್ನುವುದಕ್ಕೆ ತಾತ್ಪರ್ಯವನ್ನು ಹೇಳುತ್ತಾರೆ-) ಗಾತುಂ=ನಿನ್ನನ್ನು ಸ್ತೋತ್ರಮಾಡುವುದಕ್ಕೋಸ್ಕರ. (8) ('ವಿದಾ'ಎನ್ನುವ ಪದವನ್ನು ವ್ಯಾಖ್ಯಾನಮಾಡುತ್ತಾ ಅದನ್ನು ಎರಡಾವರ್ತಿ ಹೇಳಲಿಕ್ಕೆ ಪ್ರಯೋಜನವನ್ನು ಹೇಳುತ್ತಾರೆ.) ವಿದ=ವೇದಯ ಅಂದರೆ ತಿಳಿಸಿಕೊಡು ಎಂದು ಸಾಮಾನ್ಯಾಕಾರವಾಗಿ ಅಪೇಕ್ಷಿತವಾದ ಸಮಸ್ತ ವೇದನವನ್ನು ಪ್ರಾರ್ಥಿಸಿ, ಪುನಃ 'ಗಾತುಂ ವಿದಾ' ಎನ್ನುವುದರಿಂದ ತತ್ಕಾಲದಲ್ಲಿ ಆವಶ್ಯಕವಾದ ಅಪೇಕ್ಷಿತವಾದ ಸರ್ವಾರ್ಥವನ್ನು ಪ್ರಾರ್ಥಿಸುತ್ತಾರೆ. (9) (ಪೂರ್ವದಿಂದ ಸಂಗತಿಯನ್ನು ಸೂಚಿಸುತ್ತಾ 'ಅನು' ಇತ್ಯಾದಿಗಳನ್ನು ಅನುವಾದಮಾಡಿಕೊಂಡು 'ದಿಶಃ' ಎನ್ನುವ ಪದಕ್ಕೆ ಅರ್ಥವನ್ನು ಹೇಳುತ್ತಾರೆ) ನೀನೇ 'ದಿಶಃ' ಅಂದರೆ ಮಾರ್ಗಗಳನ್ನು ಸ್ತುತಿಸು. ಅಥವಾ ಅನುಶಾಸನಮಾಡು. (10) ಅಂದರೆ ತನ್ನ ಸ್ತೋತ್ರಪ್ರಕಾರೋಪದೇಶಪ್ರಾರ್ಥನವು ದ್ವಿತೀಯವಾಕ್ಯಾರ್ಥವು. ಈ ಎರಡು ವ್ಯಾಕ್ಯಾರ್ಥಗಳನ್ನು ವಿವರಣಮಾಡುವುದಕ್ಕಾಗಿ 'ಶಿಕ್ಷಾ ಶಚೀನಾಂ' ಎಂಬ ಉತ್ತರಾರ್ಧವು. ಆದ ಪ್ರಯುಕ್ತವೇ ಎರಡು ಪ್ರಕಾರ ವ್ಯಾಖ್ಯಾನ ಮಾಡುತ್ತಾರೆ.) ಪೂರ್ವೀಣಾಂ=ಅಂದರೆ ಭಗವಂತನ ಸಂಪ್ರದಾಯದಿಂದ ಪ್ರಾಪ್ತಗಳಾದ, ಶಚೀನಾಂ=ಅಂದರೆ ಪರಮವಿದ್ಯೆಗಳ ಅರ್ಥಕ್ಕಾಗಿ ಶಿಕ್ಷಿಸು. (ವಾಕ್ಯಪಕ್ಷದಲ್ಲಿ) ಅಪೌರುಷೇಯಗಳಾದ ವಚನಗಳ ಅರ್ಥಕ್ಕಾಗಿ ಶಿಕ್ಷಿಸು. ಶಚೀನಾಂ ಪತೇ=ಅಂದರೆ ವಿದ್ಯೆಗಳಿಗೆ ಅಧಿಪತಿಯೇ, ಅಥವಾ ವಚನಗಳಿಗೆ ಅಧಿಪತಿಯೇ, ಪುರೂವಸೋ=ಅಂದರೆ ಬಹುದ್ರವ್ಯವುಳ್ಳವನೇ, ಬಹು ಜ್ಞಾನವುಳ್ಳವನೇ, ಅನೇಕರಲ್ಲಿ ಆವಾಸಮಾಡುವವನೇ, ಅನೇಕರ ಆವಾಸಕ್ಕೆ ಆಶ್ರಯನಾದವನೇ, (ಎಂದು ಸಂಬೋಧನವು) ಆದುದರಿಂದಲೂ 'ಪುರೂವಸುಃ' ಎನ್ನಿಸುತ್ತಾನೆ.

**ತಾತ್ಪರ್ಯ ॥** (1) ನೀನು ಜ್ಞಾನಗಳಿಗೆ ಅಧಿಪತಿಯು ಎಂದು ಹೇಳಿರುವುದರಿಂದ ವೇದನ ಪ್ರಾರ್ಥನೆಯು ಯುಕ್ತವು. ಇದರಿಂದ ಪೂರ್ವವಾಕ್ಯಾರ್ಥವೂ ಯಾವ ವಚನಗಳಿಂದ ಸ್ತೋತ್ರವನ್ನು ಮಾಡಬೇಕೋ ಅವುಗಳಿಗೆ ಅಧಿಪತಿಯಾದ ಪ್ರಯುಕ್ತ ಸ್ತೋತ್ರ ಪ್ರಕಾರವನ್ನುಪದೇಶಿಸು ಎನ್ನುವ ಪ್ರಾರ್ಥನೆಯೂ ಯುಕ್ತವು. ಇದರಿಂದ ಎರಡನೆಯ ವಾಕ್ಯಾರ್ಥವು ವಿವೃತವಾಯಿತು. (2) 'ಸಂಹಿತಾಯಾಂ ಯತ್ರ ದೈರ್ಘ್ಯಂ ಪದೇ ಯತ್ರ ನ ದೃಶ್ಯತೇ। ಉಕ್ತಾರ್ಥಸ್ಯ ಮಹಾಧಿಕ್ಯಂ' ಎಂಬ ವಚನದಿಂದ 'ವಿದಾ ಶಿಕ್ಷಾ ಪುರೂ' ಇತ್ಯಾದಿಗಳಲ್ಲಿ ಸಂಹಿತಾಕಾಲದಲ್ಲಿ ದೀರ್ಘ ದೃಷ್ಟವಾದರೂ ಪದಚ್ಛೇದಮಾಡುವಾಗ ದೀರ್ಘವಿಲ್ಲದಿರುವುದು. ಹೇಳಿದ ಅರ್ಥಕ್ಕೆ ಅತ್ಯಾಧಿಕ್ಯವನ್ನು ತೋರಿಸುವುದು ॥ ತಥಾ ಚ

**ಮಂ ॥ ವಿದಾ ಮಘವನ್ವಿದಾ ಗಾತುಮನುಶಂಸಿಷೋ ದಿಶಃ ।**
**ಶಿಕ್ಷಾ ಶಚೀನಾಂ ಪತೇ ಪೂರ್ವೀಣಾಂ ಪುರೂವಸೋ ॥ ೧ ॥**

**ಅರ್ಥ ॥** ಹೇ ಮಘವನ್=ಯಶಸ್ಸುಳ್ಳವನೇ, ಧನವುಳ್ಳವನೇ, ಯಜ್ಞಗಳಿಗೆ ಅಧಿಪತಿಯೇ,

ತ್ವಂ=ನೀನು, ಅಸ್ಮಾನ್=ನಮ್ಮನ್ನು, ವಿದ=ಯೋಗ್ಯವಾದುದೆಲ್ಲವನ್ನೂ ತಿಳಿಸಿಕೊಡು. (ಈಗಲಾದರೂ ನಿನ್ನನ್ನು) ಗಾತುಂ=ಸ್ತುತಿಸುವುದಕ್ಕಾಗಿ, ವಿದ=ತಿಳಿಸಿಕೊಡು. (ನೀನು ತಿಳಿಸಿಕೊಡುವುದು ಮಾತ್ರವಲ್ಲ, ಮತ್ತೆ ನೀನೇ) ದಿಶಃ=ಉಪದೇಷ್ಟವ್ಯಗಳಾದ ಮಾರ್ಗಗಳನ್ನು ಅಂದರೆ ಸ್ತುತಿ ಪ್ರಕಾರಗಳನ್ನು, ಅನುಶಂಸಿಷಃ=ಉಪದೇಶಕೊಡು. ಹೇ ಪುರೂವಸೋ=ಬಹು ಹಿರಣ್ಯಾದಿಗಳುಳ್ಳವನೇ, ಬಹಳ ಜ್ಞಾನಗಳುಳ್ಳವನೇ, ಸರ್ವರಲ್ಲಿ ಆವಾಸಮಾಡುವವನೇ, ಸರ್ವರಿಗೂ ಆವಾಸಭೂತನಾದವನೇ, ಪೂರ್ವಿಣಾಂ ಶಚೀನಾಂ=ಅಪೌರುಷೇಯವಚನಗಳಿಗೆ (ವೇದಗಳಿಗೆ) ಪತೇ=ಅಧಿಪತಿಯೇ, ವಿದ್ಯೆಗಳಿಗೆ ಅಧಿಪತಿಯೇ, (ಪೂರ್ವಾಃ ಶಚೀಃ=ವೇದವಾಕ್ಯಗಳನ್ನೂ ವಿದ್ಯೆಗಳನ್ನೂ) ಶಿಕ್ಷ=ಉಪದೇಶಕೊಡು ॥ 1 ॥

**ಮೂಲ ॥ (೧) ಆಭಿಃ ಅಭಿಷ್ಟಿಭಿಃ ಏವಂ ಭೂತೈಸ್ತ್ವತ್ಪರ್ಯೇಷಣೈಸ್ತ್ವತ್ಪ್ರಾರ್ಥನೈಃ ಕಂಚಿನ್ಮದಾದಿಕಂ ಪ್ರಚೇತಯ ಪ್ರಬೋಧಯ । (೨) ಪ್ರಕೃಷ್ಟಚೇತನ ಸರ್ವಜ್ಞ ಪರಮಾತ್ಮನ್ । ದ್ಯುಮ್ನಾಯ ಜ್ಞಾನಾಯ । ವಿತ್ತಾಯ ಯಶಸೇ ವಾ। ಇಷೇ ಅನ್ನಾಯ ಚ ನಃ ಪ್ರಬೋಧಯ । ಏತಾದೃಶೋ ಹಿ ಶಕ್ರಃ । ಶಕ್ರ ಏವೇತಿ ವಾ । ಶಕ್ತಿರತಿರೂಪತ್ವಾಚ್ಛಕ್ರಃ ॥ ೩೫ ॥**

**ಅರ್ಥ ॥** (1) ಇಂತಹ ನಿನ್ನ ಪರ್ಯೇಷಣಗಳಿಂದ ಅಂದರೆ ನಿನ್ನ ಪ್ರಾರ್ಥನೆಗಳಿಂದ ನಾನೇ ಮೊದಲಾದವರನ್ನು ಬೋಧಿಸು. ಈಗಲಾದರೂ ನನ್ನನ್ನು ಮತ್ತು ಯಾರು ಹೀಗೆ ಪ್ರಾರ್ಥಿಸುತ್ತಾನೋ ಆತನನ್ನೂ ಕೂಡ ಪ್ರಬೋಧಿಸು. (2) ಪ್ರಚೇತನನೇ ಅಂದರೆ, ಪ್ರಕೃಷ್ಟವಾದ ಜ್ಞಾನವುಳ್ಳವನೇ ಅಂದರೆ, ಸರ್ವಜ್ಞನೇ, ಅಥವಾ ಪ್ರಕೃಷ್ಟನಾದ ಚೇತನನೇ ಅಂದರೆ, ಪ್ರಕೃಷ್ಟನಾದ ಆತ್ಮನೇ ಅಂದರೆ ಪರಮಾತ್ಮನೇ, ಇಂದ್ರನೇ (ಪರಮೇಶ್ವರನೇ) 'ದ್ಯುಮ್ನಾಯ' ಅಂದರೆ, ಜ್ಞಾನಕ್ಕೋಸ್ಕರವೂ ಅಥವಾ ಧನಕ್ಕಾಗಿ ಅಥವಾ ಯಶಸ್ಸಿಗಾಗಿ, 'ಇಷೇ' ಅಂದರೆ ಅನ್ನಕ್ಕೋಸ್ಕರವೂ ನಮ್ಮನ್ನು ಬೋಧಿಸು. 'ಜ್ಞಾನಾಯ ಪ್ರಬೋಧಯ' ಅಂದರೆ ಶ್ರವಣಾದಿಗಳಲ್ಲಿ ಸಮರ್ಥನನ್ನಾಗಿ ಮಾಡು ಎಂದರ್ಥವು. ಯಾವ ಕಾರಣದಿಂದ ಈತನು ಪ್ರಾರ್ಥಿಸಲ್ಪಡುತ್ತಾನೆ ಎಂದರೆ, ಇಂತಹವನು ಶಕ್ರನಷ್ಟೆ! (ಪ್ರಾರ್ಥಿಸಲ್ಪಟ್ಟದ್ದನ್ನು ಸಾಧಿಸಕೊಡತಕ್ಕವನಷ್ಟೆ!) ಅಥವಾ ಶಕ್ರನೇ ಇಂತಹವನು. ಈ ಇಂದ್ರನು ಜಗತ್ಕರ್ತೃತ್ವಾದಿ ಶಕ್ತಿ-ರತಿ ಸ್ವರೂಪನಾದುದರಿಂದ 'ಶಕ್ರಃ' ಎನ್ನಿಸುತ್ತಾನೆ.

**ಮಂ ॥ ಆಭಿಷ್ಟ್ವಮಭಿಷ್ಟಿಭಿಃ ಪ್ರಚೇತನ ಪ್ರಚೇತಯ ।**
**ಇಂದ್ರ ದ್ಯುಮ್ನಾಯ ನ ಇಷ ಏವಾಹಿ ಶಕ್ರಃ ॥ ೨ ॥**

**ಅರ್ಥ ॥** ಪ್ರಚೇತನ=ಸರ್ವವಿಷಯಕವಾದ ಜ್ಞಾನವುಳ್ಳವನೇ, ಪ್ರಕೃಷ್ಟ ಚೇತನನೇ, ಸರ್ವಜ್ಞನೇ, ಪರಮಾತ್ಮನೇ, ಆಭಿಃ='ವಿದಾ ಮಘವನ್' ಇದು ಮೊದಲಾದ ವಾಕ್ಯದಲ್ಲಿ ಹೇಳಿದ ಪ್ರಕಾರ, ಅಭಿಷ್ಟಿಭಿಃ=ನಿನ್ನ ಪ್ರಾರ್ಥನೆಗಳಿಂದ, (ಮದಾದಿಕಂ=ನಾನೇ ಮೊದಲಾದವರೆಲ್ಲರನ್ನು), ಪ್ರಚೇತಯ=ಯಥಾಯೋಗ್ಯವಾಗಿ ಸಮಸ್ತವನ್ನು ತಿಳಿಸಿಕೊಡು. ಹೇ ಇಂದ್ರ=ಪರಮೇಶ್ವರನೇ, ದ್ಯುಮ್ನಾಯ=ಜ್ಞಾನಕ್ಕೋಸ್ಕರ, ಹಿರಣ್ಯಾದಿಗಳಿಗೋಸ್ಕರ, ಯಶಸ್ಸಿಗೋಸ್ಕರವಾಗಲೀ, ಇಷೇ= ಅನ್ನಕ್ಕೋಸ್ಕರವೂ, ನಃ=ನಮ್ಮನ್ನು, ಪ್ರಚೇತಯ=ತಿಳಿಸಿಕೊಡು. ಹಿ=ಯಾವ ಕಾರಣದಿಂದ, ಶಕ್ರ

ಏವ=ಇಂದ್ರನೇ, ಏವಾ ಹಿ =ಪ್ರಾರ್ಥಿಸಲ್ಪಡುತ್ತಾನೆ.) ಅಥವಾ, ಇಂದ್ರಃ=ಪ್ರಾರ್ಥಿಸಲ್ಪಟ್ಟ ಅರ್ಥವನ್ನು ಸಾಧಿಸಿಕೊಡತಕ್ಕವನು. ಏವ=ಶಕ್ತಿರತಿರೂಪನೇ, ಅಂದರೆ- ಈತನೇ ಸರ್ವಸಮರ್ಥನು, ಪೂರ್ಣಾನಂದನು, ಆದಕಾರಣ ಆತನಿಗೆ ನಮ್ಮಿಂದ ಪ್ರಯೋಜನವಿಲ್ಲದಿರುವುದರಿಂದ ದಯೆಯಿಂದಲೇ ನಮ್ಮನ್ನು ಬೋಧಿಸುವನು. ಆದುದರಿಂದ ಈತನನ್ನೇ ಪ್ರಾರ್ಥಿಸುವೆವು ॥ 2 ॥ 35 ॥

**ಮೂಲ ॥ ರಾಯೇ ವಿತ್ತಾಯ । ವಾಜಾಯ ಅನ್ನಾಯ । ವಜ್ರಿಣಂ ಇಂದ್ರಂ ವರ್ತಯತೀತಿ ವಜ್ರಿವಃ । ನಿಯಾಮಕತ್ವೇನ ಗಚ್ಛತೀತಿ ವಾ । ಶವಿಷ್ಠ ಬಲವತ್ತ-ಮ ಸುಖವತ್ತಮೇತಿ ವಾ । ಋಂಜಸೇ ಪ್ರೇರಯಸಿ ಸರ್ವಾನ್ । ಮಂಹಿಷ್ಠ ವಜ್ರಿನ್ನೃಂಜಸ ಇತ್ಯಭ್ಯಾಸಸ್ತಾತ್ಪರ್ಯಾರ್ಥಃ । ಮತ್ಸ್ವ ಮದಂ ಕುರು ॥ ೩೬ ॥**

**ಅರ್ಥ ॥** ರಾಯೇ=ಧನಕ್ಕಾಗಿ, ವಾಜಾಯ=ಅನ್ನಕ್ಕೋಸ್ಕರ, ವಜ್ರಿವಃ=ವಜ್ರಧಾರಿಯಾದ ಇಂದ್ರನನ್ನು ಇರಿಸುವವನೇ, ನಿಯಾಮಕನೂ, ಸರ್ವತ್ರ ಸಂಚಾರಿಯೂ ಆದವನೇ ಅಥವಾ ಸರ್ವ ನಿಯಾಮಕನಾಗಿ ಎಲ್ಲಾ ಭಕ್ತರನ್ನೂ ಪ್ರವರ್ತಿಸುವವನೇ, ಶವಿಷ್ಠ=ಅತಿಶಯವಾಗಿ ಬಲವುಳ್ಳವನೇ ಅಥವಾ ಅತಿಶಯ ಸುಖವುಳ್ಳವನೇ, (ವಜ್ರಿನ್=ವಜ್ರಧಾರಿಯೇ) ಋಂಜಸೇ=ಸರ್ವರನ್ನು ಪ್ರೇರಿಸುತ್ತಿ. ಮಂಹಿಷ್ಠ=ಹೆಚ್ಚು ಬಲವುಳ್ಳವನೇ, ವಜ್ರಿನ್=ವಜ್ರಧಾರಿಯೇ, ಋಂಜಸೇ=ಸರ್ವರನ್ನು ಪ್ರೇರಿಸುತ್ತೀ 'ಮಂಹಿಷ್ಠ ವಜ್ರಿನ್ನೃಂಜಸೇ' ಎಂಬ ಅಭ್ಯಾಸವು ತಾತ್ಪರ್ಯಾರ್ಥವುಳ್ಳದ್ದು, ಅಂದರೆ, ಇದರಲ್ಲಿ ಮುಖ್ಯ ತಾತ್ಪರ್ಯವಿದೆ ಎಂದು ತೋರಿಸುವುದಕ್ಕಾಗಿ, (ಆಯಾಹಿ=ಬಾ, ಪಿಬ=ಸೋಮವನ್ನು ಪಾನಮಾಡು.) ಮತ್ಸ್ವ=ಮದವನ್ನು ಮಾಡು, ಅಂದರೆ ಸಂತೋಷವನ್ನು ಮಾಡು.

**ಮಂ ॥ ರಾಯೇ ವಾಜಾಯ ವಜ್ರಿವಃ ಶವಿಷ್ಠ ವಜ್ರಿನ್ನೃಂಜಸೇ। ಮಂಹಿಷ್ಠ ವಜ್ರಿನ್ನೃಂಜಸ ಆಯಾಹಿ ಪಿಬ ಮತ್ಸ್ವ ॥ ೩ ॥**

**ಅರ್ಥ ॥** ವಜ್ರಿವಃ=ಇಂದ್ರನನ್ನು ಇರಿಸುವವನೇ, ಇಂದ್ರ=ಪ್ರವರ್ತಕನೇ, ನಿಯಾಮಕನಾಗಿರುವವನೇ, ಶವಿಷ್ಠ=ಹೆಚ್ಚು ಬಲವುಳ್ಳವನೇ, ಹೆಚ್ಚು ಸುಖವುಳ್ಳವನೇ, ವಜ್ರಿನ್=ಜ್ಞಾನಿಯೇ, ಜ್ಞಾನಾನಂದಗಳುಳ್ಳವನೇ, ಮಂಹಿಷ್ಠ=ಅತಿಶಯ ಪೂಜ್ಯನೇ, ತ್ವಂ=ನೀನು, ರಾಯೇ=ಧನಕ್ಕೋಸ್ಕರ, ವಾಜಾಯ=ಅನ್ನಕ್ಕೋಸ್ಕರ, (ಎಲ್ಲಾ ಭಕ್ತರನ್ನೂ) ಋಂಜಸೇ=ಪ್ರೇರಿಸುತ್ತಿ. (ಇದರಲ್ಲಿ ತಾತ್ಪರ್ಯವನ್ನು ತೋರಿಸುವುದಕ್ಕಾಗಿ 'ವಜ್ರಿನ್ ಋಂಜಸೇ' ಎಂದು ಪುನಃ ಹೇಳಿದ್ದು, ಆದಕಾರಣ ನಮ್ಮನ್ನು ಕುರಿತು) ಆಯಾಹಿ=ಬಾ, ಪಿಬ=ಬಂದು ಸೋಮವನ್ನು ಕುಡಿ. ಮತ್ಸ್ವ=ಕುಡಿದು ಮದವನ್ನು ಹೊಂದು. (ಮದವ್ಯಕ್ತಿಯನ್ನು ಹೊಂದು ಅಥವಾ ನಮ್ಮನ್ನು ಸುಖಪಡಿಸು. ॥ 3 ॥ 36 ॥

**ಮೂಲ ॥ ವಿದ ವೇದಯ ಲಂಭಯ ರಾಯಃ ಸುವೀರ್ಯಂ ಚ । ವಾಜಾನಾಂ ಪ್ರಜಾನಾಂ ಪರಿಭೂರ್ವಃ ಅಭವಃ । ಪ್ರಜಾ ವೈ ವಾಜ ಇತಿ ಶ್ರುತೇಃ । ವಶಾಂ ಅನು ಯಥಾ ವಶಂ । ವಶ ಇಚ್ಛಾಯಾಮಿತಿ ಧಾತೋಃ । ಯಥಾ ವಶಂ ಯಥೇಚ್ಛಂ । ಶೂರಾಣಾಂ ಸಕಾಶಾದ್ಬಲವತ್ತಮಃ ॥ ೩೭ ॥**

**ಅರ್ಥ ॥**ವಿದ =ಅಂದರೆ 'ವೇದಯ' ತಿಳಿಸಿಕೊಡು. ಅಂದರೆ 'ಲಂಭಯ'= ಹೊಂದಿಸಿಕೊಡು.

ರಾಯಃ=ದ್ರವ್ಯವನ್ನು, ಸುವೀರ್ಯಂ ಚ=ಚೆನ್ನಾಗಿ ಪರಾಕ್ರಮವನ್ನು ಕೂಡ, 'ವಾಜಾನಾಂ' ಅಂದರೆ ಪ್ರಜಾನಾಂ =ಪ್ರಜೆಗಳಿಗೆ, ಪತಿಃ=ಅಧಿಪತಿಯು, 'ಭುವಃ' ಅಂದರೆ ಅಭವಃ =ಆಗಿರುತ್ತಿ. 'ಪ್ರಜಾ ವೈ =ಪ್ರಜೆಗಳೇ, ವಾಜಃ=ವಾಜಃ ಎನ್ನಿಸುತ್ತಾರೆ. ಇತಿ=ಹೀಗೆ, ಶ್ರುತೇಃ=ಶ್ರುತಿಯಿದ್ದುದರಿಂದ, 'ವಶಾಂ ಅನು' ಅಂದರೆ, ಯಥಾವಶಂ । ವಶ ಇಚ್ಛಾಯಾಂ=ವಶಧಾತುವು ಇಚ್ಛಾ ಎನ್ನುವ ಅರ್ಥದಲ್ಲಿದೆ. ಇತಿ ಧಾತೋಃ=ಹೀಗೆ ಧಾತುವ್ಯಾಖ್ಯಾನದಿಂದ, ಯಥಾವಶಂ, ಅಂದರೆ ಯಥೇಚ್ಛಂ=ಇಚ್ಛಾನುಸಾರವಾಗಿ, ಪರಾಕ್ರಮಶಾಲಿಗಳ ಸಕಾಶದಿಂದ ಹೆಚ್ಚು ಸಾಮರ್ಥ್ಯವುಳ್ಳವನೇ ಸರಿ.

**ಮೂಲ ॥ ವಿದಾ ರಾಯಃ ಸುವೀರ್ಯಂ ಭುವೋ । ವಾಜಾನಾಂ ಪತಿರ್ವಶಾಂ ಅನು ।**
**ಮಂಹಿಷ್ಠ ವಜ್ರಿನ್ನೃಂಜಸೇ ಯಃ ಶವಿಷ್ಠಃ ಶೂರಾಣಾಂ ॥ ೪ ॥**

**ಅರ್ಥ ॥** ಮಂಹಿಷ್ಠವಜ್ರಿನ್=ಯಾವ ನೀನು, ವಾಜಾನಾಂ =ಪ್ರಜೆಗಳಿಗೆ, ವಶಾಂ ಅನು= ಯಥೇಚ್ಛವಾಗಿ, ಪತಿಃ=ಸ್ವಾಮಿಯು, ಭುವಃ =ಆಗಿರುತ್ತಿ. ಯಃ=ಯಾವ ನೀನು (ಸರ್ವ ಭಕ್ತರಿಗೂ ಅವರವರ ಅಭೀಷ್ಟ ಸಿದ್ಧಿಗಾಗಿ) ಇಚ್ಛಾನುಸಾರವಾಗಿ, ಋಂಜಸೇ=ಪ್ರೇರಿಸುತ್ತಿ. ಯಃ=ಯಾರು, ಶೂರಾಣಾಂ=ಪರಾಕ್ರಮಶಾಲಿಗಳ ಸಕಾಶದಿಂದ, ಶವಿಷ್ಠಃ= ಹೆಚ್ಚು ಬಲವುಳ್ಳವನೋ, ಅಂತಹ ನೀನು, (ನಮ್ಮನ್ನು) ರಾಯಃ=ದೈವಮಾನುಷ ವಿತ್ತಗಳನ್ನು, ಸುವೀರ್ಯಂ ಚ=ಚೆನ್ನಾಗಿ ಪರಾಕ್ರಮವನ್ನೂ, ಇಚ್ಛಾನುಸಾರವಾಗಿ, ವಿದ=ಹೊಂದಿಸಿಕೊಡು ॥ 4 ॥ 37 ॥

**ಮೂಲ ॥ ಮಘೋನಾಂ ಯಶಸ್ವಿನಾಂ ಮಹತ್ತಮಃ । ಚಿಕಿತ್ವಃ ಜ್ಞಾತಃ ಕರ್ತರಿತಿ ವಾ । ನಃ ಅಭಿತಃ ಸರ್ವತೋನಯ । ಇಂದ್ರೋ ವಿದೇ ಸಮಸ್ತಂ ವ್ಯಜಾನಾತ್ । ತಮೇವ ಸ್ತುಷೇ ॥ ೩೮ ॥**

**ಅರ್ಥ ॥** 'ಮಘೋನಾಂ' ಅಂದರೆ ಯಶಸ್ವಿನಾಂ=ಯಶಸ್ವಿಗಳ ಮಧ್ಯದಲ್ಲಿ 'ಮಂಹಿಷ್ಠಃ' ಅಂದರೆ ಮಹತ್ತಮಃ=ಅತಿಶ್ರೇಷ್ಠನಾದ, 'ಚಿಕಿತ್ವಃ' ಅಂದರೆ ಜ್ಞಾತಃ=ತಿಳಿಯಲ್ಪಟ್ಟ, ಕರ್ತಃ ಇತಿ ವಾ=ಸರ್ವಕರ್ತನೆಂದಾಗಲೀ, (ತ್ವಂ=ನೀನು) ನಃ=ನಮ್ಮನ್ನು, 'ಅಭಿ' ಅಭಿತಃ=ಅಂದರೆ ಸರ್ವತಃ=ಸರ್ವಪ್ರದೇಶಕ್ಕೂ, ನಯ=ಒಯ್ಯು. ಯಃ ಇಂದ್ರಃ=ಯಾವ ಇಂದ್ರನು ವಿದೇ=ಸಮಸ್ತಂ, ವ್ಯಜಾನಾತ್=ಸಮಸ್ತವನ್ನು ತಿಳಿದಿರುವನೋ, ತಮೇವ=ಆತನನ್ನೇ ಸ್ತೋತ್ರಮಾಡುತ್ತೇನೆ.

**ಮೂಲ ॥ ಯೋ ಮಂಹಿಷ್ಠೋ ಮಘೋನಾಂ ಚಿಕಿತ್ವೋ ಅಭಿ ನೋ ನಯ ।**
**ಇಂದ್ರೋ ವಿದೇ ತಮು ಸ್ತುಷೇ ವಶೀ ಹಿ ಶಕ್ರಃ ॥ ೫ ॥**

**ಅರ್ಥ ॥** (ಸಾಧನವಿಲ್ಲದಿರುವವನಿಗೆ ಪ್ರಾರ್ಥನಗಳಿಂದಲೂ ಫಲವಿಲ್ಲವಷ್ಟೆ! ಅಂದರೆ, ಸಾಧನವನ್ನು ನೀನೇ ಕೊಡು ಎನ್ನುತ್ತಾರೆ.) ಹೇ ಚಿಕಿತ್ವಃ=ತಿಳಿಯಲ್ಪಟ್ಟವನೇ, ಸರ್ವಕರ್ತನೇ, ಯಃ= ಯಾವಾತನು, ಮಘೋನಾಂ=ಯಶಸ್ವಿಗಳ ಮಧ್ಯದಲ್ಲಿ ಮಂಹಿಷ್ಠಃ=ಪೂಜ್ಯತಮನೋ, (ಅಂತಹ ನೀನು) ಯಃ ಇಂದ್ರಃ=ಯಾವ ಇಂದ್ರನು, ವಿದೇ=ಸಮಸ್ತವನ್ನು ತಿಳಿದಿರುವನೋ, ತಮು=ಆತನನ್ನೇ, ಸ್ತುಷೇ=ಸ್ತೋತ್ರಮಾಡುತ್ತೇನೆ. (ಸ್ತೋತ್ರಮಾಡಲಿಕ್ಕೆ) ನಃ=ನಮ್ಮನ್ನು ಅಭಿನಯ=ಸರ್ವಪ್ರದೇಶಕ್ಕೂ ಒಯ್ಯು. ಅಥವಾ ಎಲೋ ಸರ್ವಕರ್ತನೇ, ಯಾರು ಯಶಸ್ವಿಗಳಲ್ಲಿ ಪೂಜ್ಯನೋ, ಅಂತಹ ನೀನು

ನಮ್ಮನ್ನು ಸರ್ವಪ್ರದೇಶಕ್ಕೂ ಒಯ್ಯು. ಏಕೆಂದರೆ- ಯಾವ ಇಂದ್ರನು ಸರ್ವವನ್ನೂ ತಿಳಿದಿರುವನೋ ಆತನನ್ನೇ ಸ್ತುತಿಸುತ್ತೇನೆ. (ಸ್ತೋತ್ರಮಾಡುವ ವಿಷಯದಲ್ಲಿ ನನಗೆ ಸ್ವಾತಂತ್ರ್ಯವಿಲ್ಲ, ಸರ್ವೇಂದ್ರಿಯ ಪ್ರೇರಕನಾದ ನಿನಗೇನೇ ಸ್ವಾತಂತ್ರ್ಯವು ಎಂದು ತೋರಿಸುವುದಕ್ಕಾಗಿ 'ಸ್ತುಷೇ' ಎಂದು ಮಧ್ಯಮಪುರುಷಪ್ರಯೋಗವು. ಅಥವಾ ಸರ್ವಕರ್ತನಾದ ಯಾವ ಶ್ರೀಹರಿಯು ಯಶಸ್ವಿಗಳ ಮಧ್ಯದಲ್ಲಿ ಪೂಜ್ಯನೋ ಅಂತಹ ನೀನು ನಮ್ಮನ್ನು, ಅಭಿನಯ=ಸರ್ವಪ್ರದೇಶಗಳಲ್ಲಿಯೂ ಕೀರ್ತಿಯುಳ್ಳವರಾಗಿ ಮಾಡು. ಶಕ್ರಃ=ಪರಮೇಶ್ವರನೇ, ವಶೀ ಹಿ=ಸರ್ವಸ್ವತಂತ್ರನಷ್ಟೆ! (ಆದುದರಿಂದ ಪರಮೇಶ್ವರನೇ ಪ್ರಾರ್ಥಿಸಲ್ಪಡುತ್ತಾನೆ. ಸ್ತುತಿಸಲ್ಪಡುತ್ತಾನೆ.) ॥ 5 ॥ 38 ॥

**ಮೂಲ ॥ ಊತಯೇ ರಕ್ಷಾಯೈ ಅಭಿಪ್ರಾಯ ಸಿದ್ಧಯೇ ವಾ । ಸ ನೋ ದ್ವಿಷಃ ಶತ್ರೂನತಿ ಪಾರಯತು ಪಾಪಾನಿ ತಮಾಂಸಿ ವಾ । ಕ್ರತುಃ ಜ್ಞಾನರೂಪಃ । ಛಂದಃ ಇಚ್ಛಾರೂಪಃ । ಛಂದ್ಯತ್ವಾಚ್ಛಾದನತ್ವಾದ್ವಾ । ಋತಂ ಅಶೇಷ ಶಾಸ್ತ್ರಾವಗತಂ ॥ ॥ ೩೯ ॥**

**ಅರ್ಥ ॥** 'ಊತಯೇ' ಅಂದರೆ ರಕ್ಷಾಯೈ=ರಕ್ಷಣೆಗೋಸ್ಕರ, ಅಭಿಪ್ರಾಯಸಿದ್ಧಯೇ ವಾ= ಸ್ವಾಭಿಪ್ರಾಯವು ಸಿದ್ಧಿಸುವುದಕ್ಕೋಸ್ಕರ ಎಂದಾಗಲೀ, ಸಃ =ಆತನು, ನಃ =ನಮ್ಮ, ದ್ವಿಷಃ ಶತ್ರೂನ್= ಶತ್ರುಗಳನ್ನು, (ಅತಿಪರ್ಷತ್) ಅತಿಪಾರಯತು=ದಾಟಿಸಲಿ. ಪಾಪಾನಿ=ಪಾಪಗಳನ್ನು, ತಮಾಂಸಿ ವಾ=ಅಜ್ಞಾನಗಳನ್ನಾಗಲೀ, 'ಕ್ರತುಃ' ಅಂದರೆ ಜ್ಞಾನರೂಪಃ=ಜ್ಞಾನಸ್ವರೂಪನು, ಛಂದಃ ಇಚ್ಛಾರೂಪಃ= ಇಚ್ಛಾಸ್ವರೂಪನು, ಛಂದ್ಯತ್ವಾತ್=ಪ್ರಸನ್ನೀಕರಿಸಲಿಕ್ಕೆ ಯೋಗ್ಯನಾದುದರಿಂದಲೂ, ಛಾದನತ್ವಾದ್ವಾ= ಅವಿದ್ಯಾದಿಗಳಿಂದ ಅಚ್ಛಾದನ ಮಾಡುವುದರಿಂದಲೂ, ಋತಂ ಅಶೇಷಶಾಸ್ತ್ರಾವಗತಂ= ಸರ್ವಶಾಸ್ತ್ರಗಳಿಂದ ತಿಳಿಯಲ್ಪಟ್ಟವನು, ಬೃಹತ್=ಪೂರ್ಣನು.॥ 39 ॥

**ಮೂಲ ॥ ತಮೂತಯೇ ಹವಾಮಹೇ ಜೇತಾರಮಪರಾಜಿತಂ ।**
**ಸ ನಃ ಪರ್ಷದತಿದ್ವಿಷಃ ಕ್ರತು ಚ್ಛಂದಃ ಋತಂ ಬೃಹತ್ ॥ ೬ ॥**

**ಅರ್ಥ ॥** ವಯಂ=ನಾವು, ಜೇತಾರಂ=ಸರ್ವರನ್ನು ಗೆಲ್ಲುವ, ಅಪರಾಜಿತಂ=ತಾನು ಸೋತು ಹೋಗದಿರುವ, ತಂ=ಆ ಇಂದ್ರನನ್ನು, ಊತಯೇ=ರಕ್ಷಣೆಗೋಸ್ಕರ, ಅಭಿಪ್ರಾಯವು ಸಿದ್ಧಿಸುವುದಕ್ಕಾಗಿ ಅಭಿಪ್ರೇತಾರ್ಥವು ಸಿದ್ಧಿಸುವುದಕ್ಕಾಗಿ, ಹವಾಮಹೇ=ಕರೆಯುತ್ತೇವೆ. ಯಃ =ಯಾರು, ಕ್ರತುಃ = ಜ್ಞಾನಸ್ವರೂಪನು, ಛಂದಃ=ಇಚ್ಛಾರೂಪನು, ಪ್ರಸನ್ನೀಕರಿಸಲರ್ಹನು, ಅವಿದ್ಯಾದಿಗಳಿಂದ ಆವರಿಸತಕ್ಕವನು, ಋತಂ=ಸರ್ವಶಾಸ್ತ್ರಗಳಿಂದ ತಿಳಿಯಲ್ಪಟ್ಟವನು, ಬೃಹತ್=ಶ್ರೇಷ್ಠನೋ, ಸಃ=ಅಂತಹ ಆಹೂತನಾದ ಇಂದ್ರನು, ನಃ=ನಮ್ಮನ್ನು, ದ್ವಿಷಃ=ಬಾಹ್ಯಶತ್ರುಗಳನ್ನು, ಅಂತರಶತ್ರುಗಳಾದ ಪಾಪಗಳನ್ನು, ಅಜ್ಞಾನಗಳನ್ನೂ, ಅತಿಪರ್ಷತ್=ಅತಿಕ್ರಮಿಸಲಿ ॥ 6 ॥ 40 ॥

**ಮೂಲ ॥ ಸಾತಯೇ ಲಬ್ಧಯೇ । ಸ್ರಿಧಃ ವಿನಾಶಾನ್ ॥ ೪೦ ॥**

**ಮೂಲ ॥ ಇಂದ್ರಂ ಧನಸ್ಯ ಸಾತಯೇ ಹವಾಮಹೇ ಜೇತಾರಮಪರಾಜಿತಂ ।**
**ಸ ನಃ ಪರ್ಷದತಿದ್ವಿಷಃ ಸ ನಃ ಪರ್ಷದತಿಸ್ರಿಧಃ ॥ ೭ ॥**

**ಅರ್ಥ ॥** ಧನಸ್ಯ=ದ್ರವ್ಯದ, ಸಾತಯೇ ಅಂದರೆ ಲಬ್ಧಯೇ=ಲಾಭಕ್ಕೋಸ್ಕರ, (''ಜೇತಾರಂ ಅಪರಾಜಿತಂ ಇಂದ್ರಂ ಹವಾಮಹೇ ಸಃ ನಃ ದ್ವಿಷಃ ಅತಿಪರ್ಷತ್, ಸಃ ನಃ '' ಹಿಂದಿನಂತೆ ಅರ್ಥವು). ಸ್ರಿಧಃ ಅಂದರೆ ವಿನಾಶಾನ್=ವೈರಿಗಳಿಂದ ಮಾಡಲ್ಪಟ್ಟ ಹಿಂಸೆಗಳನ್ನು ಮೃತ್ಯುಗಳನ್ನು, ಅತಿಪರ್ಷತ್=ದಾಟಿಸಲಿ. ಸಃ=ಇಂದ್ರನು, ಸ್ರಿಧಃ=ವಿನಾಶಗಳನ್ನು, ಅತಿಪರ್ಷತ್ =ದಾಟಿಸಲಿ, ಅಥವಾ ಶತ್ರುಗಳನ್ನೂ ವಿನಾಶಗಳನ್ನೂ ದಾಟಿಸಿ ನಮ್ಮನ್ನು ಜ್ಞಾನ ಪುಣ್ಯಾದಿಗಳಿಂದ ಆಯುಸ್ಸಿನಿಂದಲೂ ಪೂರ್ಣೀಕರಿಸಲಿ ॥ 7 ॥ 40 ॥

**ಮೂಲ ॥ ಪೂರ್ವಸ್ಯಾನಾದೇಃ ಸತಸ್ತೇ ಸಕಾಶಾತ್ ಯತ್ಸುಮ್ನಂ ಸುಖಂ ತಸ್ಮಿನ್ನಃ ಆಧೇಹಿ । ತವ ಪೂರ್ತಿಃ ಶಸ್ಯತೇ ॥ ೪೧ ॥**

**ಮಂ ॥ ಪೂರ್ವಸ್ಯ ಯತ್ತೇ ಅದ್ರಿವಃ ಸುಮ್ನ ಆಧೇಹಿ ನೋ ವಸೋ । ಪೂರ್ತಿಃ ಶವಿಷ್ಠ ಶಸ್ಯತ ಈಶೇ ಹಿ ಶಕ್ರಃ ॥ ೮ ॥**

**ಅರ್ಥ ॥** (ಅದ್ರಿವಃ=ಋಕ್ಕಿನಲ್ಲಿ ಆದರಣೀಯನಾದುದರಿಂದ ಅದ್ರಿನಾಮಕವಾದ ಪ್ರಾಣನನ್ನು ಪ್ರವರ್ತಿಸುವವನೇ, ವಸೋ=ಸರ್ವಾಶ್ರಯನೇ, ಶವಿಷ್ಠ=ಅತಿ ಸಾಮರ್ಥ್ಯವುಳ್ಳವನೇ,) ಪೂರ್ವಸ್ಯ ಅಂದರೆ ಅನಾದೇಃ ಸತಃ =ಅನಾದಿಯಾಗಿರುವ, ತೇ ಸಕಾಶಾತ್=ನಿನ್ನ ಸಕಾಶದಿಂದ (ನಿನ್ನ ಅನುಗ್ರಹದಿಂದ) ಋತ್ ಸುಮ್ನಂ ಅಂದರೆ ಸುಖಂ =ಯಾವ ಸುಖವು ಅಭಿವ್ಯಕ್ತವಾಗುತ್ತದೋ, ತಸ್ಮಿನ್=ಅಂತಹ ಸುಖದಲ್ಲಿ ನಃ=ನಮ್ಮನ್ನು ಆಧೇಹಿ=ಇಡು, ಅಂದರೆ ಸ್ವರೂಪಸುಖವನ್ನು ಅಭಿವ್ಯಕ್ತೀಕರಿಸು; ತವ=ಯಾವ ನಿನ್ನ, ಪೂರ್ತಿಃ=ಪರಿಪೂರ್ಣತ್ವವು, ಶಸ್ಯತೇ=(ನಮ್ಮಿಂದ) ಸ್ತುತಿಸಲ್ಪಡುತ್ತದೋ, (ಅಂತಹ ನೀನು ಸುಖವನ್ನು ಮಾಡು.) ಶಕ್ರಃ=ಇಂದ್ರನು, ಅಂತಹ ಸುಖವನ್ನು ಕೊಡುವುದಕ್ಕಾಗಿ, ಈಶೇ ಹಿ=ಸಮರ್ಥನಷ್ಟೆ! ಅಂತೂ ಈ ಋಕ್ಕಿನಲ್ಲಿ ಪರಮಪುರುಷಾರ್ಥವಾದ ಮೋಕ್ಷವು ಪ್ರಾರ್ಥಿಸಲ್ಪಡುತ್ತದೆ. ಋಗರ್ಥವು ಮೂಲದಿಂದಲೇ ಸ್ಪಷ್ಟವಾಯಿತು. ॥8 ॥ 41 ॥

**ಮೂಲ ॥ ತನ್ನವ್ಯಂ ಸ್ತುತ್ಯಂ । ಬ್ರಹ್ಮ ತತ್ಸಮ್ಯಗ್ಹೃದಿ ಮನ್ಯಸೇ । ಜನಸ್ಯೋಪದೇಶೇನ ತತ್ಸ್ವರೂಪೇಷು ತ್ವಂ ಚಾಹಂ ಚ ಸಂಬ್ರವಾವಹೈ । ಗೋಷು ಜ್ಞಾನೇಷು ಗಚ್ಛತಿ ಜ್ಞಾನವಿಷಯೋ ಭವತಿ । ಸುಶೇವಃ ಸುಸುಖಃ । ಸಮಾಧಿಕ ವರ್ಜಿತೋಽದ್ವಯಃ ॥ ೪೨ ॥**

**ಅರ್ಥ ॥** (ಯಾವ ನಿನ್ನ ಸ್ವರೂಪವು ಬ್ರಹ್ಮಶಬ್ದವಾಚ್ಯವೋ) ತತ್=ಅಂತಹುದು, 'ನವ್ಯಂ' ಅಂದರೆ ಸ್ತುತ್ಯಂ ಬ್ರಹ್ಮ =ಸ್ತುತಿಸಿಕೊಳ್ಳಲಿಕ್ಕೆ ಅರ್ಹವಾದದ್ದು, ತತ್=ಅಂತಹ ಬ್ರಹ್ಮನನ್ನು, (ಅಹಂ =ನಾನು) ನೂನಂ ಸಮ್ಯಕ್=ಚೆನ್ನಾಗಿ, ಹೃದಿ =ಹೃದಯದಲ್ಲಿ, ಸನ್ಯಸೇ=ಇಡುತ್ತೇನೆ. ಜನಸ್ಯ ಉಪದೇಶೇನ=ಜನರ ಹೃದಯದಲ್ಲಿ ಉಪದೇಶಮಾಡೋಣದರಿಂದ ಸ್ಥಾಪಿಸುವೆನು. (ಅನ್ಯೇಷು) ತತ್ಸ್ವರೂಪೇಷು=ತಿಳಿಯಲ್ಪಟ್ಟ ರೂಪದಿಂದ ಇತರಗಳಾದ ನಿನ್ನ ಸ್ವರೂಪಗಳಲ್ಲಿ, ತ್ವಂ ಚ=ನೀನು, ಅಹಂ ಚ=ನಾನೂ ಕೂಡ, ಸಂಬ್ರವಾವಹೈ=ಸಂವಾದ ಮಾಡಿಕೊಳ್ಳುವ, (ಯಃ=ಯಾವ ನೀನು, 'ಗೋಷು' ಅಂದರೆ ಜ್ಞಾನೇಷು=ಜ್ಞಾನಗಳಲ್ಲಿ, ಗಚ್ಛತಿ=ಹೋಗುತ್ತಿಯೋ, ಅಂದರೆ ಜ್ಞಾನವಿಷಯೋ ಭವತಿ=ಜ್ಞಾನಕ್ಕೆ ಗೋಚರವಾಗುತ್ತೀಯೋ, (ಶೂರಃ=ಪರಾಕ್ರಮಶಾಲಿಯೋ, ಸಖಾ =ಸಖಿಯೋ)

ಸುಶೇವಃ ಅಂದರೆ ಸುಸುಖಃ=ಚೆನ್ನಾಗಿ ಸುಖಸ್ವರೂಪನೋ, ಸಮಾಧಿಕರಹಿತಃ ಅದ್ವಯಃ=ಅದ್ವಯನೆಂದರೆ ಸಮಾನಿಕನು, ಉತ್ತಮನೂ ಇಲ್ಲದಿರುವವನು. ಅಂತಹ ಬ್ರಹ್ಮಶಬ್ದವಾಚ್ಯವಾದ ನಿನ್ನ ಸ್ವರೂಪವು ನವ್ಯವು ಸ್ತುತ್ಯವು. ಅಂತಹ ಸ್ವರೂಪವನ್ನು ಜನರ ಹೃದಯದಲ್ಲಿ ಉಪದೇಶದಿಂದ ಸ್ಥಾಪಿಸುವೆನು.

**ಮಂ ।। ನೂನಂ ತಂ ನವ್ಯಂ ಸನ್ಯಸೇ ಪ್ರಭೋ ಜನಸ್ಯ ವೃತ್ರಹನ್। ಸ ಮನ್ಯೇಷು ಬ್ರವಾವಹೈ ಶೂರೋ ಯೋ ಗೋಷು ಗಚ್ಛತಿ । ಸಖಾ ಸುಶೇವೋ ಅದ್ವಯಾಃ ।। ೯ ।।**

**ಅರ್ಥ ।।** ಹೇ ಪ್ರಭೋ=ಎಲೋ ಸಮರ್ಥನೇ, ವೃತ್ರಹನ್=ಮೂಲಾಜ್ಞಾನವನ್ನು ನಾಶಮಾಡತಕ್ಕ ಇಂದ್ರನೇ, ಯಃ=ಯಾವ ನೀನು, ಶೂರಃ=ತಿಳಿಸಿಕೊಡುವವನು, ವೀರನು, ಸಖಾ= ಮಿತ್ರನು, ಸುಶೇವ=ಚೆನ್ನಾಗಿ ಸುಖಸ್ವರೂಪನು, ಅದ್ವಯಃ=ಸಮಾಧಿಕರಹಿತನು, ಗೋಷು ಗಚ್ಛತಿ= ಜ್ಞಾನವಿಷಯನಾಗುತ್ತಿ. (ಯಾವ ನಿನ್ನ ಸ್ವರೂಪವು) ನವ್ಯಂ=ಸ್ತುತ್ಯವೋ, ತತ್ ಬ್ರಹ್ಮ=ಅಂತಹ ಬ್ರಹ್ಮನನ್ನು, ಜನಸ್ಯ=ಶಿಷ್ಯಜನರ ಹೃದಯದಲ್ಲಿ, ಸನ್ಯಸೇ=ಉಪದೇಶದಿಂದ ತಿಳಿಸುತ್ತೇನೆ. ಅನ್ಯೇಷು ಜ್ಞಾತದಿಂದ ಇತರಗಳಾದ ನಿನ್ನ ಸ್ವರೂಪಗಳಲ್ಲಿ (ನೀನೂ ನಾನೂ ಕೂಡ) ಸಂಬ್ರವಾವಹೈ=ಸಂವಾದ ಮಾಡಿಕೊಳ್ಳುವ, ನೂನಂ=ನಿಶ್ಚಿತವು ।। 9 ।। 43 ।।

ತಾನು ಹೇಳಿದ ಪ್ರಮೇಯವನ್ನು ಅಗ್ನ್ಯಾದಿ ದೇವತೆಗಳ ಸಂವಾದರೂಪದಿಂದ ದೃಢೀಕರಿಸು ತ್ತಾರೆ.

**ಮೂಲ ।। ಏವಾಹ್ಯೇವೈವಾಹೀತ್ಯಗ್ನ್ಯಾದಿ ದೇವತಾನಾಂ ಸಂವಾದರೂಪೇಣೋಕ್ತ- ಮರ್ಥಮತಿಶಯೇನಾವಧಾರಯತಿ । ಅಭ್ಯಾಸೋ ಹಿ ತಾತ್ಪರ್ಯಾರ್ಥಃ । ಏವಾಹಿ ಏವಮೇವೇತ್ಯರ್ಥಃ । ವಿನಿಶ್ಚಿತೇ ತು ಸಂವಾದೇ ವಿಭಾಗೋ ರಂಗ ಏವ ಚೇತಿ ಶಬ್ದನಿರ್ಣಯೇ । ಅತೋ ಹ್ಯಗ್ನಾ ಇ ಇತ್ಯಾದಿ । ಏವಮೇವ ಹಿ ಶಕ್ರೋ ವಶಾನನು ಯಥಾ ವಶಂ ಸ್ವತಂತ್ರೋ ವರ್ತತ ಇತ್ಯರ್ಥಃ ।। ೪೩ ।।**

**ಅರ್ಥ ।।** 'ಏವಾಹ್ಯೇವೈವಾ ಹಿ' ಇವು ಮೊದಲಾದ ವಾಕ್ಯಗಳಿಂದ ಅಗ್ನ್ಯಾದಿ ದೇವತೆಗಳ ಸಂವಾದರೂಪದಿಂದ ಹಿಂದೆ ಹೇಳಿದ ಅರ್ಥವನ್ನು ಅತಿಶಯವಾಗಿ ನಿರ್ಧರಿಸುತ್ತಾರೆ. ಅಭ್ಯಾಸವಾದರೂ ಈ ಅರ್ಥದಲ್ಲಿ ಮುಖ್ಯ ತಾತ್ಪರ್ಯವದೆ ಎಂದು ತಿಳಿಸುವುದಕ್ಕಾಗಿ. 'ಏವಾ ಹಿ' ಎನ್ನುವುದಕ್ಕೆ 'ಏವಂ ಹಿ' ಅಂದರೆ, ಏವಮೇವ ಹಿ=ಹೀಗೆಯೇ ಸರಿ ಎಂದರ್ಥವು. (2) ('ಅಗ್ನೇ ವಿಷ್ಣೋ' ಎಂದು ಹೇಳದೆ 'ಅಗ್ನಾ ೪ 3 ಇ' 'ವಿಷ್ಣಾ ೪ 3 ಉ' ಎಂಬ ವಿಭಾಗವೂ, 'ಇನ್ದ್ರಃ ೪' ಎಂಬ ರಂಗವೂ ಏಕೆ ಅಂದರೆ) ವಿನಿಶ್ಚಿತವಾದ ಅರ್ಥದಲ್ಲಿಯೂ ಅತಿ ನಿಶ್ಚಯರೂಪವಾದ ಸಂವಾದವು ತೋರಿಕೊಂಡಿರುವಾಗಲೂ ಏಕಾರೋಕಾರಾದಿ ಸ್ವರಾಕ್ಷರಗಳ ವಿಭಾಗವು 'ಆ ಇ' 'ಆ ಉ' ಇತ್ಯಾದಿರೂಪವಾದುದೂ, ರಂಗವೂ ಕೂಡ ಆಗುತ್ತದೆ, ಎಂದು ಶಬ್ದನಿರ್ಣಯದಲ್ಲಿದೆ. ಆದಕಾರಣ 'ಅಗ್ನೇ' ಇತ್ಯಾದಿರೂಪವಾದ ಅರ್ಥವು. ಶಕ್ರನು ಹೀಗೆಯಷ್ಟೆ' ವಶಾನನು=ಇಚ್ಛಾನುಸಾರವಾಗಿ, ಅಂದರೆ, ಸ್ವತಂತ್ರನಾಗಿರುತ್ತಾನೆ.

**ಮಂ ॥ (೧) ಏವಾಹ್ಯೇವೈವಾಹ್ಯಗ್ನಾ ೩ ಇ ಇ ॥ (೨) ಏವಾಹ್ಯೇವೈವಾಹೀಂದ್ರ ೩ (೩) ಏವಾಹ್ಯೇವೈವಾಹಿ ವಿಷ್ಣಾ ೩ ಇ ಉ ॥ (೪) ಏವಾಹ್ಯೇವೈವಾಹಿ ಪೂಷನ್ ॥ (೫) ಏವಾಹ್ಯೇವೈವಾಹಿ ದೇವಾಃ ॥ (೬) ಏವಾ ಹಿ ಶಕ್ರೋ ವಶೀ ಹಿ ಶಕ್ರೋ ವಶಾ ೩ ಅನು ॥ ೧೦ ॥**

**ಅರ್ಥ ॥** (1) ಅಗ್ನಾ-3 ಇ=ಎಲೋ ಅಗ್ನಿಯೇ, (ನಾನು ಹೇಳಿದ ಪ್ರಮೇಯವು) ಏವಾ ಹಿ=ಹೀಗೆಯಷ್ಟೆ. ಏವೈವಾ ಹಿ=ಹೀಗೆಯೇ ಸರಿ. (2) ಹೇ ಇಂದ್ರ=ಎಲೋ ಇಂದ್ರನೇ. (3) ವಿಷ್ಣಾ-3 ಉ=ಎಲೋ ವಿಷ್ಣುವೇ. (4) ಪೂಷನ್=ಎಲೋ ಸೂರ್ಯನೇ. (5) ದೇವಾಃ=ದೇವತೆಗಳಿರಾ. (ಬೇರೆ ಪದಗಳಿಗೆ ಹಿಂದಿನಂತೆ ಅರ್ಥವು.) (6) ಶಕ್ರಃ=ಭಗವಂತನು, ಏವಾ ಹಿ=ಹೀಗೆಯೇ. ಶಕ್ರಃ=ಭಗವಂತನು, ವಶಾನನು, ಇಚ್ಛಾನುಸಾರವಾಗಿ, ವಶೀ ಹಿ=ಸ್ವತಂತ್ರನಷ್ಟೆ.) ॥ 10 ॥ 43 ॥

**ಮೂಲ ॥ (೧) ಅಯ ಪಯ ಗತಾವಿತಿ ಧಾತೋಃ ಆಯೋ ಇತ್ಯಾಯತಿಃ । (೨) ಉಪೋ ಇತಿವದತಿಶಯಾರ್ಥ ಓಕಾರಃ । (೩) ಓ ಅತಿಶಯ ಇತಿ ಚ ಸೂತ್ರಂ। ಆಯೋ ಜಾನಾತೀತ್ಯಾಯೋಮನ್ಯಃ । ಸಮೀಪಸ್ಥಮಪಿ ಜಾನಾತೀತ್ಯುಪೋಮನ್ಯಃ । (೪) ಅನ್ಯೇಷಾಮಿಂದ್ರಿಯಾಣಾಂ ಪರಾಙ್ಮುತ್ವಾನ್ನ ಹ್ಯಾಂತರಂ ಜಾನಂತಿ । ಅಯಂ ತ್ವಾಂತರಮಪ್ಯಾಪರೋಕ್ಷ್ಯೇಣ ಪಶ್ಯತಿ । (೫) ಅಯನೇನ ಪ್ರಾಪ್ಯಂ ದೂರಸ್ಥಮಾಯೋ ಇತಿ ವಾ । ಮನು ಅವಬೋಧನ ಇತಿ ಧಾತೋರ್ಮನ್ಯುರಿತಿ ಜ್ಞಾನೀ । (೬) ಬಾಹ್ಯಜ್ಞಾಯ ಜ್ಞಾನಿನೇ ಅಂತರಜ್ಞಾಯ ಜ್ಞಾನಿನ ಇತ್ಯಭ್ಯಾಸೋ ಹಿ ತಾತ್ಪರ್ಯಾರ್ಥಃ । (೭) ಏವಂ ವಿಧಂ ಮದ್ಗತಂ ತ್ವಾಮುದ್ದಿಶ್ಯೈವೋಪೇಹಿ । (೮) ವಿಶ್ವಧ ವಿಶ್ವ ಧಾರಕ । ಸಮೀಪತೋ ದೂರತಶ್ಚ ತ್ವಾಂ ಮನ್ಯಮಾನಾಯ ಮಹ್ಯಂ ಮನ್ಯವೇ ಜ್ಞಾನಾಯ ಮಾಮುಪೇಹೀತಿ ವಾ । (೯) ಸಮೀಪೇ ದೂರತೋಽಭಿಜ್ಞಂ ತ್ವಾಮುದ್ದಿಶ್ಯೈವ ಮದ್ಗತಂ । ಏಹಿ ವಿಷ್ಣೋ ನ ಮೇ ಶಕ್ತಿಸ್ತ್ವದಾಹ್ವಾನೇ ಹಿ ಮಾಮುಪ । ಇತಿ ಬ್ರಹ್ಮಾಸ್ತುವದ್ವಿಷ್ಣುಂ ತನ್ನಾಭ್ಯುತ್ಥಿತ ಪದ್ಮಗಃ। ಇತಿ ಪಾದ್ಮೇ ॥ (೧೦) ಸಮೀಪೇ ದೂರತಶ್ಚೈವ ಧ್ಯಾಯಂತಂ ತ್ವಾಂ ಸದಾ ವಿಭೋ । ಮಾಮೇಹಿ ಜ್ಞಾನ ದಾನಾಯೇತ್ಯಾಹ ಗಾಧಿಸುತೋ ಹರಿಂ ॥ ಇತಿ ಸ್ಕಾಂದೇ ॥ (೧೧) ಓತಮಸ್ಮಿಜ್ಜಗದ್ಯಸ್ಮಾದೋಮಿತ್ಯುಕ್ತೋ ಹರಿಃ ಸದಾ । ತಮೇವ ಜಗದಾಧಾರಂ ಯತಯಃ ಪರ್ಯುಪಾಸತೇ ॥ ಇತಿ ಮಾನ್ಯಸಂಹಿತಾಯಾಂ ॥ ೪೪ ॥**

**ಅರ್ಥ ॥** (1) 'ಅಯ ಪಯ ಗತೌ' 'ಅಯ' ಧಾತುವು 'ಪಯ' ಧಾತುವು ಗತಿ ಎನ್ನುವ ಅರ್ಥದಲ್ಲಿದೆ ಎಂದು ಧಾತು ವ್ಯಾಖ್ಯಾನದಿಂದ 'ಆಯೋ' ಅಂದರೆ, ಆಯತಿಃ=ಆಗಮನವು ಯಾ ಯೋಗ್ಯತೆಯು. (ನಾವು ನಿನ್ನ ಸಮೀಪಕ್ಕೆ ಯಾವುದಕ್ಕಾಗಿ ಬಂದಿರುತ್ತೇವೋ, ಬರೋಣವನ್ನೂ ನಮ್ಮ

ಯೋಗ್ಯತೆಯನ್ನೂ, ನೀನು ತಿಳಿದಿರುತ್ತಿ. ಆದಕಾರಣ ನೀನು ನನ್ನನ್ನು ಹೊಂದು.) (2)'ಆಯೋ' ಎನ್ನುವಲ್ಲಿದ್ದ ಓಕಾರವು 'ಉಪೋ'ಎನ್ನುವಲ್ಲಿದ್ದ ಓಕಾರದಂತೆ ಅತಿಶಯ ಎನ್ನುವ ಅರ್ಥದಲ್ಲಿದೆ. (3) ಓ ಎನ್ನುವುದು ಅತಿಶಯ ಎನ್ನುವ ಅರ್ಥದಲ್ಲಿದೆ. ಎಂದು ಸೂತ್ರವು. ಆಯೋಜಾನಾತೀತಿ ಆಯೋಮನ್ಯುಃ=ಆಗಮನವನ್ನಾಗಲೀ ಯೋಗ್ಯತೆಯನ್ನಾಗಲೀ ತಿಳಿದವನು. (ಉಪೋ) ಸಮೀಪಸ್ಥಮಪಿ ಜಾನಾತೀತಿ ಉಪೋ ಮನ್ಯುಃ=ಸಮೀಪದಲ್ಲಿದ್ದುದನ್ನು (ಅಂತರವನ್ನು) ತಿಳಿಯುವವನು. (4) ಇತರ ಪುರುಷರ ಇಂದ್ರಿಯಗಳಿಗೆ ಪರಾಙ್ಮುಖತ್ವವಿದ್ದುದರಿಂದ (ಬಾಹ್ಯಾರ್ಥಗಳಲ್ಲಿಯೇ ಪ್ರವೃತ್ತಿಯಿದ್ದುದರಿಂದ) ಆಂತರವನ್ನು ತಿಳಿಯುವುದಿಲ್ಲ. ಇವನಾದರೂ ಆಂತರವನ್ನೂ ಕೂಡ ಪ್ರತ್ಯಕ್ಷವಾಗಿಯೇ ನೋಡುತ್ತಾನೆ. ಅಂದರೆ, ಶ್ರೀಹರಿಯಿಂದ ಬೇರೆ ಪುರುಷರು ತಮ್ಮ ಇಂದ್ರಿಯಗಳು ಬಾಹ್ಯಾರ್ಥಗಳಲ್ಲಿಯೇ ಪ್ರವೃತ್ತಗಳಾಗುವುದರಿಂದ ಅಯೋಗ್ಯವಾದ ಆಂತರವನ್ನು ಪ್ರತ್ಯಕ್ಷೀಕರಿಸುವುದಿಲ್ಲ. ಇವನಾದರೂ ಎಲ್ಲಾ ಆಂತರವನ್ನು ಪ್ರತ್ಯಕ್ಷವಾಗಿ ಕಾಣುತ್ತಾನೆ. ಆದಕಾರಣ ಈತನಿಗೆ ಇತರರಿಂದ ಅತಿಶಯವು) (5) ಗಮನದಿಂದ ಹೊಂದಲರ್ಹವಾದದ್ದು ದೂರದಲ್ಲಿರತಕ್ಕುದು 'ಆಯೋ' ಎನ್ನಿಸುತ್ತದೆ ಎಂದಾಗಲೀ, 'ಮನು' ಧಾತುವು 'ಅವಬೋಧನ' ಎನ್ನುವ ಅರ್ಥದಲ್ಲಿದೆ ಎಂಬ ಧಾತು ವ್ಯಾಖ್ಯಾನದಿಂದ 'ಮನ್ಯುಃ' ಅಂದರೆ, ಜ್ಞಾನಿಯು. (6) ಬಾಹ್ಯವನ್ನು (ದೂರದಲ್ಲಿರತಕ್ಕುದನ್ನು) ತಿಳಿಯತಕ್ಕ ಜ್ಞಾನಿಗೋಸ್ಕರ, ಆಂತರವನ್ನು ತಿಳಿಯತಕ್ಕ ಜ್ಞಾನಿಗೋಸ್ಕರ, ಎಂಬ ಅಭ್ಯಾಸವಾದರೂ ತಾತ್ಪರ್ಯವನ್ನು ತಿಳಿಸುವುದಕ್ಕಾಗಿಯೂ, (7) ಇಂತಹ ನನ್ನನ್ನು ಉದ್ದಿಶ್ಯ ನನ್ನ ಹೃದಯದಲ್ಲಿರತಕ್ಕ ನಿನ್ನನ್ನು ಉದ್ದೇಶಿಸಿಕೊಂಡೇ ಹೊಂದು. (8) ವಿಶ್ವಧಾರಕನೇ, ಸಮೀಪದಲ್ಲಿಯೂ ದೂರದಲ್ಲಿಯೂ ಇರತಕ್ಕ ನಿನ್ನನ್ನು ತಿಳಿಯತಕ್ಕ ನನಗೋಸ್ಕರ, ನನಗೆ ಜ್ಞಾನವನ್ನು ಕೊಡುವುದಕ್ಕೋಸ್ಕರ ನನ್ನನ್ನು ಹೊಂದು, ಎಂದಾಗಲೀ, (9) ಸಮೀಪದಲ್ಲಿಯೂ ದೂರದಲ್ಲಿಯೂ ಚೆನ್ನಾಗಿ ತಿಳಿದುಕೊಂಡಿರುವ ನಿನ್ನನ್ನು ಉದ್ದೇಶಿಸಿಕೊಂಡೇ ನನ್ನ ಹೃದಯದಲ್ಲಿರತಕ್ಕ ರೂಪವನ್ನು ಎಲೋ ವಿಷ್ಣುವೇ ಹೊಂದು. ನಿನ್ನನ್ನು ಕರಿಯಲಿಕ್ಕೆ ನನಗೆ ಶಕ್ತಿಯಿಲ್ಲ. ನನ್ನ ಸಮೀಪಕ್ಕೆ ಬಾ. ಈ ಪ್ರಕಾರ ನಾಭಿಯಲ್ಲಿ ಹುಟ್ಟಿದ ಪದ್ಮದಲ್ಲಿರತಕ್ಕ ಬ್ರಹ್ಮನು ಶ್ರೀ ವಿಷ್ಣುವನ್ನು ಸ್ತುತಿಸಿದನು. ಹೀಗೆ ಪಾದ್ಮಪುರಾಣದಲ್ಲಿದೆ. (10) ಎಲೋ ವಿಭುವೇ ಸಮೀಪದಲ್ಲಿಯೂ, ದೂರದಲ್ಲಿಯೂ ಇರುವ ನಿನ್ನನ್ನೇ ಸದಾ ಧ್ಯಾನಿಸುತ್ತಿರುವ ನನ್ನನ್ನು ಜ್ಞಾನದಾನಮಾಡುವುದಕ್ಕಾಗಿ ಹೊಂದು. ಹೀಗೆ ಗಾಧಿರಾಜನ ಮಗನಾದ ವಿಶ್ವಾಮಿತ್ರನು ಶ್ರೀಹರಿಯನ್ನು ಹೇಳಿದನು. ಹೀಗೆ ಸ್ಕಾಂದದಲ್ಲಿದೆ. (11) ಯಾವ ಕಾರಣದಿಂದ ಜಗತ್ತು ಶ್ರೀಹರಿಯಲ್ಲಿ ಪ್ರವಿಷ್ಟವಾಗಿಯದೋ, ಆದಕಾರಣ ಶ್ರೀಹರಿಯು ಸದಾ ಓಂ ಎಂದು ಹೇಳಲ್ಪಡುತ್ತಾನೆ. ಜಗತ್ತುಗಳಿಗೆ ಆಧಾರನಾದ ಆ ಶ್ರೀಹರಿಯನ್ನೇ ಯತಿಗಳು ಉಪಾಸನಾ ಮಾಡುತ್ತಾ ಇರುತ್ತಾರೆ. ಎಂದು ಮಾನ್ಯ ಸಂಹಿತೆಯಲ್ಲಿದೆ.

**ಮಂ ॥ ಆಯೋಮನ್ಯಾಯ ಮನ್ಯವ ಉಪೋಮನ್ಯಾಯ ಮನ್ಯವೇ ।**
**ಉಪೇಹಿ ವಿಶ್ವಧಾ ॥ ವಿದಾ ಮಘವನ್ವಿದೋಂ ೩ ॥ ೧೧ ॥**

**ಅರ್ಥ ॥** ವಿಶ್ವಧ=ಸರ್ವ ಜಗದ್ಧಾರಕನೇ, ಆಯೋ ಮನ್ಯಾಯ=ಆಗಮನವನ್ನು ಯೋಗ್ಯತೆ ಯನ್ನಾಗಲೀ, ತಿಳಿಯುವ, ಅಥವಾ ಗಮನದಿಂದ ಪ್ರಾಪ್ಯವಾದುದನ್ನು ದೂರಸ್ಥವನ್ನಾಗಲೀ ತಿಳಿಯುವ, ಅಂದರೆ ಬಾಹ್ಯಜ್ಞನಾದ, ಮನ್ಯವೇ=ಜ್ಞಾನಿಯಾದ, ಉಪೋಮನ್ಯಾಯ=ಸಮೀಪಸ್ಥ (ಆಂತರ)ವನ್ನು

ತಿಳಿಯುವ, ಮನ್ಯವೇ=ಜ್ಞಾನಿಯಾದ, (ಇಂತಹ ನಿನ್ನನ್ನು ಉದ್ದೇಶಿಸಿಕೊಂಡು, ನನ್ನ ಹೃದಯದಲ್ಲಿರುವ ನಿನ್ನದಾದ ರೂಪವನ್ನುದ್ದೇಶಿಸಿಕೊಂಡೇ,) ಉಪೇಹಿ=ನನ್ನ ಸಮೀಪಕ್ಕೆ ಬಾ. ಅಥವಾ ಆಯೋ ಮನ್ಯಾಯ ಉಪೋ ಮನ್ಯಾಯ=ದೂರದಲ್ಲಿಯೂ ಸಮೀಪದಲ್ಲಿಯೂ ಇರತಕ್ಕ ನಿನ್ನನ್ನು ತಿಳಿಯುವ ನನಗೆ ಜ್ಞಾನವನ್ನು ಕೊಡುವುದಕ್ಕಾಗಿ ಸಮೀಪಕ್ಕೆ ಬಾ. (ಯಾವುದು ಆದಿಯಲ್ಲಿ ಪ್ರಾರ್ಥಿತ ವಾಗಿಯದೋ ಅಲ್ಲಿಯೇ ಅತ್ಯಂತ ಆದರವನ್ನು ತೋರಿಸುವುದಕ್ಕಾಗಿ ಪುನಃ ಪ್ರಾರ್ಥಿಸಲ್ಪಡುತ್ತದೆ. ಬೇರೆ ಪ್ರಾರ್ಥನೆಯಿಂದ ಏನು ಪ್ರಯೋಜನವು?) ಹೇ ಮಘವನ್=ಯಶಸ್ಸುಳ್ಳವನೇ, ಧನವುಳ್ಳವನೇ, ಯಜ್ಞಸ್ವಾಮಿಯೇ, ಓಂ=ಓಂ ಶಬ್ದವಾಚ್ಯನೇ, ವಿದ=ಸ್ತೋತ್ರಪ್ರಕಾರವನ್ನುಪದೇಶಿಸು ॥ 11 ॥ 44 ॥

ಈ ಪ್ರಕಾರ 'ಮಹತ್ ನಾಮ ಯಾಸು' ಎಂಬ ನಿರ್ವಚನವು ಸಿದ್ಧಿಯಾಗುವುದಕ್ಕಾಗಿ ಮಹಾನಾಮ್ನೀ ಋಕ್ಕುಗಳು ವ್ಯಾಖ್ಯಾತಗಳಾದುವು. ಅದಯುಕ್ತವು. 'ಇಂದ್ರೋ ವಾ ಏತಾಭಿಃ' ಎಂಬ ಬ್ರಾಹ್ಮಣದಿಂದ ('ಮಹಾನಾಮ್ನೀಷ್ವತ್ರ ಸ್ತುವತಃ' ಎಂದು ಉಪಕ್ರಮಿಸಿ 'ಇಂದ್ರೋ ವಾ ಏತಾಭಿಃ ಮಹಾನಾತ್ಮಾನಂ ನಿರಮಿಮೀತ ತಸ್ಮಾನ್ಮಹಾನಾಮ್ನೀ' ಎಂಬ 5ನೇ ಪಂಚಿಕೆಯಲ್ಲಿರತಕ್ಕ ವಾಕ್ಯದಿಂದ) ಮಹಾನಾಮ್ನೀ ಶಬ್ದವು ಅನ್ಯಥಾ ವ್ಯಾಖ್ಯಾತವಾಗಿದೆ, ಎಂದಾಶಂಕಿಸಿದರೆ-

**ಮೂಲ ॥ (೧) ಇಂದ್ರೋ ವಾ ಏತಾಭಿರ್ಮಹಾನಾತ್ಮಾನಂ ನಿರಮಿಮೀತೇತ್ಯಸ್ಯಾಪ್ಯುಕ್ತ ಏವಾರ್ಥಃ । ನಿರ್ಮಾಣಂ ನಾಮಾತ್ಮನಸ್ತದ್ವ್ಯಾಖ್ಯಾನೇನ ಖ್ಯಾಪನಂ । (೨) ನಹ್ಯನ್ಯಥಾ ತಾಸಾಂ ಕರಣತ್ವಂ ಭವತಿ । (೩) ಯಸ್ತದ್ವೇದ ಸ ಪಿತುಷ್ಪಿತಾ ಸದಿತಿ ಚ ಶ್ರುತಿಃ । (೪) ತ್ರೀಣಿ ಪದಾನಿಹಿತಾ ಗುಹಾಸು ಯಸ್ತದ್ವೇದ ಸ ಪಿ ತುಷ್ಪಿತಾಸತ್। (೫) ಸ್ತ್ರಿಯಃ ಸತೀಸ್ತಾಂ ೨ ಉ ಮೇ ಪುಂಸ ಆಹುಃ ಪಶ್ಯ ದಕ್ಷಣ್ವಾನ್ನವಿಚೇತದಂಧಃ । ಕವಿರ್ಯಃ ಪುತ್ರಃ ಸ ಈಮಾಚಿಕೇತ ಯಸ್ತಾ ವಿಜಾನಾತ್ಸಪಿತುಷ್ಪಿತಾಸತ್ । ಇತ್ಯಾದಿ ಶ್ರುತಿಭ್ಯೋ ವಿಜ್ಞಾನಮೇವ ತನ್ನಿರ್ಮಾಣಂ ॥ ೪೫ ॥**

ಅ ॥ (1) 'ಇಂದ್ರೋ ವಾ ಏತಾಭಿರ್ಮಹಾನಾತ್ಮಾನಂ ನಿರಮಿಮೀತ' ಎನ್ನುವುದಕ್ಕೂ ಹಿಂದೆ ಹೇಳಿದ್ದೇ ಅರ್ಥವು. (ಹೇಗೆಂದರೆ) ನಿರ್ಮಾಣವೆಂದರೆ, ಅದರ ವ್ಯಾಖ್ಯಾನದಿಂದ ತನ್ನ ಸ್ಥಾಪನೆಯು. ಮಹಾನ್ ಇಂದ್ರಃ=ಪರಮೇಶ್ವರನು, ಏತಾಭಿಃ=ಈ ಋಕ್ಕುಗಳ ವ್ಯಾಖ್ಯಾನದಿಂದ, ಆತ್ಮಾನಂ=ತನ್ನನ್ನು, ನಿರಮಿಮೀತ =ಪ್ರಸಿದ್ಧೀಕರಿಸಿದನು. (ತಾ ॥'ಖ್ಯಾಪಿತವಾನ್' ಎಂದೂ ವ್ಯಾಖ್ಯಾನಮಾಡಿರುವುದರಿಂದ ಹಿಂದೆ ಹೇಳಿದ ಅರ್ಥವೇ. ಆದರೆ, ಬ್ರಾಹ್ಮಣದಲ್ಲಿ ಕೇವಲ ತಾತ್ಪರ್ಯವು ಹೇಳಲ್ಪಟ್ಟಿದೆ. ನಾವು ಅಕ್ಷರಾರ್ಥವನ್ನು ನಿರೂಪಿಸಿರುತ್ತೇವೆ. ಮತ್ತು ಪುರಂದರನೇ ಈ ಋಕ್ಕುಗಳಿಂದ ಪರಮಾತ್ಮನನ್ನು ತಿಳಿದನು, ಎಂದೂ ವ್ಯಾಖ್ಯಾನ ಮಾಡಿರುವುದರಿಂದ ಹಿಂದಿನ ಅರ್ಥವೇ. ನಿರ್ಮಾಣವೆಂದರೆ, ಜ್ಞಾನ ಅಥವಾ ತಿಳಿಸುವುದು.) (2) (ಈ ಅರ್ಥವನ್ನು ಏಕೆ ಅಂಗೀಕರಿಸಬೇಕು? ಪ್ರಸಿದ್ಧಾರ್ಥದಲ್ಲಿ ಏನು ಬಾಧಕವು ಎಂದರೆ ಬಾಧಕವನ್ನು ಹೇಳುತ್ತಾರೆ.) ಹಿಂದೆ ಹೇಳಿದ 2 ಅರ್ಥಗಳನ್ನು ಅಂಗೀಕರಿಸದಿದ್ದರೆ ಆ ಋಕ್ಕುಗಳಿಗೆ ಕರಣತ್ವವು ಕೂಡುವುದಿಲ್ಲವಷ್ಟೆ! ಅಂದರೆ, ಈಶ್ವರನು ಅನಾದಿಯಾದುದರಿಂದ

ಯೋಗ್ಯತಾ ಇಲ್ಲದಿರುವ ಪ್ರಯುಕ್ತ 'ಏತಾಭಿಃ' ಎಂಬ ತೃತೀಯಾವಿಭಕ್ತಿಯಿಂದ ಹೇಳಲ್ಪಟ್ಟ ಕರಣತ್ವವು ಕೂಡದಿರುವುದೇ ಬಾಧಕವು. (3) (ಜ್ಞಾನರೂಪ ಅರ್ಥದಲ್ಲಿ ನಿರ್ಮಾಣಶಬ್ದದ ಪ್ರಯೋಗವಿದೆ ಎಂದು ತೋರಿಸುತ್ತಾರೆ.) ಯಾರು ಆ ಬ್ರಹ್ಮನನ್ನು ತಿಳಿದಿರುವನೋ ಆತನು ಆ ಜಗತ್ಕಾರಣನಿಗೂ ತಂದೆಯು ಆದನು. (ನಿರ್ಮಾತನು ಹೇಳಲ್ಪಡುತ್ತಾನೆ) ಎಂದು ಶ್ರುತಿಯು. (4) ಯಾರ ಮೂರು ಸ್ವರೂಪಗಳು ವಿಕುಂಠ ನಾರಾಯಣ ವಾಸುದೇವಾಖ್ಯ ಸ್ವರೂಪಗಳು ವೈಕುಂಠ ಅನಂತಾಸನ ಶ್ವೇತದ್ವೀಪಗಳಲ್ಲಿ ಇಡಲ್ಪಟ್ಟಿದ್ದಾವೋ, ಆತನನ್ನು ಯಾರು ತಿಳಿದಿರುವನೋ, ಆತನು ಜಗತ್ಕಾರಣನಿಗೂ ಜನಕನು ಆದನು. ಹೀಗೂ ಶ್ರುತಿಯದೆ. (5) ಸ್ತ್ರೀಚಿಹ್ನೆಯುಳ್ಳ ಆ ಭಗವನ್ಮೂರ್ತಿಗಳನ್ನೇ ನನಗೋಸ್ಕರ ಮಹಾನುಭಾವರು ಹೇಳುತ್ತಾರೆ. ಎರಡು ಸಾಮರ್ಥ್ಯಗಳಿಂದೊಡಗೂಡಿದ ಭಗವನ್ಮೂರ್ತಿಗಳನ್ನು ನೋಡುವವನೇ ಕಣ್ಣುವುಳ್ಳವನು. ತಿಳಿಯದಿರುವವನು ಅಂಧನು (ಕುರುಡನು). ಆತನೇ, (ಆಚಿಕೇತ) ಚೆನ್ನಾಗಿ ತಿಳಿಯುತ್ತಾನೆ. ಯಾರು ಆ ಭಗವನ್ಮೂರ್ತಿಗಳನ್ನು ತಿಳಿದಿರುವನೋ, ಆತನೇ ಜಗತ್ಕಾರಣನಿಗೂ ಜನಕನು ಆದನು. ಇವು ಮೊದಲಾದ ಶ್ರುತಿಗಳು ಇರುವುದರಿಂದ ವಿಶೇಷಜ್ಞಾನವೇ ಆ ಋಕ್ಕುಗಳಿಂದ ನಿರ್ಮಾಣವು. ॥ 45 ॥

ಜ್ಞಾಪನವೂ ನಿರ್ಮಾಣಶಬ್ದಕ್ಕೆ ಅರ್ಥವು ಎಂದು ಹೇಳಿದ್ದನ್ನು ಶ್ರುತಿಗಳಿಂದ ಉಪಪಾದಿಸು ತ್ತಾರೆ-

**ಮೂಲ ॥ ಇಂದ್ರ ಏಕಂ ಸೂರ್ಯ ಏಕಂ ಜಜಾನ ವೇನಾದೇಕಂ ಸ್ವಧಯಾನಿಷ್ಟತಕ್ಷು।**
**ಇತ್ಯಾದೇರ್ವಿಜ್ಞಾಪನಂ ವಾ ॥ ೪೬ ॥**

**ಅರ್ಥ ॥** (''ತ್ರಿಧಾ ಹಿತಂ ಪಣಿಭಿರ್ಗುಹ್ಯಮಾನಂ ಗವಿ ದೇವಾಸೋ ಘೃತಮನ್ವವಿಂದನ್'' ಎಂಬ ಪೂರ್ವವಾಕ್ಯದ ಅರ್ಥವು. ವಿಕುಂಠ ನಾರಾಯಣ ವಾಸುದೇವಾಖ್ಯಗಳಾದ ಮೂರು ಸ್ವರೂಪಗಳು ವೈಕುಂಠ ಅನಂತಾಸನ, ಶ್ವೇತದ್ವೀಪಗಳಲ್ಲಿವೆ. ಹೀಗೆ ಮೂರು ಪ್ರಕಾರವಾಗಿರುವುದು, ವ್ಯವಹರ್ತೃಗಳಿಂದ ಗುಪ್ತವಾಗಿರುವದು, ಪ್ರಕಾಶಮಾನವಾದ ಭಗವತ್ಸ್ವರೂಪವನ್ನು ದೇವತೆಗಳು, ಮಾತಿನಲ್ಲಿ ಹೊಂದಿದರು. ಇಂದ್ರನು (ತಾನು ತಿಳಿದು) ಒಬ್ಬ ಅಧಿಕಾರಿಗೆ ತಿಳಿಸಿದನು. ಸೂರ್ಯನೂ ಒಬ್ಬ ಅಧಿಕಾರಿಗೆ ತಿಳಿಸಿದನು. ವೇದನಾ (ಪೀಡೆ)ವನ್ನು ವಿನಾಶಗೊಳಿಸುವುದರಿಂದ ವೇನಾತ್ ನಾಮಕನಾದ ದೇವನು ಒಬ್ಬ ಅಧಿಕಾರಿಗೆ ತಿಳಿಸಿದನು. ಈ ಪ್ರಕಾರ ಸುಖದಿಂದ ನಿರ್ಮಿಸಿದರು, ಅಂದರೆ ತಿಳಿಸಿದರು. ಇತ್ಯಾದಿಗಳಿಂದ ತಿಳಿಸುವುದು ಆಗಲೀ ನಿರ್ಮಾಣವೆನಿಸಿಕೊಳ್ಳುತ್ತದೆ. ॥ 46 ॥

ಈ ಪ್ರಕಾರ ಈ ಮಹಾನಾಮ್ನೀ ಋಕ್ಕುಗಳು ಇರಲಿ. ಅವುಗಳಿಗೆ ಉಪಸರ್ಗಗಳು ಯಾವುವು ಎಂದರೆ-

**ಮೂಲ ॥ (೧) ಪ್ರಚೇತನ। ಪ್ರಚೇತಯ। ಆಯಾಹಿ ಪಿಬ ಮತ್ಸ್ವ। ಕ್ರತುಶ್ಛಂದ ಋತಂ ಬೃಹತ್। ಸುಮ್ನ ಆಧೇಹಿ ನೋ ವಸೋ। ಇತ್ಯುಪಸರ್ಗಾಃ। (೨) ಅಂಶಾ ಅಪ್ಯಂಶ್ಯಪೇಕ್ಷಯೋಪಸರ್ಗಾ ಭವಂತಿ। (೩) ಉಪಸೃಷ್ಟತ್ವಾದುಪಸರ್ಗಾಃ। (೪) ಅಂತರ್ಗತಂ ಬಹಿರ್ಗಂ ಚ ದ್ವಿಧಾಸ್ಯಾದುಪಸರ್ಜನಂ। ಹಸ್ತವದ್ದೇತಿವಚ್ಚೈವ ಪದಾನಾಂ ಚೋಪಸರ್ಗವತ್॥ ಇತಿ ಶಬ್ದನಿರ್ಣಯೇ ॥ ॥ ೪೭ ॥**

**ಅರ್ಥ ॥** (1) 'ಪ್ರಚೇತನ' 'ಪ್ರಚೇತಯ' 'ಆಯಾಹಿ ಪಿಬ ಮತ್ಸ್ವ' 'ಕ್ರತುಃ ಛಂದಃ ಋತಂ ಬೃಹತ್' 'ಸುಮ್ನ ಆಧೇಹಿ ನೋ ವಸೋ' ಎಂದು ಉಪಸರ್ಗಗಳು. (2) (ಉಪಸರ್ಗಗಳೆಂದರೆ, ಉಪಸರ್ಜನ ಭೂತಗಳೆಂದು ವ್ಯಾಖ್ಯಾತವಾಗಿವೆ. ಪ್ರಧಾನ ಉಪಸರ್ಜನಭಾವವು ಭೇದವನ್ನಪೇಕ್ಷಿಸಿಕೊಂಡಿದೆ. ಇವುಗಳು ಮಹಾನಾಮ್ನೀ ಋಕ್ಕುಗಳ ಅಂಶಗಳೇ ಸರಿ. ಆದಕಾರಣ ಇವುಗಳು ಆ ಋಕ್ಕುಗಳಿಗೆ ಉಪಸರ್ಗಗಳಾಗುವುದು ಹೇಗೆ ಎಂದರೆ) (ಅಂಶಾಂಶಿಗಳಿಗೆ ಭೇದವೂ ಇದ್ದುದರಿಂದ) ಅಂಶಗಳೂ ಕೂಡ ಅಂಶಿಯನ್ನಪೇಕ್ಷಿಸಿ ಉಪಸರ್ಗಗಳು ಆಗುತ್ತವೆ. (3) (ಉಪಸರ್ಗ ಶಬ್ದಕ್ಕೆ ಅಕ್ಷರಾರ್ಥವನ್ನು ಹೇಳುತ್ತಾರೆ.) ಉಪಸೃಷ್ಟ (ವಿಶೇಷಾಕಾರವಾಗಿ ಕೂಡಿಸಲ್ಪಟ್ಟವುಗಳು) ಗಳಾದ ಪ್ರಯುಕ್ತ, ಉಪಸರ್ಗಗಳು ಎನ್ನಿಸಿಕೊಳ್ಳುತ್ತವೆ. (4) (ಏಕದೇಶಕ್ಕೂ ಕೂಡ ಏಕದೇಶಿಯನ್ನಪೇಕ್ಷಿಸಿಕೊಂಡು ಉಪಸರ್ಜನತ್ವವು ಕೂಡುತ್ತದೆ ಎನ್ನುವಲ್ಲಿ ಆಗಮಸಮ್ಮತಿಯನ್ನು ಹೇಳುತ್ತಾರೆ.) (1) ಅಂತರ್ಗತವಾದದ್ದು ಅಂದರೆ ಪ್ರಧಾನದ ಏಕದೇಶಭೂತವಾದದ್ದು (2) ಬಹಿರ್ಗತವಾದದ್ದು ಅಂದರೆ ಪ್ರಧಾನದಿಂದ ಅತ್ಯಂತ ಭಿನ್ನವಾದದ್ದು. ಹೀಗೆ ಉಪಸರ್ಜನವು ಎರಡು ಪ್ರಕಾರವಾಗುವುದು. (1) (ದೇಹವನ್ನಪೇಕ್ಷಿಸಿಕೊಂಡು) ಹಸ್ತದಂತೆಯೇ, (ಇದು ಅಂತರ್ಗತಕ್ಕೆ ಉದಾಹರಣವು) (2) ಆಯುಧದಂತೆಯೇ, (ಇದು ಬಹಿರ್ಗತಕ್ಕೆ ಉದಾಹರಣವು,) ಪದಗಳ ಉಪಸರ್ಗದಂತೆಯೇ, (ಇದು ಅಂತರ್ಗತ, ಬಹಿರ್ಗತ, ಎರಡಕ್ಕೂ ಉದಾಹರಣೆಯು.) (ಅಂದರೆ ''ಇಙ್‌ಕೌ ಅಧ್ಯುಪಸರ್ಗಂ ನ ವ್ಯಭಿಚರತಃ'' ಇಙ್ ಅಧ್ಯಯನೇ, ಇಕ್ ಸ್ಮರಣೇ, ಈ ಧಾತುಗಳಿಗೆ ಅಧ್ಯಯನಾದಿರೂಪವಾದ ಅರ್ಥವು ವಿವಕ್ಷಿತವಾಗುವಾಗ 'ಅಧಿ' ಎನ್ನುವ ಉಪಸರ್ಗವಿಲ್ಲದೆ 'ಏತಿ' ಎಂದು ಪ್ರಯೋಗವೇ ಇರುವುದಿಲ್ಲ, ಆದಕಾರಣ 'ಅಧಿತೇ ಅಧ್ಯೇತಿ' ಎನ್ನುವಲ್ಲಿ 'ಅಧಿ' ಎನ್ನುವುದು ಅಂತರ್ಗತವು. ಸತ್ತಾರೂಪವಾದ ಅರ್ಥವು ವಿವಕ್ಷಿತವಾಗುವಾಗ 'ಪ್ರ' ಮೊದಲಾದ ಉಪಸರ್ಗವಿಲ್ಲದಿದ್ದರೂ 'ಭವತಿ' ಇತ್ಯಾದಿ ಪ್ರಯೋಗವಿದ್ದುದರಿಂದ 'ಪ್ರಭವತಿ' ಇತ್ಯಾದಿಗಳಲ್ಲಿ 'ಪ್ರ' ಮೊದಲಾದುದು ಬಹಿರ್ಗತವು.) ಎಂದು ಶಬ್ದನಿರ್ಣಯದಲ್ಲಿದೆ. ॥ 47 ॥

ಈ ಉಪಸರ್ಗಗಳನ್ನು ಅತಿಛಂದಸ್ಸುಗಳಿಂದ ಹೇಗೆ ಸಂಯೋಗಿಸಬೇಕು? ಎಂದಾಶಂಕಿಸಿದರೆ-

**ಮೂಲ ॥ (೧) ಅಧತ್ತಾನ್ಯಂ ಜಠರೇ ಪ್ರೇಮರಿಚ್ಯತ ಪ್ರಚೇತನ । (೨) ಧಾತಾರಾಧಸ್ತುವತೇ ಕಾಮ್ಯಂ ವಸು ಪ್ರಚೇತಯ । (೩) ಅಸ್ಮಾಕಂ ಬೋಧಿ ಚೋದಿತಾಯಾಹಿ ಪಿಬ ಮತ್ಸ್ವ । (೪) ತಂ ತ್ವಾ ಪರಿಷ್ವಜಾಮಹೇ ಕ್ರತುಶ್ಛಂದ ಋತಂ ಬೃಹತ್ । (೫) ಯಾತೇ ರಾತಿರ್ದದಿರ್ವಸುಸುಮ್ನ ಆಧೇಹಿ ನೋ ವಸೋ ಇತ್ಯುಪಸೃಜತಿ ॥ ೪೮ ॥**

**ಅರ್ಥ ॥** (1) ''ಅಧತ್ತಾನ್ಯಂ ಜಠರೇ ಪ್ರೇಮ ರಿಚ್ಯತ'', (2) ''ಧಾತಾ ರಾಧಸ್ತುವತೇ ಕಾಮ್ಯಂ ವಸು'', (3) ''ಅಸ್ಮಾಕಂ ಬೋಧಿ ಚೋದಿತಾ'', (4)'' ತಂ ತ್ವಾ ಪರಿಷ್ವಜಾಮಹೇ'', (5) ''ಯಾತೇ ರಾತಿರ್ದದಿವಸು'', ಈ ಋಕ್ಕುಗಳಿಗೆ ಕ್ರಮವಾಗಿ 'ವಿದಾ ಮಘವನ್ ವಿದಾ' ಇತ್ಯಾದಿ ಮಹಾನಾಮ್ನೀ ಘಟಕಗಳಾದ ''ಪ್ರಚೇತನ'', ''ಪ್ರಚೇತಯ'', ''ಆಯಾಹಿ ಪಿಬ ಮತ್ಸ್ವ'', ''ಕ್ರತುಃ ಛಂದ ಋತಂ ಬೃಹತ್'', ''ಸುಮ್ನ ಆಧೇಹಿ ನೋ ವಸೋ'' ಎಂಬ ಉಪಸರ್ಗಗಳನ್ನು ಸಂಯೋಜಿಸುತ್ತಾರೆ. ॥ 48 ॥

ಹೀಗೆ 'ಮಹಾನಾಮ್ನೀನಾಮುಪಸರ್ಗಾನುಪಸೃಜತಿ' ಎಂಬ ವಾಕ್ಯವನ್ನು 'ಮಹಾನಾಮ್ನೀನಾಮುಪಸರ್ಗಾಃ' ಎನ್ನುವುದರಿಂದ ಸಂಕ್ಷೇಪವಾಗಿಯೂ, 'ಮಹನ್ನಾಮ ಯಾಸು' ಎನ್ನುವುದನ್ನು ಆರಂಭಿಸಿ ಇಷ್ಟರವರೇಗೆ ವಿಸ್ತಾರವಾಗಿಯೂ ವ್ಯಾಖ್ಯಾನ ಮಾಡಿದರು. ಆ ವಿಷಯದಲ್ಲಿ ಬಂದ ಸಂಶಯವನ್ನು ಪರಿಹರಿಸಿದಮೇಲೆ ಶಸ್ತ್ರಶೇಷವನ್ನು ಹೇಳಬೇಕಾಗಿಯದೆ. ಆದಕಾರಣ 'ಅಯಂ ವೈ ಲೋಕಃ' ಇದು ಮೊದಲಾದುದು ಏಕೆ ಹೇಳಲ್ಪಡುವುದು? ಹೀಗೆ ಆಕಾಂಕ್ಷಾ ಬಂದರೆ ಸಮಾಧಾನ ಹೇಳುತ್ತಾರೆ-

**ಮೂಲ ॥ (೧) ಅಶೇಷ ಮಹಾನಾಮ್ನ್ಯರ್ಥಸಂಸ್ಮರಣ ಪರಿಜ್ಞಾನಪೂರ್ವಕ ಮುಪಸರ್ಗಸಂಯೋಜನಂ ಕರ್ತವ್ಯಮಿತ್ಯೇತದರ್ಥತ್ವೇನ ಮಹಾನಾಮ್ನೀ ಪ್ರಶಂಸಾ ಕ್ರಿಯತೇ । (೨) ಅನ್ಯಥಾ ತಾವನ್ಮಾತ್ರ ಪ್ರಶಂಸಾಮೃತೇ ಅಶೇಷ ಮಹಾನಾಮ್ನೀ ಪ್ರಶಂಸಾಯಾ ವ್ಯರ್ಥತ್ವಾತ್ ॥ ೪೯ ॥**

**ಅರ್ಥ ॥** (1) ಎಲ್ಲಾ ಮಹಾನಾಮ್ನೀ ಋಕ್ಕುಗಳಿಗೆ ಅರ್ಥಭೂತನಾದ ಮಹಾಗುಣವುಳ್ಳ ಭಗವಂತನ ಪರಿಜ್ಞಾನ ಭಕ್ತಿಪೂರ್ವಕ ಸ್ಮರಣಪೂರ್ವಕವಾಗಿ ಉಪಸರ್ಗವನ್ನು ಸಂಯೋಜನ ಮಾಡಬೇಕು, ಎಂಬುವ ಪ್ರಯೋಜನಕ್ಕಾಗಿ ಮಹಾನಾಮ್ನೀ ಋಕ್ಕುಗಳ ಪ್ರಶಂಸನವು ಮಾಡಲ್ಪಡುತ್ತದೆ. (2) ಹೀಗೆ ಅಲ್ಲವಾದರೆ ಕೇವಲ ಉಪಸರ್ಗವನ್ನು ಹೊಗಳದೆ ಎಲ್ಲಾ ಮಹಾನಾಮ್ನೀ ಋಕ್ಕುಗಳ ಪ್ರಶಂಸನೇಗೆ ವೈಯರ್ಥ್ಯ ಬರುವುದರಿಂದ, ಅಂದರೆ ಎಲ್ಲಾ ಮಹಾನಾಮ್ನೀ ಋಕ್ಕುಗಳನ್ನು ಹೊಗಳುವುದೇ ವ್ಯರ್ಥವಾಗುವುದು.

**ತಾತ್ಪರ್ಯ ॥** ಶಸ್ತ್ರವನ್ನು ಹೇಳಿದರೆ ಅಕ್ಷರಗಳು ನ್ಯೂನಗಳಾದುದರಿಂದ ಷೋಳಶಿಶಂಸನವು ಹೇಗೆ ಕೂಡುತ್ತದೆ? ಈ ಪ್ರಕಾರವಾದ ಸಂಶಯವು ಬರುವಾಗ 'ಮಹಾನಾಮ್ನೀನಾಮುಪ ಸರ್ಗಾನುಪಸೃಜತಿ' ಎನ್ನುವುದರಿಂದ ಅದಕ್ಕೆ ಸಮಾಧಾನವನ್ನು ಹೇಳಿ ಪ್ರಕೃತವಾದ ಶಸ್ತ್ರದ ಹೇಳುವಿಕೆ ಯನ್ನು ಅನುಸಂಧಾನ ಮಾಡಿಕೊಳ್ಳಬೇಕು. ಸಂಯೋಜನೀಯಗಳಾದ ಉಪಸರ್ಗಗಳ ಹೊಗಳುವಿಕೆ ಯನ್ನೂ ಅವುಗಳಿಗೇನೇ ಕೂಡಿಸುವಿಕೆಯನ್ನೂ ಸಮರ್ಥಿಸುವುದಕ್ಕಾಗಿ ಮಾಡಬೇಕಾಗಿದೆ. ಪ್ರಸಕ್ತಾನುಪ್ರಸಕ್ತಗಳಾದ (ಅಂದರೆ ಕೂಡಿಸಲಿಕ್ಕೆ ಯೋಗ್ಯಗಳಾಗಿ ಪ್ರಸಕ್ತಗಳಾದುವುಗಳು 'ಪ್ರಚೇತನ' ಇತ್ಯಾದ್ಯುಪಸರ್ಗಗಳು. ಅಶೇಷ ಮಾಹಾನಾಮ್ನೀ ಋಕ್ಕುಗಳು ಅನುಪ್ರಸಕ್ತಗಳು) ಎಲ್ಲಾ ಮಹಾನಾಮ್ನೀ ಋಕ್ಕುಗಳನ್ನು ಹೊಗಳುವುದು ಅಸಂಗತವೇ. ಹಾಗಿದ್ದರೆ ಸರ್ವ ಉಪನಿಷತ್ತುಗಳನ್ನು ಹೊಗಳಬೇಕಾಗು ವುದು. ಮಹಾನಾಮ್ನೀ ಋಕ್ಕುಗಳು ಉಪನಿಷತ್ತಿನಲ್ಲಿ ಅಂತರ್ಗತಗಳಾದುದರಿಂದ ಉಪನಿಷತ್ತುಗಳೂ ಅನುಪ್ರಸಕ್ತಗಳಾಗಿವೆ. ಅಂತಹ ಆಕ್ಷೇಪವನ್ನು ನಿವಾರಿಸುವುದಕ್ಕಾಗಿಯೇ ಪ್ರಯೋಜನವನ್ನು ಆಚಾರ್ಯರು ನಿರೂಪಿಸಿರುವರು. ॥ 49 ॥

ಹಾಗಾದರೆ ಇಲ್ಲಿ 3 ಋಕ್ಕುಗಳನ್ನೇ ಹೊಗಳುವುದು. ಎಲ್ಲಾ ಋಕ್ಕುಗಳನ್ನು ಹೊಗಳುವುದಿಲ್ಲ. ಆದಕಾರಣ 'ಅಶೇಷಮಹಾನಾಮ್ನೀ' ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ, ಎಲ್ಲಾ ಋಕ್ಕುಗಳೂ ಮೂರರಲ್ಲಿ ಸೇರುತ್ತದೆ ಎನ್ನುವುದನ್ನು ಎರಡು ರೀತಿಯಾಗಿ ಹೇಳುತ್ತಾರೆ-

**ಮೂಲ ॥ ತೃಚವಿಭಾಗೇನ ವಿದಾಮಘವನ್ ತಮೂತಯೇ ನೂನಮಿತಿ ವಾ ತಿಸ್ರೋ ಮಹಾನಾಮ್ನ್ಯಃ ॥ ೫೦ ॥**

**ಅರ್ಥ ॥** (1) 3 ಋಕ್ಕುಗಳ ವಿಭಾಗದಿಂದ ಅಂದರೆ 'ವಿದಾ ಮಘವನ್' 'ವಿದಾ ರಾಯಃ' 'ಇಂದ್ರಂ ಧನಸ್ಯ' ಎಂದು ಮೂರು ಋಕ್ಕುಗಳ ವಿಭಾಗದಿಂದ ಅಥವಾ 'ವಿದಾ ಮಘವನ್' ಇತ್ಯಾದಿ 5 ಋಕ್ಕುಗಳು 'ತಮೂತಯೇ' ಇತ್ಯಾದಿ 3 ಋಕ್ಕುಗಳು 'ನೂನಂ ತಂ ನವ್ಯಂ' ಎಂಬ 1 ಋಕ್ಕು ಎಂದಾಗಲೀ ಮೂರು ಮಹಾನಾಮ್ನೀ ಋಕ್ಕುಗಳು. ಅವಶಿಷ್ಟವಾದ 'ಏವಾ ಹಿ' ಇತ್ಯಾದಿಗಳು ಅಂತ್ಯಗಳಾದ 'ಇಂದ್ರಂ ಧನಸ್ಯ' ಎಂಬ 3 ಋಕ್ಕುಗಳಿಂದಲೇ ಸಂಬಂಧಿಸಲ್ಪಡುತ್ತವೆ. ॥ 50 ॥

ಲೋಕವಲ್ಲದಿರುವ ಮಹಾನಾಮ್ನೀ ಋಕ್ಕುಗಳಿಗೆ 'ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನೀ' ಎಂದು ಅಭೇದವು ಹೇಗೆ ಹೇಳಲ್ಪಡುತ್ತದೆ? ಎಂದರೆ, ಸ್ಮೃತಿಯಿಂದಲೇ ವ್ಯಾಖ್ಯಾನ ಮಾಡುತ್ತಾರೆ-

**ಮೂಲ ॥ ಪ್ರಥಮಾ ಯಾ ಮಹಾನಾಮ್ನೀ ತದ್ವಾಚ್ಯಃ ಪಾರ್ಥಿವೋ ಹರಿಃ ।**
**ದ್ವಿತೀಯಾಯಾ ಆಂತರಿಕ್ಷ್ಯಸ್ತೃತೀಯಾಯಾ ದ್ಯುಗಃ ಪ್ರಭುಃ ॥**
**ಇತ್ಯೃಕ್ ಸಂಹಿತಾಯಾಂ ॥ ೫೧ ॥**

**ಅರ್ಥ ॥** ಪ್ರಥಮವಾದ ಯಾವ ಮಹಾನಾಮ್ನೀ ಋಕ್ಕು ಅದೆಯೋ ಆ ಋಕ್ಕಿನಿಂದ ಪೃಥಿವಿಯಲ್ಲಿರತಕ್ಕ ಹರಿಯು ವಾಚ್ಯನಾಗುತ್ತಾನೆ. ಅಂತರಿಕ್ಷದಲ್ಲಿರತಕ್ಕ ಹರಿಯು ಎರಡನೇ ಮಹಾನಾಮ್ನೀ ಋಕ್ಕಿನಿಂದ ವಾಚ್ಯನಾಗುತ್ತಾನೆ. ಸ್ವರ್ಗದಲ್ಲಿರತಕ್ಕ ಪ್ರಭುವು ಮೂರನೇ ಮಹಾನಾಮ್ನೀ ಋಕ್ಕುನಿಂದ ವಾಚ್ಯನಾಗುತ್ತಾನೆ, ಎಂದು ಋಕ್ ಸಂಹಿತೆಯಲ್ಲಿದೆ.

**ತಾತ್ಪರ್ಯ ॥** 1ನೇ ಮಹಾನಾಮ್ನೀ ಋಕ್ಕಿನಲ್ಲಿ 5 ಋಕ್ಕುಗಳಿವೆ. 'ವಿದಾ ಮಘವನ್' ಎನ್ನುವುದನ್ನಾರಂಭಿಸಿ 'ತಮೂತಯೇ' ಎನ್ನುವ ಪರ್ಯಂತವಾಗಿ. 2ನೇದ್ದು 'ತಮೂತಯೇ' ಎನ್ನುವುದನ್ನಾರಂಭಿಸಿ 'ನೂನಂ ತಂ' ಎನ್ನುವ ಪರ್ಯಂತವಾಗಿ 3 ಋಕ್ಕುಗಳು. 3ನೇದ್ದು 'ಏವಾ ಹಿ' ಇದು ಮೊದಲಾದ 'ವಿದಾ ಮಘವನ್ವಿದ್ಮೋಂ' ಎನ್ನುವ ಪರ್ಯಂತವಿರುವ 7 ನಿಗದಗಳಿಂದ ಯುಕ್ತವಾದುದು, 'ನೂನಂ ತಂ' 'ಆಯೋ' ಎಂಬ 2 ಋಕ್ಕುಗಳಿಂದ ಯುಕ್ತವಾದುದು. 'ಅಯಂ ವೈ ಲೋಕಃ' ಇತ್ಯಾದಿಗಳಿಂದ ಅದರಲ್ಲಿರತಕ್ಕ ಹರಿಯು ಹೇಳಲ್ಪಡುತ್ತಾನೆ. ಪ್ರತಿಪಾದ್ಯ ಪ್ರತಿಪಾದಕತ್ವ ಸಂಬಂಧವನ್ನು ನಿಮಿತ್ತೀಕರಿಸಿಕೊಂಡು ಅಭೇದವಚನವು ॥ 51 ॥

ಹಿಂದಿನ ಅರ್ಥದಲ್ಲಿ ಪ್ರಮಾಣವನ್ನು ಹೇಳುತ್ತಾರೆ-

**ಮೂಲ ॥ ತೃಚಾಸ್ತಿಸ್ರೋ ಮಹಾನಾಮ್ನ್ಯಃ ಪಂಚರ್ಚಾ ಪ್ರಥಮಾ ಪರಾ । ತೃಚಾ ದ್ವ್ಯಚಾ ಚ ನಿಗದೈಸ್ತಾರ್ತೀಯಾ ಸಪ್ತಭಿರ್ಯುತಾ । ಇತಿ ತ್ರೇಧಾ ವಿಭಾಗಃ ಸ್ಯಾಜ್ಜಪಧ್ಯಾನಾದಿ ಕರ್ಮಸು ॥ ಇತಿ ಚ ॥ ೫೨ ॥**

**ಅರ್ಥ ॥** ಮಹಾನಾಮ್ನೀ ಋಕ್ಕುಗಳು ಮೂರು ವಿಧಗಳು. ಮೂರು ಋಕ್ಕುಗಳುಳ್ಳವುಗಳು ಮೂರು. ಅಂದರೆ- ಒಂದೊಂದು ಮೂರು ಮೂರು ಋಕ್ಕುಗಳುಳ್ಳವುಗಳು. ಅಥವಾ ಒಂದನೇದ್ದು ಐದು ಋಕ್ಕುಗಳುಳ್ಳದ್ದು, ಎರಡನೇದ್ದು ಮೂರು ಋಕ್ಕುಗಳುಳ್ಳದ್ದು, ಮೂರನೇದ್ದು ಏಳು ನಿಗದಗಳಿಂದೊಡಗೂಡಿದ್ದು, ಎರಡು ಋಕ್ಕುಗಳುಳ್ಳದ್ದು. ಹೀಗೆ ಜಪ, ಧ್ಯಾನ ಮೊದಲಾದ ಕರ್ಮಗಳಲ್ಲಿ ಎರಡು ಪ್ರಕಾರ ವಿಭಾಗವಾಗುವುದು.

**ತಾತ್ಪರ್ಯ ॥** (1) ನೇ ಕಲ್ಪದಲ್ಲಿ 'ವಿದಾ ಮಘವನ್' ಎಂಬುವುದನ್ನಾರಂಭಿಸಿ 'ಆಯಾಹಿ ಪಿಬ ಮತ್ಸ್ವ' ಎಂಬುವ ಪರ್ಯಂತ ಮೂರು ಮೂರು ಋಕ್ಕುಗಳುಳ್ಳದ್ದು ಒಂದು ಮಹಾನಾಮ್ನಿಯು. 'ವಿದಾ ರಾಯಃ ಸುವೀರ್ಯಂ' ಎನ್ನುವುದನ್ನಾರಂಭಿಸಿ 'ಕ್ರತುಃ ಛಂದಃ ಋತಂ ಬೃಹತ್' ಎಂಬುವ ಪರ್ಯಂತ ಮೂರು ಋಕ್ಕುಗಳುಳ್ಳದ್ದು 2ನೇ ಮಹಾನಾಮ್ನಿಯು. 'ಇಂದ್ರಂ ಧನಸ್ಯ ಸಾತಯೇ' ಎನ್ನುವುದನ್ನಾರಂಭಿಸಿ 'ಸುಶೇವೋ ಅದ್ವಯಾಃ' ಎನ್ನುವ ಪರ್ಯಂತ 3 ಋಕ್ಕುಗಳುಳ್ಳದ್ದು 3ನೇ ಮಹಾನಾಮ್ನಿಯು. 'ಏವಾ ಹಿ ' ಇತ್ಯಾದಿ ನಿಗದಗಳೂ 'ಆಯೋ ಮನ್ವಾಯ' ಎಂಬುವ ಋಕ್ಕೂ ಈ 3ನೇ ತೃಜದಲ್ಲಿಯೇ ಸಂಬಂಧಿಸಿಕೊಳ್ಳತಕ್ಕದ್ದು, ಅಂದರೆ ಅದರ ಜೊತೆಯಲ್ಲಿಯೇ ಸೇರಿಸಿಕೊಳ್ಳಬೇಕು. (2)ನೇ ಕಲ್ಪದಲ್ಲಿ 'ವಿದಾ ಮಘವನ್' ಎನ್ನುವುದನ್ನಾರಂಭಿಸಿಕೊಂಡು 'ವಶೀ ಹಿ ಶಕ್ರಃ' ಎನ್ನುವ ಪರ್ಯಂತ 5 **ಋಕ್ಕುಗಳುಳ್ಳವುಗಳು** 1ನೇ ಮಹಾನಾಮ್ನಿಯು. 'ತಮೂತಯೇ ಹವಾಮಹೇ' ಎನ್ನುವುದನ್ನಾರಂಭಿಸಿ 'ಈಶೇ ಹಿ ಶಕ್ರಃ' ಎಂಬುವ ಪರ್ಯಂತ 3 ಋಕ್ಕುಗಳುಳ್ಳವುಗಳು 2ನೇ ಮಹಾನಾಮ್ನಿಯು. 3ನೇ ಮಹಾನಾಮ್ನೀಯು 'ನೂನಂ ತಂ ನವ್ಯಂ' 'ಆಯೋಮನ್ವಾಯ' ಎಂಬ ಎರಡು ಋಕ್ಕುಗಳುಳ್ಳದ್ದು, 'ಏವಾ ಹ್ಯೇವೈವಾಹಿ' ಇತ್ಯಾದಿ ಆರು(6), 'ವಿದಾ ಮಘವನ್ವಿದ್ಮೋಂ' ಎನ್ನುವದೊಂದು ಹೀಗೆ 7 ನಿಗದಗಳಿಂದೊಡಗೂಡಿದ್ದು, ಛಂದೋಬದ್ಧವಾಗದಿರುವ ವಾಕ್ಯವು ನಿಗದವೆನ್ನಿಸಿಕೊಳ್ಳುತ್ತದೆ. ಹೀಗೆ 2 ಪ್ರಕಾರ ವಿಭಾಗವಾಗುವುದು ॥ 52 ॥

ಈ ಉಪಸರ್ಗವನ್ನು ಸಂಯೋಜನಮಾಡಿದವನನ್ನು ಋಗ್ವೇದ ಬ್ರಾಹ್ಮಣ ಚತುರ್ಥ ಪಂಚಿಕೆಯಲ್ಲಿ 4ನೇ ಖಂಡದಲ್ಲಿ 'ಸರ್ವೇಭ್ಯೋ ವಾ ಏಷ ಲೋಕೇಭ್ಯಃ' ಇತ್ಯಾದಿಗಳಿಂದ ಪ್ರಶಂಸಾ ಮಾಡಿಯದೆ. ಅದಕ್ಕೆ ಅರ್ಥಾಂತರ ಪ್ರತೀತಿಯನ್ನು ನಿರಾಸಮಾಡುವುದಕ್ಕಾಗಿ ಅದರ ತಾತ್ಪರ್ಯವನ್ನು ಸ್ಮೃತಿಯಿಂದಲೇ ಹೇಳುತ್ತಾರೆ-

**ಮೂಲ ॥ ತ್ರಿಲೋಕಗೇನ ಹರಿಣಾ ನಿರ್ಮಿತಃ ಷೋಳಶೀ ಕ್ರತುಃ । ಏವಂ ಜ್ಞಾತ್ವಾ ಹರಿಂ ತಂ ಚ ಕರ್ಮ ಕುರ್ವನ್ನಜಾಯತೇ । ಇತಿ ಪ್ರವೃತ್ತೇ ॥ ೫೩ ॥**

**ಅರ್ಥ ॥** ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿರತಕ್ಕ ಶ್ರೀಹರಿಯಿಂದ ಷೋಳಶೀಕ್ರತುವು ನಿರ್ಮಿಸಲ್ಪಟ್ಟದೆ. ಹೀಗೆ ತಿಳಿದು ಮತ್ತು ಯಾಗವು ಶ್ರೀಹರಿಯಿಂದ ನಿರ್ಮಿಸಲ್ಪಟ್ಟದೆ ಎನ್ನುವ ಜ್ಞಾನಮಾತ್ರವಲ್ಲ, ಮತ್ತೆ ಆ ಶ್ರೀಹರಿಯನ್ನು ಚೆನ್ನಾಗಿ ತಿಳಿದು ಕರ್ಮಮಾಡತಕ್ಕವನು ಪುನಃ ಹುಟ್ಟುವುದಿಲ್ಲ.

**ತಾತ್ಪರ್ಯ ॥** ತಥಾ ಚ ಆ ಖಂಡದಲ್ಲಿರತಕ್ಕ ಆ ವಾಕ್ಯ ಮತ್ತು ಆ ವಾಕ್ಯದ ಯೋಜನೆಯೂ ಈ ರೀತಿಯಾಗಿದೆ. ''ಮಹಾನಾಮ್ನೀನಾಮುಪಸರ್ಗಾನುಪಸೃಜತ್ಯಯಂ ವೈ ಲೋಕಃ ಪ್ರಥಮಮಹಾನಾಮ್ನ್ಯಂತರಿಕ್ಷ ಲೋಕೋ ದ್ವಿತೀಯಾಸೌ ಲೋಕಸ್ತೃತೀಯಾ ಸರ್ವೇಭ್ಯೋ ವಾ ಏಷ ಲೋಕೇಭ್ಯಸ್ಸನ್ನಿರ್ಮಿತೋ ಯತ್ ಷೋಡಶೀ ತದ್ಯನ್ಮಹಾನಾಮ್ನೀನಾಮುಪಸರ್ಗಾನುಪಸೃಜತಿ ಸರ್ವೇಭ್ಯ ಏವೈನಂ ತಂ ಲೋಕೇಭ್ಯಸ್ಸನ್ನಿರ್ಮಿಮೀತೇ ಸರ್ವೇಭ್ಯೋ ಲೋಕೇಭ್ಯಸ್ಸನ್ನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ'' ಇದರ ಅರ್ಥವು, ಯಾವುದು ಷೋಳಶೀ ಕ್ರತುವೋ ಅದು ಪೂರ್ವ ಪುರುಷರಿಂದ ಸರ್ವಲೋಕಾಂತರ್ಗತನಾದ ಭಗವಂತನನ್ನು ಪ್ರತಿಪಾದಿಸತಕ್ಕ ಮಹಾನಾಮ್ನಿಗಳ ಉಪಸರ್ಗಗಳನ್ನು ಕೂಡಿಸಿದರಿಂದ ಪ್ರಸನ್ನಗಳಾದ ಸರ್ವಲೋಕಾಂತರ್ಗತ

ಭಗವದ್ರೂಪಗಳಿಂದ ನಿರ್ಮಿಸಲ್ಪಟ್ಟಿದೆ. ಆದಕಾರಣ ಈಗಲೂ ಯಾರೊಬ್ಬನೂ ಮಹಾನಾಮ್ನಿ ಋಕ್ಕುಗಳ ಉಪಸರ್ಗಗಳನ್ನು ಕೂಡಿಸಿದರೆ ಆತನೂ ಸರ್ವಲೋಕಾಂತರ್ಗತ ಭಗವದ್ರೂಪಗಳಿಂದಲೇ ಈ ಷೋಳಶೀ ಕ್ರತುವನ್ನು ನಿರ್ಮಿಸುತ್ತಾನೆ. ಹೇಳಲ್ಪಟ್ಟ ಸರ್ವಲೋಕಗಳಿಂದ ನಿರ್ಮಿಸಲ್ಪಟ್ಟ ಷೋಳಶೀ ಕ್ರತುವಿನಿಂದ ಸಂಸಿದ್ಧನಾಗುತ್ತಾನೆ. ಮುಕ್ತನಾಗುತ್ತಾನೆ. ಯಾಗ ನಿರ್ಮಾಣಮಾತ್ರದಿಂದಲ್ಲ, ಮತ್ತೆ ಯಾರು ಹೀಗೆ ತಿಳಿಯುತ್ತಾನೋ ॥ 53 ॥

ಈ ಪ್ರಕಾರವಾಗಿ ಎಲ್ಲಾ ಮಹಾನಾಮ್ನಿಗಳನ್ನು ಪ್ರಶಂಸನೆ ಮಾಡಿರುವುದರಿಂದಲೂ ''ಯದಿ ಹ ವಾ ಅಪ್ಯನೇವಂವಿನ್ಮಹತ್ಪುಣ್ಯಂ ಕರ್ಮ ಕರೋತಿ ತದ್ದಾಸ್ಯಾಂತತಃ ಕ್ಷೀಯಂತ ಏವ '' ಇತ್ಯಾದ್ಯಾಗಮಗಳಿಂದ ಭಗವಂತನ ಜ್ಞಾನವೂ ''ಸ್ಮರ್ತವ್ಯೋ ಭಗವಾನ್ವಿಷ್ಣುಃ'' ಎಂಬ ಆಗಮದಿಂದ ಸ್ಮರಣವೂ ಕರ್ಮಿಗಳಿಗೆ ಅವಶ್ಯವಾಗಿ ಅಪೇಕ್ಷಿತವಾಗಿದೆ ಎಂದುಕ್ತವಾಗಿದೆ. ಇದೇ ವಿಷಯದಲ್ಲಿ ಬೇರೆ ಉಪಪತ್ತಿಗಳನ್ನು ಹೇಳುತ್ತಾರೆ-

**ಮೂಲ ॥ ಏವಾಹ್ಯೇವೈವಾ ಹೀತ್ಯಸ್ಯಾರ್ಥೋಽಪ್ಯುಕ್ತಾವಧಾರಣಂ ರೂಪತ್ವಾ-ತ್ಪೂರ್ವೋಕ್ತಾರ್ಥಃ ಪರಿಜ್ಞಾನಂ ವಿನಾ ನ ಸ್ಮರ್ತುಂ ಶಕ್ಯತೇ ॥ ೫೪ ॥**

**ಅರ್ಥ ॥** 'ಏವಾಹ್ಯೇವೈವಾಹಿ' ಎನ್ನುವ ಉಪಸರ್ಗಗಳ ಅರ್ಥವೂ ಕೂಡ ಹಿಂದೆ ಹೇಳಲ್ಪಟ್ಟ ಅರ್ಥದ ನಿರ್ಧಾರಣ ಸ್ವರೂಪತ್ವವಿದ್ದುದರಿಂದ ಹಿಂದೆ ಹೇಳಿದ ಅರ್ಥ ಜ್ಞಾನವಿಲ್ಲದೆ ಸ್ಮರಿಸಲಿಕ್ಕೆ ಶಕ್ಯವಾಗುವುದಿಲ್ಲ.

**ತಾತ್ಪರ್ಯ ॥** ಉಪಸರ್ಗವನ್ನು ಕೂಡಿಸತಕ್ಕವನು ಉಪಸರ್ಗದ ಅರ್ಥವನ್ನು ಸ್ಮರಿಸಬೇಕು. 'ಏವೈವಾಹಿ' ಎಂಬ ಉಪಸರ್ಗಗಳು, 'ಮಹಾನಾಮ್ನೀ ಘಟಿತಗಳಾದ 5 ಅಕ್ಷರಗಳುಳ್ಳ ಉಪಸರ್ಗಗಳನ್ನು ಕೂಡಿಸುತ್ತಾನೆ' ಎಂದು ಸಂಯೋಜಿಸಿ ಹೇಳಲ್ಪಡುತ್ತವೆ. ಈ ಉಪಸರ್ಗಗಳ ಅರ್ಥವಾದರೂ ಹಿಂದೆ ಹೇಳಿದ ಅರ್ಥದ ಸ್ಮರಣವಿಲ್ಲದೆ ಸ್ಮರಿಸಲಿಕ್ಕೆ ಶಕ್ಯವಾಗುವುದಿಲ್ಲ, ಅದು ಅವಧಾರಣರೂಪವಾಗಿದೆ. ಅದನ್ನು ಸ್ಮರಿಸದೆ ಅದರ ಅವಧಾರಣವನ್ನು ಸ್ಮರಿಸಲಿಕ್ಕೆ ಶಕ್ಯವಾಗುವುದಿಲ್ಲ, ಆದಕಾರಣ ಕರ್ಮಿಗಳಿಗೆ ಭಗವತ್ಸ್ವರೂಪದ ಜ್ಞಾನವನ್ನು ಬಿಡಲು ಸಾಧ್ಯವೇ ಇಲ್ಲ. ॥ 54 ॥

ಮತ್ತು ಕರ್ಮದಿಂದ ಮೋಕ್ಷವು ಶ್ರುತವಾಗಿದೆ. ಅದು ಅನ್ಯಥಾನುಪಪನ್ನವಾಗುವುದರಿಂದಲೂ 'ಯ ಏವಂ ವೇದ' ಎಂದು ಶ್ರುತವಾಗುವುದರಿಂದಲೂ ಭಗವಂತನ ಜ್ಞಾನವು ಆವಶ್ಯಕವು ಎಂಬುವ ಭಾವದಿಂದ ಸರ್ವೇಭ್ಯ ಲೋಕೇಭ್ಯಃ ಸನ್ನಿರ್ಮಿತೇನ' ಇತ್ಯಾದಿಗಳನ್ನು ವ್ಯಾಖ್ಯಾನಮಾಡುತ್ತಾರೆ.

**ಮೂಲ ॥ ಏವಂ ನಿರ್ಮಿತೇನ ಷೋಳಶಿನಾ ಋದ್ಧೋ (ರಾಧ್ನೋ) ಭವತ್ಯೇವಂ ವಿತ್ ॥ ೫೫ ॥**

**ಅರ್ಥ ॥** ಈ ಪ್ರಕಾರ ನಿರ್ಮಿಸಲ್ಪಟ್ಟ ಷೋಳಶೀಕ್ರತುವಿನಿಂದ ಹೀಗೆ ತಿಳಿದವನು ಸಮೃದ್ಧನಾಗುತ್ತಾನೆ. (ಹೀಗೆ ಪ್ರಶಂಸಾವಾಕ್ಯಾರ್ಥೋಕ್ತಿಯು ಸಮಾಪ್ತವಾಯಿತು.) ॥ 55 ॥

ಈ ಪ್ರಕಾರ ಶಂಕಾವನ್ನು ಪರಿಹರಿಸಿ 3 ಋಕ್ಕುಗಳುಳ್ಳ 3 ಶಸ್ತ್ರಶೇಷಗಳನ್ನು ಬ್ರಾಹ್ಮಣವು ನಿರೂಪಿಸಿಯದೆ. ''ಪ್ರಪ್ರವಸ್ತ್ರಿಷ್ಟುಭಮಿಷಂ ಅರ್ಚತ ಪ್ರಾರ್ಚತ ಯೋ ವ್ಯತೀ ರ - ಪಾಣಯದಿತಿ

ಪ್ರಜ್ಞಾತಾನುಷ್ಟುಭಃ ಶಂಸತಿ '' ಹೀಗೆ. ಆದರಲ್ಲಿ ಶಸ್ತ್ರಾರ್ಥವನ್ನು ಸರ್ವಥಾ ಸ್ಮರಿಸಬೇಕಾದುದರಿಂದ ಶಸ್ತ್ರವು ಭಗವದರ್ಥವಾದುದರಿಂದ ಶಸ್ತ್ರದ ಜ್ಞಾನವು ಆವಶ್ಯಕವಾಯಿತು. ಹೀಗೆ ಆಶಯವುಳ್ಳವರಾಗಿ ಮುರು ಋಕ್ಕುವುಳ್ಳವುಗಳ ಮೂರನ್ನು ವ್ಯಾಖ್ಯಾನ ಮಾಡಲಿಚ್ಛಿಸಿದವರಾಗಿ ಪ್ರತೀಕವನ್ನು ಗ್ರಹಣಮಾಡುತ್ತಾ 1ನೇ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ.

**ಮೂಲ ॥ (೧) ಪ್ರಪ್ರವಃ ಹೇ ಋತ್ವಿಜಃ ಪ್ರಜಾ ವಾ ವಸ್ತ್ರಿಷ್ಟುಭಮಿಷಂ ತ್ರಿಷ್ಟುಭಾಖ್ಯನ್ನಮಿಂದ್ರಃ ಪರಮೇಶ್ವರಃ ಸೋಮಾಯ ಆವಿವಾಸತಿ । (೨) ಪುರಂಧ್ಯಾ ಧಿಯಾ ಅಶೇಷಪ್ರಾಣಿ ದೇಹಾಶ್ರಯಯಾ ಸ್ವಬುದ್ಧ್ಯಾ ಪ್ರಪ್ರ ಪ್ರಕರ್ಷೇಣಾತಿತರಾಂ ಶಂಸ್ಯಮಾನಾ ತ್ರಿಷ್ಟುಪ್ ಪ್ರೀತಿಂ ಕರೋತಿ । ಸೋಮಪಾನಾರ್ಥಮಿತ್ಯರ್ಥಃ । (೩) ಮಂದದ್ವೀರಾಯತಸ್ಯ ವೀರಸ್ಯ ಪರಮೇಶ್ವರಸ್ಯ ಮಂದಂ ಪ್ರೀತಿಂ ಕರೋತೀತಿ ಮಂದದ್ವೀರಃ ಸೋಮಃ । ನ ತ್ವಾತ್ಮಪ್ರಯೋಜನಾಯ ಪ್ರೀತಿಂ ಕರೋತಿ ಕಿಂ ತರ್ಹಿ ವೋ ಮೇಧಸಾತಯೇ ಯಜ್ಞಸಿಧ್ಯರ್ಥಂ । ವ ಇತಿ ಗುರುತ್ವಾದೀಶ್ವರಂ ಪ್ರತ್ಯೇವ ವಾ ಬಹುವಚನಂ । (೪) ತದಾವೋ ನ್ನಂ ತ್ರಿಷ್ಟುಭಂ ವೋ ಮೇಧಸಾತಯೇ ಭವದ್ದೈವತ್ಯ ಯಜ್ಞಸಿಧ್ಯರ್ಥಂ ಭವಾನ್ ಪ್ರಪ್ರಾ ವಿವಾಸತೀತ್ಯರ್ಥಃ ॥ ೫೬ ॥**

**ಅರ್ಥ ॥** (1) ಎಲೋ ಋತ್ವಿಕ್‌ಗಳಿರಾ ಅಥವಾ ಪ್ರಜರುಗಳಿರಾ! (ಯಜಮಾನರೇ) ನಿಮ್ಮದಾದ ತ್ರಿಷ್ಟುಭಂ ಇಷಂ ಅಂದರೆ ತ್ರಿಷ್ಟುಭಾಖ್ಯ ಅನ್ನವನ್ನು ಇಂದ್ರನು ಅಂದರೆ ಪರಮೇಶ್ವರನು ಸೋಮಪಾನಕ್ಕಾಗಿ ಹೊಂದಲಿಚ್ಛಿಸುತ್ತಾನೆ. (2) ಪುರಂಧ್ಯಾಧಿಯಾ ಅಂದರೆ, ಸರ್ವಪ್ರಾಣಿಗಳ ಶರೀರವನ್ನು ಆಶ್ರಯಿಸಿಕೊಂಡಿರುವ ತಮ್ಮ ಬುದ್ಧಿಯಿಂದ, ಪ್ರಕರ್ಷದಿಂದ ಅತ್ಯಂತವಾಗಿ ಹೊಗಳಲ್ಪಡತಕ್ಕ ತ್ರಿಷ್ಟುಭ್‌ಛಂದಸ್ಸು ಸೋಮಪಾನಕ್ಕಾಗಿ ಪ್ರೀತಿಯನ್ನು ಮಾಡುತ್ತದೆ. ಹೀಗೆ ಅರ್ಥವು. (3) ಮಂದದ್ವೀರಾಯ ಅಂದರೆ, ಆ ವೀರನಾದ ಪರಮೇಶ್ವರನಿಗೆ ಪ್ರೀತಿಯನ್ನು ಮಾಡುತ್ತದೆ. ಆದುದಿಂದ ಮಂದದ್ವೀರವು ಸೋಮವು. ತನ್ನ ಪ್ರಯೋಜನಕ್ಕಾಗಿ ಪ್ರೀತಿಯನ್ನು ಮಾಡುವುದಿಲ್ಲ, ಮತ್ತೇನೆಂದರೆ, ನಿಮ್ಮ ಯಜ್ಞದ ಸಿದ್ಧಿಗಾಗಿ. 'ವಃ' ಎಂದು ಗುರುಗಳಾದ ಪ್ರಯುಕ್ತವೂ ಈಶ್ವರನನ್ನು ಕುರಿತು ಬಹುವಚನವು. (4) ಆಗ ನಿಮ್ಮ ತ್ರಿಷ್ಟುಭಾಖ್ಯ ಅನ್ನವನ್ನು ನಿಮ್ಮ ಮೇಧಸಾತಯೇ ಅಂದರೆ, ನೀವೇ ದೇವತೆಯಾಗುಳ್ಳ ಯಜ್ಞವು ಸಿದ್ಧಿಯಾಗುವುದಕ್ಕಾಗಿ ನೀನು ಅತ್ಯಂತ ಹೊಂದಲಿಚ್ಛಿಸುತ್ತಿ. ಹೀಗೆ ಅರ್ಥವು.

**ಮಂ ॥ ಪ್ರಪ್ರವಸ್ತ್ರಿಷ್ಟುಭಮಿಷಂ ಮಂದದ್ವೀರಾಯೇಂದವೇ ।**
**ಧಿಯಾ ವೋ ಮೇಧಸಾತಯೇ ಪುರಂಧ್ಯಾ ಆವಿವಾಸತಿ ॥ ೧ ॥**

**ಅರ್ಥ ॥** ಹೇ ಋತ್ವಿಜಃ=ಹೇ ಋತ್ವಿಕ್‌ಗಳಿರಾ ಅಥವಾ ಯಜಮಾನರೇ, (ಪರಮೇಶ್ವರನು) ಮಂದದ್ವೀರಾಯ=ಹರ್ಷವನ್ನು ಹೊಂದಿದ ಪರಮೇಶ್ವರನುಳ್ಳ ಅಂದರೆ, ಪರಮೇಶ್ವರ ಸಂತೋಷಕ್ಕೆ ಕಾರಣವಾದ, ಇಂದವೇ=ಸೋಮಪಾನಕ್ಕಾಗಿ, ವಃ=ನಿಮ್ಮಿಂದ ಕೊಡಲ್ಪಡತಕ್ಕ, ತ್ರಿಷ್ಟುಭಂ ಇಷಂ=ತ್ರಿಷ್ಟುಭಾಖ್ಯ ಅನ್ನವನ್ನು, ವಃ=ಮೇಧಸಾತಯೇ=ನಿಮ್ಮ ಯಜ್ಞವು ಸಿದ್ಧಿಯಾಗುವುದಕ್ಕಾಗಿ,

ಪುರಂಧ್ಯಾ=ಸರ್ವಪ್ರಾಣಿಗಳ ಶರೀರವನ್ನು ಆಶ್ರಯಿಸುತ್ತಿರುವ, ಧಿಯಾ=ತಮ್ಮ ಬುದ್ಧಿಯಿಂದ, ಪ್ರ ಆವಿವಾಸತಿ=ಅತಿಪ್ರಕರ್ಷದಿಂದ ಹೊಂದಲಿಚ್ಛಿಸುತ್ತಾನೆ. ಅಂದರೆ, ನಿಮ್ಮಿಂದ ಕೊಡಲ್ಪಡತಕ್ಕ ತ್ರಿಷ್ಟುಪ್ಪಿನಲ್ಲಿ ಅತ್ಯಂತವಾಗಿ ಪ್ರೀತಿಯನ್ನು ಇಂದ್ರನು ಸೋಮಪಾನಕ್ಕಾಗಿ ಮಾಡುತ್ತಾನೆ. ಸ್ತುತಿಯಿಂದ ಪ್ರೀತನಾದವನು ಸೋಮವನ್ನು ಕುಡಿಯುತ್ತಾನೆ. ಪೂರ್ಣಾನಂದನಾದ ಪ್ರಯುಕ್ತ ಅನ್ಯಥಾ ಆಗಲಾರದು. ಅಥವಾ ಎಲೋ ಇಂದ್ರನೇ! ನಿಮ್ಮದಾದ ತ್ರಿಷ್ಟುಬ್ಭಾಖ್ಯ ಅನ್ನವನ್ನು ನೀವೇ ದೇವತೆಯಾಗಿ ಉಳ್ಳ ಯಜ್ಞವು ಸಿದ್ಧಿಯಾಗುವುದಕ್ಕಾಗಿ, ಸೋಮಪಾನಕ್ಕಾಗಿ ಬುದ್ಧಿಯಿಂದ ಅತಿಪ್ರಕರ್ಷದಿಂದ ಹೊಂದಲಿಚ್ಛಿಸುತ್ತಾನೆ. ॥ 1 ॥ 56 ॥

**ಮೂಲ ॥ (೧) ಓದತೀನಾಂ ಉಂದನಕರ್ತ್ರೀಣಾಂ ವಃ ಅಪಾಂ ಭವದೀಯಾನಾಂ ಪತಿಂ ವಃ ಪುರುಷಂ ಪ್ರಾಣಂ ನದನ ಕರ್ತಾರಂ ಪ್ರತಿ ಇಷುಧ್ಯಸಿ ಪತಿರ್ಭವಸಿ । ಸೃಷ್ಟೌ ಸೃಷ್ಟೌ ಯೋ ಯಃ ಪ್ರಾಣಸ್ತಂ ತಂ ಪ್ರತಿ ಪತಿರ್ಭವಸೀತಿ ನದಮಿತಿ ಪುನರ್ವಚನಂ । (೨) ಯೋಯುವತೀನಾಂ ಗಮನಶೀಲಾನಾಮಾಕಾಶೇ ಪೋಪ್ಲೂಯಮಾನಾನಾಮಧ್ನ್ಯಾನಾಂ ಧೂಮರೂಪೇಣಾದಾಹ್ಯಾನಾಂ ರೇತೋ ರೂಪೇಣಾಜರಾಣಾಂ ವಾ ಧೇನೂನಾಂ ಜಗತ್ಪೋಷಕಾಣಾಂ । ಧಿನು ಪುಷ್ಟಾವಿತಿ ಧಾತೋಃ । ತಾ ನದೇನ ವಿಹರತೀತ್ಯಾದಿ ಶ್ರುತೇಃ । (೩) ಪಯಸಾ ಸೇಚಕಾನಾಂ ದೇಶಾದ್ದೇಶಾಂತರಗಮನಶೀಲಾನಾಮಧ್ನ್ಯಾನಾಂ ಹಂತುಮಯೋಗ್ಯಾನಾಂ ಧೇನೂನಾಂ ಗವಾಂ ಪತಿಂ ವಾಯುಂ ಪ್ರತಿ ಇಷುಧ್ಯಸೀತಿ ವಾ । ವಾಯುರ್ವಾ ವ ಗವಾಂ ಪತಿರಿತಿ ಶ್ರುತೇಃ । ಧೇನುಶಬ್ದಾಚ್ಚ । ಓದತೀನಾಂ ಭಕ್ತ್ಯಾ ಸೇಚಕಾನಾಂ । ಯೋಯುವತೀನಾಮತಿಶಯೇನಾತ್ಮತತ್ತ್ವಾವಗಮಕಾನಾಮಧ್ನ್ಯಾನಾಂ ನಿತ್ಯಾನಾಂ ಧೇನೂನಾಂ ಧರ್ಮಾರ್ಥ ಕಾಮ ಮೋಕ್ಷ ಪೋಷಕಾಣಾಂ ವಾಚಾಂ ಪತಿಂ ವಾಯುಂ ಪ್ರತಿ ಪತಿರ್ಭವಸೀತಿ ವಾ । (೪) ವಾಚಂ ಧೇನುಮುಪಾಸೀತ ತಸ್ಯಾಶ್ಚತ್ವಾರಃ ಸ್ತನಾಃ ಸ್ವಾಹಾಕಾರೋ ವಷಟ್ಕಾರೋ ಹಂತಕಾರಃ ಸ್ವಧಾಕಾರ ಇತಿ । ತಸ್ಯಾ ದ್ವೌ ಸ್ತನೌ ದೇವಾ ಉಪಜೀವಂತಿ ಸ್ವಾಹಾಕಾರಂ ಚ ವಷಟ್ಕಾರಂ ಚ ಹಂತಕಾರಂ ಮನುಷ್ಯಾಃ ಸ್ವಧಾಕಾರಂ ಪಿತರಸ್ತಸ್ಯಾಃ ಪ್ರಾಣ ಋಷಭೋ ಮನೋವತ್ಸಃ ॥ ಇತ್ಯಾದಿ ಶ್ರುತಿಭ್ಯಃ ॥ ೫೭ ॥**

**ಮಂ ॥ ನದಂ ವ ಓದತೀನಾಂ ನದಂ ಯೋಯುವತೀನಾಂ । ಪತಿಂ ವೋ ಅಧ್ನ್ಯಾನಾಂ ಧೇನೂನಾಮಿಷುಧ್ಯಸಿ ॥ ೨ ॥**

**ಅರ್ಥ ॥** (1) ಓದತೀನಾಂ, ಅಂದರೆ ಉಂದನಕರ್ತ್ರೀಣಾಂ=ಒದ್ದೆಯನ್ನು ಮಾಡುವ, 'ವಃ' ಅಂದರೆ ಅಪಾಂ ಭವದೀಯಾನಾಂ=ನಿಮ್ಮ (ಈಶ್ವರನ) ಸಂಬಂಧಿಗಳಾದ ಜಲಗಳಿಗೆ, ಪತಿಂ=

ಸ್ವಾಮಿಯಾದ, 'ನದಂ' ಅಂದರೆ ವಃ=ನಿಮ್ಮ, ಪುರುಷಂ ಪ್ರಾಣಂ=ಭೃತ್ಯನಾದ ಪ್ರಾಣನನ್ನು, ಪ್ರಾಣನನ್ನು ಕುರಿತು, 'ಇಷುಧ್ಯಸಿ' ಅಂದರೆ, ಪತಿರ್ಭವಸಿ=ನಿಯಾಮಕನಾಗಿರುತ್ತಿ. ಪ್ರತಿ ಸೃಷ್ಟಿಯಲ್ಲಿ ಯಾರು ಯಾರು ಮುಖ್ಯಪ್ರಾಣನೋ, ಆಯಾಯ ಮುಖ್ಯಪ್ರಾಣನನ್ನು ಕುರಿತು ನಿಯಾಮಕನಾಗಿರುತ್ತಿ ಎಂಬುವ ಅಭಿಪ್ರಾಯದಿಂದ 'ನದಂ' ಎಂದು ಪುನಃ ವಚನವು. (2) ಯೋ ಯುವತೀನಾಂ=ಅಂದರೆ ಗಮನಸ್ವಭಾವವುಳ್ಳ, ಮತ್ತು ಆಕಾಶದಲ್ಲಿ ಹರಿಯುತ್ತಿರುವ, ಅಧ್ನ್ಯಾನಾಂ=ಅಂದರೆ ಧೂಮಸ್ವರೂಪ ದಿಂದ ಸುಡಲ್ಪಡದಿರುವ, ಅಥವಾ ರೇತೋರೂಪದಿಂದ ಜರಾವನ್ನು ಹೊಂದದಿರುವ, 'ಧೇನೂನಾಂ' ಅಂದರೆ ಜಗತ್ತನ್ನು ಪೋಷಿಸುವ, 'ಧಿನುಪುಷ್ಟೌ' ಎಂಬ ಧಾತುವ್ಯಾಖ್ಯಾನದಿಂದ (ಈ ಅರ್ಥವು ಲಭಿಸುತ್ತದೆ.) ಜಲಗಳಿಗೆ ಸ್ವಾಮಿಯಾದ ಮುಖ್ಯಪ್ರಾಣನನ್ನು ಕುರಿತು ನಿಯಾಮಕನಾಗಿರುತ್ತಿ. 'ತಾಃ ನದೇನ ವಿಹರತಿ' ಇತ್ಯಾದಿ ಶ್ರುತಿಗಳಿಂದ, (3) ಓದತೀನಾಂ=ಕ್ಷೀರದಿಂದ ಸೇಚನಮಾಡತಕ್ಕ, ಯೋಯುವತೀನಾಂ=ದೇಶದಿಂದ ದೇಶಾಂತರಕ್ಕೆ ಹೋಗುವ ಸ್ವಭಾವವುಳ್ಳ, 'ಅಧ್ನ್ಯಾನಾಂ' ಅಂದರೆ, ಕೊಲ್ಲಲಿಕ್ಕೆ ಅಯೋಗ್ಯಗಳಾದ 'ಧೇನೂನಾಂ' ಅಂದರೆ ಗೋವುಗಳಿಗೆ, ಪತಿಂ=ಅಂದರೆ ಸ್ವಾಮಿಯಾದ ವಾಯುವನ್ನು ಕುರಿತು, ನಿಯಾಮಕನಾಗಿರುತ್ತಿ. ಎಂದು ಆಗಲೀ, ವಾಯುದೇವರು ಗೋವುಗಳಿಗೆ (4) ಸ್ವಾಮಿಯು, ಎಂಬ ಶ್ರುತಿಯಿಂದಲೂ, ಧೇನುಶಬ್ದದಿಂದಲೂ (ಈ ಅರ್ಥವು ಸಿದ್ಧವಾಗುವುದು.) 'ಓದತೀನಾಂ' ಭಕ್ತಿಯಿಂದ ಸೇಚನಮಾಡತಕ್ಕ 'ಯೋಯುವತೀನಾಂ' ಅಂದರೆ ಅತಿಶಯವಾಗಿ ಪರಮಾತ್ಮನ ತತ್ವವನ್ನು ತಿಳಿಸಿಕೊಡುವ, 'ಅಧ್ನ್ಯಾನಾಂ'ಅಂದರೆ ನಿತ್ಯಗಳಾದ, 'ಧೇನೂನಾಂ' ಅಂದರೆ ಧರ್ಮ-ಅರ್ಥ ಕಾಮಗಳನ್ನು ಪೋಷಿಸುವ ವಚನಗಳಿಗೆ, 'ಪತಿಂ' ಅಂದರೆ, ಸ್ವಾಮಿಯಾದ ವಾಯುದೇವರನ್ನು ಕುರಿತು, ನಿಯಾಮಕನಾಗಿರುತ್ತಿ ಎಂದಾಗಲೀ (5) ಸರಸ್ವತಿಯನ್ನು ಧೇನುವನ್ನಾಗಿ ಉಪಾಸನಾಮಾಡತಕ್ಕದ್ದು, ಆ ಧೇನುವಿಗೆ 4 ಸ್ತನಗಳು ಸ್ವಾಹಾಕಾರವು, ವಷಟ್ಕಾರವು, ಹಂತಕಾರವು, ಸ್ವಧಾಕಾರವು ಎಂದು. ಆ ಸರಸ್ವತಿಯ ಎರಡು ಸ್ತನಗಳನ್ನು ಅಂದರೆ, ಸ್ವಾಹಾಕಾರವನ್ನು, ವಷಟ್ಕಾರವನ್ನು ಕೂಡ, (ಅವುಗಳಿಂದ) ದೇವತೆಗಳು ಉಪಜೀವಿಸುತ್ತಾ ಇರುತ್ತಾರೆ. ಮನುಷ್ಯರು ಹಂತಕಾರವನ್ನು, ಪಿತೃಗಳು ಸ್ವಧಾಕಾರವನ್ನು ಉಪಜೀವಿಸುತ್ತಾ ಇರುತ್ತಾರೆ. ಆ ಸರಸ್ವತಿಗೆ ಪ್ರಾಣನು ಸ್ವಾಮಿಯು. ಮನಸ್ಸು (ಮನೋಭಿಮಾನಿಯಾದ ರುದ್ರನು) ಮಗನು, ಇದು ಮೊದಲಾದ ಶ್ರುತಿಗಳಿಂದ.

ಮೂಲಾರ್ಥದಿಂದಲೇ ಮಂತ್ರಾರ್ಥವು ಸ್ಪಷ್ಟವಾಯಿತು.

**ತಾತ್ಪರ್ಯ ॥** (1) 'ಪುರುಷೋ ವೈ ನದಃ' 'ಪ್ರಾಣೋ ವೈ ನದಃ' ಎಂಬ ಶ್ರುತಿಗಳನ್ನನುಸರಿಸಿ 'ನದಂ' ಎನ್ನುವುದಕ್ಕೆ 'ವಃ ಪುರುಷಂ ಪ್ರಾಣಂ' ಎಂದು ಅರ್ಥವನ್ನು ಹೇಳಿದರು. (2) 'ತಸ್ಮಾತ್ಪ್ರಾಣೋ ನದನ್' ಎಂಬ ಶ್ರುತಿಯನ್ನು ಅನುಸರಿಸಿ 'ನದ' ಶಬ್ದಕ್ಕೆ 'ನದನ ಕರ್ತಾರಂ' ಎಂದು ಯೌಗಿಕಾರ್ಥವು. (3) 'ಇಷುಧ್ಯಸೀತಿ ಯದಾಹ ಪತೀಯಸೀತ್ಯೇವ ತದಾಹ' ಎಂಬ ಶ್ರುತಿಯನ್ನು ಅನುಸರಿಸಿ 'ಇಷುಧ್ಯಸಿ' ಎನ್ನುವುದಕ್ಕೆ 'ಪತಿರ್ಭವಸಿ' ಎಂದು ಅರ್ಥವನ್ನು ಹೇಳಿರುವರು. (4) 'ಆಪೋ ವಾವ ಯೋಯುವತ್ಯೋ ಯಾಃ ಸ್ವೇದತೇ ತಾ ಹಿ ಸರೀಸೃಪ್ಯಂತ ಇವ' ಎಂಬ ವಾಕ್ಯವನ್ನು ಅನುಸರಿಸಿ 'ಯೋಯುವತೀನಾಂ' ಎನ್ನುವುದಕ್ಕೆ 'ಗಮನಶೀಲಾನಾಂ' ಎಂದು ಅರ್ಥ ಹೇಳಿರುವರು. (5) 'ಆಪೋ ವಾ ಯೋಯುವತ್ಯೋ ಯಾ ಅಂತರಿಕ್ಷ್ಯಾಸ್ತಾ ಹಿ ಪೋಪ್ಲೂಯಂತ ಇವ' ಎಂಬ ವಾಕ್ಯದ ಅರ್ಥಾನುಸಾರವಾಗಿ 'ಆಕಾಶೇ ಪೋಪ್ಲೂಯಮಾನಾನಾಂ' ಎಂದು ಹೇಳಿರುವರು. (6) 'ಆಪೋ ವಾ

ಅಧ್ನ್ಯಾಃ ಯಾಃ ಅಗ್ನೇರ್ಧೂಮಾ ಜಾಯಂತೇ' ಎಂಬ ಶ್ರುತಿಯನ್ನು ಅನುಸರಿಸಿ 'ಅಧ್ನ್ಯಾನಾಂ' ಎನ್ನುವುದಕ್ಕೆ 'ಧೂಮರೂಪೇಣಾದಾಹ್ಯಾನಾಂ' ಎಂದು ಹೇಳಿರುವರು. ಒದ್ದೆಯಾದ ಕಟ್ಟಿಗೆಗೆ ಅಗ್ನಿಸಂಯೋಗವಾದ ಕೂಡಲೇ ಅಲ್ಲಿರುವ ಜಲಗಳು ಧೂಮರೂಪದಿಂದ ಹೊರಗೆ ಬರುವುದರಿಂದ ದಾಹ್ಯಗಳಾಗುವುದಿಲ್ಲವೆಂದು ಸಿದ್ಧವಾಯಿತು. (7) 'ಆಪೋ ವಾ ಅಧ್ನ್ಯಾಯಾಃ ಶಿಶ್ನಾತ್ಪ್ರಸೃಜ್ಯಂತೇ' ಎಂಬ ಶ್ರುತಿಯನ್ನು ಮೂಲೀಕರಿಸಿ 'ರೇತೋ ರೂಪೇಣ ಅಜರಾಣಾಂ' ಎಂದು ಹೇಳಿರುವರು. ಕುಡಿದ ನೀರು ರೇತೋರೂಪದಿಂದ ಸೃಷ್ಟವಾಗುತ್ತದೆ. ವೃಥಾ ಜೀರ್ಣವಾಗುವದಿಲ್ಲ, ನಷ್ಟವಾಗುವುದಿಲ್ಲ, ಆದಕಾರಣ ಅಜರತ್ವವು. (8) 'ಆಪೋ ವಾ ವ ಧೇನವಃ ತಾ ಹೀದಂ ಸರ್ವಂ ಧಿನ್ವಂತಿ' ಎಂಬ ವಾಕ್ಯವನ್ನನುಸರಿಸಿ 'ಧೇನೂನಾಂ' ಎನ್ನುವುದಕ್ಕೆ 'ಜಗತ್ಪೋಷಕಾಣಾಂ' ಎಂದು ಹೇಳಿರುವರು. (9) 'ತಾಃ ನದೇನ' ಎನ್ನುವುದರಿಂದ ಮೂಲಕಾರರು ತಾನು ಮಾಡಿದ ವ್ಯಾಖ್ಯಾನವನ್ನುಪಪಾದಿಸಿರುವರು. 'ತಾ ನದೇನ ವಿಹರತಿ' ಎಂಬ ಎರಡು ಖಂಡಗಳಲ್ಲಿ ಒಂದು ಪ್ರದೇಶದಲ್ಲಿ 'ಪುರುಷೋ ವೈ ನದಃ' ಎಂದೂ ಮತ್ತೊಂದು ಪ್ರದೇಶದಲ್ಲಿ 'ಪ್ರಾಣೋ ನದಃ' ಎಂದೂ ಶ್ರುತವಾದುದರಿಂದ ವ್ಯಾಖ್ಯಾನಾನುಸಾರಿವಾಗಿಯೇ ಪದಾರ್ಥವನ್ನು ಹೇಳಿ ಅದನ್ನುಪಪಾದಿಸಿದ್ದುದರಿಂದ ಹೇಳಿದ್ದು ಯುಕ್ತವು. (10) 'ಗೌರ್ನ ಹಂತವ್ಯಾ' ಎಂಬ ಶ್ರುತ್ಯನುಸಾರವಾಗಿ 'ಹಂತುಮಯೋಗ್ಯಾನಾಂ' ಎಂದು ಹೇಳಿರುವರು. (11) 'ಭಕ್ತ್ಯಾ ಸೇಚಕಾನಾಂ' ಎನ್ನುವದರಿಂದ ವೇದವಾಕ್ಯಗಳಿಂದ ಭಗವಂತನ ಮಹಿಮೆಯನ್ನು ಹೇಳಿದಾಗ ಸಜ್ಜನರಿಗೆ ಅದರಲ್ಲಿ ಭಕ್ತಿರಸವು ಆವಿರ್ಭಾವವಾಗಿ ಭಗವಂತನ ಪಾದಾರವಿಂದಗಳಲ್ಲಿಯೇ ಆಸಕ್ತರಾಗುತ್ತಾರೆ. (12) 'ಅಧ್ನ್ಯಾಃ ಅಹಂತವ್ಯಾಃ ಭವಂತಿ' ಎಂದು ಯಾಸ್ಕನೂ ಹೇಳಿರವನು. (13) 'ಇಷುಧ್ಯಸಿ' ಭವದೀಯಾನಾಂ 'ಭವಸಿ' ಇದೆಲ್ಲವೂ ಈಶ್ವರನನ್ನು ಕುರಿತು ಹೇಳಿದ್ದಾಗಿರುತ್ತದೆ.।। 2 ।। 57 ।।

**ಮೂಲ ।। (೧) ತಾಃ ಪ್ರಶ್ನಯಃ ಆಪೋಗಾವೋ ವಾಚೋ ವಾ । ಅಸ್ಯ ಸೂದದೋಹಸಃ ಪ್ರಾಣಸ್ಯ ವಾಯುಸ್ಥಸ್ಯ ಪರಮೇಶ್ವರಸ್ಯ ಸೋಮಂ ಶ್ರೀಣಂತಿ । (೨) ಅದ್ಭಿರ್ಹಿ ಸಂಸೃಷ್ಟೋ ಭವತಿ । ಸೋಮಃ ಪಯ ಆದಿನಾ ವಾ ಶೃತೋ ಭವತಿ । ಮಂತ್ರೈರ್ವಾ ಗೃಹ್ಯತೇ । (೩) ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾ ಇತಿ ಶ್ರುತಿಶ್ಚ । ಶೋಭನಮುದಂ ಕರ್ಮ ಜ್ಞಾನಂ ವಾ ದೋಗ್ಧೀತಿ ಸೂದದೋಹಾಃ । ಉದೇತ್ಯುಚ್ಚೋ ಭವತ್ಯನೇನ ಪುರುಷ ಇತ್ಯುದಂ ಜ್ಞಾನಾದಿ । (೪) ಮನೋ ವಾವ ಸೋಮಃ ತದ್ವಾಚಃ ಶ್ರೀಣಂತಿ ಸ್ವಾರ್ಥೈಃ । (೫) ಪ್ರಶ್ನಯೋಗತ್ವಾತ್ಪ್ರಶ್ನಯೋ ವಾಚಃ । ಪ್ರಶಂಸನ ರೂಪತ್ವಾತ್ಪ್ರಶಂಸನೀಯತ್ವಾ ದ್ವಾ । ಪ್ರಶಂಸನೀಯತ್ವಮೇವ ಅಪಾಂ ಗವಾಂ ಚ । (೬) ದೇವಾನಾಂ ಜನ್ಮನಿ ಯಜ್ಞೇ । ತತ್ರ ಹಿ ತೇಷಾಮಭಿವ್ಯಕ್ತಿಃ ಪೂರ್ವಂ ಜ್ಞಾನೇ ವಾ । ವಿಶಃ ಪ್ರಜಾಶ್ಚ ಶ್ರೀಣಂತಿ । (೭) ಮುಖ್ಯತಃ ತಾ ಏವ ಶ್ರೀಣಂತೀತಿ ಚ ಶಬ್ದವರ್ಜನಂ । (೮) ದಿವಸ್ತ್ರಿಷ್ವಾರೋಚನೇಷು । ಆದಿತ್ಯ ಚಂದ್ರ ವಿದ್ಯುತ್ಪರ್ಯಂತಂ ಸ್ಥಿತಾನಾಂ ದೇವಾನಾಂ ಜನ್ಮನಿ ಯಜ್ಞೇ । (೯)**

**ಯಜ್ಞೋ ವೈ ದೇವಜನ್ಮ । ತತ್ರ ಹಿ ದೇವಾಃ ಪ್ರಾದುರ್ಭವಂತಿ । ಆಸೂರ್ಯಾಚಂದ್ರಮಸಾವಾವಿದ್ಯುತಂ ತೇ ವೈ ಲೋಕಾನಧಿಶ್ರಿತಾಃ । ಇತ್ಯಾದಿ ಶ್ರುತೇಃ ॥ (೧೦) ದ್ಯೌರ್ವಾ ವ ವಿದ್ಯುತ್ತತ್ಪತಿಂ ವಾಯುಮುಪಗಮ್ಯ ತೇನೈವ ಪರಮುಪಗಚ್ಛತಿ । ಸೈಷಾ ಬ್ರಹ್ಮಲೋಕೇ ವಿರಾಜತೇ ॥ ಇತ್ಯಾದಿ ಶ್ರುತೇರ್ದ್ಯೌ ರೇವ ವಿದ್ಯುತ್ ॥ ೫೮ ॥**

**ಅರ್ಥ ॥** (1) 'ತಾಃ ಪ್ರಶ್ನಯಃ ' ಅಂದರೆ, ಜಲಗಳು ಗೋವುಗಳು ವಚನಗಳಾಗಲೀ 'ಅಸ್ಯ ಸೂದದೋಹಸಃ' ಅಂದರೆ ಮುಖ್ಯಪ್ರಾಣನ ಅಂದರೆ ವಾಯುವಿನಲ್ಲಿರತಕ್ಕ ಪರಮೇಶ್ವರನಿಗೆ ಪಾನಮಾಡುವುದಕ್ಕಾಗಿ, ಸೋಮಂ ಶ್ರೀಣಂತಿ=ಸೋಮರಸವನ್ನು ಸ್ವೀಕರಿಸುತ್ತಾರೆ. (2) (ಅಂದರೆ 'ಶ್ರೀಣಂತಿ' ಎನ್ನುವುದನ್ನೇ ಉಪಪಾದಿಸುತ್ತಾರೆ.) ಸೋಮರಸವು ಜಲಗಳಿಂದ ಸಂಸೃಷ್ಟ (ಮಿಶ್ರ)ವಾಗುತ್ತದೆ. ಹಾಲು ಮೊದಲಾದವುಗಳಿಂದ ಮಿಶ್ರೀಕೃತವಾಗುತ್ತದೆ. ಮಂತ್ರಗಳಿಂದಾಗಲೀ ಸ್ವೀಕರಿಸಲ್ಪಡುತ್ತದೆ. (3) ಆಮೇಲೆ ಸೂದದೋಹ ಶಬ್ದಾರ್ಥವು (ನಿರೂಪಿಸಲ್ಪಡುತ್ತದೆ.) ಮುಖ್ಯಪ್ರಾಣನೇ 'ಸೂದದೋಹಾಃ' ಎನ್ನಿಸುತ್ತಾನೆ. ಎಂಬ ಶ್ರುತಿಯಿಂದಲೂ, (ಶೋಭನಂ ಚ ತತ್ ಉದಂ ಚ ಸೂದಂ ಸೂದಂ ದೋಗ್ಧೀತಿ' ಎನ್ನುವ ವ್ಯುತ್ಪತ್ತಿಯಿಂದ) ಶೋಭನವಾದ ಕರ್ಮವನ್ನು ಜ್ಞಾನವನ್ನಾಗಲೀ, ಪೂರ್ಣೀಕರಿಸುತ್ತಾನೆ. ಆದುದರಿಂದ 'ಸೂದದೋಹಾಃ' ಎನ್ನಿಸುತ್ತಾನೆ. (ಉದೇತಿ ಉದಂ ಎನ್ನುವ ವ್ಯುತ್ಪತ್ತಿಯಿಂದ) ಈ ಜ್ಞಾನಾದಿಗಳಿಂದ ಪುರುಷನು ಉಚ್ಚನಾಗುತ್ತಾನೆ. ಆದುದರಿಂದ ಜ್ಞಾನಕರ್ಮಗಳು 'ಉದಂ' ಎನ್ನಿಸುತ್ತವೆ. (4) ಮನಸ್ಸೂ ಸೋಮವೆನ್ನಿಸುತ್ತದೆ. ಅದನ್ನು ವಚನಗಳು ಸ್ವಾರ್ಥಗಳಿಂದ ಸಂಯೋಜಿಸುತ್ತವೆ. (5) ಪ್ರಶ್ನೆಗಳಿಗೆ ಯೋಗ್ಯವಾದ ಅರ್ಥವುಳ್ಳದ್ದಾದುದರಿಂದ 'ಪ್ರಶ್ನಯಃ' ಅಂದರೆ ವಚನಗಳು. ಪ್ರಶಂಸನ ಸ್ವರೂಪತ್ವವಿದ್ದುದರಿಂದಾಗಲೀ ಪ್ರಶಂಸನೀಯತ್ವ ವಿದ್ದುದರಿಂದಾಗಲೀ, (ಪ್ರಶ್ನಯೋಗ್ಯಾರ್ಥತ್ವವೂ ಪ್ರಶಂಸರೂಪತ್ವವೂ)ಜಲಗಳಿಗೂ, ಗೋವು ಗಳಿಗೂ (ಕೂಡದಿರುವುದರಿಂದ) ಪ್ರಶಂಸನೀಯತ್ವವೇ ಆ ಪಕ್ಷದಲ್ಲಿ (ಪ್ರಶ್ನಿಶಬ್ದಪ್ರವೃತ್ತಿನಿಮಿತ್ತವು.) (6) ದೇವತೆಗಳ ಜನ್ಮದಲ್ಲಿ ಅಂದರೆ, ಯಜ್ಞದಲ್ಲಿ (ಯಜ್ಞವು ದೇವತೆಗಳ ಜನ್ಮವು ಹೇಗೆಂದರೆ-) ಯಜ್ಞದಲ್ಲಿಯೇ ದೇವತೆಗಳಿಗೆ ಅಭಿವ್ಯಕ್ತಿಯು. ಕೃತಯುಗಾದಿಗಳಲ್ಲಿ ಜ್ಞಾನಯಜ್ಞದಲ್ಲಾಗಲೀ 'ವಿಶಃ' ಅಂದರೆ ಪ್ರಜೆಗಳೂ ಕೂಡ, ಶ್ರೀಣಂತಿ=ಮನಸ್ಸನ್ನು ಸ್ವಾರ್ಥಗಳಿಂದ ಕೂಡಿಸುತ್ತಾರೆ. (7) (ಋತ್ವಿಕ್‌ಗಳಿಗೂ ಕೂಡ ಕರ್ತೃಸಮುಚ್ಚಾಯಕವಾದ ಚ ಶಬ್ದವು ಋಕ್ಕಿನಲ್ಲಿ 'ವಿಶಶ್ಚ' ಎಂದು ಏಕೆ ಇಲ್ಲವೆಂದರೆ) ಮುಖ್ಯವಾಗಿ ಪ್ರಜರೇ (ಅಂದರೆ, ಋತ್ವಿಜರೇ) ಮಿಶ್ರೀಕರಿಸುತ್ತಾರೆ. ಆದುದರಿಂದ ಚ ಶಬ್ದದ ಪರಿತ್ಯಾಗವು (ಋಕ್ಕಿನಲ್ಲಿ) (ಅಂದರೆ, ಋತ್ವಿಜರು ಸ್ವತಂತ್ರರಾದುದರಿಂದ ಮುಖ್ಯಕರ್ತೃಗಳು. ಪ್ರಶ್ನೆಗಳು (ವಚನಾದಿಗಳು) ಕರಣಗಳಾದುದರಿಂದ ಕರ್ತೃತ್ವವ್ಯಪದೇಶವು ಔಪಚಾರಿಕವು. ಆದಕಾರಣ ಸಮಸಮುಚ್ಚಯವಿಲ್ಲದಿರುವುದರಿಂದ'ವಿಶಶ್ಚ' ಎಂದು ಚ ಶಬ್ದವನ್ನು ಋಕ್ಕಿನಲ್ಲಿ ಕೊಡಲಿಲ್ಲ, ಆಚಾರ್ಯರು ಗೌಣ ಮುಖ್ಯಾರ್ಥಗಳನ್ನು ವಿವಕ್ಷಾಮಾಡಿಕೊಂಡು 'ಪ್ರಜಾಶ್ಚ' ಎಂದು ಚ ಶಬ್ದವನ್ನು ಪ್ರಯೋಗಿಸಿರುವರು. (8) (ಮರ್ಯಾದಾರ್ಥಕವಾದ ಆಜಯೋಗವಿರುವಾಗ 'ಪಂಚಮ್ಯಪಾಜ್ ಪರಿಬಿಃ' ಎಂಬುವ ಸೂತ್ರದಿಂದ ಪಂಚಮೀ ವಿಭಕ್ತಿಯನ್ನು ವಿಧಿಸಿರುವುದರಿಂದ 'ರೋಚನಂ ಮರ್ಯಾದೀಕೃತ್ಯ ಆರೋಚನಾತ್' ಎಂದಾಗಬೇಕಿದ್ದಿತು. 'ರೋಚನೇಸು' ಎಂದು

ಸಪ್ತಮಿಯು ಹೇಗೆ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕೋಸ್ಕರ ವ್ಯಾಖ್ಯಾನ ಮಾಡುತ್ತಾರೆ.) ಸ್ವರ್ಗದ ಮೂರು (ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆರೋಚನನಾಮಕಗಳಾದ) ಜ್ಯೋತಿಸ್ಸುಗಳಲ್ಲಿ, ಅಂದರೆ- ಆದಿತ್ಯ, ಚಂದ್ರ, ವಿದ್ಯುಲ್ಲೋಕಪರ್ಯಂತವಾಗಿ ಇರುವ ದೇವತೆಗಳ ಯಜ್ಞದಲ್ಲಿ, ಅಂದರೆ- ಈ ಆಕಾರವು ಚೆನ್ನಾಗಿ ಎಂದರ್ಥವುಳ್ಳದ್ದು. ಆಜ್ ಅಲ್ಲ. (9) (ಹೇಳಿದ ಅರ್ಥದಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ.) ಯಾಗವೇ ದೇವತೆಗಳ ಜನ್ಮವು. ಅದರಲ್ಲಿ ದೇವತೆಗಳು ಪ್ರಾದುರ್ಭವಿಸುತ್ತಾರಷ್ಟೆ! ಅವರೇ ಸೂರ್ಯಲೋಕ, ಚಂದ್ರಲೋಕ, ವಿದ್ಯುಲ್ಲೋಕಪರ್ಯಂತ ವಾಗಿರುವ ಲೋಕಗಳನ್ನು ಆಶ್ರಯಿಸಿರುತ್ತಾರೆ. ಇವು ಮೊದಲಾದ ಶ್ರುತಿಗಳಿಂದ. (10) ('ತಟಿತ್ಸೌದಾಮಿನೀ ವಿದ್ಯುತ್' ಎಂಬ ಅಭಿಧಾನದಿಂದ ತಟಿತ್ಪರ್ಯಾಯವಾದ ವಿದ್ಯುಲ್ಲೋಕವು 'ತಟಿತಂ ವರುಣಂ ಚೈವ' ಎಂದು ವರುಣಲೋಕದಿಂದ ಅವರವೆಂದು ಹೇಳಿರುತ್ತದೆ. ಚಂದ್ರಲೋಕವು 'ಪ್ರಜಾಪಂ ಸೂರ್ಯಮೇವ ಚ । ಸೋಮಂ ವೈಶ್ವಾನರಂ' ಎಂದು ವರುಣ ಲೋಕಕ್ಕಿಂತ ಮೇಲೆ ಇರುತ್ತದೆಂದು ಉಕ್ತವಾಗಿದೆ. ಆದಕಾರಣ ವಿದ್ಯುಲ್ಲೋಕವು ಚಂದ್ರಲೋಕಕ್ಕಿಂತ ಪರವೆಂದು ಹೇಳಿದ್ದು ಹೇಗೆ ಸಂಗತವಾಗುತ್ತದೆ ಎಂದರೆ) ಭಾರತಿಯೇ ವಿದ್ಯುತ್ ಎನ್ನಿಸುತ್ತಾಳೆ. ಭಾರತೀ ಪತಿಯಾದ ವಾಯುವನ್ನು ಹೊಂದಿ ಆ ವಾಯುವಿನಿಂದಲೇ ಸರ್ವೋತ್ತಮನಾದ ಶ್ರೀಹರಿಯನ್ನು ಹೊಂದುತ್ತಾನೆ. ಆ ಈ ಭಾರತಿಯು ಬ್ರಹ್ಮಲೋಕದಲ್ಲಿ ಪ್ರಕಾಶಿಸುತ್ತಾಳೆ ಎಂಬ ಶ್ರುತಿಯಿಂದ ಭಾರತಿಯೇ ವಿದ್ಯುತ್ ಎನ್ನಿಸುತ್ತಾಳೆ. ಆದಕಾರಣ ಭಾರತೀಪತಿಯಾದ ವಾಯುವಿನ ಲೋಕವೇ ವಿದ್ಯುಲ್ಲೋಕವೆನ್ನಿಸುತ್ತದೆ.

**ಮಂ ॥ ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ ಪ್ರಶ್ನಯಃ ।**
**ಜನ್ಮನ್ದೇವಾನಾಂ ವಿಶಸ್ತ್ರಿಷ್ವಾರೋಚನೇ ದಿವಃ ॥ ೩ ॥**

**ಅರ್ಥ ॥** ಪ್ರಶ್ನೆಗೆ ಯೋಗ್ಯವಾದ ಅರ್ಥವುಳ್ಳ, ಯಾ, ಪ್ರಶಂಸನ ರೂಪಗಳಾದ, ಅಥವಾ ಪ್ರಶಂಸನೀಯಗಳಾದ, ತಾಃ=ವಚನಗಳಿಂದ, ಜಲಗಳಿಂದ, ಗೋವುಗಳಿಂದ, ವಿಶಃ=ಋತ್ವಿಕ್‌ಗಳು, ಅಸ್ಯ=ವಾಗಾದಿಗಳಿಗೆ ಪತಿರೂಪನಾದ ಮುಖ್ಯಪ್ರಾಣನಿಗೂ ಪತಿಯಾದ, ಸೂದದೋಹಸಃ=ಪ್ರಾಣಸ್ಥ ನಾದ ಪರಮೇಶ್ವರನ ಪಾನಕ್ಕಾಗಿ, ದಿವಃ=ಸ್ವರ್ಗದ, ಆರೋಚನೇ='ಆ ಸಮ್ಯಕ್ ರೋಚಂತೇ' ಎಂಬ ವ್ಯುತ್ಪತ್ತಿಯಿಂದ ಆರೋಚನಗಳು ಜ್ಯೋತಿಸ್ಸುಗಳು) ಆದಿತ್ಯ, ಚಂದ್ರ, ವಿದ್ಯುಲ್ಲೋಕಗಳಲ್ಲಿ ಇರುವ, ದೇವಾನಾಂ=ದೇವತೆಗಳ, ಜನ್ಮನ್=ಕರ್ಮ ಯಜ್ಞದಲ್ಲಿ, ಸೋಮಂ=ಸೋಮವನ್ನು, ಶ್ರೀಣಂತಿ= (ವಾಕ್‌ಪಕ್ಷದಲ್ಲಿ) ಮಂತ್ರಗಳಿಂದ ಸ್ವೀಕರಿಸುತ್ತಾರೆ. (ಜಲಪಕ್ಷದಲ್ಲಿ) ಜಲಗಳಿಂದ ಸೋಮವನ್ನು ಮಿಶ್ರೀಕರಿಸುತ್ತಾರೆ. (ಗೋಪಕ್ಷದಲ್ಲಿ) ಗೋವಿನ ಹಾಲಿನಿಂದ ಮಿಶ್ರಣಮಾಡುತ್ತಾರೆ. (ಅಧ್ಯಾತ್ಮ ವಿಷಯದಲ್ಲಿ ಆದರೂ) ಪ್ರಶ್ನಯಃ... ಜನ್ಮನ್=ಜ್ಞಾನಯಜ್ಞದಲ್ಲಿ, ಸೋಮಂ= ಮನಸ್ಸನ್ನು, ಶ್ರೀಣಂತಿ=ಸ್ವಾರ್ಥಗಳಿಂದ ಕೂಡಿಸುತ್ತಾರೆ. ಅಂದರೆ, ಮನಸ್ಸಿನಿಂದ ವೇದವಾಕ್ಯದಲ್ಲಿ ಹೇಳಲ್ಪಟ್ಟ ಭಗವದ್ಗುಣಗಳ ಜ್ಞಾನವುಳ್ಳವನಿಗೆ ಯಾವ ಭಕ್ತಿರಸವು ಆವಿರ್ಭೂತವಾಗುತ್ತದೋ, ಅದು ಬಾಹ್ಯಸೋಮರಸದಿಂದಲೂ ಭಗವಂತನಿಗೆ ಅತಿಪ್ರಿಯವಾದುದು. ॥ 3 ॥ 58 ॥

**ಮೂಲ ॥ (೧) ಅರ್ಚತ । ಅರ್ಚನಂ ಯಜ್ಞಾದಿ । ಪ್ರಾರ್ಚನಂ ಜ್ಞಾನ ಧ್ಯಾನಾದಿ । (೨) ಶ್ರೇಯಾನ್ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂ ತಪೇತಿ ಭಗವದ್ವಚನಾತ್ ।**

(೩) ಪ್ರಿಯ ಯಜ್ಞಾ ಅರ್ಚತ । ಪ್ರಿಯ ಜ್ಞಾನಾಃ ಪ್ರಾರ್ಚತ । (೪) ಪುತ್ರಕಾಃ ಅಲ್ಪಜ್ಞಾನಾ ಅಪ್ಯರ್ಚತ । ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ । ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ನಿತಿ ಚ । (೫) ಉತಶಬ್ದಾತ್ । (೬) ಜ್ಞಾನಿನಾಮಪ್ಯರ್ಚನಂ ಯುಕ್ತಂ । ಸ್ವಾಶ್ರಮಾನುಸಾರೇಣೇತಿ । (೭) ಅಥಾತೇ ವಿಷ್ಣೋ ವಿದುಷಾ ಚಿದರ್ಥ್ಯಸ್ತ್ಯೋಮೋ ಯಜ್ಞಶ್ಚರಾಧ್ಯೋ ಹವಿಷ್ಮತೇತಿ ಶ್ರುತೇಃ । ಕಿಂ ತದರ್ಚನೀಯಂ ಧೃಷ್ಣುದ್ಧೃಷ್ಟಂ ಪರಂಬ್ರಹ್ಮ ವಾಸುದೇವಾಖ್ಯಂ । ಪುರಂ ದೇಹಂ ನಾರ್ಚತ । (೮) ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ ವಿಧೀಯತೇ ಸಾಧು ಮಿಥಃ ಸುಮಧ್ಯಮೇ । ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನ ದೇಹಮಾನಿನೇ ॥ ಇತಿ ಭಾಗವತೇ ॥ (೯) ಸ್ವದೇಹಮಾನಿ ಹರಯೇ ಪ್ರಣಮೇತ್ಕೇವಲಾಯ ವಾ । ನ ದೇಹಾಯ ನ ತನ್ಮಾನಪರಾಯ ಚ ಕಥಂಚನ ॥ ಇತಿ ವ್ಯಾಸಸ್ಮೃತೌ ॥ ಪುನರರ್ಚತೇತಿ ತಾತ್ಪರ್ಯಾರ್ಥೇ ॥ ೫೯ ॥

**ಅರ್ಥ** ॥ (1) ಅರ್ಚನವೆಂದರೆ, ಯಜ್ಞ ಮೊದಲಾದುದು. ಪ್ರಾರ್ಚನವೆಂದರೆ, ಜ್ಞಾನ ಧ್ಯಾನ ಮೊದಲಾದುದು. (2) (ಯಜ್ಞಾದಿಗಳಿಂದ ಜ್ಞಾನಾದಿಗಳಿಗೆ ಉತ್ತಮತ್ವ ಹೇಗೆಂದರೆ) ಎಲೋ ಅರ್ಜುನನೇ ದ್ರವ್ಯಮಯವಾದ ಯಾಗಕ್ಕಿಂತ ಜ್ಞಾನಯಜ್ಞವು ಶ್ರೇಷ್ಠವು. ಎಂಬ ಭಗವದ್ವಚನದಿಂದ. (3) ಪ್ರಿಯವಾದ ಯಾಗವುಳ್ಳವರೇ ಯಜ್ಞಾದಿಕರ್ಮಗಳನ್ನು ಮಾಡಿರಿ. ಪ್ರಿಯವಾದ ಜ್ಞಾನವುಳ್ಳವರೇ ತಿಳಿಯಿರಿ. ಧ್ಯಾನ ಮೊದಲಾದುವುಗಳನ್ನು ಮಾಡಿರಿ. (4) ಪುತ್ರಕಾಃ ಅಂದರೆ, ಅಲ್ಪಜ್ಞಾನವುಳ್ಳವ ರಾದಾಗ್ಯೂ ಯಜ್ಞಾದಿಗಳನ್ನು ಮಾಡಿರಿ. ಭಗವಂತನ ಸ್ವರೂಪವನ್ನು ತಿಳಿಯದಿದ್ದು ಕರ್ಮದಲ್ಲಿಯೇ ಆಸಕ್ತರಾದವರಿಗೆ ಬುದ್ಧಿ ಬೇದ (ವಿಪರ್ಯಾಸ)ವನ್ನು ಹುಟ್ಟಿಸಬಾರದು. (ಅಂದರೆ, ಕರ್ಮಕ್ಕೆ ನಾಶವಿರುವ ಫಲವಿದ್ದುದರಿಂದ ನೀವು ಕರ್ಮವನ್ನು ಮಾಡಬಾರದು, ಎಂದು ಕರ್ಮದಲ್ಲಿ ಅನಾದರವನ್ನು ಹುಟ್ಟಿಸಬಾರದು. ಜ್ಞಾನಿಯು ಭಗವಂತನಲ್ಲಿ ಮನಸ್ಸನ್ನಿಟ್ಟು ಆತನ ಪೂಜಾರೂಪವಾಗಿ ಕರ್ಮಗಳನ್ನೂ ಚೆನ್ನಾಗಿ ಮಾಡುತ್ತಾ ಸರ್ವಕರ್ಮಗಳನ್ನು ಅಜ್ಞರನ್ನು ಸೇವಿಸಿಕೊಡಬೇಕು. ಅಂದರೆ, ತಾನು ಮಾಡತಕ್ಕ ಕರ್ಮಗಳನ್ನು ನೋಡಿ ಅವರೂ ಕೂಡ ಹೇಗೆ ಕರ್ಮಗಳನ್ನು ಮಾಡಿಯಾರೋ ಹಾಗೆ ಪ್ರವರ್ತಿಸಬೇಕು. (5) ಸಮುಚ್ಚಯಾರ್ಥಕವಾದ 'ಉತ' ಶಬ್ದವಿದ್ದಪ್ರಯುಕ್ತ, (ಏಕವಾಕ್ಯತ್ವವಿಲ್ಲ 'ಉತ' ಎನ್ನುವುದಕ್ಕೆ 'ಅಪಿ' ಎನ್ನುವುದರ ಅರ್ಥವಿದ್ದುದರಿಂದಲೂ 'ಪುತ್ರಕಾ ಅಪಿ' ಎಂದು 'ಅಪಿ' ಶಬ್ದವನ್ನು ಅಧ್ಯಾಹಾರ ಮಾಡಬೇಕಾಗಿಲ್ಲ.) (6) (ಪ್ರಿಯ ಯಜ್ಞವುಳ್ಳವರೇ ಅಲ್ಪಜ್ಞಾನಿಗಳು. ಅವರಿಗೆ ಜ್ಞಾನಿಗಳಿಂದ ಸಮುಚ್ಚಯವು ಕೂಡಲಾರದು. ಏಕೆಂದರೆ- ಪ್ರಾರ್ಚನಾಧಿಕಾರಿಗಳಾದ ಜ್ಞಾನಿಗಳಿಗೆ ಅರ್ಚನವು ಕೂಡಲಾರದಷ್ಟೆ! ಸಮಾನವಿಷಯದಲ್ಲಿಯೇ ಸಮುಚ್ಚಯವು ಎಂದರೆ.) ಜ್ಞಾನಿಗಳಿಗೂ ಕೂಡ ಅರ್ಚನ (ಯಜ್ಞಾದಿ)ವು ಪ್ರಮಿತವಾಗಿದೆ. ತಮ್ಮ ಆಶ್ರಮಾನುಸಾರವಾಗಿ (ಕರ್ಮ ಮಾಡಬಾರದು ಎನ್ನುವುದಕ್ಕೆ ಸ್ವಕೀಯವಲ್ಲದಿರುವ ಕರ್ಮ ಮಾಡಬಾರದು ಎಂದರ್ಥವು.

ಆದಕಾರಣ ಸಮುಚ್ಚಯವು ಯುಕ್ತವೇ ಆಗುತ್ತದೆ. (7) (ಪ್ರಮಿತ ಎನ್ನುವುದನ್ನುಪಪಾದಿಸುತ್ತಾರೆ.) ಅಥ=ಅನಂತರದಲ್ಲಿ, ವಿಷ್ಣೋ=ಎಲೋ ಶ್ರೀಹರಿಯೇ, ತೇ=ನಿನ್ನ, ಸ್ತೋಮಃ=ಸ್ತುತಿಯು, ಯಜ್ಞಶ್ಚ= ಕರ್ಮಯಜ್ಞವೂ ಕೂಡ, ಹವಿಷ್ಮತಾ=ಯಜ್ಞಾದಿ ಸಾಧನವುಳ್ಳ, ವಿದುಷಾ ಚಿತ್=ಜ್ಞಾನಿಯಿಂದಲೂ, ಅರ್ಧ್ಯಃ=ಅರ್ಥ್ಯವು, ರಾಧ್ಯಶ್ಚ=ಸಾಧ್ಯವೂ ಆಗಿಯದೆ. ಇತಿ ಶ್ರುತೇಃ=ಎಂಬ ಶ್ರುತಿಯಿಂದ, (8) ಪೂಜಿಸಲಿಕ್ಕೆ ಯೋಗ್ಯವಾದುದು ಯಾವುದು. ಧೃಷ್ಣು=ಧೈರ್ಯಯುಕ್ತನಾದ ವಾಸುದೇವಾಖ್ಯ ಪರಬ್ರಹ್ಮನು, 'ಪುರಂ' ಅಂದರೆ, ಶರೀರವನ್ನು, ಪೂಜಿಸಬೇಡಿರಿ. (ಶ್ರುತಿಯಲ್ಲಿ ಪುರಶಬ್ದದಿಂದ ಶರೀರ ಮಾತ್ರ ಹೇಳಲ್ಪಡುವುದು ಅಲ್ಲ, ಮತ್ತೆ ಹರಿಸಾಹಿತ್ಯವಿಲ್ಲದಿರುವ ಶರೀರಾಭಿಮಾನಿಯೂ ಹೇಳಲ್ಪಡುತ್ತಾನೆ. ಶ್ರುತಿಯಲ್ಲಿ 'ಧೃಷ್ಣು' ಶಬ್ದದಿಂದ ನಿರ್ಭಯನೆಂದು ಪರಬ್ರಹ್ಮನನ್ನೇ ಪೂಜಿಸಬೇಕು. ಭಯದಿಂದೊಡಗೂಡಿರುವುದರಿಂದ ದೇಹಾದಿಗಳನ್ನು ಪೂಜಿಸಬಾರದು, ಎಂಬ ಯುಕ್ತಿಯು ಹೇಳಲ್ಪಟ್ಟಿತು.) (9) (ಆಗಮಸಮ್ಮತಿಯನ್ನು ಹೇಳುತ್ತಾರೆ.) ಎಲೋ ಸುಂದರಿಯೇ! ಪ್ರಾಜ್ಞರಿಂದ ಎದ್ದು ನಿಂತುಕೊಳ್ಳುವುದು ಪಾದಸೇವಾ ನಮಸ್ಕಾರಾದಿಗಳು ಚೆನ್ನಾಗಿ ಪರಸ್ಪರವಾಗಿ ವಿಧಿಸಲ್ಪಡುತ್ತವೆ. ಶರೀರದಲ್ಲಿ ನಿಯಾಮಕನಾಗಿರುವ ಸರ್ವೋತ್ತಮನಾದ, ಪುರುಷಶಬ್ದವಾಚ್ಯನಾದ ಶ್ರೀಪರಮಾತ್ಮನಿ ಗೋಸ್ಕರ ಮನಸ್ಸಿನಿಂದ ನಮಸ್ಕಾರಾದಿಗಳು ಮಾಡಲ್ಪಡುತ್ತವೆ. ತನ್ನದೇ ದೇಹವೆಂದಭಿಮಾನವಿರುವ ಜೀವನಿಗೆ ಅಲ್ಲ, ಎಂದು ಭಾಗವತದಲ್ಲಿದೆ. (10) ದೇಹಾಭಿಮಾನಿಯಿಂದೊಡಗೂಡಿದ ಶ್ರೀಹರಿ ಗೋಸ್ಕರ ಕೇವಲ ಬ್ರಹ್ಮನಿಗೋಸ್ಕರವಾಗಲೀ ನಮಸ್ಕರಿಸಬೇಕು. ದೇಹಕ್ಕಾಗಲೀ ಹರಿಸಾಹಿತ್ಯ ವಿಲ್ಲದಿರುವ ಶರೀರಾಭಿಮಾನಿಗೋಸ್ಕರವಾಗಲೀ ಯಾವ ಪ್ರಕಾರದಿಂದಲೂ ನಮಸ್ಕರಿಸಕೂಡದು. ಎಂದು ವ್ಯಾಸಸ್ಮೃತಿಯಲ್ಲಿದೆ. ಪುನಃ 'ಅರ್ಚತ' ಎನ್ನುವ ಪದವು ಈ ಅರ್ಥದಲ್ಲಿ ಮುಖ್ಯ ತಾತ್ಪರ್ಯವಿದೆ, ಎಂದು ತಿಳಿಸುವುದಕ್ಕಾಗಿ ಆಗಿರುತ್ತದೆ.

**ಮಂ ॥ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥ ೧ ॥**

**ಅರ್ಥ ॥** ಪ್ರಿಯಮೇಧಾಸಃ=ಪ್ರಿಯವಾದ ಕರ್ಮಯಜ್ಞವುಳ್ಳವರೇ, (ನೀವು) ಧೃಷ್ಣು= ನಿರ್ಭಯನಾದ ವಾಸುದೇವಾಖ್ಯ ಪರಬ್ರಹ್ಮನನ್ನು, ಅಂದರೆ ಶ್ರೀಹರಿಯ ಪ್ರೀತಿಗಾಗಿ, ಅರ್ಚತ= ಯಜ್ಞಾದಿ ಕರ್ಮಗಳನ್ನು ಮಾಡಿರಿ. ಪ್ರಿಯಮೇಧಾಸಃ=ಪ್ರಿಯಜ್ಞಾನವುಳ್ಳವರೇ, ಪ್ರಾರ್ಚತ=ತಿಳಿಯಿರಿ. ಅರ್ಚತ=ಕರ್ಮಮಾಡಿರಿ. ಪ್ರಿಯಯಜ್ಞವುಳ್ಳವರೇ (ನೀವು) ಪುತ್ರಕಾ ಉತ=ಅಲ್ಪಜ್ಞಾನವುಳ್ಳವ ರಾದಾಗ್ಯೂ, ಅರ್ಚಂತು=ಯಜ್ಞಾದಿಕರ್ಮಗಳನ್ನು ಮಾಡಿರಿ. ಪ್ರಿಯಜ್ಞಾನವುಳ್ಳವರೇ ನೀವೂ ಕೂಡ ತಿಳಿಯಿರಿ. ಪುರಂ=ಶರೀರವನ್ನು ಹರಿಸಾಹಿತ್ಯವಿಲ್ಲದಿರುವ ಶರೀರಾಭಿಮಾನಿಯನ್ನು, ನಾರ್ಚತ= ಪೂಜಿಸಬೇಡಿರಿ. ಮತ್ತೆ ಶರೀರದಲ್ಲಿ ನಿಯಾಮಕನಾಗಿರುವ ಶ್ರೀಹರಿಯನ್ನು ಪೂಜಿಸಿರಿ. ॥ 1 ॥ 59 ॥

**ಮೂಲ ॥ (೧) ಗರ್ಗರ ಗೋಧಾ ಪಿಂಗಾದೀನಾಂ ಘೋಷಾ ಅಪಿ ನಾದಮಾತ್ರ ವ್ಯಂಜಕತ್ವೇನ ಭಗದ್ವಾಚಕಾ ಏವೇತ್ಯಾಹ । ಅವಸ್ವರಾತಿ ಗರ್ಗರ ಇತ್ಯಾದಿನಾ । (೨) ಏತತ್ಸಮಸ್ತಮಿಂದ್ರಾಯೈವೇತ್ಯರ್ಥಃ । ಬ್ರಹ್ಮವೇದೋ ವಿಶೇಷತ ಇಂದ್ರಾಯೈವೋದ್ಯತಃ । ಗರ್ಗರ ಇತಿ ಪಾದಭೂಷಣ ಮಹಾಮತ್ರಕ ದಧಿ ಪಾತ್ರ ಹಸ್ತಿಹಸ್ತಾನಾಂ ನಾಮ । ಪಿಂಗಾ ಚಕೋರೀ । (೩) ಅವ ಪರೀತ್ಯಲ್ಪಾಧಿ**

**ಕ್ಯಾದಿ ವಿಶೇಷೋಽಪಿ ತದ್ವಾಚಕ ಏವೇತಿ ಜ್ಞಾಪನಾಯ । (೪) ಚನಿಷ್ಕದದಿತ್ಯನುಕರಣ ಶಬ್ದಃ । (೫) ಸನಿಷ್ವಣದಿತ್ಯತಿಶಯಾರ್ಥೇ । (೬) ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾದಿತಿ ಶ್ರುತಿಃ । (೭) ದಧ್ನೋ ಮಥನ ಶಬ್ದಶ್ಚಾಪ್ಯಂತರ್ನಾದ ಸ್ವರೂಪತಃ । ಭೀಷಕತ್ವಂ ಹರೇರ್ಬ್ರೂಯಾದಂತರ್ನಾದೋ ಹಿ ಭೀಷಣೇ । ಗಜ ಬೃಂಹಿತಮಪ್ಯೇವಂ ಧಿಕ್ಕಾರ ಸಹಿತಂ ವದೇತ್ । ಸ್ವರಿತೇನ ಸಮಾಯೋಗಾದ್ಧಿಕ್ಕೃತೌ ಸ್ವರಿತೋ ಯತಃ । ಮಹಾಮತ್ರಂ ಜಲಾದ್ಯೈಶ್ಚ ಯುಕ್ತಮೇತಾದೃಶಂ ವದೇತ್ । ಪಾದಭೂಷಾ ಚ ಧಿಕ್ಕಾರಂ ತತ್ಕೃತಂ ಸ್ವರಿತಂ ವದೇತ್ । ಅದ್ಭುತತ್ವಂ ಹರೇರ್ವಕ್ತಿ ಪಿಂಗಾಕಂಠಗ ಶಬ್ದವತ್ । ತಾಮೇವಾದ್ಭುತತಾಂ ವಕ್ತಿ ಗೃಹ ಗೋಧಾಪರಾಪಿ ಚೇತಿ ಶಬ್ದತತ್ವೇ ॥ ೬೦ ॥**

**ಅರ್ಥ** ॥ (1) ಗರ್ಗರ (ಗಗ್ಗರಾದಿಯು), ಗೋಧಾ (ಹಲ್ಲಿ), ಪಿಂಗಾ (ಚಕೋರ ಹಕ್ಕಿ)ದಿಗಳ ಧ್ವನಿಗಳೂ ಕೂಡ ಅಕಾರಾದಿ ವರ್ಣಗಳನ್ನು ವ್ಯಕ್ತೀಕರಿಸದಿದ್ದರೂ ಮಂತ್ರಶಾಸ್ತ್ರಪ್ರಸಿದ್ಧವಾದನಾದ ಎಂಬುವ ವರ್ಣವನ್ನು ವ್ಯಕ್ತೀಕರಿಸುವುದರಿಂದ ಭಗವಂತನನ್ನು ಪ್ರತಿಪಾದಿಸುವವುಗಳು ಆಗಿಯೇ ಆಗುತ್ತವೆ ಎನ್ನುತ್ತಾರೆ. 'ಅವಸ್ವರಾತಿ ಗರ್ಗರ' ಇತ್ಯಾದಿಗಳಿಂದ. (2) ( ಈ ತಾತ್ಪರ್ಯವನ್ನು ತೋರಿಸುತ್ತಾರೆ) ಇವೆಲ್ಲವೂ ಇಂದ್ರನಿಗೇನೇ ಸರಿ. ಅಂದರೆ, ಇಂದ್ರ (ಪರಮೈಶ್ವರ್ಯ ಉಳ್ಳ ಪರಬ್ರಹ್ಮ)ನನ್ನೇ ಪ್ರತಿಪಾದಿಸುತ್ತದೆ. 'ಬ್ರಹ್ಮ' ಅಂದರೆ, ಪರಬ್ರಹ್ಮನನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ. ಗರ್ಗರ ಎನ್ನುವುದು ಪಾದಭೂಷಣ, ದೊಡ್ಡಪಾತ್ರ, ಮೊಸರುವಿನ ಪಾತ್ರ, ಆನೆಯ ಶುಂಡಾದಂಡ ಇವುಗಳಿಗೆ ಹೆಸರು. ಪಿಂಗಾ ಎಂದರೆ ಚಕೋರಿಯು. (3) ('ಅವ' ಎನ್ನುವುದು ಅಪಕೃಷ್ಟಾರ್ಥವುಳ್ಳ ಉಪಸರ್ಗವು. 'ಪರಿ' ಎನ್ನುವುದು ಉತ್ಕೃಷ್ಟಾರ್ಥವುಳ್ಳ ಉಪಸರ್ಗವು, ಈ ವೈಚಿತ್ರ್ಯವು ಏತಕ್ಕೆಂದರೆ-) 'ಅವ' 'ಪರಿ' ಎಂಬ ಉಪಸರ್ಗಗಳಿಂದ ಅಲ್ಪ ಆಧಿಕ್ಯ ಮೊದಲಾದ ವಿಶೇಷವೂ ಕೂಡ ಭಗವಂತನನ್ನೇ ಪ್ರತಿಪಾದಿಸುತ್ತದೆ. ಎಂದು ತಿಳಿಸುವುದಕ್ಕಾಗಿ. (4) 'ಚನಿಷ್ಕದತ್' ಎನ್ನುವುದು ಅನುಕರಣ ಶಬ್ದವು. (ಹಾಗಾದರೆ ಈ ಶಬ್ದವು ಧಾತುವಿನಿಂದ ಹುಟ್ಟಿದ್ದಲ್ಲವಾದ ಪ್ರಯುಕ್ತ ಅಸಾಧುವಾಗಿದೆ. ಆದಕಾರಣ ಚಕೋರಿಹಕ್ಕಿಯು ಪ್ರಯೋಗಿಸಿದ ಶಬ್ದವನ್ನು ಅನುಸರಿಸುವುದು ಶ್ರುತಿಯಲ್ಲಿ ಹೇಗೆ ಆಗುವುದು? ಅಸಾಧುಶಬ್ದವನ್ನು ಅನುಕರಣಮಾಡುವುದೂ ಅಸಾಧುವೇ ಎಂದರೆ, ಅಸಾಧುಶಬ್ದವನ್ನು ಅನುಕರಣ ಮಾಡುವುದು ಸಾಧುವೆಂದೇ ಇಷ್ಟವಾಗಿದೆ. (5) 'ಸನಿಷ್ವಣತ್' ಎನ್ನುವುದು ಅತಿಶಯಾರ್ಥದಲ್ಲಿದೆ. (6) (ಇದೇ ಅರ್ಥದಲ್ಲಿ ಸಾಮಾನ್ಯ ವಿಶೇಷ ವಚನಗಳನ್ನು ಹೇಳುತ್ತಾರೆ.) ಆ ಈ ಎಲ್ಲಾ ಋಕ್ಕುಗಳೂ, ಸರ್ವ ವೇದಗಳೂ, ಎಲ್ಲಾ ಧ್ವನಿಗಳೂ ಒಬ್ಬ ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆ. ಪ್ರಾಣಶಬ್ದವಾಚ್ಯನಾದ ಶ್ರೀಹರಿಯ ವಿಷಯದಲ್ಲಿಯೇ ಇರುತ್ತವೆ ಎಂದು ಶ್ರುತಿಯು. (7) ಮೊಸರನ್ನು ಕಡೆಯುವ ಶಬ್ದವೂ ಕೂಡ ಅಂತರ್ನಾದ (ನಾದದ್ದೇ ವಿಶೇಷವು.) ಸ್ವರೂಪದಿಂದ ಅಂದರೆ, ಅಂತರ್ನಾದವೆಂಬ ವರ್ಣವ್ಯಂಜಕವಾಗಿ ಶ್ರೀಹರಿಗೆ ಭೀಷಕತ್ವವನ್ನು ಹೇಳುವುದು. (ಅಂದರೆ, ಮೊಸರನ್ನು ಕಡೆಯುವಾಗ ಉಂಟಾಗತಕ್ಕ ಶಬ್ದವು ಶ್ರೀಹರಿಯು ದುಷ್ಟರನ್ನು ಹೆದರಿಸುವವನು

ಎಂದು ಹೇಳುವುದು.) ಅಂತರ್ನಾದವು ಭೀಷಣ (ಹೆದರಿಸುವಿಕೆ) ಅರ್ಥದಲ್ಲಿದೆ. ಆನೆಯ ಧ್ವನಿಯೂ ಕೂಡ ಸ್ವರಿತ ಸ್ವರದಿಂದ ಕೂಡಿದ ಪ್ರಯುಕ್ತ ಹೀಗೆಯೇ, ಅಂದರೆ, ಅಂತರ್ನಾದ ಎಂಬುವ ವರ್ಣಕ್ಕೆ ವ್ಯಂಜಕವಾಗಿ ಧಿಕ್ಕಾರದಿಂದೊಡಗೂಡಿದ್ದ ಭೀಷಕತ್ವವನ್ನು ಹೇಳುವುದು. ಯಾವ ಕಾರಣದಿಂದ ಸ್ವರಿತವು ಧಿಕ್ಕಾರರೂಪ ಅರ್ಥದಲ್ಲಿದೆಯೋ, ನೀರು ಮೊದಲಾದವುಗಳಿಂದ ಕೂಡಿದ್ದ ದೊಡ್ಡ ಪಾತ್ರವೂ ಕೂಡ ಇಂತಹ ಅರ್ಥವನ್ನೇ ಅಂದರೆ, ಅಂತರ್ನಾದ ಎಂಬ ವರ್ಣಕ್ಕೆ ವ್ಯಂಜಕವೂ, ಸ್ವರಿತ ಸ್ವರದಿಂದೊಡಗೂಡಿದ್ದೂ ಆಗಿ ಧಿಕ್ಕಾರ ಸಹಿತವಾದ ಭೀಷಕತ್ವವನ್ನು ಶ್ರೀಹರಿಗೆ ಹೇಳುವುದು. ಕಾಲಿನ ಆಭರಣವೂ ಕೂಡ ಸ್ವರಿತ ಯುಕ್ತವಾಗಿ ಹಿಂದಿನ ರೀತಿಯಾಗಿಯೇ ಶ್ರೀಹರಿಯಿಂದ ಮಾಡಲ್ಪಟ್ಟ ಧಿಕ್ಕಾರವನ್ನು ಹೇಳುವುದು. ಚಕೋರಿಯು ಕಂಠದಲ್ಲಿದ್ದ ಶಬ್ದದಂತೆಯೇ ಶ್ರೀಹರಿಗೆ ಅತ್ಯಾಶ್ಚರ್ಯತನವನ್ನೂ ಹೇಳುತ್ತದೆ. ಹಲ್ಲಿಯೂ ಶ್ರೀಹರಿಗೆ ಅತ್ಯಾಶ್ಚರ್ಯತನವನ್ನೇ ಹೇಳುತ್ತದೆ. ಅರಣ್ಯದ ಗೋಧೆಯೂ (ಉಡವೂ) ಕೂಡ ಶ್ರೀಹರಿಗೆ ಆಶ್ಚರ್ಯತ್ವವನ್ನೇ ಹೇಳುತ್ತದೆ ಎಂದು ಶಬ್ದತತ್ವದಲ್ಲಿದೆ.

**ಮಂ ||  ಅವಸ್ವರಾತಿ ಗರ್ಗರೋ ಗೋಧಾ ಪರಿ ಸನಿಷ್ವಣತ್ । ಪಿಂಗಾ ಪರಿ ಚನಿಷ್ಕದದಿಂದ್ರಾಯ ಬ್ರಹ್ಮೋದ್ಯತಂ || ೨ ||**

**ಅರ್ಥ ||** ಗರ್ಗರಃ=ಪಾದಭೂಷಣ (ಗಗ್ಗರ)ವು, ಪ್ರಕ್ಷಿಪ್ಯಮಾಣವಾದ ಜಲವು, ದೊಡ್ಡ ಪಾತ್ರವು, ಮಥನಮಾಡಲ್ಪಡತಕ್ಕ ಮೊಸರುವಿನ ಪಾತ್ರವು, ಆನೆಯ ಶುಂಡಾದಂಡವು, ಅವಸ್ವರಾತಿ= (ಅವಸ್ವರತಿ) ಮೆಲ್ಲಗೆ ಧ್ವನಿಗೈಯ್ಯುತ್ತದೋ, ಪರಿಸ್ವರತಿ=ಘಟ್ಟಿಯಾಗಿ ಧ್ವನಿಗೈಯ್ಯುತ್ತದೋ, ಗೋಧಾ=ಗೃಹಗೋಧೆಯು (ಹಲ್ಲಿಯು) ಅರಣ್ಯದ ಗೋಧೆಯೂ, (ಉಡವು) ಅಸನಿಷ್ವಣತ್=ಹೆಚ್ಚು ಮೆಲ್ಲಗೆ ಧ್ವನಿಗೈಯ್ಯುತ್ತದೋ, ಪರಿಷ್ವಣತ್=ಅತಿಘಟ್ಟಿಯಾಗಿ ಧ್ವನಿಗೈಯ್ಯುತ್ತದೋ, ಪಿಂಗಾ= ಚಕೋರಿಯು, ಅವಚನಿಷ್ಕದತ್= ಮೆಲ್ಲಗೆ ಆಗುವ ಹಾಗೆ ಧ್ವನಿಗೈಯ್ಯುತ್ತದೋ, ಪರಿಚನಿಷ್ಕದತ್= ಘಟ್ಟಿಯಾಗಿ ಧ್ವನಿಗೈಯ್ಯುತ್ತದೋ, (ಇವೆಲ್ಲವೂ) ಇಂದ್ರಾಯ=ಇಂದ್ರ (ಪರಮೇಶ್ವರ)ನನ್ನೇ ಪ್ರತಿಪಾದಿಸುತ್ತದೆ. ಬ್ರಹ್ಮ=ವೇದವಾದರೂ, ಉದ್ಯತಂ=ತಾತ್ಪರ್ಯದಿಂದ ಯುಕ್ತವಾಗಿಯೇ, ಇಂದ್ರ (ಪರಮೇಶ್ವರ) ವಾಚಕವಾಗುತ್ತದೆ. (ಗರ್ಗರಾದಿ ಶಬ್ದದಂತೆ ಕೇವಲ ವಾಚಕವಲ್ಲ.) || 2 || 60 ||

**ಮೂಲ || (೧) ಯಚ್ಚೈರ್ನ್ಯೋ ನದ್ಯ ಆಪತಂತಿ ತದ್ಘೋಷಶ್ಚೇಂದ್ರವಾಚಕಃ । (೨) ನದೀ ಸಮುದ್ರ ಘೋಷಾಶ್ಚ ನಾದತ್ವಾಚ್ಚೈಷ್ಟ್ಯವಾಚಕಾಃ । ನಾದೋ ಹಿ ಶ್ರೈಷ್ಠ್ಯವಾಚೀ ಸ್ಯಾದೇವಂ ಘೋಷಾಃ ಪರೇಪಿ ಚೇತಿ । (೩) ತದರ್ಥಂ ಚ ನದ್ಯ ಆಪತಂತಿ । (೪) ಭೂತಾಧಿಭೂತೋಽಂಬುನಿಧಾನ ಮಧ್ಯೇ ಭೂತ್ವಾ ಹರಿಃ ಸರ್ವಹರೋಽತಿಧಾಮ್ನಾ । ಅಗಾಧಮಂಭೋ ವಿದಧಾತಿ ಭಸ್ಮಯೋ ಬಾಡವಾಗ್ನಿರ್ನೃಹರಿರ್ವಿಚಿಂತ್ಯಃ || ಇತಿ ವೈಹಾಯಸಸಂಹಿತಾಯಾಂ || (೫) ಸುದುಘಾಃ ಸುಷ್ಟು ಅಪಾಂ ದೋಹನಕತ್ರ್ಯಃ ಸ್ಫುರಣಾಪಗಮನಮಾಸಾಂ ನಾಸ್ತೀತ್ಯನಪಸ್ಫುರಃ । (೬) ನಿತ್ಯ ಚಲನಸ್ವಭಾವಾಃ । ಅಪಗತ ಸ್ಫುರಣತ್ವೇನ ಸೋಮಂ ಗೃಭಾಯತ । ಅಚಲತ್ವೇನ ಮನೋ ವಾ || ೬೧ ।**

**ಅರ್ಥ ॥** (1) ಬೇರೆ ನದಿಗಳು ಬಂದು ಬೀಳುತ್ತವೆ ಎನ್ನುವುದು ಯಾವುದೋ ಅದರಿಂದುಂಟಾದ ಧ್ವನಿಯೂ ಕೂಡ ಪರಮಾತ್ಮನನ್ನೇ ಪ್ರತಿಪಾದಿಸುತ್ತದೆ. (2) ನದಿಗಳ ಮತ್ತು ಸಮುದ್ರಗಳ ಧ್ವನಿಗಳೂ ಕೂಡ ನಾದವನ್ನು ವ್ಯಕ್ತೀಕರಿಸುವುದರಿಂದ ಶ್ರೀಹರಿಗೆ ಶ್ರೇಷ್ಠತನವನ್ನು ಹೇಳುತ್ತವೆ. ನಾದವು ಶ್ರೇಷ್ಠತ್ವರೂಪ ಅರ್ಥವನ್ನು ಹೇಳುತ್ತದೆ. ಇದೇ ರೀತಿಯಾಗಿ ಬೇರೆ ಧ್ವನಿಗಳೂ ನಾದವರ್ಣ ವ್ಯಂಜಕಗಳಾಗಿ ಶ್ರೀಹರಿಗೆ ಶ್ರೇಷ್ಠತ್ವವನ್ನೇ ಹೇಳುತ್ತವೆ. ಹೀಗೂ ಇದೆ. (3) ಆ ಶ್ರೀಹರಿಯ ಜಲಪಾನಕ್ಕಾಗಿಯೇ ನದಿಗಳು ಬರುತ್ತವೆ.(4)ಸರ್ವಪ್ರಾಣಿಗಳಿಗೂ ಕಾರಣೀಭೂತನಾದವನು, ಅಧಿಕ ತೇಜಸ್ಸಿನಿಂದ ಸರ್ವರನ್ನು ವಿನಾಶಗೊಳಿಸುವವನು ಇಂತಹ ಶ್ರೀಹರಿಯು ಸಮುದ್ರದ ಮಧ್ಯದಲ್ಲಿದ್ದು ಅಗಾಧವಾದ ನೀರನ್ನು ಭಸ್ಮೀಕರಿಸುತ್ತಾನೆ. (ಕುಡಿದುಬಿಡುತ್ತಾನೆ.) ಯಾವ ಬಾಡವಾಗ್ನ್ಯಂತರ್ಗತ ನಾದ ಶ್ರೀಹರಿಯು (ಬ್ರಹ್ಮಾದಿಗಳಿಂದಲೂ) ಧ್ಯೇಯನೋ, ಅಂತಹವನು. ಹೀಗೆ ವೈಹಾಯಸ ಸಂಹಿತೆಯಲ್ಲಿದೆ. (5) 'ಸುದುಘಾಃ' ಅಂದರೆ ಚೆನ್ನಾಗಿ ನೀರನ್ನು ದೋಹನ ಮಾಡುವವುಗಳು. (ಅಂದರೆ ಚೆನ್ನಾಗಿ ನೀರಿನ ಪ್ರವಾಹದ ಸ್ವಭಾವವಿರತಕ್ಕವುಗಳು) ಚಲನದಿಂದ ಹೋಗುವಿಕೆಯು ಇವುಗಳಿಗೆ ಇಲ್ಲ ಆದಕಾರಣ 'ಅನಪಸ್ಫುರಃ' ಎನ್ನಿಸುತ್ತವೆ. (ಸ್ಫುರಃ=(ಸ್ಫುರಣಾತ್) ಚಲನದಿಂದ, ಅಪಗತಾಃ=ಹೋದವುಗಳು, ಅಪಸ್ಫುರಃ, ನ ಅಪಸ್ಫುರಃ ಅನಪಸ್ಫುರಃ) (6) ನಿತ್ಯದಲ್ಲಿಯೂ ಚಲಿಸುವ ಸ್ವಭಾವವುಳ್ಳವುಗಳು. ಹೋಗಲ್ಪಟ್ಟ ಚಲನವುಳ್ಳತನದಿಂದ (ಅಂದರೆ, ಚಲನ ಇಲ್ಲದೆ ಸೋಮವನ್ನು ಸ್ವೀಕರಿಸಿದರು. ಚಲನವಿಲ್ಲದಿರುವತನದಿಂದ ಮನಸ್ಸನ್ನಾಗಲೀ, ಸ್ವೀಕರಿಸಿದರು. (ತಥಾ ಚ ನೀರಿನ ಪ್ರವಾಹ ಸ್ವಭಾವವುಳ್ಳ ನದೀ ದೇವತೆಗಳು ನಿತ್ಯದಲ್ಲಿಯೂ ಹರಿದಾಡುವ ಸ್ವಭಾವವುಳ್ಳವು ಗಳಾದಾಗ್ಯೂ ಇಂದ್ರನಿಗೆ ಸೋಮಪಾನ ಮಾಡುವುದಕ್ಕಾಗಿ ಸೋಮವನ್ನು ಚಲನವನ್ನು ಬಿಟ್ಟು ಸ್ವೀಕರಿಸಿದರು. ನದಿಗಳು ಬಂದು ಬೀಳುತ್ತವೆ ಎನ್ನುವುದು ಯಾವುದೋ ಅದು ಇಂದ್ರಶಬ್ದವಾಚ್ಯನಾದ ನರಸಿಂಹನ ಪ್ರೀತಿಗಾಗಿ. ಅಥವಾ ಬಂದು ಬೀಳುವುದರಿಂದುಂಟಾದ ಧ್ವನಿಯೂ ಇಂದ್ರಶಬ್ದವಾಚ್ಯ ನಾದ ಶ್ರೀನರಸಿಂಹನನ್ನು ಪ್ರತಿಪಾದಿಸುತ್ತದೆ.

**ಮಂ ॥ ಆಯತ್ವತಂತ್ಯೇನ್ಯಸ್ಸುದುಘಾ ಅನಪಸ್ಫುರಃ । ಅಪಸ್ಫುರಂ ಗೃಭಾಯತ ಸೋಮಮಿಂದ್ರಾಯ ಪಾತವೇ ॥ ೩ ॥**

**ಅರ್ಥ ॥** (ಗಗ್ಗರಾದಿಗಳ ಧ್ವನಿಗಳು ಮಾತ್ರ ಪರಮಾತ್ಮನನ್ನು ಪ್ರತಿಪಾದಿಸುವವುಗಳಲ್ಲ, ಮತ್ತೆ (ಸುದುಘಾಃ=ಚೆನ್ನಾಗಿ ನೀರನ್ನು ಪೂರ್ಣೀಕರಿಸುವ, ಅಂದರೆ ಚೆನ್ನಾಗಿ ನೀರಿನ ಪ್ರವಾಹದ ಸ್ವಭಾವವುಳ್ಳ, ಅನಪಸ್ಫುರಃ=(ಸ್ಫುರಣಾತ್=ಚಲನದಿಂದ, ಅಪಗತಾಃ=ಹೋದವುಗಳು, ಅಪಸ್ಫುರಃ, ನ ಅಪಸ್ಫುರಃ, ಅನಪಸ್ಫುರಃ ಎಂದು ವಿಗ್ರಹವು) ಚಲನದ ಹೋಗುವಿಕೆಯಿಲ್ಲದಿರುವ ಅಂದರೆ, ನಿತ್ಯ ದಲ್ಲಿಯೂ ಹಂದಾಡುವ ಸ್ವಭಾವವುಳ್ಳವುಗಳಾದಾಗ್ಯೂ, ಅಪಸ್ಫುರಂ=ಚಲನ ಹೇಗೆ ಆಗಲಾರದೋ ಹಾಗೆ ಅಂದರೆ ಚಲನವನ್ನು ಬಿಟ್ಟು, ಇಂದ್ರಾಯ ಪಾತವೇ=ಇಂದ್ರನಿಗೆ ಪಾನಮಾಡುವುದಕ್ಕಾಗಿ, ಸೋಮಂ ಗೃಭಾಯತ=ಸೋಮವನ್ನು ಸ್ವೀಕರಿಸಿದರು. ಅಂದರೆ, ನದ್ಯಭಿಮಾನಿದೇವತೆಗಳು ತಮ್ಮ ಚಂಚಲ ಸ್ವಭಾವವನ್ನು ಬಿಟ್ಟು ಒಂದು ಕಡೆ ಇದ್ದು ಶ್ರೀಹರಿಯನ್ನುದ್ದೇಶಿಸಿ ಸೋಮಯಾಗವನ್ನು ಮಾಡಿದರು. ಅಥವಾ ಬೇರೆಯವರು ಸೋಮಯಾಗವನ್ನು ಮಾಡುವಾಗ 'ಅದ್ಭ್ಯಃ ಸ್ವಾಹಾ' ಎಂದು ಸೋಮವನ್ನು ಕೊಡುವಾಗ ಅಭಿಮಾನಿಗಳಾದ ನದೀದೇವತೆಗಳು ತಮ್ಮ ಚಾಂಚಲ್ಯವನ್ನು ಬಿಟ್ಟು ಒಂದು ಕಡೆ ಇದ್ದು ಭಕ್ತರು ಕೊಟ್ಟ ಸೋಮವನ್ನು ಸ್ವೀಕರಿಸಿದರು. ಸೋಮಪಾನ ಮಾಡುವವರು

ನಾವೇ ಎಂಬ ಬುದ್ಧಿಯಿಂದಲ್ಲ, ಮತ್ತೆ ನಮ್ಮ ಅಂತರ್ಯಾಮಿಯಾದ ಶ್ರೀಹರಿಯ ಪಾನಕ್ಕಾಗಿಯೇ, ಏನ್ಯಃ=ಬೇರೆ ನದಿಗಳೂ, ಆಪತಂತೀತಿ ಯತ್=ಬಂದು ಬೀಳುತ್ತದೆ ಎನ್ನುವುದು ಯಾವುದೋ ಬಂದು ಬೀಳುವಾಗ ಅದರಿಂದುಂಟಾದ ಧ್ವನಿಯೂ ಪರಮಾತ್ಮನನ್ನೇ ಹೇಳುತ್ತದೆ. ಅಥವಾ ಆ ಬೀಳುವಿಕೆಯೂ ಪರಮೈಶ್ವರ್ಯಸಂಪನ್ನನಾದ ಶ್ರೀನರಸಿಂಹನಿಗೆ ನೀರು ಕುಡಿಯುವುದಕ್ಕಾಗಿ ॥ 3 ॥ 61 ॥

**ಮಂ ॥ ಯೋ ವ್ಯತೀ ರ೯ಫಾಣಯತ್ಸುಯುಕ್ತಾ೯ ಉಪ ದಾಶುಷೇ । ತಕ್ವೋ ನೇತಾ ತದಿದ್ವಪುರುಪಮಾ ಯೋ ಅಮುಚ್ಯತ ॥ ೧ ॥**

**ಅರ್ಥ ॥** ಯಃ=ಯಾರು, ಸುಯುಕ್ತಾನ್=ನಿತ್ಯದಲ್ಲಿಯೂ ನಾರಾಯಣನಲ್ಲಿಯೇ ಆಸಕ್ತರಾದ, ವ್ಯತೀನ್=ವಿಶೇಷಾಕಾರವಾಗಿ ನಾವೇ ಮೊದಲಾದವರನ್ನು ಅತಿಕ್ರಮಿಸಿದ, ಅಥವಾ ವಿಶೇಷಾಕಾರವಾಗಿ ಪೂಜಿತರಾದ, ಇಂದ್ರಿಯಾಭಿಮಾನಿದೇವತೆಗಳನ್ನು, ದಾಶುಷೇ=ಯಜಮಾನನ, ಉಪ=ಸಮೀಪದಲ್ಲಿ, ಅಫಾಣಯತ್=ವಿಸ್ತಾರಮಾಡಿದನು. (ಅಂದರೆ ಭಕ್ತರ ಮನಸ್ಸು ಮೊದಲಾದ ಇಂದ್ರಿಯಗಳಿಗೆ ಭಗವಂತನ ತತ್ವಜ್ಞಾನ ಮೊದಲಾದವುಗಳಲ್ಲಿ ಶಕ್ತಿಯನ್ನು ಪ್ರೇರಿಸುವುದಕ್ಕಾಗಿ ದೇವತೆಗಳನ್ನು ಪ್ರವರ್ತಿಸುತ್ತಾನೆ.) ಯಃ=ಯಾರು ತಕ್ವಃ=ಸರ್ವಜಗತ್ಕರ್ತನೋ, ನೇತಾ=ಸರ್ವಜ್ಞೋ, ಪ್ರೇರಕನೋ, ಉಪಮಾ=ಉಪಮಾವಿಷಯದಲ್ಲಿ, ಅಮುಚ್ಯತ=ಬಿಡಲ್ಪಟ್ಟಿದ್ದಾನೋ, ಸಃ=ಆತನು, ತದ್ವಪುರಿತ್= ಅವನ ಶರೀರದಿಂದ ಅತ್ಯಂತಾಭಿನ್ನನೇ ॥

ಈ ಶ್ರುತ್ಯರ್ಥವನ್ನು ಆಚಾರ್ಯರು ನಿರೂಪಿಸುತ್ತಾರೆ.

**ಮೂಲ ॥ (೧) ವ್ಯತೀನ್ ವಿಶೇಷೇಣಾಧಿಕಾನ್ ದೇವಾನ್ । ಅಫಾಣಯದ್ವಿಸ್ತಾರಯಾಮಾಸ । ದಾಶುಷೇ ಯಜಮಾನಾಯ । ತತ್ಸಮೀಪೇ । ಫಣ ವಿಸ್ತಾರ ಇತಿ ಧಾತೋಃ । ಸುಯುಕ್ತಾನ್ಸುಯೋಗರತಾನ್ । (೨) ವಿಶೇಷೇಣಾಧಿಕತ್ವೇನ ವ್ಯತಯೋ ದೇವತಾಃ ಸ್ಮೃತಾಃ । ನಿತ್ಯ ಯೋಗರತಾಶ್ಚೈವ ನಾರಾಯಣ ಪರಾಯಣಾಃ । ತ ಏವ ಚೇಂದ್ರಿಯಾತ್ಮಾನಸ್ತಾನ್ವಿಸ್ತಾರಯತೀಶ್ವರಃ । ಮನ ಆದೀಂದ್ರಿಯಾಣಾಂ ತು ಶಕ್ತಿವಿಸ್ತಾರ ಏವ ತು । ವಿಸ್ತಾರೋ ದೇವತಾನಾಂ ಸ್ಯಾದ್ಭಕ್ತೇಷು ಹರಿಣಾ ಕೃತಃ ॥ ಇತಿ ಪ್ರಕಾಶಸಂಹಿತಾಯಾಂ ॥ ೬೨ ।**

**ಅರ್ಥ ॥** (1) ವ್ಯತೀನ್=ವಿಶೇಷತಃ ಅಧಿಕರಾದ ಅಸ್ಮದಾದಿಗಳನ್ನು ಅತಿಕ್ರಮಿಸಿದ ಅಥವಾ ಸರ್ವರಿಂದ ಪೂಜಿತರಾದ ದೇವತೆಗಳನ್ನು, ಅಫಾಣಯತ್=ವಿಸ್ತರಿಸಿದನು. ದಾಶುಷೇ=ಯಜಮಾನನಿಗೋಸ್ಕರ, ಅಂದರೆ ಅವನ ಸಮೀಪದಲ್ಲಿ, ಫಣ ಧಾತುವು ವಿಸ್ತಾರ ಎನ್ನುವ ಅರ್ಥದಲ್ಲಿದೆ, ಎಂಬ ಧಾತುವ್ಯಾಖ್ಯಾನದಿಂದ (ಅಫಾಣಯತ್ ಎನ್ನುವುದಕ್ಕೆ ವಿಸ್ತಾರ ಮಾಡಿದನು ಎನ್ನುವ ಅರ್ಥವು ಯುಕ್ತವು) ಸುಯುಕ್ತಾನ್=ಚೆನ್ನಾಗಿ ಯೋಗದಲ್ಲಿಯೇ ಆಸಕ್ತರಾದ, (2) (ಇದನ್ನೇ ಆಗಮದ ಸಮ್ಮತಿಯಿಂದ ವಿವರಿಸುತ್ತಾರೆ.) ವಿಶೇಷತಃ ಅಧಿಕರಾದ ಪ್ರಯುಕ್ತ ದೇವತೆಗಳು ವ್ಯತಿಗಳೆಂದು ಹೇಳಲ್ಪಟ್ಟಿದ್ದಾರೆ. ಸದಾ ಯೋಗದಲ್ಲಿಯೇ ಆಸಕ್ತರು. ಅಂದರೆ, ನಾರಾಯಣನಲ್ಲಿಯೇ ಆಸಕ್ತರು.

ಅವರೇ ಇಂದ್ರಿಯಗಳಿಗೂ ಅಭಿಮಾನಿಗಳು. ಅವರನ್ನು ಶ್ರೀಹರಿಯು ವಿಸ್ತರಿಸುತ್ತಾನೆ. ಮನಸ್ಸು ಮೊದಲಾದ ಇಂದ್ರಿಯಗಳಿಗಾದರೂ ಶಕ್ತಿಯ ವಿಸ್ತಾರವೇ ದೇವತೆಗಳಿಗೆ ವಿಸ್ತಾರವೆಂದನ್ನಿಸಿಕೊಳ್ಳುವುದು. ಇದೇ ಭಕ್ತರಲ್ಲಿ ಶ್ರೀಹರಿಯಿಂದ ಮಾಡಲ್ಪಟ್ಟದ್ದು ಎಂದು ಪ್ರಕಾಶಸಂಹಿತೆಯಲ್ಲಿದೆ. (ಅಂದರೆ ಭಕ್ತರ ಮನಸ್ಸು ಮೊದಲಾದ ಇಂದ್ರಿಯಗಳಿಗೆ ಭಗವಂತನ ತತ್ವಜ್ಞಾನ ಮೊದಲಾದವುಗಳಲ್ಲಿ ಶಕ್ತಿಯನ್ನು ಪ್ರೇರಿಸುವುದಕ್ಕಾಗಿ ದೇವತೆಗಳನ್ನು, ಶ್ರೀಹರಿಯು ಪ್ರವರ್ತಿಸುತ್ತಾನೆ.) ॥ 62 ॥

ದೇವತೆಗಳನ್ನು ಈಶ್ವರನು ಪ್ರವರ್ತಿಸುತ್ತಾನೆ ಎನ್ನುವುದಕ್ಕೆ ಬೇರೊಂದು ಶ್ರುತಿಸಮ್ಮತಿಯನ್ನು ಹೇಳುತ್ತಾರೆ–

**ಮೂಲ ॥ (೧) ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಽ ರವೀವಿಪದಿತಿ ಶ್ರುತಿಃ । (ಋ.ಅಷ್ಟ.೨;ಅಧ್ಯಾ.೨; ವ.೨೫.) (೨) ಸ ಮೇಂದ್ರೋ ಮೇಧಯಾ ಸ್ಪೃಣೋತು । ಅಮೃತಸ್ಯ ದೇವಧಾರಣೋ ಭೂಯಾಸಂ । ಶರೀರಂ ಮೇ ವಿಚರ್ಷಣಂ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಮಿತಿ ಚ ॥ (ತೈ.ಉ.ಅಧ್ಯಾ.೧; ಮಂ.೯; ಪು. ೧೦೩.) ॥ ೬೩ ॥**

**ಅರ್ಥ ॥** (1) ಸಃ =ಬೃಹಚ್ಛರೀರನಾದ ಮೂಲರೂಪಿಯಾದ ಶ್ರೀವಿಷ್ಣುವು, ನಾಮಭಿಃ= ನಾಮಮಾತ್ರರಾದ (ಸ್ವರೂಪಭೇದವಿಲ್ಲದಿರುವ) ಚತುರ್ಭಿಃ=ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರಿಂದ, ಸಾಕಂ=ಕೂಡಿಕೊಂಡು, ನವತಿಂ=ತೊಂಭತ್ತು ಸಂಖ್ಯಾಕರಾದ, ವ್ಯತೀನ್=ವಿಶೇಷತಃ ಅಧಿಕರಾದ ದೇವತೆಗಳನ್ನು, ವೃತ್ತಂ ಚಕ್ರಂ ನ=ವರ್ತುಲವಾದ ಚಕ್ರವನ್ನೆಂಬಂತೆ, ಅವೀವಿಪತ್= ತಿರುಗಿಸಿದನು.

**ತಾತ್ಪರ್ಯ ॥** (8) ಎಂಟು ವಸುಗಳು. (11) ಹನ್ನೊಂದು ರುದ್ರರು. ವಿಷ್ಣು ಹೊರತಾದ (11) ಹನ್ನೊಂದು ಆದಿತ್ಯರು. ಹಿರಣ್ಯಗರ್ಭನಿಂದ ಕೂಡಿಕೊಂಡು (10) ಹತ್ತು ಪ್ರಜಾಪತಿಗಳು. ಪ್ರಧಾನ ವಾಯುವಿನಿಂದ ಕೂಡಿಕೊಂಡು (50) ಐವತ್ತು ಮರುತ್‌ಗಳು. ಹೀಗೆ (90) ತೊಂಭತ್ತು ದೇವತೆಗಳು. ''ಚತುರ್ಭಿನಾಮಭಿಸ್ಸಾಕಂ ವಾಸುದೇವಾದಿಭಿರ್ಹರಿಃ । ವಸೂನ್ ರುದ್ರಾಂಸ್ತಥಾದಿತ್ಯಾನ್ ಬ್ರಹ್ಮಣೋ ಮರುತಸ್ತಥಾ ॥ ಬೃಹಚ್ಛರೀರೋ ಭಗವಾನ್ ನೂನಂ ಶಾಸತಿ ನಿತ್ಯಶಃ ॥'' ಎಂಬ ವಿಶೇಷ ವಚನಾನುಸಾರವಾಗಿ ಈ ಅರ್ಥವನ್ನು ಟೀಕಾರೀತಿಯಾಗಿ ತಿಳಿಯತಕ್ಕುದು. ತತ್ವಪ್ರದೀಪದಲ್ಲಿ ಆದರೂ ''ಆದಿತ್ಯಾವಸವೋ ರುದ್ರಾ ಮರುತಶ್ಚಾಶ್ವಿನಾವಪಿ । ಬೃಹಸ್ಪತಿಶ್ಚ ಕಾಮಶ್ಚ ಮನುರ್ದಕ್ಷೋ ವಿನಾಯಕಃ । ಭೃಗುಶ್ಚೈವಾನಿರುದ್ಧಶ್ಚ ಧರ್ಮೋ ನಿಋತಿರೇವ ಚ । ಕುಬೇರ ಸಹಿತಾ ದೇವಾ ನವತಿಃ ಸಂಪ್ರಕೀರ್ತಿತಾಃ ॥ ಅನಂತೋ ಗರುಡೋ ವಾಯುಶ್ಚತ್ವಾರೋ ಬ್ರಹ್ಮಣಾ ಸಹ ॥'' ಎಂಬ ಪ್ರಮಾಣಾನುಸಾರವಾಗಿ, 11 ಆದಿತ್ಯರು, 8 ವಸುಗಳು, 11 ರುದ್ರರು, 49 ಮರುತ್‌ಗಳು, ಅಶ್ವಿನೀದೇವತೆಗಳು, ಬೃಹಸ್ಪತಿ, ಕಾಮ, ಮನು, ದಕ್ಷ, ವಿನಾಯಕ, ಭೃಗು, ಅನಿರುದ್ಧ, ಧರ್ಮ, ನಿಋತಿ, ಕುಬೇರ, ಅನಂತ, ಗರುಡ, ವಾಯು, ಬ್ರಹ್ಮರು, ಹೀಗೆ 94 ದೇವತೆಗಳನ್ನು ಇಟ್ಟುಕೊಳ್ಳಬೇಕು. (2) ಆ ಭಕ್ತಾಭೀಷ್ಟಪ್ರದರಾದ ವೇದವ್ಯಾಸರು ನನ್ನನ್ನು ಪ್ರಜ್ಞೆಯಿಂದ ಸಮರ್ಥನನ್ನಾಗಿ ಮಾಡಲಿ. ಹೇ

ವೇದವ್ಯಾಸರೇ! ನಿತ್ಯವಾದ ವೇದವನ್ನು ಧರಿಸುವವನು ಆಗುವೆನು. (ಅಂದರೆ ಮೋಕ್ಷಕ್ಕೋಸ್ಕರ ವೇದವಿದ್ಯೆಯಿಂದುಂಟಾದ ತತ್ವಜ್ಞಾನವುಳ್ಳವನಾಗುವೆನು) ನನ್ನ ಶರೀರವು ವಿಶಿಷ್ಟ ಶಿಷ್ಯಪ್ರಜೆಗಳಿಂದೊಡಗೂಡಿದ್ದು ಅಂದರೆ ಅವರಿಂದ ಸೇವ್ಯವು (ಆಗಲಿ.) ನನ್ನ ನಾಲಿಗೆಯು ಅತಿಶಯವಾಗಿ ಭಗವಂತನನ್ನು ಪ್ರತಿಪಾದಿಸತಕ್ಕ (ಬೋಧಿಸಿಕೊಡತಕ್ಕ) ವೇದವನ್ನುಚ್ಚರಿಸತಕ್ಕದ್ದು ಆಗಲಿ. ಕಿವಿಗಳಿಂದ ಪೂರ್ಣನಾದ ಬ್ರಹ್ಮನನ್ನು, ವಿಶೇಷವಾಗಿ ಕೇಳುವೆನು. ಎಂದೂ ಇದೆ. ॥ 63 ॥

ಇದೇ ವಿಷಯದಲ್ಲಿ, ಸ್ಮೃತಿಯನ್ನುದಾಹರಿಸುತ್ತಾರೆ-

**ಮೂಲ ॥ (೧) ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ । ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಂ ॥ ಇತಿ ಭಾರತೇ ॥ (೨) ತಕ್ವೋ ಜಗತ್ಕರ್ತಾ । ತಕ ನಿರ್ಮಾಣ ಇತಿ ಧಾತೋಃ । (೩) ನ ವರ್ತವೇ ಪ್ರಸವಃ ಸರ್ಗ ತಕ್ವ ಇತ್ಯಾದಿ ಪ್ರಯೋಗಾಚ್ಚ। ನೇತಾ ಚ ಸರ್ವಸ್ಯ । ತದೇವ ವಪುಃ ಸಃ । ಯತ್ತಜ್ಜಗತ್ಕರ್ತೃ ನೇತೃರೂಪಂ ॥ ೬೪ ॥**

**ಅರ್ಥ ॥** (1) ದೇವತೆಗಳು ಕೋಲನ್ನು ಹಿಡಿದುಕೊಂಡು ಪಶುಗಳನ್ನು ಮೇಯಿಸುವವರಂತೆ ರಕ್ಷಿಸುವುದಿಲ್ಲ, ಯಾರನ್ನು ರಕ್ಷಿಸಲಿಕ್ಕೆ ಇಚ್ಛಿಸುತ್ತಾರೋ, ಅವರನ್ನು ಬುದ್ಧಿಯಿಂದ ಕೂಡಿಸುತ್ತಾರೆ. ಎಂದು ಭಾರತದಲ್ಲಿದೆ. (2) 'ತಕ್ವಃ' ಅಂದರೆ ಜಗತ್ತನ್ನು ಸೃಷ್ಟಿಸುವವನು. 'ತಕ' ಧಾತುವು ನಿರ್ಮಾಣ ಎನ್ನುವ ಅರ್ಥದಲ್ಲಿದೆ, ಎಂಬ ಧಾತುವ್ಯಾಖ್ಯಾನದಿಂದ. (3) ಹೇ ನದಿಗಳಿರಾ! ಸೃಷ್ಟಿಮಾಡತಕ್ಕ, ಆದುದರಿಂದಲೇ ಪ್ರಸವವನ್ನು ಮಾಡುವ ಈ ವಿಪ್ರನಾದ ವಿಶ್ವಾಮಿತ್ರನು ಯಾವುದನ್ನು ಇಚ್ಛಿಸುವವನಾಗಿ ವೃತ್ತಿಯನ್ನು ತಡೆಯುವುದಕ್ಕಾಗಿ ಹೋಮಿಸುತ್ತಾನೆ, ಎಂದು ಪ್ರಯೋಗವಿದ್ದ ಪ್ರಯುಕ್ತವೂ ಕೂಡ. (ಇದು ವಿಶ್ವಾಮಿತ್ರನಿಂದ ಆಹೂತರಾದ ನದಿಗಳ ಪರಸ್ಪರ ಮಾತು) (4) ಅಶೇಷವನ್ನು ಪ್ರವರ್ತಿಸಿ ಕೊಡುವವನು. ಆತನು ಆ ಶರೀರವೇ. ಯಾವುದು ಜಗತ್ತನ್ನು ಸೃಷ್ಟಿಸುವುದು ಪ್ರವರ್ತಿಸುವುದು ರೂಪವಿದೆಯೋ, ಅದೇ, (ಅಂದರೆ ಶರೀರದಿಂದ ಅತ್ಯಂತ ಅಭಿನ್ನನು. ಜಗತ್ಕರ್ತನೂ ಪ್ರವರ್ತಕನೂ ಪ್ರಕೃತನಾದುದರಿಂದ ಆತನ ಸ್ವರೂಪವಾದ ಶರೀರವೂ ಪ್ರಕೃತವಾಗಿದೆ. ತಥಾ ಚ ಯಾರು ಜಗತ್ಕರ್ತನೋ, ಪ್ರವರ್ತಕನೋ, ಉಪಮಾಲೇಶ ರಹಿತನೋ, ಆತನು ಅ ಶರೀರವೇ. ಶರೀರಕ್ಕೂ ಆತನಿಗೂ ಅತ್ಯಂತಾಭೇದವು.) ॥ 64 ॥

ಇದೇ ವಿಷಯದಲ್ಲಿ ಪುರಾಣಸಮ್ಮತಿಯನ್ನು ಹೇಳುತ್ತಾರೆ.

**ಮೂಲ ॥ (೧) ದೇಹ ದೇಹಿ ವಿಭಾಗಶ್ಚ ನ ಕ್ವಚಿತ್ ಪರಮೇಶ್ವರೇ । ಗುಣತದ್ವದ್ವಿಭಾಗೋ ವಾ ನೇಹ ನಾನೇತಿ ಚ ಶ್ರುತೇಃ ॥ ಇತಿ ಪಾದ್ಮೇ ಚ ॥ (೨) ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾಃ। ಆನಂದ ರೂಪಮಮೃತಂ ಯದ್ವಿಭಾತಿ । ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ । ಜ್ಞಾನ ಜ್ಞಾನಃ ಸುಖ ಸುಖಃ ಸ ವಿಷ್ಣುಃ ಪರಮೋಽಕ್ಷರಃ ॥ ಇತಿ ಶ್ರುತೇಶ್ಚ । (೩) ವಿಶುದ್ಧ ವಿಜ್ಞಾನ ಮರೀಚಿ ಮಾಲಯಾ ಸಚಿತ್ರ ರತ್ನ ಪ್ರಕರ ಪ್ರಕಾಶಯಾ । ಪ್ರಕಾಶಿತಾಶೇಷ**

**ಜಗತ್ಸ್ವರೂಪಯಾ ಪ್ರಭುಃ ಸದಾಹ್ಲಾದತನುರ್ವಿಭೂಷಿತಃ ॥ ಇತಿ ಪುರುಷೋತ್ತಮಸಂಹಿತಾಯಾಂ ॥ (೪) ಉಪಮಾ ಉಪಮಾಯಾಂ । ಉಪಮಾ ವಿಷಯೇ ಅಮುಚ್ಯತತ್ಯಕ್ತೋಽಭವತ್ । ನಿರುಪಮ ಇತ್ಯರ್ಥಃ । (೫) ಅಲ್ಪಾಕ್ಷರೇಣ ಶಕ್ಯೇಽಪಿ ವಕ್ತುಂ ಬಹ್ವಕ್ಷರಂ ಯದಿ । ಉಕ್ತಸ್ಯಾಧಿಕ್ಯಮೇವಾತ್ರ ನಿಷೇಧೇಽಶೇಷತೋ ಭವೇತ್ ॥ ಇತಿ ಶಬ್ದನಿರ್ಣಯೇ ॥ ೬೫ ॥**

**ಅರ್ಥ ॥** (1) ಪರಮೇಶ್ವರನಲ್ಲಿ ಎಲ್ಲಿಯೂ, ಯಾವಾಗಲೂ ದೇಹದೇಹಿಗಳಿಗೆ ಭೇದವಾಗಲೀ, ಗುಣ ಗುಣಿಗಳಿಗೆ ಭೇದವಾಗಲೀ ಇರುವುದಿಲ್ಲ ಎಂದು ಶ್ರುತಿಯು. ಈ ಪರಬ್ರಹ್ಮನ ವಿಷಯದಲ್ಲಿ ಭೇದವಿಲ್ಲ ಎಂದು ಶ್ರುತಿಯು. ಹೀಗೆ ಪಾದ್ಮ ಪುರಾಣದಲ್ಲಿದೆ. (2) (ಹಾಗಾದರೆ ಈಶ್ವರನು ಚಿದಾನಂದಾದ್ಯಾತ್ಮಕನು. ಶರೀರವು ಹಾಗಲ್ಲ, ಆದಕಾರಣ ಈಶ್ವರನಿಗೂ ಶರೀರಕ್ಕೂ ಅಭೇದವು. ಹೇಗೆಂದರೆ- ಶರೀರವೂ ಚಿದಾನಂದಾತ್ಮಕವು ಎನ್ನುವಲ್ಲಿ ಶ್ರುತಿಸ್ಮೃತಿಗಳನ್ನು ನಿರೂಪಿಸುತ್ತಾರೆ.) 1. ಆನಂದಾತ್ಮಕ ಶರೀರವುಳ್ಳ ನಿತ್ಯಮುಕ್ತ ಯಾವ ಭಗವತ್ಸ್ವರೂಪವು ಶೋಭಿಸುತ್ತದೋ ಅದನ್ನು ವಿಶೇಷ ಜ್ಞಾನದಿಂದ ಧೀರರು ಪ್ರತ್ಯಕ್ಷೀಕರಿಸುತ್ತಾರೆ. ಜ್ಞಾನಾನಂದಾತ್ಮಕದೇಹರೂಪನು, ಶೋಭನಗಂಧರೂಪನು, ಜ್ಞಾನಾತ್ಮಕಪ್ರಕಾಶರೂಪನು, ಸಮೀಚೀನವಾದ ಪರಾಕ್ರಮವುಳ್ಳವನು, ಅತಿಶಯ ಜ್ಞಾನಾತ್ಮಕನು, ಅತಿಶಯಿತಸುಖಾತ್ಮಕನು, ಆತನು ವಿಷ್ಣುವು. ಸರ್ವೋತ್ತಮನು, ನಾಶರಹಿತನು, ಎಂಬ ಶ್ರುತಿಯಿಂದಲೂ, (3) ವಿಚಿತ್ರಗಳಾದ ರತ್ನಗಳ ಸಮೂಹದಿಂದ ಪ್ರಕಾಶವುಳ್ಳ, ಪ್ರಕಾಶಿಸಲ್ಪಟ್ಟ, ಸರ್ವಪ್ರಪಂಚದ ಸ್ವರೂಪವುಳ್ಳ ವಿಶುದ್ಧ ವಿಜ್ಞಾನಾತ್ಮಕ ಕಿರಣಗಳ ಮಾಲಿಕೆಯಿಂದ ಸದಾ ಆನಂದಾತ್ಮಕ ಶರೀರವುಳ್ಳ ಶ್ರೀಹರಿಯು ಅಲಂಕೃತನಾಗಿರುತ್ತಾನೆ. ಎಂದು ಪುರುಷೋತ್ತಮ ಸಂಹಿತೆಯಲ್ಲಿ, (4) 'ಉಪಮಾ' ಅಂದರೆ, ಉಪಮೆಯಲ್ಲಿ ಅಂದರೆ ಉಪಮಾ ವಿಷಯದಲ್ಲಿ, 'ಅಮುಚ್ಯತ' ಅಂದರೆ ತ್ಯಕ್ತನಾದನು. ಅಂದರೆ ನಿರುಪಮನು, (ಅಂದರೆ ಉಪಮಾ ಲೇಶರಹಿತನು) (5) ಅಲ್ಪಾಕ್ಷರಗಳುಳ್ಳ ಸಮುದಾಯದಿಂದ ವಿಧಿಯು ಹೇಳಿದ ಅರ್ಥಕ್ಕೆ ಆಧಿಕ್ಯವೇ ವಿವಕ್ಷಿತವಾಗಿದೆ ಎಂದು ತಿಳಿಯತಕ್ಕುದು. ನಿಷೇಧವೂ ಕೂಡ ಅಲ್ಪಾಕ್ಷರಗಳುಳ್ಳ ಸಮುದಾಯದಿಂದ ಹೇಳಲಿಕ್ಕೆ ಶಕ್ಯವಾದರೂ ಅನೇಕಾಕ್ಷರಗಳುಳ್ಳ ಸಮುದಾಯವನ್ನು ಪ್ರಯೋಗಿಸಿದರೆ ಸಂಪೂರ್ಣವಾಗಿ ನಿಷೇಧವೇ ವಿವಕ್ಷಿತವಾಗಿದೆ ಎಂದು ತಿಳಿಯತಕ್ಕುದು. 'ನಿರುಪಮ' ಎಂಬ ಅಲ್ಪಾಕ್ಷರವುಳ್ಳ ಪದದಿಂದ ಉಪಮೆಯಿಲ್ಲದಿರುವವನೆಂಬ ಅರ್ಥವು ಹೇಳಲಿಕ್ಕೆ ಶಕ್ಯವಾಗುವಾಗ 'ಉಪಮಾ ಯೋ ಅಮುಷ್ಯತ' ಎಂಬ ಬಹ್ವಕ್ಷರವುಳ್ಳ ಪದದಿಂದ ಹೇಳಿದ ಪ್ರಯುಕ್ತ ಉಪಮಾ ಲೇಶವೂ ಇಲ್ಲದವನೆಂಬ ಅರ್ಥವು ವ್ಯಕ್ತವಾಗುತ್ತದೆ. ॥ 1 ॥ 65 ॥

**ಮಂ ॥ ಅತೀದು ಶಕ್ರ ಓಹತ ಇಂದ್ರೋ ವಿಶ್ವಾ ಅತಿದ್ವಿಷಃ । ಭಿನತ್ಕನೀನ ಓದನಂ ಪಚ್ಯಮಾನಂ ಪರೋ ಗಿರಾ ॥ ೨ ॥**

**ಅರ್ಥ ॥** ಶಕ್ರಃ=ಶಕ್ತರಾದ, ಇಂದ್ರಃ=ವೇದವ್ಯಾಸರು, ವಿಶ್ವಾ=ಎಲ್ಲಾ, ದ್ವಿಷಃ=ಅಜ್ಞಾನಪಾಪಾದಿಗಳನ್ನು, ಅತಿ=ದಾಟಿಸಿ, (ತನ್ನ ಭಕ್ತರನ್ನು) ಅತಿ=ಅತಿಶಯವಾಗಿ, ಓಹತೇ ಇತ್ ಉ=ತನ್ನನ್ನು ಹೊಂದಿಸಿ

ಕೊಡುತ್ತಾರೆಯೇ ಸರಿ ಪರಃ=ಸರ್ವೋತ್ತಮನಾದ, ಕನೀನಃ=ಕನ್ಯಾವಸ್ಥೆಯಲ್ಲಿ ಸತ್ಯವತಿಯಲ್ಲಿ ಹುಟ್ಟಿದ ವೇದವ್ಯಾಸರು, ಗಿರಾ ವೇದವಾಕ್ಯ ಶ್ರವಣಾದಿಗಳಿಂದಲೇ, ಪಚ್ಯಮಾನಂ=ಪಾಕವನ್ನು ಹೊಂದತಕ್ಕ, ಓದನಂ=ಕರ್ಮಬಂಧವನ್ನು, ಭಿನತ್=ವಿನಾಶಗೊಳಿಸಿದರು.

**ಮೂಲ ॥ (೧) ವಿಶ್ವಾ ವಿಶ್ವಾನ್ ದ್ವಿಷೋಽಜ್ಞಾನ ಪಾಪಾದೀನತೀತ್ಯ ಶಕ್ರೋ ವಿಷ್ಣುಃ ಸ್ವಭಕ್ತಾನತಿ ವಹತ್ಯೇವ ಹಿ । (೨) ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ । (೩) ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ । ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತ ಚೇತಸಾಮಿತ್ಯಾದಿ ಪ್ರಸಿದ್ಧಂ ಉ ಶಬ್ದೇನಾಹ । (೪) ದ್ವಿಷೋಽತೀತ್ಯಾತಿಶಯೇನಾತ್ಮಾನಂ ಪ್ರತ್ಯೋಹತ ಇತ್ಯತಿಶಬ್ದ ದ್ವಯಾರ್ಥಃ । (೫) ಓದನಂ ಉಂದತೇಃ ಕರ್ಮಬಂಧನಮಭಿನದ್ಭಗವಾನ್। ಕಾನೀನೋ ಬಾದರಾಯಣಃ । ಪರಃ ಪರಮಾತ್ಮಾ । ಗಿರೈವ ಪಚ್ಯಮಾನಂ ಪರಿಪಾಕಕಾಲೇ। (೬) ಸಂಶ್ಲೇಷಾದೋದನಂ ಕರ್ಮ ಪಚ್ಯಮಾನಂ ಗಿರೈವ ಹಿ । ಅಭಿನದ್ಭಗವಾನ್ವ್ಯಾಸಃ ಸ್ವಭಕ್ತಾನಾಮಾಶೇಷತಃ ॥ ಇತಿ ವ್ಯಾಸಸಂಹಿತಾಯಾಂ ॥ ೬೬ ॥**

**ಅರ್ಥ ॥** (1) ವಿಶ್ವಾ=ಸಮಸ್ತಗಳಾದ, ದ್ವಿಷಃ=ಅಜ್ಞಾನಪಾಪಾದಿಗಳನ್ನು, ಅತೀತ್ಯ=ಅತಿಕ್ರಮಣ ಮಾಡಿಸಿ, ಶಕ್ರಃ=ಶ್ರೀವಿಷ್ಣುವು, ತನ್ನ ಭಕ್ತರನ್ನು, ತನ್ನನ್ನು ಕುರಿತು ಅತಿಶಯವಾಗಿ ಹೊಂದಿಸಿ ಕೊಡುತ್ತಾನೆಯೇ ಸರಿ. ಪ್ರಸಿದ್ಧವು. (2) ಈ ಶ್ರೀಹರಿಯೇ ಯಾವಾತನನ್ನು, ಭಕ್ತನನ್ನಾಗಿ ಸ್ವೀಕರಿಸು ತ್ತಾನೋ, (ಯಾರಿಗೆ ಪ್ರಸನ್ನನಾಗುತ್ತಾನೊ) ಆತನಿಂದಲೆ ಹೊಂದಲ್ಪಡತಕ್ಕವನು. ಸಾಕ್ಷಾತ್ಕರಿಸಲಿಕ್ಕೆ ಶಕ್ಯನು.) ಆತನಿಗೆ ಈ ಪ್ರಸನ್ನನಾದ ಶ್ರೀಹರಿಯು ಸ್ವಕೀಯವಾದ ಶರೀರವನ್ನು ಪ್ರಕಾಶಪಡಿಸುತ್ತಾನೆ. (3) ಎಲೋ ಅರ್ಜುನನೇ, (ಯಾರು ಸರ್ವಕರ್ಮಗಳನ್ನು ನನ್ನಲ್ಲಿ ಸಮರ್ಪಿಸಿ ನನ್ನಲ್ಲಿಯೇ ಆಸಕ್ತರಾಗಿ ನನ್ನನ್ನೇ ಧ್ಯಾನಿಸುತ್ತಾ ಇರುತ್ತಾರೋ) ಅಂತಹ ನನ್ನಲ್ಲಿಯೇ ಮನಸ್ಸನ್ನು ಇಟ್ಟ ಭಕ್ತರನ್ನು ಮರಣವೆಂಬ ಸಂಸಾರ ಸಮುದ್ರದಿಂದ ಶೀಘ್ರದಲ್ಲಿ ಉದ್ಧರಿಸುವವನು ಆಗುವೆನು. ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ, ಎಂದು 'ಉ' ಶಬ್ದದಿಂದ ಹೇಳುತ್ತಾರೆ. (4) ದ್ವೇಷಿಗಳಾದ ಅಜ್ಞಾನಪಾಪಾದಿಗಳನ್ನು ಬಿಡುಗಡೆ ಮಾಡಿಸಿ ಅತಿಶಯವಾಗಿ ತನ್ನನ್ನು ಕುರಿತೇ ಹೊಂದಿಸುತ್ತಾನೆ. ಹೀಗೆ ಎರಡು 'ಅತಿ' ಶಬ್ದಗಳ ಅರ್ಥವು. (5) ಉಂದನರೂಪ ಕರ್ಮದ ಕಾರ್ಯಭೂತವಾದ ಸಂಶ್ಲೇಷರೂಪವಾದ ಸಂಬಂಧ ನಿಮಿತ್ತದಿಂದ ಓದನವು 'ಕರ್ಮಬಂಧ' ಎನ್ನಿಸುತ್ತದೆ. (ಏವಂ ಚ ಕರ್ಮನಿಮಿತ್ತಕವಾದ ಸಂಸಾರಬಂಧವು ಓದನ ಶಬ್ದವಾಚ್ಯವು ಈ ಸಂಬಂಧದಿಂದ ಓದನವೆಂದು ಸ್ಮೃತಿಯಿಂದ ಉಪಪಾದಿಸಲ್ಪಡುತ್ತದೆ.) ಅಂತಹ ಕರ್ಮನಿಮಿತ್ತಕವಾದ ಸಂಸಾರಬಂಧವನ್ನು ಪೂಜ್ಯರಾದ ಕನ್ಯಾವಸ್ಥೆಯಲ್ಲಿ ಸತ್ಯವತಿಯಲ್ಲಿ ಅವತರಿಸಿದ ಬಾದರಾಯಣರು ಶೀಳಿಸಿದರು.ವಿನಾಶಗೊಳಿಸಿದರು. 'ಪರಃ' ಅಂದರೆ ಪರಮಾತ್ಮನು, ವೇದವಾಕ್ಯ ಶ್ರವಣಾದಿಗಳಿಂದಲೇ ಪರಿಪಾಕಕಾಲದಲ್ಲಿ ಪಾಕವನ್ನು ಹೊಂದತಕ್ಕುದು. (ಯಾವಾಗ ಪರಿಪಾಕಕಾಲವೋ ಆಗ ವೇದಾದಿಗಳ ಶ್ರವಣ ಕರ್ಮಬಂಧದ ಪಾಕ

ಇವುಗಳಿಗೆ ಕಾಲ ಒಂದೆಯಾದುದರಿಂದ ವರ್ತಮಾನಾರ್ಥಕವಾದ ಶಾನಚ್ ಯುಕ್ತವೆಂದುಕ್ತವಾಯಿತು. (6) ಓದನರೂಪ ಕರ್ಮವು ಸಂಬಂಧರೂಪ ನಿಮಿತ್ತದಿಂದ ಕರ್ಮಬಂಧವೆನ್ನಿಸುತ್ತದೆ. ಪೂಜ್ಯರಾದ ವೇದವ್ಯಾಸರು ವೇದವಾಕ್ಯಶ್ರವಣಾದಿಗಳಿಂದಲೇ ಪಚ್ಯಮಾನವಾದ ತನ್ನ ಭಕ್ತರ ಕರ್ಮಬಂಧವನ್ನು ಸಂಪೂರ್ಣವಾಗಿ ನಾಶಮಾಡಿದರು. ಹೀಗೆ ವ್ಯಾಸ ಸಂಹಿತೆಯಲ್ಲಿದೆ. ॥ 2 ॥ 66 ॥

**ಮಂ ॥ ಅರ್ಭಕೋ ನ ಕುಮಾರಕೋಽಧಿ ತಿಷ್ಠನ್ನವಂ ರಥಂ । ಸ ಪಕ್ಷನ್ಮಹಿಷಂ ಮೃಗಂ ಪಿತ್ರೇ ಮಾತ್ರೇ ವಿಭುಕ್ರತುಂ ॥ ೩ ॥**

**ಅರ್ಥ ॥** ಇಂದ್ರಃ=ಶ್ರೀಹರಿಯು, ಅರ್ಭಕೋ ನ=ಸೂಕ್ಷ್ಮದೇಹನಾಗಿ ಶಿಶುವಿನಂತೆ ಇದ್ದಾನೆ. ಕುಮಾರಕಃ=ಜರಾರೋಗಾದಿಗಳಿಂದ ಗ್ರಸ್ತವಾದ ಪ್ರಯುಕ್ತ ಕುತ್ಸಿತವಾದ ಮೊದಲಿನ ಜೀವದೇಹವನ್ನು ನಾಶಗೊಳಿಸುವವನು. (ಅಂದರೆ ಅದನ್ನು ಬಿಟ್ಟು) ಅಥವಾ ನ ಕುಮಾರಕಃ=ಶಿಶುವಿನಂತೆ ಸೂಕ್ಷ್ಮದೇಹನು. ಅಥವಾ ಸೂಕ್ಷ್ಮದೇಹವೂ ಕೂಡ, ನ ಕುಮಾರಕಃ=ಯಾರದ್ದೂ ಮಗುವಲ್ಲ, ಅಂದರೆ ಯಾರಿಂದಲೂ ಹುಟ್ಟಿದ್ದಲ್ಲ, ನವಂ=ನೂತನವಾದ, ರಥಂ=ದೇಹವನ್ನು, ಅಧಿತಿಷ್ಠತ್=ಜೀವನಿಂದ ಕೂಡಿಕೊಂಡು ಆವಾಸ ಮಾಡಿದನು. ಮತ್ತು ಮೃಗಂ=ತನ್ನನ್ನು ಹುಡುಕುತ್ತಿರುವ, ಪಿತ್ರೇ=ತನ್ನ ವಿಷಯದಲ್ಲಿಯೂ, ಮಾತ್ರೇ=ಲಕ್ಷ್ಮೀವಿಷಯದಲ್ಲಿಯೂ, ವಿಭುಕ್ರತುಂ=ಪೂರ್ಣಜ್ಞಾನನಾದ, ಮಹಿಷಂ=ಶ್ರೇಷ್ಠನಾದ ಬ್ರಹ್ಮನನ್ನು, ಸಪಕ್ಷತ್=ಪೂರ್ಣೀಕರಿಸಿದನು. (ಅಂದರೆ ಪಕ್ವಜ್ಞಾನಾದಿ ಗುಣಗಳುಳ್ಳವನಾಗಿ ಮಾಡಿದನು. ॥ 3 ॥

**ಮೂಲ ॥ (೧) ಅರ್ಭಕ ಇವ ಸ್ಥಿತೋ ನವಂ ರಥಮಧ್ಯತಿಷ್ಠತ್ । ಕುಮಾರಃ ಕುತ್ಸಿತಮಾರಕಃ । (೨) ಅರ್ಭಕ ಇವ ಸೂಕ್ಷ್ಮದೇಹಃ । ಪೂರ್ವಂ ಪೂರ್ವಂ ದೇಹಂ ಪರಿತ್ಯಜ್ಯ ನವಂ ನವಂ ದೇಹಮಧ್ಯತಿಷ್ಠಜ್ಜೀವಮಾದಾಯ । (೩) ಜೀವದೇಹಂ ಪರಿತ್ಯಜ್ಯ ಸಹ ಜೀವೇನ ಚೇಶ್ವರಃ । ಜೀವಸ್ಯಾನ್ಯ ಶರೀರಂ ಚ ಸಮುತ್ಪಾದ್ಯ ವಿಶತ್ಯಜಃ ॥ ಇತಿ ಮಾನ್ಯಸಂಹಿತಾಯಾಂ ॥ (೪) ಕುಮಾರಕ ಇವಾರ್ಭಕಃ ಸೂಕ್ಷ್ಮದೇಹ ಇತಿ ವಾ । (೫) ಅರ್ಭಕಃ ಸೂಕ್ಷ್ಮದೇಹೋಽಪಿ ನ ಕುಮಾರ ಇತಿ ವಾ । ಸಪಕ್ಷತ್ಪರಿಪಕ್ವ ಜ್ಞಾನಾದಿ ಗುಣಮಕರೋತ್ । ಮಹಿಷಂ ಮಹಾಂತಂ ಬ್ರಹ್ಮಾಣಂ ಮೃಗಂ ಮೃಗಯಂತಂ ಸ್ವಾತ್ಮಾನಂ । (೬) ಪಿತ್ರೇ ಸ್ವಸ್ಮೈ ಮಾತ್ರೇ ಲಕ್ಷ್ಮ್ಯೈ ವಿಭುಕ್ರತುಂ ಪಿತೃ ಮಾತೃ ವಿಷಯೇ ಪೂರ್ಣ ಜ್ಞಾನಂ ಪುನಃ ಪೂರಯಾಮಾಸೇತ್ಯರ್ಥಃ । ಜ್ಞಾನ ಪೂರ್ಣಂ ವಿಧಾತಾರಂ ಮೋಕ್ಷದಾನೇನ ಕೇಶವಃ । ಸ್ವಪುತ್ರಂ ಪೂರಯಾಮಾಸ ಮಹಿಷಂ ಮಹತಾಂ ಮಹಾನ್ ॥ ಇತ ಪ್ರವೃತ್ತೇ ॥ ೬೭ ॥**

**ಅರ್ಥ ॥** (1) ಶಿಶುವಿನಂತೆ ಇರುವವನು ಅರ್ಭಕನು. ನೂತನವಾದ ದೇಹಾಖ್ಯ ರಥವನ್ನು ಆವಾಸಮಾಡಿದನು. 'ಕುಮಾರಕಃ' ಅಂದರೆ, ಕುತ್ಸಿತವಾದ ಪೂರ್ವದೇಹವನ್ನು ನಾಶಮಾಡಿದನು. (2) ಶಿಶುವಿನಂತೆ ಸೂಕ್ಷ್ಮದೇಹವುಳ್ಳವನಾಗಿ ಮೊದಲು ಮೊದಲಿನ ಶರೀರವನ್ನು ಬಿಟ್ಟು ಹೊಸ ಹೊಸ

ಶರೀರವನ್ನು (ದಲ್ಲಿ) ಜೀವನನ್ನು ಹಿಡಿದುಕೊಂಡು ಆವಾಸ ಮಾಡಿದನು (ಜರಾರೋಗಾದಿಗಳಿಂದ ಸಂಬದ್ಧವಾದ ಪ್ರಯುಕ್ತ ಮೊದಲಿನ ದೇಹವು ಕುತ್ಸಿತವು. ಅನಾದಿ ಲಾಗಾಯಿತು ಹೀಗೆಯೇ ಎಂದು ತಿಳಿಸುವುದಕ್ಕಾಗಿ ''ಪೂರ್ವಂ ಪೂರ್ವಂ, 'ನವಂ ನವಂ'' ಎಂದೂ ದ್ವಿರುಕ್ತಿಯು.) ಜೀವನಿಗೂ, ಈಶನಿಗೂ ಅಭೇದವಿಲ್ಲ, ಭೇದವೇ ಇದೆ ಎಂದು ತಿಳಿಸುವುದಕ್ಕಾಗಿ 'ಜೀವಮಾದಾಯ' ಎಂದು ಹೇಳಿದ್ದು. (3) (ಇದೇ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ.) ಉತ್ಪತ್ತಿರಹಿತನಾದ ಶ್ರೀಹರಿಯು ಜೀವನ ಪೂರ್ವಶರೀರವನ್ನು ಬಿಟ್ಟು ಜೀವನಿಂದೊಡಗೂಡಿಯೇ ಜೀವನಿಗೆ ಬೇರೆ ಶರೀರವನ್ನು ಹುಟ್ಟಿಸಿ ಅದನ್ನು ಪ್ರವೇಶಮಾಡುತ್ತಾನೆ. ಎಂದು ಮಾನ್ಯಸಂಹಿತೆಯಲ್ಲಿದೆ. (4) ('ಸ್ಥಿತಃ' ಎಂಬ ಶಬ್ದವನ್ನಧ್ಯಾಹಾರ ಮಾಡದೇನೇ ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಶಿಶುವಿನಂತೆ ಸೂಕ್ಷ್ಮ ದೇಹವುಳ್ಳವನೆಂದಾಗಲೀ. (5) 'ಅರ್ಭಕೋ ನ' ಎಂಬುವಲ್ಲಿದ್ದ ನ ಶಬ್ದಕ್ಕೆ ಸಾದೃಶ್ಯಾರ್ಥವನ್ನಿಟ್ಟು ಕೊಂಡು ವ್ಯಾಖ್ಯಾನಮಾಡಿ ಈಗ ನಿಷೇಧಾರ್ಥವನ್ನು ಇಟ್ಟುಕೊಂಡು ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಸೂಕ್ಷ್ಮಶರೀರವುಳ್ಳವನಾದಾಗ್ಯೂ ಯಾರಿಗೂ ಮಗುವಲ್ಲ, 'ಸಪಕ್ವತ್' ಅಂದರೆ ಪರಿಪಕ್ವವಾದ ಜ್ಞಾನಾನಂದಾದಿ ಗುಣಗಳುಳ್ಳವನನ್ನಾಗಿ ಮಾಡಿದನು. 'ಮಹಿಷಂ' ಅಂದರೆ ಪೂಜ್ಯನಾದ ಬ್ರಹ್ಮನನ್ನು, 'ಮೃಗಂ' ಅಂದರೆ ತನ್ನನ್ನು (ಶ್ರೀಹರಿಯನ್ನು) ಹುಡುಕುತ್ತಿರುವ, (6) 'ಪಿತ್ರೇ' ಅಂದರೆ ತಂದೆಯಾದ ತನಗೋಸ್ಕರ, 'ಮಾತ್ರೇ' ಅಂದರೆ ತಾಯಿಯಾದ ಲಕ್ಷ್ಮೀಗೋಸ್ಕರ, 'ವಿಭುಕ್ರತುಂ' ಅಂದರೆ ಪೂರ್ಣಜ್ಞಾನವುಳ್ಳವನನ್ನು, ಅಂದರೆ ಬ್ರಹ್ಮನಿಗೆ ತಂದೆಯಾದ ತನ್ನ ಮತ್ತು ತಾಯಿಯಾದ ಲಕ್ಷ್ಮೀದೇವಿಯ ವಿಷಯದಲ್ಲಿ ಪೂರ್ಣ ಜ್ಞಾನವುಳ್ಳ ಚತುರ್ಮುಖನನ್ನು, ಪುನಃ ಜ್ಞಾನಾದಿಗಳಿಂದ ಪೂರ್ಣೀಕರಿಸಿದನು. (ಪೂರಣವೆಂದರೆ ಯೋಗ್ಯವಾದುದೆಲ್ಲದಕ್ಕೂ ಅಭಿವ್ಯಕ್ತಿಯು.) (7) (ಇದೇ ವಿಷಯದಲ್ಲಿ ಆಗಮ ಸಮ್ಮತಿಯನ್ನು ಹೇಳುತ್ತಾರೆ.) ಮಹಾನುಭಾವರಿಗೂ ಮಹತ್ತಾದ ಅಂದರೆ ಬ್ರಹ್ಮಾದಿಗಳಿಂದಲೂ ಪೂಜ್ಯನಾದ ಕೇಶವನು ಪೂಜ್ಯನಾದ ಜ್ಞಾನಪೂರ್ಣನಾದ ತನ್ನ ಮಗನಾದ ಚತುರ್ಮುಖನಿಗೆ ಮೋಕ್ಷವನ್ನು ಕೊಡೋಣದರಿಂದ ಪುನಃ ಜ್ಞಾನಾದಿಗಳಿಂದ ಪೂರ್ಣೀಕರಿಸಿದನು, ಎಂದು ಪ್ರವೃತ್ತದಲ್ಲಿದೆ. ॥ 3 ॥ 67 ॥

ಎಲ್ಲಾ ಋಕ್ಕುಗಳೂ ಪ್ರಜ್ಞಾತಗಳೇ ಆಗಿವೆ. 'ಪ್ರಪ್ರವಸ್ತ್ರಿಷ್ಟುಭಂ' ಇತ್ಯಾದಿಗಳಿಗೆ ಮಾತ್ರ ಏನು ವಿಶೇಷವು. 'ಪ್ರಪ್ರವಸ್ತ್ರಿಷ್ಟುಭಮಿಷಮರ್ಚತ ಪ್ರಾರ್ಚತ' 'ಯೋ ವ್ಯತೀರನ್‌ಫಾಣಯತ್ ಇತಿ ಪ್ರಜ್ಞಾತಾನುಷ್ಟುಭಃ ಶಂಶಂತಿ' ಎಂದು ಹೇಳಲು ಕಾರಣವೇನು ಎಂದರೆ ಶೇಷವನ್ನು ಪೂರ್ಣೀಕರಿಸು ತ್ತಾರೆ.

**ಮಂ ॥ ಏತಾಸ್ಸರ್ವಾಃ ಪ್ರಜ್ಞಾತಾನುಷ್ಟುಭಃ ॥ ೧ ॥**

**ಮೂಲ ॥ ಯಥಾ ಸ್ಥಿತಾಃ ಪ್ರಜ್ಞಾತಾಃ ॥ ೬೮ ॥**

**ಅರ್ಥ ॥** 'ಅಥಾತಃ ಛಂದಾಂಸ್ಯೇವ ವ್ಯತಿಷಜತಿ' ಎಂದು ಪೂರ್ವ (3ನೇ)ಖಂಡದಲ್ಲಿ ಶಂಸನೀಯಗಳೆಂದು ಹೇಳಲ್ಪಟ್ಟ 'ಆತ್ವಾ ವಹಂತು ಹರಯಃ' ಎನ್ನುವುದನ್ನಾರಂಭಿಸಿ 'ತ್ರಿಕದ್ರುಕೇಷು ಮಹಿಷಃ' ಎಂಬ ಅತಿಛಂದಸ್ಸೇ ಅಂತ್ಯವಾಗಿ ಉಳ್ಳ ಋಕ್ಕುಗಳು ವ್ಯತಿಷಂಗದಿಂದ ಅನುಷ್ಟುಪ್‌ಗಳಾಗಿವೆ. ಈ ಒಂಭತ್ತಾದರೂ ('ಪ್ರಪ್ರವಸ್ತ್ರಿಷ್ಟುಭಃ' ಎಂಬುವುದನ್ನಾರಂಭಿಸಿ 'ಅರ್ಭಕೋನ ಕುಮಾರಕಃ' ಎಂಬುವ ಪರ್ಯಂತ 9 ಋಕ್ಕುಗಳಾದರೂ) ಇದ್ದ ಹಾಗೆಯೇ ವ್ಯತಿಷಂಗವಿಲ್ಲದೇನೇ ಅನುಷ್ಟುಪ್‌ಗಳಾಗಿ ಪ್ರಸಿದ್ಧಗಳಾಗಿವೆ. ॥ 68 ॥

'ಆತ್ವಾ ವಹಂತು' ಎನ್ನುವದನ್ನಾರಂಭಿಸಿ 'ಅತಿಛಂದಸ್ಸೇ' ಅಂತ್ಯವಾಗಿ ಉಳ್ಳ ಋಕ್ಕುಗಳನ್ನು ವ್ಯತಿಷಂಗದಿಂದ ಹೊಗಳಿದ ಮೇಲೆ 'ಪ್ರಪ್ರವಿಸ್ತ್ರಿಷ್ಟುಭಂ' ಇದು ಮೊದಲಾದವುಗಳನ್ನು ಇದ್ದ ಹಾಗೆ ಇರುವವುಗಳನ್ನು ಶಂಸನಮಾಡಬೇಕೆಂದುಕ್ತವಾಯಿತು. ಅದನ್ನು ಪ್ರಶಂಸನ ಮಾಡುವುದಕ್ಕಾಗಿ 'ತದ್ಯಥೇಹ ಚೇಹಚಾಪಥೇನ ಚರಿತ್ವಾ' ಇತ್ಯಾದಿ 'ಮಹಾನಾಮ್ನೀನಾಂ' ಎಂಬ 4ನೇ ಖಂಡದ ವಾಕ್ಯವು. ಅದು ನ್ಯೂನವಾಗಿದೆ. ಏಕೆಂದರೆ ಅಪಥಚರಣ ಪೂರ್ವಕವಾಗಿ ಪಥಃ ಪ್ರಾಪ್ತಿಯಾಗುತ್ತದೆಂದು ದೃಷ್ಟಾಂತ ಹೇಳಿ ದಾರ್ಷ್ಟಾಂತಿಕದಲ್ಲಿ ಅಪಥಚರಣ ಸ್ಥಾನದಲ್ಲಿರುವ ವ್ಯತಿಷಿಕ್ತ ಶಂಸನವನ್ನು ಹೇಳಲಿಲ್ಲ, ಎಂದರೆ ವ್ಯಾಖ್ಯಾನ ಮಾಡುತ್ತಾರೆ.

**ಮೂಲ ॥ ಇತಸ್ತತಃ ಸಂಯೋಜನಂ ವಿನಾ ಯಥಾ ಸ್ಥಿತ ಶಂಸನಂ ಪಥಃ ಪ್ರಾಪ್ತಿಃ ॥ ೬೯॥**

**ಅರ್ಥ ॥** ಅತ್ತಲಾಗಿತ್ತಲಾಗಿ ಅಂದರೆ ಸ್ಥಾನಾಂತರದಲ್ಲಿರುವ ವಾಕ್ಯಗಳ ಸಂಯೋಜನವಿಲ್ಲದೆ ಅಂದರೆ ವ್ಯತಿಷಿಕ್ತಶಂಸನವನ್ನು ಬಿಟ್ಟು (ವ್ಯತಿಷಿಕ್ತವನ್ನು ಶಂಸನ ಮಾಡಿದ ಮೇಲೆ) ಇದ್ದ ಹಾಗೆ ಹೊಗಳುವುದು ಪಥಃಪ್ರಾಪ್ತಿಯು. ಅಂದರೆ ಅಪಥಚರಣ ಪೂರ್ವಕವಾಗಿ ಪಥಪ್ರಾಪ್ತಿಗೆ ಸಮಾನವು.

**ತಾತ್ಪರ್ಯ ॥** ತಥಾ ಚ 'ತದ್ಯಥೇಹ ಚೇಹ ಚಾಪಥೇನ ಚರಿತ್ವಾ ಪಂಥಾನ ಪರ್ಯವೇಯಾತ್ತಾದೃಕ್ತದ್ಯತ್ತಜ್ಞಾತಾऽನುಷ್ಟುಭಃ ಶಂಸತಿ' ಎಂಬ ಬ್ರಾಹ್ಮಣವಾಕ್ಯದ ಅರ್ಥವು ಆ ದೃಷ್ಟಾಂತವು ಹೇಗೆಂದರೆ (ಇಹ ಚ ಇಹ ಚ) ಬಲಭಾಗದಲ್ಲಿಯೂ, ಎಡಭಾಗದಲ್ಲಿಯೂ, ಮಾರ್ಗಬಿಟ್ಟು ಸಂಚರಿಸಿ ಮಾರ್ಗವನ್ನು ಯಾರೊಬ್ಬನೂ ಹೊಂದಿದರೆ ಅದಕ್ಕೆ ಸಮಾನವು. (ಯಾವುದೆಂದರೆ) ಯಾವುದು ವ್ಯತಿಷಿಕ್ತವನ್ನು ಹೊಗಳಿದ ಮೇಲೆ ಇದ್ದ ಹಾಗೆ ಇರುವ ಅನುಷ್ಟುಪ್ ಗಳನ್ನು ಶಂಸನೆಮಾಡುತ್ತಾನೆ ಎನ್ನುವುದು. ಅಂದರೆ ವ್ಯತಿಷಿಕ್ತವನ್ನು ಹೊಗಳಿ ಶ್ರಾಂತನಾದವನಿಗೆ ಇದರ ಹೊಗಳುವಿಕೆಯು ಪ್ರಾಪ್ತವಾದರೆ ಸಂತೋಷವಾಗುತ್ತದೆ, ಎಂದು ತಾತ್ಪರ್ಯವು ॥ 69 ॥

ಈ ಪ್ರಕಾರ ವಿಹೃತಪಕ್ಷದಲ್ಲಿ ಅಂತ್ಯವಾದ 'ಉದ್ಯದ್ಬ್ರಧ್ನಸ್ಯ' ಎಂಬ ಋಕ್ಕು ಹೊರತು ಬೇರೆ ಶಸ್ತ್ರವು ಸಮೀಪಿಸಲ್ಪಟ್ಟಿತು. ಈಗ ವಿಹೃತ ಅವಿಹೃತ ಎಂಬ ಭೇದದಿಂದ ಎರಡು ಪ್ರಕಾರವೆಂದು ಹೇಳಲ್ಪಟ್ಟ ಷೋಳಶಿನಾಮಕ ಶಸ್ತ್ರಕ್ಕೆ 'ನಾನದಂ ಷೋಳಶಿ ಸಾಮ ಕರ್ತವ್ಯಮಿತ್ಯಾಹುಃ' 'ಗೌರವೀತಂ ಷೋಳಶಿ ಸಾಮ ಕುರ್ವೀತ' ಎಂದು ನಾನದ ಗೌರವೀತ ಸಾಮಗಳನ್ನು ಅನುಸರಿಸುವಿಕೆಯು ಇದೆ ಎಂದು ಹೇಳಿದುದರಿಂದ ಅವುಗಳ ಫಲಭೂತಗಳಾದ ಅಭ್ರಾತೃವ್ಯತ್ವ (ಶತ್ರುಗಳಿಲ್ಲದಿರುವಿಕೆಯು) ತೇಜಸ್ವಿತ್ವಾದಿಗಳೇ ಫಲಗಳೆಂದು 2ನೇ ಖಂಡದಲ್ಲಿ ಹೇಳಲ್ಪಟ್ಟಿದೆ. ಪುನಃ ಫಲಾಂತರಕ್ಕೂ ಕಾರಣವೆಂದು ಪ್ರಶಂಸೆಯು ಮಾಡಲ್ಪಡುತ್ತದೆ. ''ಸ ಯೋ ವ್ಯಾಪ್ತೋ ಗತಶ್ರೀರಿವ ಮನ್ಯೇತಾವಿಹೃತಂ ಷೋಳಶಿನಂ ಶಂಸಯೇತ್' ಎಂದು ಈ ವಾಕ್ಯವು ಅವಿಹೃತ ಪಕ್ಷವನ್ನು ಪ್ರಶಂಸನಮಾಡುವುದಕ್ಕಾಗಿ. ಅದರಲ್ಲಿ ವ್ಯಾಪ್ತ ಎನ್ನುವ ಪದಕ್ಕೆ ಸರ್ವತ್ರ ವ್ಯಾಪ್ತಿಯುಳ್ಳದ್ದು ಎಂದರ್ಥವು ಎಂಬುವ ಪ್ರತೀತಿಯನ್ನು ನಿರಾಸಮಾಡುವುದಕ್ಕಾಗಿ ಅರ್ಥವನ್ನು ಹೇಳುತ್ತಾರೆ.

**ಮೂಲ ॥ (೧) ವ್ಯಾಪ್ತೋ ವಿಶೇಷೇಣಾಪನ್ನಃ । (೨) ಅವಿಹೃತಮಸಂಸೃಷ್ಟಂ ॥ ೭೦ ॥**

**ಅರ್ಥ ॥** (1) ವ್ಯಾಪ್ತಃ=ವಿಶೇಷವಾಗಿ ಆಪತ್ತನ್ನು ಹೊಂದಿದವನು. (2) (ಅವಿಹೃತ ಪದಾರ್ಥವನ್ನು ಹೇಳುತ್ತಾರೆ.) ಅವಿಹೃತಂ=ಅಸಂಸೃಷ್ಟವು. ಚೆನ್ನಾಗಿ ಸಂಬಂಧಿಸಲ್ಪಡದಿರುವುದು ॥70॥

''ನೇಚ್ಛಂದಸಾಂ ಕೃಚ್ಛ್ರಾದ್ರವಪದ್ಯೈ'' ಎಂಬ ವಿಹರಣದಿಂದುಂಟಾದ ಛಂದೋಽಭಿಮಾನಿಗಳ ದುಃಖದಿಂದ (ವಾಕ್ಯಗಳನ್ನು ಅತ್ತಲಾಗಿತ್ತಲಾಗಿ ತೆಗೆದುಕೊಂಡು ಹೋದರೆ ಅಭಿಮಾನಿಗಳಿಗೂ ಅತ್ತಲಾಗಿತ್ತಲಾಗಿ ಗಮನವು ಪ್ರಾಪ್ತವಾಗುವುದರಿಂದ ದುಃಖವು ಉಂಟಾಗುವುದು) ಅವರಿಗೆ ದುಃಖವನ್ನು ಹೊಂದಿಸಿಕೊಟ್ಟ ನಿಮಿತ್ತಪಾಪದಿಂದ ನರಕಾದಿಗಳನ್ನು ಹೊಂದಲಾರೆ ಎಂದು ವಿಹೃತಪಕ್ಷದಲ್ಲಿ ನಿಂದೆಯು ತೋರುತ್ತದೆ. ಆದಕಾರಣ ಯೋಗ್ಯರೀತಿಯಾಗಿ ವ್ಯಾಖ್ಯಾನ ಮಾಡುತ್ತಾರೆ-

**ಮೂಲ ।। ಕೃಚ್ಛ್ರಾದಯಥಾಸ್ಥಿತ ಶಂಸನ ನಿಮಿತ್ತಾದ್ದುಃಖಾದವಾಗ್ಗತಿಂ**
**ಗತ ಶ್ರೀಕತಾಮೇವ ನ ಪ್ರಾಪ್ನುಯಾಂ ।। ೭೧ ।।**

**ಅರ್ಥ ।।** ಯಥಾಸ್ಥಿತವಾಗದಿರುವ ಅಂದರೆ ಸ್ಥಾನಾಂತರದಲ್ಲಿದ್ದ ವಾಕ್ಯಗಳ ವ್ಯತಿ ಸಂಗವುಳ್ಳ ವಾಕ್ಯಗಳ ಹೊಗಳುವಿಕೆ ನಿಮಿತ್ತವಾಗಿ ಉಂಟಾದ ದುಃಖದಿಂದ ಅಧೋಗತಿಯನ್ನು ಅಂದರೆ ಹೋಗಲ್ಪಟ್ಟ ಶೋಭೆಯಳ್ಳತನವನ್ನೇ ಹೊಂದಲಾರೆ.

**ತಾತ್ಪರ್ಯ ।।** ತಥಾಚ ಹೀಗೆ ಅರ್ಥವು. ಯಾವ ಪುರುಷನು ತನ್ನನ್ನು ವಿಶೇಷತಃ ಆಪತ್ತನ್ನು ಹೊಂದಿದವನು ಆಗಿರುತ್ತೇನೆಂದು ತಿಳಿಯುತ್ತಾನೋ, ಸಂಪತ್ತು ಹೋಗುವ ಕಾರಣವನ್ನು ನೋಡಿ ಹೋಗಲ್ಪಟ್ಟ ಸಂಪತ್ತುಳ್ಳವನು ಆಗುವೆನೆಂದು ಯಜಮಾನನು ತಿಳಿಯುತ್ತಾನೋ, ಛಂದಸ್ಸುಗಳ ಕೃಚ್ಛ್ರದಿಂದ ಅವುಗಳನ್ನು ಅತ್ತಲಾಗಿತ್ತಲಾಗಿ ತೆಗೆದುಕೊಂಡು ಹೋಗೋಣದರಿಂದುಂಟಾದ ಶ್ರಮನಿಮಿತ್ತಕ ದುಃಖದಿಂದ ಹೋಗಲ್ಪಟ್ಟ ಶೋಭೆವುಳ್ಳತನವನ್ನು ಹೊಂದಲಾರೆ ಎಂದು ಹೋತೃ ಪುರುಷನು ತಿಳಿಯುತ್ತಾನೋ, ಆತನು ಪ್ರಾಪ್ತವಾದ ವಿಶೇಷತಃ ಆಪತ್ತನ್ನು ಪರಿಹರಿಸುವುದಕ್ಕಾಗಿ ಸಂಪತ್ತು ಸ್ಥಿರವಾಗಿ ನಿಲ್ಲುವುದಕ್ಕಾಗಿಯೂ ಶೋಭೆಯು ಅಪಗಮನವು ಆಗದಿರುವುದಕ್ಕಾಗಿ ಅಂದರೆ ಶೋಭಾತಿಶಯಪ್ರಾಪ್ತಿಗಾಗಿಯೂ ಅಸಂಸೃಷ್ಟವಾದುದನ್ನು 'ಅಥ ಷೋಡಶೀ' ಇತ್ಯಾದಿ ಆಶ್ವಲಾಯನ ಸೂತ್ರಗಳಲ್ಲಿ ಹೇಳಲ್ಪಟ್ಟಪ್ರಕಾರ ಸ್ತುತಿಸಬೇಕು. ಇದರಲ್ಲಿ ಪ್ರಾಪ್ತವಾದ ಆಪತ್ಪರಿಹಾರ ಐಶ್ವರ್ಯಸ್ಥೈರ್ಯ ಈ ಎರಡು ಪ್ರಯೋಜನಗಳು ಯಜಮಾನನಿಗೆ ಸಂಬಂಧಪಟ್ಟವುಗಳು. 3ನೇದ್ದು (ಅತ್ತಲಾಗಿತ್ತಲಾಗಿ ವಿಹರಣದಿಂದುಂಟಾದ ಶ್ರಮನಿಮಿತ್ತಕವಾದ ದುಃಖದಿಂದುಂಟಾದ ಮುಖಮ್ಲಾನತಾಭಾವರೂಪವಾದ (ಮುಖ ಬಾಡದಿರುವುದು) ಶೋಭಾತಿಶಯವಿರುವುದು) ಹೋತೃಪುರುಷನಿಗೆ ಸಂಬಂಧಪಟ್ಟದ್ದು. ಅದರಲ್ಲಿ ಯಜಮಾನನಲ್ಲಿರುವ ಎರಡು ಪ್ರಯೋಜನಗಳು ವಿವಕ್ಷಿತವಾದರೆ ಯಜ್ಞಾದಿರೂಪ ಕರ್ಮದಲ್ಲಿ ಯಜಮಾನನು ಹೋತೃ ಪುರುಷನಿಂದ ವಿಹೃತವಾದ ಷೋಳಶೀ ಶಸ್ತ್ರವನ್ನು ಶಂಸನೆಮಾಡಿಸಬೇಕು. 3ನೇದ್ದು ಪ್ರಯೋಜನವು ವಿವಕ್ಷಿತವಾದರೆ ಹೋತನು ತಾನೇ ಶಂಸನೆಮಾಡಬೇಕು ।। 71 ।।

ಯಥಾಶ್ರುತವಾಗಿ ವಿಹೃತಪಕ್ಷಕ್ಕೆ ನಿಂದೆಯೆಂದೇ ಏಕೆ ಹೇಳಬಾರದು? ಎಂದರೆ, ''ಅಥ ಯಃ ಪಾಪ್ಮಾನಮಭಿಜಿಘಾಂಸುಃ'' ಎಂದು ಉತ್ತರಬ್ರಾಹ್ಮಣದಲ್ಲಿ ವಿಹೃತಶಂಸನವು ಪಾಪಪರಿಹಾರಕವೆಂದೇ ಹೇಳಿರುತ್ತದೆ. ಹಾಗಾದರೆ 2 ವಾಕ್ಯಗಳಿಗೆ (ಅಂದರೆ ವಿಹೃತಶಂಸನಕ್ಕೆ ಪಾಪಪರಿಹಾರವು ಪ್ರಯೋಜನವು ಎಂದು ಪ್ರತಿಪಾದಿಸತಕ್ಕ ವಾಕ್ಯವನ್ನನುಸರಿಸಿ 'ನೇಚ್ಛಂದಸಾಂ' ಎಂಬ ವಾಕ್ಯವನ್ನು ವ್ಯಾಖ್ಯಾನಮಾಡಿದರೆ ಅರ್ಥವಾದ ವಾಕ್ಯದಲ್ಲಿದ್ದ ಅವಿಹೃತಂ ಷೋಳಶಿನಂ ಶಂಸಯೇತ್ ' 'ವಿಹೃತಂ ಷೋಳಶಿನಂ ಶಂಸಯೇತ್' ಎಂದು ವಿಹೃತಾವಿಹೃತ ಷೋಳಶೀ ಪ್ರತಿಪಾದಕ ಎರಡು ವಾಕ್ಯಗಳಿಗೆ)

ಯಾಗಾದಿಗಳಲ್ಲಿ ಶಂಸನಾದಿರೂಪ ಕ್ರಿಯೆಯನ್ನು ಮಾಡುವ ವಿಷಯದಲ್ಲಿ ತಾತ್ಪರ್ಯವನ್ನು ಪರಿಕಲ್ಪಿಸಿ 'ಸ ಯೋ ವ್ಯಾಪ್ತಃ' ಎಂಬ ವಾಕ್ಯದಲ್ಲಿ ಪ್ರತಿಪಾದಿಸಲ್ಪಟ್ಟ ಫಲವನ್ನು ಅಸತ್ಯವೆಂದು ಕಲ್ಪಿಸಬಹುದು. 'ವ್ಯಾಪ್ತಃ ವಿಶೇಷಣಾಪನ್ನಃ' ಇತ್ಯಾದಿ ವ್ಯಾಖ್ಯಾನದಿಂದ ಏನು ಪ್ರಯೋಜನವು? ತಥಾಚ ಅರ್ಥವಾದಗಳಿಗೆ ವಿಧಿವಾಕ್ಯದಿಂದ ಏಕವಾಕ್ಯತ್ವವನ್ನು ಹೊಂದಿಯೇ ಸ್ವಾರ್ಥದಲ್ಲಿ ಪ್ರಾಮಾಣ್ಯವು. ಕೇವಲ ಸ್ವಾರ್ಥದಲ್ಲಿಲ್ಲ, ಹಾಗಾದರೆ ವಾಕ್ಯಗಳಿಗೆ ವಿಧಿವಾಕ್ಯದಿಂದ ಬೋಧಿಸಲ್ಪಟ್ಟ ಕ್ರಿಯೆಯನ್ನು ಮಾಡಬೇಕೆನ್ನುವಲ್ಲಿ ತಾತ್ಪರ್ಯವನ್ನು ಪರಿಕಲ್ಪಿಸಿ ಫಲವು ಅಸತ್ಯವೆಂದೂ ಕಲ್ಪಿಸಿ ಅದನ್ನು ಪ್ರತಿಪಾದಿಸತಕ್ಕ ಅರ್ಥವಾದ ವಾಕ್ಯದ ಏಕದೇಶಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಕಲ್ಪಿಸಬಹುದು. ಅದನ್ನನುಸರಿಸಿ ಹೀಗೆ ವ್ಯಾಖ್ಯಾನ ಏತಕ್ಕೆ. ಎಂದನ್ನಕೂಡದು. ಯಥಾಸ್ಥಿತವಾಗಿ ಸ್ವರೂಪವನ್ನು ಪ್ರತಿಪಾದಿಸುವ ಆಗಮದಿಂದ ವಿಹೃತಾವಿಹೃತ ಶಂಸನವನ್ನು ಪ್ರತಿಪಾದಿಸುವ ವಾಕ್ಯಗಳಿಗೆ 'ಸ ಯೋ ವ್ಯಾಪ್ತಃ' 'ಅಥ ಯಃ' ಎಂಬ ಎರಡು ವಾಕ್ಯಗಳಲ್ಲಿ ಹೇಳಿದ ಆಪತ್ಪ್ರಾಪ್ತಿಪರಿಹಾರ ಪಾಪಪರಿಹಾರಗಳೆಂಬ ಫಲಗಳು ಸತ್ಯಗಳೆಂದೇ ಹೇಳಿರುತ್ತವೆ ಎನ್ನುತ್ತಾರೆ-

**ಮೂಲ ॥ (೧) ವಿಲೋಮಃ ಶತ್ರುಜಯಕೃತ್ಸಂಸರ್ಗಃ ಪಾಪ ನಾಶನಃ । ಯಥಾಸ್ಥಿತಃ ಶ್ರೀಕರಃ ಸ್ಯಾತ್ಸ್ವಾಧ್ಯಾಯಃ ಶಂಸನೇಽಪಿ ಚ ॥ ಇತಿ ಪ್ರವೃತ್ತೇ ॥ (೨) ಗತ ಶ್ರಿಯಃ ಶ್ರಿಯೋ ಹಾನಿಂ ಪಾಪ ಹಾನಿಂ ಪರಸ್ಯ ಚ । ಸಂಸರ್ಗಶ್ಛಂದಸಾಂ ಕುರ್ಯಾಚ್ಛ್ರಿಯೋ ವೃದ್ಧಿಂ ಯಥಾ ಸ್ಥಿತಃ ॥ ಇತಿ ಸ್ವಾಧ್ಯಾಯತತ್ವೇ ॥ ೭೨ ॥**

**ಅರ್ಥ ॥** (ವೈಲೋಮ್ಯವೆಂದರೆ ಅಂತ್ಯದ ವಾಕ್ಯವನ್ನಾರಂಭಿಸಿ ಆದಿವಾಕ್ಯಪರ್ಯಂತ ವಿಪರೀತ ವಾಗಿ ಪಠನಮಾಡುವುದು.) ವಿಲೋಮಾದಿಗಳಿಂದ ಯುಕ್ತವಾದ ಸ್ವಾಧ್ಯಾಯವು (ಯಜ್ಞದಿಂದ ಇತರವಾದ ಜಪವು) ಶತ್ರುಗಳ ಜಯವನ್ನು ಮಾಡತಕ್ಕುದು. ಸಂಸೃಷ್ಟವಾದ ಸ್ವಾಧ್ಯಾಯವು ಪಾಪಗಳನ್ನು ನಾಶಪಡಿಸುವುದು. ಯಥಾಸ್ಥಿತವಾದ (ಇದ್ದಹಾಗೆ ಇರುವ) ಸ್ವಾಧ್ಯಾಯವು ಸಂಪತ್ಕರವು. ಯಜ್ಞದಲ್ಲಿ ಇಂತಹ ವಿಲೋಮವಾದ, ಸಂಸೃಷ್ಟ (ಸಂಯೋಜಿತ)ವಾದ, ಇದ್ದಹಾಗೆ ಇರುವ ಶಸ್ತ್ರವನ್ನು ಶಂಸನಮಾಡಿದರೂ ಶ್ರತುಜಯಾದಿಗಳೇ ಫಲವು. ಎಂದು ಪ್ರವೃತ್ತದಲ್ಲಿದೆ. (2) ನಾಶೋನ್ಮುಖವಾದ (ನಾಶವಾಗಲಿಕ್ಕೆ ಬೇಕಾದ ಕಾರಣಗಳಿರುವ) ಸಂಪತ್ತುಳ್ಳವನಿಗೆ ಸಂಪತ್ತಿನ ನಾಶವನ್ನು, ನಾಶೋನ್ಮುಖ ವಾಗದಿರುವ ಸಂಪತ್ತುಳ್ಳವನಿಗೆ ಪಾಪಗಳ ಹಾನಿಯನ್ನು, ಛಂದಸ್ಸುಗಳ ಸಂಸರ್ಗವು ಮಾಡುವುದು. ಇದ್ದಹಾಗೆ ಶಂಸನವು ಸಂಪತ್ತಿನ ವೃದ್ಧಿಯನ್ನೂ ಮಾಡುವುದು. ಅಥವಾ ಛಂದಸ್ಸುಗಳ ಸಂಸರ್ಗವು ಹೋತೃವಿನ ಮತ್ತು ಯಜಮಾನನ ಪಾಪಗಳಿಗೆ ನಾಶವನ್ನು ಮಾಡುವುದು. ಇದ್ದಹಾಗೆ ಹೊಗಳುವುದು ನಾಶೋನ್ಮುಖವಾದ ಸಂಪತ್ತುಳ್ಳವನಿಗೆ ಸಂಪತ್ತಿನ ಹಾನಿಯನ್ನೂ, ನಾಶೋನ್ಮುಖವಾಗದಿರುವ ಸಂಪತ್ತುಳ್ಳವನಿಗೆ ಸಂಪತ್ತಿನ ವೃದ್ಧಿಯನ್ನೂ ಮಾಡುವುದು, ಎಂದು ಸ್ವಾಧ್ಯಾಯತತ್ವದಲ್ಲಿದೆ ॥ 72 ॥

'ಗತಶ್ರೀರಿವ ಮನ್ಯೇತ' ಎನ್ನುವಲ್ಲಿ ಇವ ಶಬ್ದವು ಏತಕ್ಕೆಂದರೆ ಪ್ರಮಾಣಪೂರ್ವಕವಾಗಿ ವ್ಯಾಖ್ಯಾನ ಮಾಡುತ್ತಾರೆ-

**ಮೂಲ ॥ ಕಿಂಚಿತ್ವೇ ಚೋಭಯತ್ವೇ ಚ ಸಂಶಯೇ ಸದೃಶೇ ತಥಾ । ಇವಶಬ್ದಃ ಪ್ರಯುಜ್ಯೇತ ನ್ಯಕ್ಕಾರೇಽಪಿ ಚ ಪಂಡಿತೈಃ ॥ ಇತಿ ಶಬ್ದನಿರ್ಣಯೇ ॥ ಅತೋಗತ ಶ್ರೀತ್ವ ಸಂಶಯೇಽಪೀತ್ಯರ್ಥಃ ॥ ೭೩ ॥**

**ಅರ್ಥ ॥** ಸ್ವಲ್ಪ ಎನ್ನುವ ಅರ್ಥದಲ್ಲಿಯೂ, ಎರಡು ಎನ್ನುವ ಅರ್ಥದಲ್ಲಿಯೂ, ಸಂಶಯ ಎನ್ನುವ ಅರ್ಥದಲ್ಲಿಯೂ, ಸದೃಶ ಎನ್ನುವು ಅರ್ಥದಲ್ಲಿಯೂ, ತಿರಸ್ಕಾರ ಎನ್ನುವ ಅರ್ಥದಲ್ಲಿಯೂ ಪಂಡಿತರಿಂದ ಇವಶಬ್ದವು ಪ್ರಯೋಗಿಸಲ್ಪಡುತ್ತದೆ,, ಎಂದು ಶಬ್ದನಿರ್ಣಯದಲ್ಲಿದೆ. ಆದಕಾರಣ ವಿನಾಶೋನ್ಮುಖವಾದ ಸಂಪತ್ತು ಎಂದು ಸಂಶಯವಿದ್ದರೂ, ಎಂದು ಇವಶಬ್ದಕ್ಕೆ ಅರ್ಥವು. ॥ 73 ॥

ಈ ಪ್ರಕಾರ ಅವ್ಯತಿಷಿಕ್ತ ಶಂಸನವನ್ನು ಪ್ರಶಂಸಾಮಾಡಿದ ಮೇಲೆ ವ್ಯತಿಷಿಕ್ತ ಶಂಸನವನ್ನು ಪ್ರಶಂಸಾಮಾಡುವುದಕ್ಕಾಗಿ 'ಅಥ ಯಃ ಪಾಪ್ಮಾನಂ' ಎಂಬ ವಾಕ್ಯವು. ಅದರಲ್ಲಿ ವಿಹೃತಶ್ಬಾರ್ಥವನ್ನು ಹೇಳುತ್ತಾರೆ-

**ಮೂಲ ॥ ಇತಸ್ತತೋ ವಿಶೇಷೇಣ ಸಂಹೃತಂ ಸಂಯೋಜಿತಂ ವಿಹೃತಂ ॥ ೭೪ ॥**

**ಅರ್ಥ ॥** ಅತ್ತಲಾಗಿತ್ತಲಾಗಿನಿಂದ ವಿಶೇಷತಃ ಸಂಹೃತವಾದದ್ದು. ಅಂದರೆ ಸಂಯೋಜಿಸಲ್ಪಟ್ಟದ್ದು ವಿಹೃತವೆನ್ನಿಸುತ್ತದೆ. ॥ 74 ॥

''ಯಃ ಪುರುಷಃ ಪಾಪ್ಮಾನಮಪಜಿಘಾಂಸುಃ ಸ್ಯಾತ್ ಸ ವಿಹೃತಂ ಷೋಳಶಿನಂ ಶಂಸಯೇತ್'' ಎನ್ನುವಲ್ಲಿ ಉಪಪತ್ತಿಯು ಹೇಳಲ್ಪಡುತ್ತದೆ. ''ವ್ಯತಿಷಿಕ್ತ ಇವ ವೈ ಪುರುಷಃ ಪಾಪ್ಮನಾವ್ಯತಿಷಿಕ್ತಮೇವಾಸ್ಮೈತತ್ಪಾಪ್ಮಾನಂ ಶಮಲಮಪಹಂತಿ'' ಅಂದರೆ ಯಾವ ಕಾರಣದಿಂದ ಪುರುಷನು ಪಾಪದಿಂದ ಸಂಬದ್ಧನೋ, ಆದುದರಿಂದ ವ್ಯತಿಷಿಕ್ತಶಂಸನವೇ ಈ ಪುರುಷನ ಪಾಪವನ್ನು ನಾಶಗೊಳಿತಸುತ್ತದೆ. ಅದನ್ನು ಆಗಮವಾಕ್ಯದಿಂದಲೇ ಉಪಪಾದಿಸುತ್ತಾರೆ-

**ಮೂಲ ॥ (೧) ಪಾಪಾನಾಂ ವ್ಯತಿಷಕ್ತತ್ವಾದ್ವ್ಯತಿಷಕ್ತಂ ವಿನಾಶಕಂ । ಧನಸ್ಯಾವ್ಯತಿಷಂಗೇಣ ವ್ಯತಿಷಂಗೋಽವಿನಾಶಕಃ । (೨) ಸದೃಶಂ ಸದೃಶಸ್ಯೈವ ಯತಃ ಸ್ಯಾತ್ಪ್ರವಿನಾಶಕಂ । ತಥಾಪ್ಯಪ್ರಾಪ್ತ ನಾಶಸ್ಯ ಧನಸ್ಯ ಬಲವತ್ತ್ವತಃ । ಶಕ್ನುಯಾನ್ನವಿನಾಶಾಯ ಪಾಪಸ್ಯೇಚ್ಛಾ ಸಮೇಧಿತಂ । ಸಂಸ್ಪೃಷ್ಟಂ ಸ್ಯಾದ್ವಿನಾಶಾಯ ॥ ೭೫ ॥**

**ಅರ್ಥ ॥** (1) ಪಾಪಗಳಿಗೆ ಸಂಸೃಷ್ಟತ್ವವಿದ್ದ ಪ್ರಯುಕ್ತ ವ್ಯತಿಷಕ್ತ ಶಂಸನವು ಪಾಪಗಳನ್ನು ವಿನಾಶಗೊಳಿಸುವುದು. ದ್ರವ್ಯಕ್ಕಾದರೂ ವ್ಯತಿಷಂಗವಿಲ್ಲದಿರುವುದರಿಂದ ವ್ಯತಿಷಂಗವು ಧನಕ್ಕೆ ವಿನಾಶಕವಾಗುವುದಿಲ್ಲ. (ಅಂದರೆ ಧನಕ್ಕೆ ಪುರುಷನಿಂದ ಸ್ವಸ್ವಾಮಿಭಾವರೂಪ ಸಂಗಮಾತ್ರವಿರುವುದು. ಪಾಪದಂತೆ ಸಂಸೃಷ್ಟತ್ವ (ಅತ್ಯಂತ ಸಂಬಂಧ)ವಿರುವುದಿಲ್ಲ.) (2) (ವ್ಯತಿಷಂಗವಿಲ್ಲದಿದ್ದರೂ ಏಕೆ ವಿನಾಶಕವಾಗುವುದಿಲ್ಲವೆಂದರೆ-) ಯಾವ ಕಾರಣದಿಂದ ಸದೃಶವಾದುದು ಸದೃಶವಾದುದಕ್ಕೇನೇ ಅತಿಶಯವಾಗಿ ವಿನಾಶಕವಾಗುವುದು. ಆದಾಗ್ಯೂ ಅಪ್ರಾರ್ಥಿತವಾದ ನಾಶವುಳ್ಳ ಧನಕ್ಕೆ ಪ್ರಾಬಲ್ಯ ವಿರುವುದರಿಂದ ಸಂಸೃಷ್ಟವು ವಿನಾಶಕ್ಕಾಗಿ ಸಮರ್ಥವಾಗಲಾರದು. 'ನನ್ನ ಪಾಪಾದಿಗಳು ನಾಶ ಹೊಂದಲಿ' ಎಂಬ ಇಚ್ಛೆಯಿಂದ ಯುಕ್ತವಾದದ್ದು ಯಾವುದು ಸಂಸೃಷ್ಟವೋ (ಸಂಯೋಜಸಲ್ಪಟ್ಟದ್ದೋ) ಅದೇ ಸಂಸೃಷ್ಟವಾದ ಪಾಪಾದಿಗಳ ವಿನಾಶಕ್ಕಾಗಿ ಆಗುವುದು. (ಆದಕಾರಣ ಧನಕ್ಕೆ ಅವಿನಾಶಕವಾಗುವುದು.)

**ತಾತ್ಪರ್ಯ ॥** ನಾಶವಾಗಲಿ ಎಂಬ ಇಚ್ಛೆಗೆ ವಿಷಯವಾಗದಿರುವ ಧನದ ವಿನಾಶಕ್ಕಾಗಿ ಸಂಸೃಷ್ಟ ಶಂಸನವು ಸಮರ್ಥವಾಗಲಾರದು. ಏಕೆಂದರೆ ನಾವು ಇಚ್ಛಾಯುಕ್ತವಾದ ಸಂಸೃಷ್ಟವು ಪಾಪವನ್ನು ವಿನಾಶಗೊಳಿಸುವುದು ಎನ್ನುತ್ತೇವೆ. ಧನವು ನಾಶವಾಗಬೇಕೆನ್ನುವಲ್ಲಿ ಇಚ್ಛೆಯಿಲ್ಲ, ಆದಕಾರಣ ನಾಶಪ್ರಯೋಜಕದಲ್ಲಿ ಸೇರಿದ ವಿಶೇಷಣವಾದ ಇಚ್ಛೆಯಿಲ್ಲದಿರುವುದರಿಂದ ಧನವು ಬಲವುಳ್ಳದ್ದು ನಾಶವನ್ನು ಹೊಂದದಿರುವುದು ಎಂದು ಉಕ್ತವಾಯಿತು. ಇದರಿಂದ ಪಾಪದಂತೆ ಪುಣ್ಯವು ನಾಶವಾಗಬಹುದಷ್ಟೆ! ಎಂದರೆ ಪುಣ್ಯವು ನಾಶವಾಗಬೇಕೆಂದು ಇಚ್ಛೆಯಿಲ್ಲದಿರುವುದರಿಂದ ಪುಣ್ಯಕ್ಕೆ ವಿನಾಶಕವಾಗುವುದಿಲ್ಲ, ಎಂದುಕ್ತವಾಯಿತು. ॥ 75 ॥

ಧನಕ್ಕೆ ನಾಶವು ಏಕೆ ಪ್ರಾಪ್ತವಾಗುವುದಿಲ್ಲವೆಂದರೆ-

**ಮೂಲ ॥ ನ ಹೀಚ್ಛಾ ಧನಸಂಕ್ಷಯೇ ॥ ಇತಿ ಸ್ವಾಧ್ಯಾಯತತ್ತ್ವೇ ॥ ೭೬ ॥**

**ಅರ್ಥ ॥** ಧನವು ನಾಶವಾಗಬೇಕೆನ್ನುವಲ್ಲಿ ಇಚ್ಛೆಯು ಇಲ್ಲವಷ್ಟೆ! ಎಂದು ಸ್ವಾಧ್ಯಾಯತತ್ತ್ವದಲ್ಲಿದೆ.

**ತಾತ್ಪರ್ಯ ॥** ವಿರಕ್ತಾದಿಗಳಿಗೆ ಧನನಾಶವಾಗಬೇಕೆಂದು ಇಚ್ಛೆಯಿದ್ದರೆ ಅವರಿಗೆ ಧನವೂ ಪಾಪಕ್ಕೆ ಸಮಾನವೇ ಆಗುವುದು. ॥ 76 ॥

ಪಾಪಗಳು ಮಿಥ್ಯೆಯಾದುದರಿಂದ ಪುರುಷನಿಗೆ ಪಾಪವದೆ ಎನ್ನುವುದು ಭ್ರಾಂತಿಯೇ. ಪುರುಷನು ಸರ್ವದಾ (ಸಂಸಾರಾವಸ್ಥೆಯಲ್ಲಿಯೂ) ಶುದ್ಧನೇ ಆಗಿರುತ್ತಾನೆ. ಎಂದು ''ವ್ಯತಿಷಕ್ತ ಇವ'' ಎನ್ನುವಲ್ಲಿದ್ದ 'ಇವ'ಶಬ್ದದಿಂದ ತೋರುತ್ತದೆ. ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ವ್ಯಾಖ್ಯಾನ ಮಾಡುತ್ತಾರೆ-

**ಮೂಲ ॥ ಅವ್ಯತಿಷಕ್ತತ್ವಂ ಚ ಮೋಕ್ಷೇ ವರ್ತತ ಇತ್ಯತ್ರೋಭಯಾರ್ಥಃ ಇವ ಶಬ್ದಃ ॥ ೭೭ ॥**

**ಅರ್ಥ ॥** ಅವ್ಯತಿಷಕ್ತತ್ವವು ಮುಕ್ತಿಯಲ್ಲಿದೆ ಎಂದು ಇಲ್ಲಿ (ಸಂಸಾರಾವಸ್ಥೆಯಲ್ಲಿ ಪಾಪದಿಂದ ವ್ಯತಿಷಕ್ತ (ಸಂಬದ್ಧ)ನು ಮೋಕ್ಷದಲ್ಲಿ ವ್ಯತಿಷಕ್ತನಲ್ಲ ಹೀಗೆ) ಎರಡು ಅರ್ಥವುಳ್ಳದ್ದು 'ಇವ ' ಶಬ್ದವು. ॥ 77 ॥

'ವ್ಯತಿಷಕ್ತಮೇವ ಶಂಸನಂ ಪಾಪ್ಮಾನಮಪಹಂತಿ' ಎಂಬ ಶ್ರುತಿಯಲ್ಲಿ ವ್ಯತಿಷಕ್ತ ಶಂಸನವೇ ಪಾಪವನ್ನು ವಿನಾಶಗೊಳಿಸುತ್ತದೆ ಎಂದು ವ್ಯತಿಷಕ್ತಶಂಸನಕ್ಕೆ ಪಾಪಪರಿಹಾರಕರ್ತೃತ್ವವು ತೋರುತ್ತದೆ. ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಹೇಳುತ್ತಾರೆ-

**ಮೂಲ ॥ (೧) ಏವಂ ಭೂತೇನ ಶಂಸನೇನ ಪಾಪ್ಮಾನಮಪಹಂತಿ । (೨) ಶಮಲಂ ರಾಗಾದಿಕಂ ಚ । ಪಾಪಸ್ಯ ಪೃಥಗುಕ್ತೇಃ । (೩) ಶಮಲಂ ಪಾಪಮುದ್ದಿಷ್ಟಂ ರಾಗದ್ವೇಷಾದಿಕಂ ತಥಾ । ಅಪರಾಧಶ್ಚ ಶಮಲಂ ಮಲಂ ಚ ಶಮಲಂ ವಿದುಃ ॥ ಇತಿ ಶಬ್ದನಿರ್ಣಯೇ ॥ ೭೮ ॥**

**ಅರ್ಥ ॥** (1) ಇಂತಹ ಶಂಸನದಿಂದ (ಪ್ರಸನ್ನನಾದ ಶ್ರೀಹರಿಯು) ಪಾಪವನ್ನೂ

ನಾಶಮಾಡುತ್ತಾನೆ. (2) ಶಮಲವೆಂದರೆ ರಾಗಾದಿಗಳು, ಪಾಪವನ್ನು ಪ್ರತ್ಯೇಕ ಹೇಳಿರುವುದರಿಂದ. (3) (ಪಾಪವನ್ನು ಪ್ರತ್ಯೇಕ ಹೇಳಿರುವುದರಿಂದ ಪೌನರುಕ್ತ್ಯಭಯದಿಂದಲೇ ಶಮಲಶಬ್ದಕ್ಕೆ ರಾಗಾದಿಗಳೆಂದರ್ಥಮಾಡಿದ್ದಲ್ಲ, ಮತ್ತೆ ಶಮಲಶಬ್ದಕ್ಕೆ ರಾಗಾದಿಗಳು ವಾಚ್ಯಾರ್ಥವೂ ಆಗುತ್ತದೆ ಎನ್ನುವಲ್ಲಿ ಪ್ರಮಾಣ ಹೇಳುತ್ತಾರೆ) ಶಮಲವೆಂದರೆ ಪಾಪವೆಂದು ಹೇಳಲ್ಪಟ್ಟದೆ. ಹಾಗೆಯೇ ರಾಗದ್ವೇಷಾದಿಗಳೂ, ಅಪರಾಧವೂ ಶಮಲವೆನ್ನಿಸುತ್ತದೆ. ಮಲವನ್ನು ಶಮಲವೆಂದು ತಿಳಿಯುತ್ತಾರೆ, ಎಂದು ಶಬ್ದನಿರ್ಣಯದಲ್ಲಿದೆ. ॥ 78 ॥

''ಅಪಪಾಪ್ಮಾನಂ ಹತೇ ಯ ಏವಂ ವೇದ'' ಎಂದು ಕೇವಲ ಜ್ಞಾನದಿಂದ ಪಾಪವು ನಾಶವಾಗುತ್ತದೆಂದು ಹೇಳಲ್ಪಡುತ್ತದೆ. ಅದಯುಕ್ತವು. ಹಾಗಿದ್ದರೆ ಶಂಸನವು ವ್ಯರ್ಥವಾಗಬೇಕಾಗುವುದು. ಹೇಗೆಂದರೆ- ಶಂಸನವೂ ಜ್ಞಾನಪೂರ್ವಕವಾಗಿದೆ. ತಥಾಚ ಜ್ಞಾನವಿಲ್ಲದೆ ಶಂಸನವು ಕೂಡದಿರುವುದರಿಂದ ಮೊದಲು ಜ್ಞಾನವನ್ನು ಸಂಪಾದಿಸಿ ಅದರಿಂದಲೇ ಪಾಪನಿವೃತ್ತಿಯಾಗುವಾಗ ''ಮೂಲೇ ಲಬ್ಧಫಲೋ ನೈವ ಶಾಖಾಗ್ರಂ ಗಂತುಮಿಚ್ಛತಿ'' ಎಂಬ ನ್ಯಾಯದಿಂದ ಶಂಸನವು ವ್ಯರ್ಥವಾಗುವುದು. ಆದಕಾರಣ ಅರ್ಥವಾದಗಳಿಗೆ ಸ್ವಾರ್ಥದಲ್ಲಿ ಪ್ರಾಮಾಣ್ಯವನ್ನು ಅವಶ್ಯವಾಗಿ ಒಡಂಬಡಬೇಕು. ಎಂದರೆ –

**ಮೂಲ ॥ (೧) ಯ ಏವಮುಪಾಸ್ತೇ ಸೋಽಪಿ ಪಾಪ್ಮಾನಮಪಹಂತಿ । (೨) ಋಕ್ಷು ಸಂಸೃಜ್ಯಮಾನಾಸು ಪ್ರೋಚ್ಯಮಾನಂ ಜನಾರ್ದನಂ । ಪುಂಸಂಸೃಷ್ಟಸ್ಯ ಪಾಪಸ್ಯ ನಿಹಂತಾರಂ ವಿಶೇಷತಃ । ತತ್ಪ್ರಸಾದೇನ ಮುಕ್ತಸ್ಯ ಪಾಪಾಸಂಸೃಷ್ಟತಾಮಪಿ । ಧ್ಯಾಯನ್ಕರ್ಮಾಣ್ಯಕೃತ್ವಾಪಿ ಮುಚ್ಯತೇ ಸರ್ವಪಾತಕೈಃ ॥ ಇತಿ ಪ್ರವೃತ್ತೇ ॥ ೭೯ ॥**

**ಅರ್ಥ ॥** (1) ಯಾರು ಹೀಗೆ ಉಪಾಸನಾ ಮಾಡುತ್ತಾರೋ ಆತನೂ ಪಾಪವನ್ನು ಕಳಕೊಳ್ಳುತ್ತಾನೆ. ('ಯ ಏವಂ ವೇದ' ಎನ್ನುವಲ್ಲಿದ್ದ ವೇದನವೆಂದರೆ, ಉಪಾಸನವೇ ವಿವಕ್ಷಿತವಾಗಿದೆ. ಜ್ಞಾನಮಾತ್ರವಲ್ಲ.) ಆದಪ್ರಯುಕ್ತ ಕೇವಲ ಜ್ಞಾನದಿಂದ ಪಾಪಪರಿಹಾರವು ಆಗುತ್ತದೆಂದು ಆ ವಾಕ್ಯದಿಂದ ಸಿದ್ಧವಾಗುವುದಿಲ್ಲ. (2) ಕೇವಲ ಉಪಾಸನವಾದರೂ ಸರ್ವಪಾಪಗಳ ನಾಶಕ್ಕೂ ಕಾರಣವಾಗುತ್ತದೆ. ಎನ್ನುವಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಋಕ್ಕುಗಳು ಸಂಸೃಷ್ಟಗಳಾಗುವಾಗ ಹೇಳಲ್ಪಡತಕ್ಕ ಜನಾರ್ದನನನ್ನು ಪುರುಷರನ್ನು ಚೆನ್ನಾಗಿ ಸಂಬಂಧಿಸಿಕೊಂಡಿರುವ ಪಾಪವನ್ನು ವಿಶೇಷತಃ ನಾಶಮಾಡುವವನ್ನಾಗಿಯೂ ಆ ಶ್ರೀಹರಿಯ ಅನುಗ್ರಹದಿಂದ ಮುಕ್ತನಿಗೆ ಪಾಪಸಂಸರ್ಗಾಭಾವವನ್ನು ಧ್ಯಾನಿಸುವ ಪುರುಷನು ಕರ್ಮಗಳನ್ನು ಮಾಡದಿದ್ದರೂ ಎಲ್ಲಾ ಪಾಪಗಳಿಂದಲೂ ಬಿಡಲ್ಪಡುತ್ತಾನೆ, ಎಂದು ಪ್ರವೃತ್ತದಲ್ಲಿದೆ.

**ತಾತ್ಪರ್ಯ ॥** 'ಧ್ಯಾಯನ್ ಕರ್ಮಾಣ್ಯಕೃತ್ವಾಪಿ' ಎಂದು ಶಂಸನಾದಿ ಕರ್ಮಗಳು ಇಲ್ಲದಿದ್ದರೂ ಧ್ಯಾನರೂಪ ಉಪಾಸನದಿಂದಲೇ ಸರ್ವಪಾಪನಿವೃತ್ತಿಯು ಆಗುತ್ತದೆಂದು ಸಿದ್ಧವಾಗುತ್ತದೆ. ಆದರೆ ಧ್ಯಾನವನ್ನು ಸಿದ್ಧೀಕರಿಸಿಕೊಂಡವರು ಮಾಡುವ ಶಂಸನಕ್ಕಾದರೂ ಪಾಪನಿವೃತ್ತಿರೂಪಫಲವು ಧ್ಯಾನದಿಂದಲೇ ಸಿದ್ಧಿಸುವುದರಿಂದ ಧ್ಯಾನಿಗಳ ಸಂಶಯವು ಅದಕ್ಕೆ ಸಾಧನವಾಗದಿದ್ದರೂ

ಅಪರೋಕ್ಷಜ್ಞಾನವು ಸಿದ್ಧವಾಗಿರುವುದರಿಂದ ಅದಕ್ಕೆ ಕಾರಣವಾಗದಿದ್ದರೂ ಮುಕ್ತಿಯಲ್ಲಿ ಆನಂದಾತಿಶಯಕ್ಕಾಗಿ ಆಗುವುದು. ॥ 79 ॥

ಈ ಪ್ರಕಾರ ಅರ್ಥವಾದಗಳಿಗೂ ಸ್ವಾರ್ಥದಲ್ಲಿ ಪ್ರಾಮಾಣ್ಯವನ್ನಂಗೀಕರಿಸಿ ಈ ವಾಕ್ಯಗಳನ್ನು ವ್ಯಾಖ್ಯಾನಮಾಡಿಯಾಯಿತು. ಈಗ 'ವಾಯುರ್ವೈಕ್ಷೇಪಿಷ್ಠಾದೇವತಾ' ಇದು ಮೊದಲಾದ ಅರ್ಥವಾದ ವಾಕ್ಯಗಳನ್ನುದಾಹರಿಸಿ ಇವುಗಳಿಗೆ ಸ್ವಾರ್ಥದಲ್ಲಿ ಪ್ರಾಮಾಣ್ಯವಿಲ್ಲ, ಮತ್ತೆ ನಿಯೋಗರೂಪವಾದ ಕಾರ್ಯದಲ್ಲಿಯೇ ಎಂದು ನಿರ್ಣಯಿಸಿಕೊಂಡಿರುವ ಮೀಮಾಂಸಕರಮತವನ್ನು ದೂಷಿಸುತ್ತಾರೆ–

**ಮೂಲ ॥ ನ ಚೈವಮಾದಿ ವಾಕ್ಯಾನಾಂ ಸ್ವಾರ್ಥೇ ಪ್ರಾಮಾಣ್ಯಾಭಾವಃ ॥ ೮೦ ॥**

**ಅರ್ಥ ॥** ಇದು ಮೊದಲಾದ ವಾಕ್ಯಗಳಿಗೆ ಸ್ವಾರ್ಥದಲ್ಲಿ ಪ್ರಾಮಾಣ್ಯವಿಲ್ಲವೆಂದಲ್ಲ. ॥ 80 ॥

ಅದನ್ನೇ ಉಪಪಾದಿಸುತ್ತಾರೆ- (1) ಸಿದ್ಧಾರ್ಥದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವಿಲ್ಲದಿರುವುದರಿಂದ ಅರ್ಥವಾದಗಳಿಗೆ ಸ್ವಾರ್ಥಗಳು ಸಿದ್ಧಗಳೇ ಆಗಿವೆ ಎಂದು ಅವುಗಳಿಗೆ ಅದರಲ್ಲಿ ಪ್ರಾಮಾಣ್ಯ ವಿಲ್ಲವೆಂದು ಕಲ್ಪಿಸಲ್ಪಡುತ್ತದೋ? (2) ಅಥವಾ ''ನೇಚ್ಛಂದಸಾಂ ಕೃಚ್ಛ್ರಾದವಪದ್ಯೈ'' ಎಂದು ವ್ಯತಿಷಕ್ತಶಂಸನವು ಪಾಪಕ್ಕೆ ಕಾರಣವೆಂದು ಪ್ರತಿಪಾದಿಸಿ ಪುನಃ ''ಅಥ ಯಃ ಪಾಪ್ಮಾನಮಪಜಿಘಾಂಸುಃ ಸ್ಯಾತ್'' ಎಂದು ಪಾಪಗಳ ನಿವೃತ್ತಿಗೆ ಕಾರಣವೆಂದು ಹೇಳಲ್ಪಡುತ್ತದೆ. ಹೀಗೆಯೇ 'ಸ್ತೇನಂ ಮನಃ ಅನೃತವಾದಿನೀ ವಾಕ್' ಇತ್ಯಾದಿ ಪ್ರದೇಶಗಳಲ್ಲಿಯೂ ಪರಸ್ಪರವಾಗಿಯೂ ಪ್ರಮಾಣಾಂತರದಿಂದಲೂ ವಿರೋಧವಿದ್ದುದರಿಂದ ಪ್ರಾಮಾಣ್ಯವಿಲ್ಲವೆಂದು ಕಲ್ಪಿಸಲ್ಪಡುತ್ತದೋ? (3) ಅಥವಾ ಅರ್ಥವಾದ ವಾಕ್ಯಗಳು ಸಾಕಾಂಕ್ಷಗಳಾದ ಪ್ರಯುಕ್ತ ವಿಧಿವಾಕ್ಯದ ಅಂಗವಾಗಿರುವುದರಿಂದ ಶಂಸನಾದಿಗಳನ್ನು ಮಾಡುವ ವಿಷಯದಲ್ಲಿ ತಾತ್ಪರ್ಯವನ್ನು ಅವಶ್ಯವಾಗಿ ಅಂಗೀಕರಿಸಬೇಕು. ಸ್ವಾರ್ಥದಲ್ಲಿಯೂ ತಾರ್ತ್ಪರ್ಯವನ್ನಂಗೀಕರಿಸಿದರೆ ಕಲ್ಪನಾಗೌರವವು ಪ್ರಸಕ್ತವಾಗುವುದರಿಂದ ಪ್ರಾಮಾಣ್ಯಾಭಾವವು ಕಲ್ಪಿಸಲ್ಪಡುತ್ತದೋ? (4) ಅಥವಾ ಪುರುಷರ ಪ್ರಯೋಜನಕ್ಕಾಗಿ ಪ್ರವೃತ್ತವಾದ ಆಮ್ನಾಯವು ಪ್ರವೃತ್ತಿನಿವೃತ್ತಿಗಳಿಗೆ ಉಪಯುಕ್ತವಾದ ಕ್ರಿಯಾರೂಪ ಅರ್ಥವನ್ನು ಪ್ರತಿಪಾದಿಸುವುದರಿಂದಲೇ ಸಫಲವಾಗುವ ಪ್ರಯುಕ್ತ ಅಂತಹ ಅರ್ಥವನ್ನು ಪ್ರತಿಪಾದಿಸದಿರುವ (ಭೂತಾರ್ಥ ಪ್ರತಿಪಾದಕ ಗಳಾದ) ಅರ್ಥವಾದಗಳಿಗೆ ವೈಯರ್ಥ್ಯ ಬರುವುದರಿಂದ ಪ್ರಾಮಾಣ್ಯಾಭಾವವು ಕಲ್ಪಿಸಲ್ಪಡುತ್ತದೋ? (5) ಅಥವಾ ಕ್ರಿಯೆಯನ್ನು ಪ್ರತಿಪಾದಿಸಿದರೇನೇ ವಾಕ್ಯಕ್ಕೆ ಪರ್ಯವಸಾನ ಬರುವುದರಿಂದ ಅದು ಇಲ್ಲದಿದ್ದರೆ ಆಕಾಂಕ್ಷಿತವಾದ ಅರ್ಥವು ಪೂರ್ತಿಯಾಗದಿರುವುದರಿಂದ ವಾಕ್ಯಾಭಾಸವಾಗುವ ಪ್ರಯುಕ್ತ ಪ್ರಾಮಾಣ್ಯಾಭಾವವು ಕಲ್ಪಿಸಲ್ಪಡುತ್ತದೋ? (6) ಅಥವಾ ವಾಯುಕ್ಷೇಪಿಷ್ಠತ್ವಾದಿಗಳು ಪ್ರಮಾಣಾಂತರದಿಂದ ತಿಳಿಯಲ್ಪಟ್ಟ ಅವುಗಳನ್ನು ತಿಳಿಸುವ 'ವಾಯುರ್ವೈ ಕ್ಷೇಪಿಷ್ಠಾ' ಇತ್ಯಾದಿ ಅರ್ಥವಾದ ವಾಕ್ಯಗಳು ಪ್ರಮಾಣಾಂತರದಿಂದ ತಿಳಿಯದಿರುವ ಅರ್ಥವನ್ನು ತಿಳಿಸದಿರುವವುಗಳಾದ ಪ್ರಯುಕ್ತ ಅವುಗಳಿಗೆ ಪ್ರಾಮಾಣ್ಯಭಾವವು ಕಲ್ಪಿಸಲ್ಪಡುತ್ತದೋ? 1ನೇದ್ದನ್ನು ದೂಷಿಸುತ್ತಾರೆ–

**ಮೂಲ ॥ ಸಿದ್ಧಾರ್ಥೇ ಪ್ರಾಮಾಣ್ಯಸ್ಯ ಸಾಧಿತತ್ವಾತ್ । ಅವಿರೋಧಾಚ್ಚ । ನ ಚ ಬಹ್ವರ್ಥೇಷು ತಾತ್ಪರ್ಯ ಕಲ್ಪನೇ ಕಲ್ಪನಾಗೌರವಂ । ವಚನೇನೈವ ಪ್ರತಿಯಮಾನತ್ವಾದರ್ಥಸ್ಯ ಕಲ್ಪನಾಭಾವಾತ್ ॥ ೮೧ ॥**

**ಅರ್ಥ ||** (1) ಸಿದ್ಧಾರ್ಥದಲ್ಲಿ ಪ್ರಾಮಾಣ್ಯಕ್ಕೆ ಸಾಧಿತತ್ವವಿದ್ದಪ್ರಯುಕ್ತ, (ಅಂದರೆ ಪ್ರಾಮಾಣ್ಯವನ್ನು ಸಾಧಿಸಿರುವುದರಿಂದ) (2ನೇದ್ದನ್ನು ನಿರಾಕರಿಸುತ್ತಾರೆ.) ವಿರೋಧವಿಲ್ಲದಿರುವುದ ರಿಂದ (''ನೇಚ್ಛಂದಸಾಂ'' ಇತ್ಯಾದಿಗಳಲ್ಲಿ ವಿರೋಧವಿಲ್ಲವೆಂದು ಹೇಳಿ ಆಗಿದೆ. ಹೀಗೆಯೇ ಬೇರೆ ಕಡೆಗಳಲ್ಲಿಯೂ ವಿರೋಧವಿಲ್ಲವೆಂದು ತಿಳಿಯತಕ್ಕುದು.) (3ನೇದ್ದನ್ನು ನಿಷೇಧಿಸುತ್ತಾರೆ.) ಅನೇಕಾರ್ಥಗಳಲ್ಲಿ ತಾತ್ಪರ್ಯವನ್ನು ಕಲ್ಪಿಸಿದರೆ ಕಲ್ಪನಾಗೌರವವಿಲ್ಲ, (ಏಕೆಂದರೆ) ವಚನದಿಂದಲೇ ಕೇವಲ ಶಬ್ದಶಕ್ತಿಯಿಂದ) ತೋರುವುದರಿಂದ ಅರ್ಥಕ್ಕೆ ಕಲ್ಪನೆಯಿಲ್ಲದಿರುವುದರಿಂದ.

**ತಾತ್ಪರ್ಯ ||** ಕಲ್ಪಿಸಿದರಷ್ಟೆ ಗೌರವವು. ಅನೇಕಾರ್ಥತ್ವವನ್ನು ಕಲ್ಪಿಸುವುದಲ್ಲ, ಮತ್ತೆ ಪ್ರಮಿತವೇ ಆಗಿರುತ್ತದೆ. ಶಂಸನಾದಿಗಳನ್ನು ಮಾಡಬೇಕೆನ್ನುವ ಅರ್ಥದಲ್ಲಿ ತಾತ್ಪರ್ಯವನ್ನು ಅರ್ಥವಾದ ವಾಕ್ಯಗಳಿಗೆ ಪರರು ಅಂಗೀಕರಿಸಿರುವರು. ಆಪತ್ಪರಿಹಾರ ಮೊದಲಾದ ಸ್ವಾರ್ಥವು ವಚನದಿಂದಲೇ ತೋರುತ್ತದೆ. ಈ ಶಬ್ದಕ್ಕೆ ಇದೇ ಅರ್ಥವೆನ್ನುವಲ್ಲಿ ಪ್ರತೀತಿ ಬಿಟ್ಟು ಬೇರೆ ಪ್ರಮಾಣವಿಲ್ಲ, ಶಬ್ದಾನು ಶಾಸನಾದಿಗಳಿಗೂ ಪ್ರತೀತಿಯೇ ಮೂಲವು. ಆದಕಾರಣ ಈ ಪ್ರಕಾರ ಸ್ವಾರ್ಥವು ವಚನದಿಂದಲೇ ಶಬ್ದವೃತ್ತಿಯಿಂದಲೇ ತೋರುವುದರಿಂದ ಕಲ್ಪನೆಯಿಲ್ಲದಿರುವುದರ ಪ್ರಯುಕ್ತ ಕಲ್ಪನಾಗೌರವವಿಲ್ಲ.) || 81 ||

ಇದು ಅಸಂಗತವು. ನಾವು ಅರ್ಥವಾದಗಳಿಗೆ ಸ್ವಾರ್ಥವು ವಾಚನಿಕ ಆಗುವುದಿಲ್ಲವೆಂದು ಹೇಳುವುದಿಲ್ಲ, ಮತ್ತೆ ಅನೇಕ ಸ್ಥಳಗಳಲ್ಲಿ ತಾತ್ಪರ್ಯವನ್ನು ಕಲ್ಪಿಸಿದರೆ ಕಲ್ಪನಾಗೌರವವು ಪ್ರಸಕ್ತವಾಗುವುದರಿಂದ ತಾತ್ಪರ್ಯಾರ್ಥವಾಗುವುದಿಲ್ಲವೆನ್ನುತ್ತೇವೆ. ಅದರಲ್ಲಿ ವಚನದಿಂದಲೇ ಪ್ರತೀತವಾಗುತ್ತದೆ ಎನ್ನುವ ವಚನಕ್ಕೆ ಏನು ಅವಸರವು ಎಂದರೆ–

**ಮೂಲ || ನ ಚ ವಾಚನಿಕಸ್ತಾತ್ಪರ್ಯಾರ್ಥ ಇತಿ ವಿಶೇಷಃ || ೮೨ ||**

**ಅರ್ಥ ||** ವಾಚನಿಕಾರ್ಥವು ತಾತ್ಪರ್ಯಾರ್ಥವು ಎಂಬ ಭೇದವು ಇರುವುದಿಲ್ಲ,

**ತಾತ್ಪರ್ಯ ||** ಕೇವಲ ಶಬ್ದವೃತ್ತಿವಿಷಯದಿಂದ ಬೇರೊಂದು ತಾತ್ಪರ್ಯಾರ್ಥವಿದ್ದರೆ ಆಗ ಬಹುದು. ಹೀಗೆ ಇಲ್ಲ, (ತತ್ ಪರಂ ಉದ್ದೇಶ್ಯಂ ಶಬ್ದಶಕ್ತಿ ಗೋಚರೋ ಯಸ್ಯ ಎಂಬ ವ್ಯುತ್ಪತ್ತಿಯಿಂದ) ಕೇವಲ ಶಬ್ದವೃತ್ತಿಗೆ ವಿಷಯವಾದುದು ಉದ್ದೇಶ್ಯವಾಗಿ ಉಳ್ಳದ್ದು ಅದರ ಧರ್ಮವು ತಾತ್ಪರ್ಯವು. ಅದಕ್ಕೆ ವಿಷಯವಾದುದು ತಾತ್ಪರ್ಯಾರ್ಥವು. ಅಂತೂ ಶಬ್ದವೃತ್ತಿ ಗೋಚರವೇ ಹೇಳಲ್ಪಡುತ್ತದೆ. || 82 ||

**ಮೂಲ || ತನ್ಮಾನಾಭಾವಾತ್ || ೮೩ ||**

**ಅರ್ಥ ||** (ಶಬ್ದಶಕ್ತಿ (ವೃತ್ತಿ)ಯು ಮುಖ್ಯ ಅಮುಖ್ಯವೆಂದು ಎರಡು ವಿಧವು. ಮುಖ್ಯವೃತ್ತಿಯು ಯೋಗ ರೂಢಿ ಎಂದು ಎರಡು ವಿಧವು. ಅಮುಖ್ಯವೃತ್ತಿಯೂ ಲಕ್ಷಣಾ, ಗೌಣೀ ಎಂದು ಎರಡು ವಿಧವು. ಈ ವೃತ್ತಿಗಳಿಗೆ ವಿಷಯವಾದುದು ವಾಚನಿಕವೆನ್ನಿಸುತ್ತದೆ. ಇದು ಹೊರತಾದ) ತಾತ್ಪರ್ಯ ವೃತ್ತಿಯಲ್ಲಿಯೂ, ಅದರ ವಿಷಯದಲ್ಲಿಯೂ ಪ್ರಮಾಣವಿಲ್ಲದಿರುವುದರಿಂದ || 83 ||

ಹಾಗಾದರೆ 'ವಿಷಂ ಭುಂಕ್ಷ್ವ' ವಿಷವನ್ನುಣ್ಣು, 'ಗಂಗಾಯಾಂ ಘೋಷಃ' ಭಾಗೀರಥಿಯಲ್ಲಿ ಮೊಗೇರರ ಮನೆಯು, 'ಅಗ್ನಿರ್ಮಾಣವಕಃ' ಹುಡುಗನು ಬೆಂಕಿಯು, ಇದು ಮೊದಲಾದ

ಪ್ರಯೋಗಗಳಲ್ಲಿ ವಾಚನಿಕಾರ್ಥದಿಂದ ಬೇರೆಯಾದ 'ನಿಷಿದ್ಧಾನ್ನವನ್ನುಣ್ಣಬಾರದು' ಇದು ಮೊದಲಾದ ತಾತ್ಪರ್ಯಾರ್ಥವು ತೋರುತ್ತದೆ. ಮತ್ತು 'ಶ್ವೇತೋ ಧಾವತಿ' ಇತ್ಯಾದಿಗಳಲ್ಲಿ ವಾಚನಿಕಾರ್ಥಗಳು ಅನೇಕ ತೋರಿದರೂ ತಾತ್ಪರ್ಯಾರ್ಥವು ಒಂದೇ ಎಂದು ಅಂಗೀಕೃತವಾಗಿದೆ. ಆದುದರಿಂದ ವಾಚನಿಕಾರ್ಥ ಹೊರತು ತಾತ್ಪರ್ಯಾರ್ಥದಲ್ಲಿ ಪ್ರಮಾಣವಿಲ್ಲವೆನ್ನುವುದು ಹೇಗೆ ಕೂಡುತ್ತದೆ ಎಂದರೆ–

**ಮೂಲ ॥ ಯತ್ರ ವಾಚನಿಕಾರ್ಥಾದನ್ಯಸ್ತಾತ್ಪರ್ಯಾರ್ಥಃ ಪ್ರತೀಯತೇ ಲೌಕಿಕವಾಕ್ಯೇಷು ನ ತತ್ರ ಸಾಕ್ಷಾದ್ವಚನಂ ಪ್ರಬೋಧಕಂ ॥ ೮೪ ॥**

**ಅರ್ಥ ॥** ಉದಾಹೃತಗಳಾದ ಯಾವ ಲೌಕಿಕವಾಕ್ಯಗಳಲ್ಲಿ ವಾಚನಿಕಾರ್ಥ ಹೊರತು ತಾತ್ಪರ್ಯಾರ್ಥವು ಪ್ರತೀತವಾಗುತ್ತದೆ ಎಂದು ತಿಳಿಯುತ್ತೀಯೋ, ಅಲ್ಲಿ (ಲೌಕಿಕವಾಕ್ಯಸ್ಥಲದಲ್ಲಿ) ಆ ಅರ್ಥಕ್ಕೆ ವಚನವು (ಶಬ್ದವು) ಶಬ್ದಪ್ರಮಾಣವಾಗಿ ಬೋಧಕವಾಗುವುದಿಲ್ಲ. ॥ 84 ॥

ವಚನವು ಶಬ್ದಪ್ರಮಾಣವಾಗಿ ಬೋಧಕವಾಗದಿದ್ದರೆ ಹೇಗೆ ಬೋಧಕವಾಗುತ್ತದೆ? ಕರಣವಿಲ್ಲದೆ ಪ್ರತೀತಿಯು ಹುಟ್ಟುವುದಿಲ್ಲ. ಎಂದರೆ–

**ಮೂಲ ॥ (೧) ವಚನಲಿಂಗಕಾನುಮಾ ಹಿ ಸಾ । (೨) ವಿರೋಧಾದಮುಖ್ಯವೃತ್ತಿರ್ವಾ । (೩) ಆಪ್ತತ್ವನಿಶ್ಚಯೇ । (೪) ಆಪ್ತತ್ವಾನಿಶ್ಚಯೇ ಪ್ರಾಮಾಣ್ಯಮೇವ ನ ಭವತಿ ॥ ೮೫ ॥**

**ಅರ್ಥ ॥** (1) ನಿಷಿದ್ಧವಾದ ಭೋಜನವನ್ನು ಬಿಡಬೇಕು ಇತ್ಯಾದಿ ವಿಷಯಕವಾದ ಪ್ರತೀತಿಯು ವಚನವೇ ಲಿಂಗವಾಗಿ ಉಳ್ಳ ಅನುಮಿತಿಯು. ಆದಕಾರಣ ಕರಣವಿಲ್ಲದೆ ಹುಟ್ಟಿದ್ದಲ್ಲ. (2) (ಹಿಂದೆ ಹೇಳಿದ ಪ್ರಕಾರ 'ವಿಷಂ ಭುಂಕ್ಷ್ವ' ಎನ್ನುವಲ್ಲಿ ಸಮಾಧಾನ ಹೇಳಿ 'ಗಂಗಾಯಾಂ ಘೋಷಃ' 'ಅಗ್ನಿರ್ಮಾಣವಕಃ' ಇತ್ಯಾದ್ಯುದಾಹರಣಗಳಲ್ಲಿ ಬೇರೆ ರೀತಿಯಾಗಿ ಸಮಾಧಾನ ಹೇಳುತ್ತಾರೆ.) ಮುಖ್ಯಾರ್ಥವನ್ನಂಗೀಕರಿಸಿದರೆ ಪ್ರಮಾಣವಿರೋಧವಿದ್ದುದರಿಂದ ('ಗಂಗಾಯಾಂ ಘೋಷಃ, ಅಗ್ನಿರ್ಮಾಣವಕಃ' ಎನ್ನುವಲ್ಲಿ) ಅಮುಖ್ಯವಾದ ವೃತ್ತಿಯು (ಲಕ್ಷಣಾ ಅಥವಾ ಗೌಣೀ ವೃತ್ತಿಯು) ಆಶ್ರಯಿಸಲ್ಪಡುತ್ತದೆ. (3) (ನಿಷಿದ್ಧವಾದ ಭೋಜನವನ್ನು ಬಿಡಬೇಕು; ಇತ್ಯಾದಿಗಳನ್ನು ವಿಷಯೀಕರಿಸಿಕೊಂಡಿರುವ ಅನುಮಿತಿಯಲ್ಲಿ ಕೇವಲ ವಿರುದ್ಧವಚನವು ಲಿಂಗವೋ ಹಾಗೆಯೇ ಅಮುಖ್ಯ ವೃತ್ತಿಯನ್ನಾಶ್ರಯಿಸುವುದರಲ್ಲಿ ಮುಖ್ಯಾರ್ಥ ವಿರೋಧವಾದದ್ದು ಮಾತ್ರ ಕಾರಣವೋ ಎಂದರೆ,) ಹೇಳತಕ್ಕವನಿಗೆ ಆಪ್ತತ್ವನಿಶ್ಚಯವಿದ್ದರೆ ಈ ಎರಡೂ (ನಿಷಿದ್ಧವಾದ ಭೋಜನವನ್ನು ಬಿಡುವುದು ಇತ್ಯಾದಿ ಪ್ರತೀತಿಯು. ಅಮುಖ್ಯ ವೃತ್ತಿಯನ್ನಾಶ್ರಯಿಸುವುದು) ಆಗುತ್ತದೆ. (ವಿರುದ್ಧವಚನ ಮುಖ್ಯಾರ್ಥ ವಿರೋಧರೂಪವಾದ ಹಿಂದೆ ಹೇಳಿದ ಕಾರಣಮಾತ್ರದಿಂದ ಆಗುವುದಿಲ್ಲ.) (4) ಆಪ್ತತ್ವ ನಿಶ್ಚಯವಿಲ್ಲದಿದ್ದರೆ ಪ್ರಾಮಾಣ್ಯವೇ ಇರುವುದಿಲ್ಲ.

**ತಾತ್ಪರ್ಯ ॥** (1) ವಿಷವನ್ನುಣ್ಣು ಎಂದು ಅನಾಪ್ತನು ಹೇಳಿದ ವಿರುದ್ಧವಾದ ವಚನಕ್ಕೆ ಬೇರೆಕಡೆ ತಾತ್ಪರ್ಯವನ್ನು ಕಲ್ಪಿಸದಿರುವುದರಿಂದ ವಿರುದ್ಧವಾದ ಕೇವಲ ವಚನವು ವ್ಯಭಿಚಾರಿಯಾದುದರಿಂದ ಲಿಂಗವಾಗುವುದಿಲ್ಲ. ಹಾಗೆಯೇ ಕೇವಲ ಮುಖ್ಯಾರ್ಥ ವಿರೋಧಕ್ಕೆ ಭ್ರಾಂತ್ಯಾದಿ ಮೂಲತ್ವವೂ

ಕೊಡುವುದರಿಂದ ಆ ವಾಕ್ಯವು ಅಮುಖ್ಯಾರ್ಥವನ್ನು ತೋರಿಸಲಾರದು. ಆದಕಾರಣ ಆಪ್ತತ್ವ ನಿಶ್ಚಯವೂ ಆವಶ್ಯಕವು. (2) ಅಂದರೆ 'ವಿಷಂ ಭುಂಕ್ಷ್ವ' ಎನ್ನುವ ಪ್ರಥಮೋದಾಹರಣದಲ್ಲಿ ನಿಷಿದ್ಧ ಭೋಜನವನ್ನು ಬಿಡಬೇಕು ಎಂದು ಹುಟ್ಟತಕ್ಕ ಪ್ರತೀತಿಯು ಶಬ್ದದಿಂದ ಹುಟ್ಟತಕ್ಕದ್ದೇ ಆಗುವುದಿಲ್ಲ, ಅಲ್ಲಿ ತಾತ್ಪರ್ಯ ವೃತ್ತಿಯನ್ನು ಕಲ್ಪಿಸಕೂಡದು. ಮತ್ತೆ ಇವನು ಈಗ ನನಗೆ ಕ್ರುದ್ಧನಾಗಿರುತ್ತಾನೆ. ಆಪ್ತನಾಗಿದ್ದು ಪ್ರಮಾಣವಿರುದ್ಧವನ್ನು ಮಾಡಬೇಕೆಂದು ಹೇಳತಕ್ಕವನಾದುದರಿಂದ, ಈತನಿಗೆ ಪ್ರಸಕ್ತವಾದ ನಿಷಿದ್ಧ ಭೋಜನದಿಂದಲೇ ಕ್ರೋಧವು ಹುಟ್ಟಿದ್ದು, ಪ್ರಸಕ್ತವಾದ ನಿಷಿದ್ಧ ಭೋಜನರೂಪವಾದ ದೃಷ್ಟಕಾರಣ ಹೊರತು ಅದೃಷ್ಟವನ್ನು ಕಲ್ಪಿಸಕೂಡದು. ಆದಕಾರಣ ನಾನು ಇದನ್ನು★ ಮಾಡಬಾರದೆಂದು ಇವನ ಅಭಿಪ್ರಾಯವು ಎಂದು ಆಪ್ತನು ಹೇಳಿದ ವಿರುದ್ಧ ವಚನರೂಪ ಲಿಂಗದಿಂದ ಹೇಳತಕ್ಕವನ ಅಭಿಪ್ರಾಯವು %ಅನುಮೇಯಿಸಲ್ಪಡುತ್ತದೆ. (3) 'ಶ್ವೇತೋ ಧಾವತಿ' ಎನ್ನುವಲ್ಲಿ ಒಂದೇ ಅರ್ಥವೆನ್ನುವ ನಿಯಮನವು ವಚನ ಸಾಮರ್ಥ್ಯದಿಂದ ಹುಟ್ಟಿದ್ದು, ತಾತ್ಪರ್ಯ ವೃತ್ತಿಯನ್ನು ಕಲ್ಪಿಸಕೂಡದು. ಶಬ್ದದಿಂದ ಎರಡು ಅರ್ಥಗಳು ಪ್ರತೀತಿಗಳಾಗುವಾಗ ಹೇಳತಕ್ಕವನು ಆಪ್ತನಾಗಿದ್ದರೆ ಒಂದರ್ಥದಲ್ಲಿ ಪ್ರಮಾಣವಿರೋಧವನ್ನು ತಿಳಿದು ಈ ಅರ್ಥವು ಇವನಿಗೆ ವಿವಕ್ಷಿತವಲ್ಲ ಎಂದನುಮೇಯಿಸಿ ಪರಿಶೇಷತಃ ಎರಡನೇದ್ದನ್ನೇ ಅಂಗೀಕರಿಸಬೇಕು. (4) 'ಗಂಗಾಯಾಂ ಘೋಷಃ' ಎನ್ನುವಲ್ಲಿ ಲಕ್ಷಣಾಖ್ಯ ವಚನ ವೃತ್ತಿಯು ಮುಖ್ಯಾರ್ಥ ಬಾಧ ಮೊದಲಾದ ಬೀಜಗಳು ಇದ್ದುದರಿಂದ. (5) 'ಅಗ್ನಿರ್ಮಾಣವಕಃ' ಎನ್ನುವಲ್ಲಿ ಗೌಣೀ ರೂಪವಾದ ವಚನವೃತ್ತಿಯು. ವಾಚ್ಯಾರ್ಥ ವಿರುದ್ಧತ್ವ ಮೊದಲಾದ ನಿಮಿತ್ತಗಳು ಇದ್ದುದರಿಂದ. (6) ಆದಕಾರಣ ಎಲ್ಲಿ ಶಬ್ದದಿಂದಲೇ ಸಾಕ್ಷಾತ್ಪ್ರತೀತಿಯು ಉಂಟಾಗುತ್ತದೋ, ಅಲ್ಲಿ ಹಿಂದೆ ಹೇಳಿದ ಶಬ್ದವೃತ್ತಿಗಳೇ ಇರುತ್ತವೆ. ಎಲ್ಲಿ ಶಬ್ದವೃತ್ತಿಯು ಕೂಡುವುದಿಲ್ಲವೋ, ಅಲ್ಲಿ ಆಗುವ ಪ್ರತೀತಿಯು ಕೇವಲ ಶಬ್ದದಿಂದ ಹುಟ್ಟಿದ್ದೇ ಆಗಿರುವುದಿಲ್ಲವಾದ ಕಾರಣ ತಾತ್ಪರ್ಯವೃತ್ತಿಯು ಬೇರೊಂದು ಸಿದ್ಧಿಸುವುದಿಲ್ಲ ॥ 85 ॥

ಈ ನ್ಯಾಯವು ವೇದದಲ್ಲಿಯೂ ಸಮಾನವಾದುದರಿಂದ 'ಲೌಕಿಕವಾಕ್ಯೇಷು' ಎಂದು ಏತಕ್ಕೆ ಹೇಳಿದ್ದು, ಎಂದರೆ–

**ಮೂಲ ॥ ವೇದವಾಕ್ಯಸ್ಯ ತು ವಾಚನಿಕಾರ್ಥಂ ವಿನಾ ನೈವಾನ್ಯೋ ಯುಜ್ಯತೇ॥ ೮೬ ॥**

**ಅರ್ಥ ॥** ವೇದವಾಕ್ಯಕ್ಕಾದರೂ ವಾಚನಿಕವಾದ ಅರ್ಥ ಹೊರತು (ಅಂದರೆ, ಮುಖ್ಯಾಮುಖ್ಯ ರೂಪ ಶಬ್ದವೃತ್ತಿ ಲಭ್ಯವಾದ ಅರ್ಥವನ್ನು ಹೊರತು) ಬೇರೆ ಪ್ರಕಾರವು (ಪುರುಷಾಶಯಾನುಮಾನ ರೂಪವಾದುದು) ಕೂಡುವುದಿಲ್ಲ.

**ತಾತ್ಪರ್ಯ ॥** (1) ವೇದವು ಅಪೌರುಷೇಯವೆನ್ನುವುದು ನಮಗೂ ಮೀಮಾಂಸಕರಿಗೂ

---

★ ಅಯಂ ಏತದ್ಭೋಜನಾಕರ್ತವ್ಯತ್ವಾಶಯವಾನ್ ಏತದ್ಭೋಜನ ಪ್ರಸಕ್ತಿ ಜನಿತ ಕ್ರೋಧವತ್ವಾತ್=ಇವನು ಈ ಭೋಜನವನ್ನು ಮಾಡಬಾರದೆಂದು ಅಭಿಪ್ರಾಯವುಳ್ಳವನು. ಈ ಭೋಜನ ಪ್ರಸ್ತಾಪದಿಂದ ಹುಟ್ಟಿದ ಸಿಟ್ಟು ಇದ್ದುದರಿಂದ' ಎಂಬ ಅನುಮಾನವು ಇದರಿಂದ ಉಕ್ತವಾಯಿತು.

% ನಿಷಿದ್ಧಭೋಜನಾದಿಕಂ ಮಯೀ ವರ್ಜನೀಯಂ ಮದಕಾರ್ಯತ್ವೇನಾಪ್ತಾಭಿಪ್ರೇತತ್ವಾತ್=ನಿಷಿದ್ಧ ಭೋಜನಾದಿಗಳನ್ನು ನಾನು ಮಾಡಬಾರದು. ನಾನು ಮಾಡಬಾರದೆಂದು ಆಪ್ತನಿಗೆ ಅಭಿಪ್ರೇತವಾದುದರಿಂದ, ಎಂದು.

ಯದ್ಯಪಿ ಸಮ್ಮತವು. ಆದಾಗ್ಯೂ ಸರ್ವ ವೇದವೂ ಈಶ್ವರನ ವಾಕ್ಯವೆಂದು ನಾವು ಅಂಗೀಕರಿಸುತ್ತೇವೆ. ಮೀಮಾಂಸಕರು ಅಂಗೀಕರಿಸಲಾರರು. ಆದಕಾರಣ ನಮ್ಮ ಮತದಲ್ಲಿ ಪುರುಷಾಶಯವನ್ನು ಅನುಮೇಯಿಸಲಿಕ್ಕೆ ಸಂಭವಿಸಿದಾಗ್ಯೂ ನಿರೀಶ್ವರ ಮೀಮಾಂಸಕರ ಮತದಲ್ಲಿ ಆ ಪ್ರಕಾರವು ಕೂಡಲಾರದು. ಆದಕಾರಣ ಮೀಮಾಂಸಕರ ಮತವನ್ನನುವಾದ ಮಾಡತಕ್ಕ 'ಯತ್ರ ವಾಚನಿಕಾರ್ಥಾತ್' ಎಂಬ ವಾಕ್ಯದಲ್ಲಿ 'ಲೌಕಿಕವಾಕ್ಯೇಷು' ಎಂದುಕ್ತವಾಗಿದೆ. (2) ವೇದದಲ್ಲಿ ಅಮುಖ್ಯ ವೃತ್ತಿಯೇ ಇಲ್ಲ ಎಂಬ ನರಹರಿತೀರ್ಥರ ವ್ಯಾಖ್ಯಾನವು ಟೀಕಾಚಾರ್ಯರಿಗೆ ಸಮ್ಮತವಲ್ಲ, ಸಿದ್ಧಾಂತ ವಿರುದ್ಧವಾಗಿದೆ, ಎಂಬ ತಾತ್ಪರ್ಯವು ಏಕೆಂದರೆ- ವೇದದಲ್ಲಿರುವ ಪದಗಳು ಗೌಣ ಲಕ್ಷಣಾಖ್ಯ ವೃತ್ತಿಗಳುಳ್ಳವುಗಳಲ್ಲ ಎಂದರೆ, ಲೋಕ ವೇದಾಧಿಕರಣ ನ್ಯಾಯದಿಂದ ಲೌಕಿಕ ವೈದಿಕ ಶಬ್ದಗಳಿಗೆ ಭೇದವಿಲ್ಲದಿರುವುದರಿಂದ ವೃತ್ತಿಗಳಿಗೆ ಭೇದವದೆ ಎಂಬ ಕಥೆಯೇ ವ್ಯರ್ಥವಾಗುವುದು. ಗೌಣಾರ್ಥಕ್ಕೆ ಅಥವಾ ಲಾಕ್ಷಣಿಕಾರ್ಥಕ್ಕೆ ವೇದವಾಕ್ಯಾರ್ಥದಿಂದ ಅನ್ವಯವಿಲ್ಲವೆಂದನ್ನಕೂಡದು. 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' (ಬ್ರ.ಸೂ.ಅ.1; ಪಾ.3;ಸೂ.25.) ಎನ್ನುವಲ್ಲಿ ಲಕ್ಷಣಾವೃತ್ತಿಯು ದೃಷ್ಟವಾಗಿದೆ. 'ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ ಪ್ರಾಜ್ಞವತ್' (ಬ್ರ.ಸೂ.ಅ.2.ಪಾ.3.ಸೂ.29.) ಎನ್ನುವಲ್ಲಿ ಗೌಣೀ ವೃತ್ತಿಯು ಅಂಗೀಕೃತವಾಗಿದೆ. 'ಅಂಗುಷ್ಠಮಾತ್ರಃ ಪುರುಷಃ' ( ಕಾಠ. ಅಧ್ಯಾ.2; ವ.1; ಪು.70.) 'ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ' ಇತ್ಯಾದಿಗಳಲ್ಲಿ ಅಮುಖ್ಯವೃತ್ತಿಯನ್ನು ಸೂತ್ರಕಾರರೇ ಅಂಗೀಕರಿಸಿರುವರು. ಹಾಗೆಯೇ ಶ್ರೀಮದಾಚಾರ್ಯರು ವ್ಯಾಖ್ಯಾನ ಮಾಡಿರುವರು. ಮತ್ತು 'ತದಂಸ್ಥತ್ವಾಪೇಕ್ಷತ್ವಾನ್ನ ಸುಷಿರ ಶ್ರುತಿವಿರೋಧಃ' ಇತ್ಯಾದಿ ಭಾಷ್ಯವಿರೋಧವೂ ಬರುತ್ತದೆ. ಮತ್ತು ಶಾಸ್ತ್ರಗಳಲ್ಲಿ ಸಾವಿರಾರು ವಾಕ್ಯಗಳು ಗೌಣೀ ಲಕ್ಷಣಾ ವೃತ್ತಿಗಳನ್ನು ಆಶ್ರಯಿಸಿಕೊಂಡಿರುವವುಗಳು ಪ್ರವೃತ್ತಗಳಾಗಿವೆ. 'ಪೌರಾಣಾನಿ ಚ ವಾಕ್ಯಾನಿ ಸಾದೃಶ್ಯಾಭೇದಸಂಶ್ರಯಾತ್' ಇತ್ಯಾದಿಗಳಲ್ಲಿ ಸ್ಪಷ್ಟವಾಗಿಯೇ ಹೇಳಿಯದೆ. 'ಅಂಗುಷ್ಠಮಾತ್ರಃ ಪುರುಷಃ' 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಈ ಶ್ರುತಿಗಳಿಗೆ ಈಶ್ವರನಲ್ಲಿಯೇ ಲಕ್ಷಣಾ ಎಂದು ಅಂಗೀಕರಿಸಿರುವರು. ಪ್ರಾಜ್ಞರೂಪಿಯಾದ ಶ್ರೀಪರಮಾತ್ಮನು ಸರ್ವ ಪ್ರಪಂಚದ ಗುಣಗಳಿಗೆ ಸದೃಶವಾದ ಗುಣವಿದ್ದುದರಿಂದ ಸರ್ವನೆಂದು ಹೇಳಲ್ಪಡುತ್ತಾನೆ. ಹೀಗೆ ಶ್ರುತಿಗೆ ಈಶ್ವರನಲ್ಲಿಯೇ ಗೌಣಾರ್ಥವನ್ನು ಸ್ವೀಕರಿಸಿರುವರು. ॥ 86 ॥

'ವಚನೇನೈವ ಪ್ರತೀಯಮಾನತ್ವಾದರ್ಥಸ್ಯ' ಎಂದು ಶಬ್ದಾರ್ಥತ್ವ ವಿಷಯದಲ್ಲಿ ಪ್ರತೀತಿಯು ಪ್ರಮಾಣವೆಂದು ಉಕ್ತವಾಗಿದೆ. ಅದಯುಕ್ತವು. ಹಾಗಿದ್ದರೆ ಒಂದೊಂದು ಶಬ್ದಕ್ಕೆ ಅನೇಕಾರ್ಥಗಳು ಇರಬೇಕಾಗುವುವು. ಅನೇಕಾರ್ಥಗಳನ್ನು ತಿಳಿಸುವಿಕೆಯು ಅನ್ಯಾಯವಾಗಿದೆ ಎಂಬುವುದನ್ನು ಪ್ರಸಂಗ ಸಂಗತಿಯಿಂದ ಇಷ್ಟಾಪತ್ತಿಯಿಂದ ತಿರಸ್ಕರಿಸುತ್ತಾರೆ-

**ಮೂಲ ॥ ವಾಚನಿಕಾನಾಂ ತು ಬಹೂನಾಮಪ್ಯವಿರೋಧೇ ಸ್ವೀಕಾರ್ಯತಾ ॥ ೮೭ ॥**

**ಅರ್ಥ ॥** ವಚನದಿಂದ ತೋರುವ ಅನೇಕಾರ್ಥಗಳಿಗೂ ವಿರೋಧವಿಲ್ಲದಿದ್ದರೆ ಸ್ವೀಕರಿಸಲಿಕ್ಕೆ ಯೋಗ್ಯತ್ವವಿದೆ.

**ತಾತ್ಪರ್ಯ ॥** ಹಾಗಾದರೆ 'ವಿಶ್ವಸ್ಮಾದಿಂದ್ರ ಉತ್ತರಃ' 'ಅಸದೇವೇದಮಗ್ರ ಆಸೀತ್' ಇತ್ಯಾದಿಗಳಲ್ಲಿ ಇಂದ್ರ ಅಸತ್ ಇತ್ಯಾದಿ ಶಬ್ದಗಳಿಗೂ ಇಂದ್ರ=ಭಗವಂತನು ಪುರಂದರನು, ಅಸತ್=

ಭಗವಂತನು ಅಸತ್ತು, ಇದು ಮೊದಲಾದ ಅನೇಕಾರ್ಥಗಳನ್ನು ಸ್ವೀಕರಿಸಬೇಕಾಗುವುದು, ಎಂದರೆ, 'ಅವಿರೋಧೇ' ವಿರೋಧವಿಲ್ಲದಿದ್ದರೇನೇ ಸ್ವೀಕರಿಸಬೇಕು. ಸಾಮಾನ್ಯತಃ ಪ್ರಾಪ್ತವಾದುದನ್ನು ಬಾಧಕವಿದ್ದರೆ ಬಿಟ್ಟುಬಿಡಬೇಕು. ಎಲ್ಲಿ ಬಾಧಕವಿಲ್ಲವೋ, 'ಅಜಾಮೇಕಾಂ ಲೋಹಿತಶುಕ್ಲ ಕೃಷ್ಣಾಂ' ಇತ್ಯಾದಿಗಳು, ಅಲ್ಲಿ ಉತ್ಸರ್ಗವೇ ಪ್ರಬಲವು.॥ 87 ॥

ಸೂತ್ರಕಾರರೂ ಒಂದು ಶಬ್ದಕ್ಕೆ ಅನೇಕಾರ್ಥಗಳನ್ನು ಅಂದರೆ, 'ತೀರ್ಣೋ ಹಿ ತದಾ ಸರ್ವಾನ್' ಎಂಬ ವಾಕ್ಯಕ್ಕೆ ಮುಕ್ತಿ ಸುಪ್ತಿರೂಪ ಅನೇಕಾರ್ಥಗಳನ್ನು ಸ್ವೀಕರಿಸಿರುವರು, ಎನ್ನುತ್ತಾರೆ–

**ಮೂಲ ॥ (೧) 'ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಇತಿ ಸೂತ್ರಂ । (ಬ್ರ.ಸೂ.ಅಧ್ಯಾ.೪; ಪಾ.೪.ಸೂ.೧೬.) (೨) ವಾನಾತ್ಸುತೇರ್ದೇವನಾದ್ವಾಸುದೇವೋ ವಾಸಾದ್ ದ್ಯುತೇಶ್ಛಾದನಾತ್ಕ್ರೀಡಯಾ ಚ । ಬಲಾದಸುತ್ವಾದ್ದಾತೃತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ । ಇತ್ಯಾದಿ ಸೌಕರಾಯಣ ಶ್ರುತಿಃ ॥ (೩) ಮೋಕ್ಷೇಽಪಿ ಸುಪ್ತಿರಸ್ತೀತ್ಯಾಶಂಕಾ ನಿವೃತ್ತ್ಯರ್ಥಮೇವಾನ್ಯತರ ಪದಂ ॥ ೮೮ ॥**

**ಅರ್ಥ ॥** (1) 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' ಎಂಬ ವಾಕ್ಯವು ಸುಪ್ತಿ ಮತ್ತು ಮುಕ್ತಿ ಈ ಎರಡು ಅರ್ಥ ಪರವೇ ಆಗಿರುತ್ತದೆ. ಸ್ವರ್ಗಪರವಲ್ಲ, ಏಕೆಂದರೆ, 'ಅತ್ರ ಹ ಪಿತಾಽಪಿತಾ ಭವತಿ' ಇತ್ಯಾದಿ ವಾಕ್ಯದಿಂದ ಸ್ಪಷ್ಟೀಕೃತವಾಗಿದೆ. ಎಂದು ಸೂತ್ರಾರ್ಥವು. (2) (1) (ಶ್ರುತಿಯಿಂದಲೂ ಒಂದು ಶಬ್ದಕ್ಕೆ ಅನೇಕಾರ್ಥಗಳು ಸಿದ್ಧಿಸುತ್ತವೆ ಎನ್ನುತ್ತಾರೆ.) ವಾನಾತ್= ಸರ್ವಜ್ಞನಾದುದರಿಂದಲೂ ಸರ್ವವನ್ನು ವಿಷಯೀಕರಿಸುವ ಜ್ಞಾನಸ್ವರೂಪನಾದುದರಿಂದಲೂ, ಜ್ಞೇಯನಾದುದರಿಂದಲೂ, ಸೂತೇಃ=ಸರ್ವಜಗತ್ತನ್ನು ಸೃಷ್ಟಿಸಿರುವುದರಿಂದಲೂ, ದೇವನಾತ್= ಕ್ರೀಡಾದಿ ಗುಣಗಳಿದ್ದುದರಿಂದಲೂ, ವಾಸುದೇವನೆನ್ನಿಸುತ್ತಾನೆ. (ವಾಶ್ಚಾಸೌ ಸುಶ್ಚಾಸೌ ದೇವಶ್ಚ ವಾಸುದೇವಃ ಎಂದು ವಿಗ್ರಹವು.) (2) ವಾಸಾತ್=ಸರ್ವತ್ರ ಆವಾಸಮಾಡುವುದರಿಂದಲೂ, ಸರ್ವರ ಆವಾಸಕ್ಕೆ ಆಶ್ರಯನಾದುದರಿಂದಲೂ, ದ್ಯುತೇಃ=ಪ್ರಕಾಶಸ್ವರೂಪನಾದುದರಿಂದಲೂ, ವಾಸುದೇವನೆನ್ನಿಸುತ್ತಾನೆ. (ವಾಸುಶ್ಚಾಸೌ ದೇವಶ್ಚ ವಾಸುದೇವಃ) (3) ಛಾದನಾತ್=ಸರ್ವವನ್ನು ವ್ಯಾಪಿಸಿ ಕೊಂಡಿರುವುದರಿಂದಲೂ, ಅವಿದ್ಯಾದಿಗಳಿಂದ ಜಗತ್ತನ್ನು ಆವೃತವನ್ನಾಗಿ ಮಾಡಿರುವುದರಿಂದಲೂ, ಕ್ರೀಡೆಯಿಂದಲೂ ವಾಸುದೇವನೆನ್ನಿಸುತ್ತಾನೆ. (ವಾಸುಶ್ಚಾಸೌ ದೇವಶ್ಚ ವಾಸುದೇವಃ) (4) ಬಲಾತ್= ಬಲ ಸ್ವರೂಪನಾದುದರಿಂದ, ಅಸುತ್ವಾತ್=ಪ್ರಾಣ ಸ್ವರೂಪನಾದುದರಿಂದಲೂ, ವಾಸುದೇವನೆನ್ನಿಸುತ್ತಾನೆ. ದಾತೃತಃ=ಅಭೀಷ್ಟಪ್ರದನಾದುದರಿಂದ, ವರ್ತನಾಚ್ಚ=ಸರ್ವತ್ರ ಇರುವುದರಿಂದಲೂ, ವಾಸುದೇವನೆನ್ನಿಸುತ್ತಾನೆ. (ವಶ್ಚಾಸೌ ಅಸುಶ್ಚಾಸೌ ದೇಚಾಸೌ ವಶ್ಚ ವಾಸುದೇವಃ) ಅವನನ್ನು ವಾಸುದೇವನನ್ನಾಗಿ ವೇದಗಳು ಹೇಳುತ್ತವೆ. ಇದು ಮೊದಲಾದುದು ಸೌಕರಾಯಣ ಶ್ರುತಿಯು. (3) (ಈ ಪ್ರಕಾರ ಸೂತ್ರದಿಂದಲೂ ಶ್ರುತಿಯಿಂದಲೂ, ಒಂದು ಶಬ್ದಕ್ಕೆ ಅನೇಕಾರ್ಥತ್ವವು ಸಮರ್ಥಿಸಲ್ಪಟ್ಟಿದೆ. ಅದರಲ್ಲಿ ಸೂತ್ರವು ಪ್ರಕೃತಕ್ಕೆ ಉಪಯುಕ್ತವಲ್ಲ, 'ಅನ್ಯತರ' ಶಬ್ದದಿಂದ ಒಂದೇ ಅರ್ಥವೆಂದು ಹೇಳಲ್ಪಟ್ಟಿದೆ. ಇಲ್ಲವಾದರೆ 'ಸ್ವಾಪ್ಯಯ ಸಂಪತ್ತ್ಯಪೇಕ್ಷಂ' ಎನ್ನುವುದರಿಂದಲೇ ಪೂರ್ಣವಾಗುವುದರಿಂದ 'ಅನ್ಯತರ' ಪದಕ್ಕೆ ವೈಯರ್ಥ್ಯ ಬರುವುದು, ಎಂದರೆ) ಮುಕ್ತಿಯಲ್ಲಿಯೂ

ಸುಪ್ತಿಯಿದೆ, ಎಂಬ ಆಶಂಕೆಯನ್ನು ನಿವೃತ್ತಿಗೊಳಿಸುವುದಕ್ಕಾಗಿಯೇ ಅನ್ಯತರ ಪದವು.

**ತಾತ್ಪರ್ಯ ॥** 'ಸ್ವಾಪ್ಯಯಸಂಪತ್ತ್ಯಪೇಕ್ಷಂ' ಎಂದು ಹೇಳಿದರೆ ಮುಕ್ತಿಯಲ್ಲಿರತಕ್ಕ ಸುಪ್ತಿಯನ್ನಪೇಕ್ಷಿಸಿಕೊಂಡಿರತಕ್ಕುದು, ಅದನ್ನು ವಿಷಯೀಕರಿಸಿಕೊಂಡಿರುವುದು ಎಂದು ಪ್ರತೀತಿಯಾಗುವುದು. ಅದನ್ನು ನಿವೃತ್ತಿಗೊಳಿಸುವುದಕ್ಕಾಗಿ 'ಸ್ವಾಪ್ಯಯ ಸಂಪತ್ತ್ಯೋರನ್ಯತರಾಪೇಕ್ಷಂ' ಎಂದು ಹೇಳಿದ್ದು ಒಂದೇ ಅರ್ಥವೆಂದು ಪ್ರತಿಪಾದಿಸುವುದಕ್ಕಾಗಿ ಅಲ್ಲ, ಏಕಾರ್ಥತ್ವವು (ಒಂದೇ ಅರ್ಥವು) ಅಭಿಪ್ರೇತವಾಗಿದ್ದರೆ ಸೂತ್ರಕಾರರಿಗೆ ಸಂಶಯವಿಲ್ಲದಿರುವುದರಿಂದ 'ಸ್ವಾಪ್ಯಯಾಪೇಕ್ಷಂ' ಎಂದಾಗಲೀ 'ಸಂಪತ್ತ್ಯಪೇಕ್ಷಂ' ಎಂದಾಗಲೀ ಹೇಳುತ್ತಿರುವರು, ಎಂದು ಏವಶಬ್ದದ ಅರ್ಥವು ॥88॥

ಆದಾಗ್ಯೂ ಶ್ರುತಿಯಿಂದ ಒಂದು ಶಬ್ದಕ್ಕೆ ಅನೇಕಾರ್ಥತ್ವವು ಸಿದ್ಧಿಸುವುದಿಲ್ಲ. ವಾಸಾದಿ ನಿಮಿತ್ತದಿಂದ ವಾಸುದೇವ ಶಬ್ದವಾಚ್ಯತ್ವ ಹೇಳುವುದಾದರೆ ದೇವದತ್ತಾದಿಗಳಿಗೂ ಜ್ಞಾನ, ಆವಾಸಾದಿಗಳು ಯಥಾಕಥಂಚಿತ್ ಕೂಡುವುದರಿಂದ ವಾಸುದೇವಾದಿ ಶಬ್ದವಾಚ್ಯತ್ವವು ಬರಬೇಕಾಗುವುದಾದ ಕಾರಣ ರೂಢಿಯೆಂದೇ ಅಂಗೀಕರಿಸಬೇಕು. ಪ್ರಬಲವಾದ ರೂಢಿಯು ದುರ್ಬಲವಾದ ಯೋಗವನ್ನು ಅಪಹರಿಸುತ್ತದೆಂದಂಗೀಕರಿಸಿ ಯೋಗದಿಂದ ಪ್ರಾಪ್ತವಾದ ಅತಿ ಪ್ರಸಕ್ತಿಯನ್ನು ಪರಿಹರಿಸಬೇಕು. ಆದಕಾರಣ ರೂಢಿಯನ್ನೇ ಆಶ್ರಯಿಸಬೇಕಾದುದರಿಂದ ಒಂದಕ್ಕೆ ಅನೇಕಾರ್ಥತ್ವವು ಸಿದ್ಧಿಸಲಿಲ್ಲ ಎಂಬ ಆಶಂಕೆಯನ್ನು ಬ್ರಹ್ಮತರ್ಕವಾಕ್ಯದಿಂದ ಪರಿಹರಿಸುತ್ತಾರೆ–

**ಮೂಲ ॥ (೧) ರೂಢಿಯೋಗೌ ವಿನಾ ಕಶ್ಚಿನ್ನೈವಾರ್ಥೋ ವೇದಗೋ ಭವೇತ್ । ತತ್ರಾಪಿ ಯೌಗಿಕೋ ಮುಖ್ಯಃ ಸರ್ವತ್ರಾಸ್ತಿ ಸ ವೈದಿಕೇ । (೨) ಅನವಸ್ಥಾ ನಿವೃತ್ತ್ಯರ್ಥಂ ಯೌಗಿಕೇ ರೂಢಕಲ್ಪನಾ । ಜ್ಞಾತೇ ವಿಶೇಷವಿಜ್ಞಾನಂ ವ್ಯವಹಾರೋಽಪಿ ರೂಢಿತಃ ॥ ಇತಿ ಬ್ರಹ್ಮತರ್ಕೇ ॥ ೮೯ ॥**

**ಅರ್ಥ ॥** (1) ರೂಢಿಯೋಗವಿಷಯತ್ವವನ್ನು ಹೊರತು ಯಾವುದೊಂದು ಅರ್ಥವೂ ವೇದದಲ್ಲಿರತಕ್ಕುದು ಆಗುವುದಿಲ್ಲ. (ಕೇವಲ ರೂಢವೂ ಅಲ್ಲ, ಕೇವಲ ಯೌಗಿಕವೂ ಅಲ್ಲ.) ಎರಡು ಅರ್ಥಗಳ ಸಮಾವೇಶದಲ್ಲಿಯೂ ಯೌಗಿಕಾರ್ಥವು ಮುಖ್ಯವು. ಆ ಯೋಗವು ವೇದದಲ್ಲಿರತಕ್ಕ ಎಲ್ಲಾ ರೂಢಾರ್ಥದಲ್ಲಿಯೂ ಇರುತ್ತದೆ. (2) (ಯೋಗವೇ ಆಗಲಿ, ರೂಢಿಯನ್ನು ಕಲ್ಪಿಸಿರುವುದ ರಿಂದ ಏನು ಪ್ರಯೋಜನವೆಂದರೆ– ) ಅವಾಂತರ ಪದಗಳಿಗೂ ಯೋಗವು, ಅದರ ಅವಾಂತರಪದ ಗಳಿಗೂ ಯೋಗವು ಎಂದು ಪ್ರಸಿದ್ಧವಾದ ಅನವಸ್ಥಾ (ಅತಿ ಪ್ರಸಂಗ) ವನ್ನು ನಿವೃತ್ತಿಗೊಳಿಸುವುದಕ್ಕಾಗಿ ಶ್ರೀಪರಮಾತ್ಮನಲ್ಲಿ ಪದಗಳಿಗೆ ಯೌಗಿಕಾರ್ಥವನ್ನು ಹೇಳುವ ಕಾಲದಲ್ಲಿ ಬೇರೆ ಕಡೆ ರೂಢಿಯನ್ನು ಕಲ್ಪಿಸಬೇಕು. (ಅಂತೂ ಅನವಸ್ಥೆಯಿಲ್ಲ.) (ಹಾಗಾದರೆ ರೂಢಿಯೇ ಇರಲಿ. ಯೋಗ ಏತಕ್ಕೆ ಎಂದರೆ–) ಯೌಗಿಕಾರ್ಥವು ಜ್ಞಾತವಾದರೆ ವಿಶೇಷವಾದ ವಿಜ್ಞಾನವು ಬರುತ್ತದೆ. (ವಿಶೇಷವಿಜ್ಞಾನವೇ ವೇದಾಂತಗಳಿಗೆ ಪ್ರಯೋಜನವು) ಲೌಕಿಕವ್ಯವಹಾರವಾದರೂ ರೂಢಿಯಿಂದ ಬರುತ್ತದೆ ಎಂದು ಬ್ರಹ್ಮತರ್ಕದಲ್ಲಿದೆ. ॥ 89 ॥

ಹೀಗೆ ಪ್ರಸಂಗಾತ್ ಒಂದು ಶಬ್ದಕ್ಕೆ ಅನೇಕಾರ್ಥಗಳಿವೆ ಎಂದುಪಪಾದಿಸಿ ಈಗ ಅರ್ಥವಾದಗಳಿಗೆ ಸ್ವಾರ್ಥದಲ್ಲಿ ಪ್ರಾಮಾಣ್ಯವಿದೆ ಎಂದಂಗೀಕರಿಸಿದರೆ, ಪರರು ಹೇಳಿದ ಕಲ್ಪನಾಗೌರವವನ್ನು ಪರಿಹರಿಸಿ ಪರರಿಗೇನೇ ದೋಷವನ್ನು ಹೇಳುವರು.

ಮೂಲ ॥ (೧) ವಾಚನಿಕಮರ್ಥಂ ಪರಿತ್ಯಜ್ಯ ನಿಯೋಗಾರ್ಥ ಕಲ್ಪನೇ ಶ್ರುತ-ಹಾನಿರಶ್ರುತಕಲ್ಪನೇತಿ ಸರ್ವ ದೋಷಾಧಿಕೌ ತಸ್ಯ ವ್ಯರ್ಥಮಾಪದ್ಯೇತೇ । (೨) ಏವಂ ಚ ವದತೋ ವಿಧಿಶಬ್ದಾ ನಿರರ್ಥಕಾಃ ಸಿದ್ಧಾರ್ಥಾ ವಾ ಸಿದ್ಧ ಶಬ್ದಾ ವಾ ಸ್ವಾರ್ಥೇ ಪ್ರಮಾಣಭೂತಾ ಇತ್ಯುಕ್ತೇ ಕಿಮುತ್ತರಂ । (೩) ನ ಚ ಕಾರಣಂ ಕಿಂಚಿದ್ವಾಚನಿಕಾನಾಂ ಬಹೂನಾಮಪ್ಯರ್ಥಾನಾಂ ತ್ಯಾಗೇ । (೪) ಪ್ರತೀಯಮಾನೇ ತು ವಿರೋಧೇ ತದನ್ಯೋಽರ್ಥಃ ಸ್ವೀಕಾರ್ಯೋ ವಾಚನಿಕ ಏವ । ಸೋಽಪಿ ವಾಚನಿಕ ಏವೇತ್ಯಪಿ ತತ ಏವ ಸಿದ್ಧ್ಯತಿ ॥ ೯೦ ॥

**ಅರ್ಥ** ॥ (1) ವಚನನಿವೃತ್ತಿಯಿಂದ ಸಿದ್ಧವಾಗತಕ್ಕ ಅರ್ಥವನ್ನು ಬಿಟ್ಟು ನಿಯೋಗಾರ್ಥವನ್ನು ಕಲ್ಪಿಸಿದರೆ ಶ್ರುತವಾದುದನ್ನು ಬಿಡಬೇಕಾಗುವುದು. ಅಶ್ರುತವಾದುದನ್ನು ಕಲ್ಪಿಸಬೇಕಾಗುವುದು. ಈ ಪ್ರಕಾರ ಎಲ್ಲಾ ದೋಷಗಳಿಂದ ಶ್ರೇಷ್ಠಗಳಾದ ಎರಡು ದೋಷಗಳು ಆತನಿಗೆ ವ್ಯರ್ಥವಾಗಿ ಪ್ರಾಪ್ತವಾಗುವುವು. (ಯದ್ಯಪಿ ಅರ್ಥವಾದಗಳಿಗೆ ಇಷ್ಟಸಾಧನತ್ವರೂಪವಾದ ಕಾರ್ಯಾರ್ಥವು ನಮಗೆ ಸಮ್ಮತವು. ಆದಾಗ್ಯೂ ಪರರು ನಿರೂಪಿಸಿದ ಸ್ವರೂಪವುಳ್ಳ ನಿಯೋಗರೂಪಕಾರ್ಯಕ್ಕೆ ಲಿಙಾದ್ಯರ್ಥತ್ವವು ಸಮ್ಮತವಾಗದಿರುವುದರಿಂದ 'ಅಶ್ರುತಕಲ್ಪನಾ' ಎಂದುಕ್ತವಾಗಿದೆ.) (2) (ಶ್ರುತಹಾನ್ಯಾದಿದೋಷಗಳಿಂದ ಹೆದರಿದ್ದವನಿಗೆ ಅನಿಷ್ಟವನ್ನು ಹೇಳುತ್ತಾರೆ.) ಹೀಗೂ ಹೇಳುವವನಿಗೆ ವಿಧಿ ಶಬ್ದಗಳು ನಿರರ್ಥಕಗಳು, ಸಿದ್ಧವಾದ ಅರ್ಥವುಳ್ಳವುಗಳಾಗಲೀ ಆಗುತ್ತವೆ. ಸಿದ್ಧ ಶಬ್ದಗಳು ಸ್ವಾರ್ಥದಲ್ಲಿ ಪ್ರಮಾಣಭೂತಗಳೇ ಆಗಿವೆ, ಎಂದು ಹೇಳಿದರೆ, ಶ್ರುತಹಾನ್ಯಾದಿಗಳು ಪ್ರಸಕ್ತಗಳಾಗುತ್ತವೆ, ಎಂದೇ ಉತ್ತರ ಹೇಳಬೇಕಾದುದರಿಂದ ಶ್ರುತಹಾನ್ಯಾದಿಗಳಿಂದ ಅವಶ್ಯವಾಗಿ ಭಯವನ್ನು ಹೊಂದಲೇಬೇಕೆಂದುಕ್ತವಾಯಿತು.)(3) (ಒಂದು ಶಬ್ದಕ್ಕೆ ಅನೇಕಾರ್ಥಗಳು ಇಲ್ಲವೆಂಬ ಯಾವ ಮತವು ಪ್ರಸಂಗಾತ್ ನಿರಾಕೃತವಾಯಿತೋ, ಆ ಮತದಲ್ಲಿಯೂ ಶ್ರುತಹಾನ್ಯಾದಿಗಳು ಸಮಾನವೆಂಬ ಭಾವದಿಂದ ಹೇಳುತ್ತಾರೆ.) ವಚನವೃತ್ತಿಯಿಂದ ಸಿದ್ಧಗಳಾದ ಅನೇಕಾರ್ಥಗಳನ್ನು ಬಿಡುವ ವಿಷಯದಲ್ಲಿ ಯಾವುದೊಂದು ಕಾರಣವೂ ಇರುವುದಿಲ್ಲ. ('ವಾಚನಿಕಾನಾಂ ತ್ಯಾಗೇ' ಎನ್ನುವುದರಿಂದ ಶ್ರುತಹಾನಿಯನ್ನೂ 'ಕಾರಣಂ ಕಿಂಚಿತ್ ತ್ಯಾಗೇ ನಾಸ್ತಿ' ಎನ್ನುವುದರಿಂದ ಅಶ್ರುತ ಕಲ್ಪನೆಯನ್ನೂ ಹೇಳಿದರು) (4) (ವಚನವೃತ್ತಿಯಿಂದ ತೋರುವ ಅನೇಕಾರ್ಥಗಳನ್ನು ವಿರೋಧ ವಿಲ್ಲದಿದ್ದರೆ ಸ್ವೀಕರಿಸಬೇಕೆಂದು ಹೇಳಿದರು. ವಿರೋಧವು ತೋರಿದರೆ ಏನು ಮಾಡಬೇಕೆಂದರೆ) ವಿರೋಧವು ತೋರಿದರೆ ವಿರುದ್ಧವಾದ ಅರ್ಥದಿಂದ ಬೇರೆಯಾದ ಅರ್ಥವು ಸ್ವೀಕರಿಸಲು ಯೋಗ್ಯವು. (1) (ವಾಚನಿಕಾರ್ಥವು ವಿರುದ್ಧವಾದರೆ ಅವಿರುದ್ಧವಾದ ಯಾವ ಅರ್ಥವು ಅಂಗೀಕರಿಸಲ್ಪಡುತ್ತದೋ ಅದು ವಚನವೃತ್ತಿಯಿಂದ ಲಬ್ಧವಾದುದಲ್ಲ, ತಾತ್ಪರ್ಯಾರ್ಥವೇ. ತಥಾಚ ವಾಚನಿಕಾರ್ಥದಿಂದ ಬೇರೆ ತಾತ್ಪರ್ಯಾರ್ಥವಿಲ್ಲವೆಂಬುವುದು ಭಗ್ನವಾಯಿತೆಂದರೆ) ಅದೂ ವಾಚನಿಕವೇ ಆಗುವುದು. (2) ಅದೂ ವಚನವೃತ್ತಿಯಿಂದ ಸಿದ್ಧವೇ ಆಗುತ್ತದೆ ಎನ್ನುವುದೂ ವಾಚನಿಕಾರ್ಥ ಹೊರತಾದ ತಾತ್ಪರ್ಯಾರ್ಥದಲ್ಲಿ ಪ್ರಮಾಣವಿಲ್ಲವೆಂದು ಹೇಳಿದುದರಿಂದಲೇ ಸಿದ್ಧಿಸುತ್ತದೆ. ॥ 90 ॥

ವಿರೋಧವು ತೋರಿದರೆ ಅವಿರುದ್ಧವಾದ ಅರ್ಥವನ್ನು ಸ್ವೀಕರಿಸಬೇಕೆನ್ನುವುದು ಯುಕ್ತವಲ್ಲ,

'ವಿಶ್ವಸ್ಮಾತ್ ಇಂದ್ರ ಉತ್ತರಃ' ಇತ್ಯಾದಿಗಳಲ್ಲಿ ಇಂದ್ರ ಸರ್ವೋತ್ತಮತ್ವ, ಭಗವತ್ಸರ್ವೋತ್ತಮತ್ವ ಈ ಎರಡು ಅರ್ಥಗಳಿಗೂ ಪರಸ್ಪರ ವಿರೋಧವಿದ್ದುದರಿಂದ ಯಾವುದನ್ನು ಬಿಡಬೇಕು, ಯಾವುದನ್ನು ಸ್ವೀಕರಿಸಬೇಕೆಂದು ನಿರ್ಣಯವಾಗುವುದಿಲ್ಲ, ಮುಖ್ಯವಾದುದನ್ನು ತೆಗೆದುಕೊಳ್ಳುವುದು, ಅಮುಖ್ಯವಾದುದನ್ನು ಬಿಡುವುದು ಎಂದು ವಿವೇಕ ಮಾಡಲಿಕ್ಕೂ ಬರುವುದಿಲ್ಲ. ಎರಡು ಕಡೆಗಳಲ್ಲಿಯೂ ಯೋಗರೂಢಿಗಳಿದ್ದುದರಿಂದ ಎರಡೂ ಮುಖ್ಯಗಳಾಗಿವೆ ಎಂಬ ಆಶಂಕೆಯನ್ನು ಆಗಮದಿಂದ ಪರಿಹರಿಸುತ್ತಾರೆ–

**ಮೂಲ ॥ ಮುಖ್ಯಾರ್ಥಾನಾಂ ಚ ಸರ್ವೇಷಾಂ ತಾರತಮ್ಯಂ ಚ ವಿದ್ಯತೇ । ತತ್ರಾಪಿ ಪರಮೋ ಮುಖ್ಯೋ ವಾಚ್ಯೋಽಶೇಷರವೈರ್ಹರಿಃ । ತತ್ತನ್ಮುಖ್ಯಾ- ವಿರೋಧೇನ ತದನ್ಯಾರ್ಥಸ್ಯ ಸಂಗ್ರಹಃ ।**

**ಸ್ವತೋ ಮುಖ್ಯವಿರೋಧೇ ತು ತ್ಯಾಜ್ಯೋಽನ್ಯೋಽರ್ಥೋಽಖಿಲೇಷ್ವಪಿ ।**
**ಇತಿ ಸರ್ವತ್ರ ನಿಯಮಃ ಶಬ್ದಾರ್ಥ ಜ್ಞಾನ ಭೂಮಿಷ್ವಿತಿ ಚ ॥ ೯೧ ॥**

**ಅರ್ಥ ॥** ಎಲ್ಲಾ ಮುಖ್ಯಾರ್ಥಗಳಿಗೂ ನೀಚೋಚ್ಚಭಾವವಿದೆ. ಅದರಲ್ಲಿಯೂ ಎಲ್ಲಾ ಶಬ್ದಗಳಿಂದಲೂ ಶ್ರೀಹರಿಯು ಪರಮಮುಖ್ಯವಾಗಿ ವಾಚ್ಯನಾಗುತ್ತಾನೆ. ಅದರಲ್ಲಿ ಮುಖ್ಯಾರ್ಥ ವಿರೋಧದಿಂದ ಬೇರೆ ಅರ್ಥವನ್ನು ಸಂಗ್ರಹಿಸಿಕೊಳ್ಳಬೇಕು. ಸ್ವಾಭಾವಿಕವಾಗಿ ಮುಖ್ಯಾರ್ಥದಿಂದ ವಿರೋಧವಿದ್ದರೆ ಎಲ್ಲಾ ವಾಕ್ಯಗಳಲ್ಲಿಯೂ ಬೇರೆ ಅರ್ಥವನ್ನು ಬಿಡಲೇಬೇಕು. ಶಬ್ದಾರ್ಥ ಜ್ಞಾನವಿಚಾರದಲ್ಲಿ ಹೀಗೆ ಎಲ್ಲಾ ಕಡೆಗಳಲ್ಲಿಯೂ ನಿಯಮವು. ಹೀಗೂ ಇದೆ. ॥ 91 ॥

(4) ನಾಲ್ಕನೇದ್ದನ್ನು ದೂಷಿಸುತ್ತಾರೆ–

**ಮೂಲ ॥ (೧) ನ ಚ ಕ್ರಿಯಾಯಾಮೇವ ಪ್ರಯೋಜನಂ ನ ಸಿದ್ಧ ಇತ್ಯುಕ್ತಂ । (೨) ಜ್ಞಾನಮಾತ್ರೇಽಪಿ ಮಹಾಪ್ರಯೋಜನದರ್ಶನಾತ್ಪಿತೃಜೀವನಾದಿವಾಕ್ಯೇ ॥ ೯೨ ॥**

**ಅರ್ಥ ॥** (1) ಅನುಷ್ಠಾನಕ್ಕೆ ಯೋಗ್ಯವಾದ ಕ್ರಿಯೆಯು ಬೋಧಿಸಲ್ಪಡುತ್ತಿರಲು ಕ್ರಿಯೆಯಲ್ಲಿಯೇ ಪ್ರಯೋಜನವು, ಬೋಧಿಸಲ್ಪಟ್ಟ ಸಿದ್ಧಾರ್ಥದಲ್ಲಿ ಅಲ್ಲ, ಎಂದು ಯುಕ್ತವಲ್ಲ. (2) ಏಕೆಂದರೆ– ತಂದೆಯು ಜೀವಿಸಿಕೊಂಡಿದ್ದಾನೆ, ಇತ್ಯಾದಿ ವಾಕ್ಯಗಳಲ್ಲಿ ಕೇವಲ ಜ್ಞಾನದಲ್ಲಿಯೂ ಮಹಾಪ್ರಯೋಜನವು ತೋರುವುದರಿಂದ.

**ತಾತ್ಪರ್ಯ ॥** ದೇಶಾಂತರಕ್ಕೆ ಹೋದ ತಂದೆಯು ಬದುಕುತ್ತಿದ್ದಾನೋ, ಇಲ್ಲವೋ ಎಂದು ಸಂಶಯಪಟ್ಟ ಅಥವಾ ಬದುಕಿಕೊಂಡಿಲ್ಲವೆಂದು ವಿಪರೀತವಾಗಿ ತಿಳಿದುಕೊಂಡ ಮಗನೊಡನೆ ಯಾರೊಬ್ಬ ಆಪ್ತನು ನಿನ್ನ ತಂದೆಯು ಬದುಕಿಕೊಂಡಿದ್ದಾನೆ, ಪಾಟಲೀಪುತ್ರದೇಶದಲ್ಲಿ ಸಮೃದ್ಧ ನಾಗಿಯೂ ಇದ್ದಾನೆ; ನಿನ್ನನ್ನು ಸುಖಿಯನ್ನಾಗಿ ಮಾಡುವನೆಂದು ಹೇಳಿದೊಡನೆಯೇ ಮಗನು ದುಃಖವನ್ನು ಬಿಟ್ಟು ಸುಖಿಯಾಗುತ್ತಾನೆ. ಹಾಗೆಯೇ ಕರ್ಮವನ್ನನುಷ್ಠಾನಮಾಡದೆ, ಸಿದ್ಧವಿಶೇಷದ ಜ್ಞಾನಮಾತ್ರದಿಂದ ಇಷ್ಟಪ್ರಾಪ್ತಿ, ಅನಿಷ್ಟಪರಿಹಾರರೂಪ ಪ್ರಯೋಜನವು ಆಗುವುದು. ಮೋಕ್ಷರೂಪ

ಪ್ರಯೋಜನವು ಕರ್ಮಫಲವಾದ ಸ್ವರ್ಗಾದಿಗಳಿಂದ ಶ್ರೇಷ್ಠವೇ ಆಗಿರುತ್ತದೆ. ಆದುದರಿಂದ ಸಿದ್ಧಾರ್ಥವನ್ನು ತಿಳಿಸಿಕೊಡೋಣದರಿಂದಲೂ ಪ್ರಯೋಜನವಿದೆ. ॥ 92 ॥

ಅನುಭವಬಲದಿಂದ ಹೀಗೆ ಸಂಭಾವಿಸುವುದು ಮಾತ್ರವಲ್ಲ, ಪ್ರಮಾಣಸಿದ್ಧವೂ ಆಗಿರುತ್ತದೆ ಎಂದು ನಿರೂಪಿಸುತ್ತಾರೆ-

**ಮೂಲ ॥** (೧) ಆಹ ಚ ಸ್ವಯಂ ಭಗವಾನ್ । (೨) ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋ ಲೋಕತ್ರಯಮಾವಿಶ್ಯ ಭಿಭರ್ತ್ಯವ್ಯಯ ಈಶ್ವರಃ ॥ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ । ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ । ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ ॥ ಇತಿ ॥ (ಗೀತಾ ಅಧ್ಯಾ. ೧೫; ಶ್ಲೋ.೧೬,೧೭,೧೮,೧೯,೨೦.) (೩) ಶ್ರೇಯಾನ್ದ್ರವ್ಯಮಯಾದ್ಯಜ್ಞಾಜ್ಜ್ಞಾನ ಯಜ್ಞಃ ಪರಂ ತಪೇತಿ ಚ । (ಗೀತಾ ಅಧ್ಯಾ.೪;ಶ್ಲೋ.೩೩.) (೪) ಧ್ಯಾನಂ ತ್ವಖಿಲಕರ್ಮಭ್ಯೋ ಧ್ಯಾನಾಚ್ಚ ಜ್ಞಾನಮುತ್ತಮಂ । ನ ಜ್ಞಾನಸದೃಶಂ ಕಿಂಚಿತ್ಪುರುಷಾರ್ಥ ಪ್ರಸಿದ್ಧಯೇ ॥ ಇತಿ ಪ್ರವೃತ್ತೇ ॥ (೫) ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ॥ ಇತಿ ಚ ॥ (ಗೀತಾ ಅಧ್ಯಾ.೨; ಶ್ಲೋ ೪೯.) (೬) ಅಶೇಷ ಕರ್ಮ ಪೂಗೋಽಪಿ ನ ವಿಷ್ಣುಧ್ಯಾನ ಲೇಶ ಭಾಕ್। ತಚ್ಚ ಧ್ಯಾನಂ ಹರೇರ್ಜ್ಞಾನ ಕೋಟ್ಯಂಶಾಯ ನ ಪೂರ್ಯತೇ ॥ ಇತಿ ಕರ್ಮವಿವೇಕೇ ॥ (೭) ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ ॥ ಇತಿ ಚ ಶ್ರುತಿಃ ॥ (೮) ನ ಚ ಕರ್ಮಮಾತ್ರೇ ಪರ್ಯವಸಿತಿರ್ವೇದಸ್ಯ । (೯) ಸುಖಜ್ಞಾನಸ್ಯೈವ ಪ್ರಯೋಜನತ್ವಾತ್ । (೧೦) ಅತಃ ಸಿದ್ಧಸ್ಯೈವ ಪ್ರಯೋಜನತ್ವಂ ವಾಚ್ಯಂ ॥ ೯೩ ॥

**ಅರ್ಥ ॥** (1) ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನು ತಾನಾಗಿಯೇ (ಅರ್ಜುನನಿಗೆ ಹೀಗೆ) ಉಪದೇಶಿಸಿರುವನು. (2) ಈ ಪ್ರಮಾಣಪ್ರಮಿತರಾದ ಚೇತನರು ನಿಯಮ್ಯವರ್ಗದಲ್ಲಿ ಕ್ಷರ ಅಕ್ಷರರೆಂದು ಇಬ್ಬರೇ. ಬ್ರಹ್ಮ ಮೊದಲಾದ ಜೀವರಾಶಿಗಳು (ಶರೀರನಾಶವಿರುವುದರಿಂದ) ಕ್ಷರರೆನ್ನಿಸುತ್ತಾರೆ. ನಿರ್ವಿಕಾರಳಾದ ಲಕ್ಷ್ಮೀದೇವಿಯು ವಿನಾಶವಿಲ್ಲದಿರುವ ಶರೀರವಿದ್ದುದರಿಂದ ಅಕ್ಷರಳೆನಿಸುತ್ತಾಳೆ. ಉತ್ತಮಪುರುಷನಾದರೂ ಕ್ಷರಾಕ್ಷರಪುರುಷರಿಂದ ಭಿನ್ನನು, ಪರಮಾತ್ಮನೆಂದು

ಶ್ರುತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. ಯಾವನು ಭೂರ್ಭುವಃಸ್ವರ್ಲೋಕಗಳನ್ನು ಪ್ರವೇಶಿಸಿ ಧರಿಸುವನೋ, ಪೋಷಿಸುವನೋ, ನಾಶರಹಿತನೋ, ಅಚಿಂತ್ಯಶಕ್ತಿಯಿರುವನೋ, ಯಾವ ಕಾರಣದಿಂದ ನಾನು ಕ್ಷರರನ್ನು ಅತಿಕ್ರಮಿಸಿರುವೆನೋ, ಅಕ್ಷರಳಿಂದಲೂ ಉತ್ತಮನೋ, ಆ ಕಾರಣ ಪೌರುಷೇಯ ಗ್ರಂಥಗಳಲ್ಲಿಯೂ, ಅಪೌರುಷೇಯಗ್ರಂಥಗಳಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧಿಪಟ್ಟಿರುವೆ. ಯಾವ ಅಧಿಕಾರಿಯು ನನ್ನನ್ನು ಈ ಪ್ರಕಾರ 'ಸರ್ವೋತ್ತಮತ್ವವು ಮಿಥ್ಯಾಭೂತವು ಇತ್ಯಾದಿ ಮೋಹ'ರಹಿತನಾಗಿ ಕ್ಷರಾಕ್ಷರಪುರುಷರಿಂದುಂದುತ್ತಮನನ್ನಾಗಿ ತಿಳಿಯುತ್ತಾನೋ, ಆತನು ಸರ್ವಶಾಸ್ತ್ರಾರ್ಥವನ್ನು ತಿಳಿದವನಾಗಿ,ಸರ್ವಪ್ರಕಾರದಿಂದ ನನ್ನನ್ನು ಭಜಿಸುತ್ತಾನೆ. ಹಿಂದೆ ಹೇಳಿದ ಪ್ರಕಾರ ಸರ್ವಾಂತರ್ಯಾಮಿತ್ವಾದಿಯು ಶಿಕ್ಷಣೀಯವಾದುದು, ಅತಿಗೋಪ್ಯವಾದುದು, ನನ್ನಿಂದ ಹೇಳಲ್ಪಟ್ಟಿತು. ಎಲೋ ಭರತಕುಲೋತ್ಪನ್ನನಾದ ಅರ್ಜುನನೇ! ಹಿಂದೆ ಹೇಳಿದ್ದನ್ನೆಲ್ಲಾ ತಿಳಿದು ಅಪರೋಕ್ಷಜ್ಞಾನಿಯೂ ಮುಕ್ತನೂ ಕೂಡ ಆಗುವನು. (3) ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗಾದಿರೂಪವಾದ ಯಾಗದ್ದೆಶೆಯಿಂದ ಭಗವಂತನು ಜ್ಞಾನಸಂಪಾದನರೂಪವಾದ ಯಾಗವು ಶ್ರೇಷ್ಠವು. ಏಕೆಂದರೆ– 'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ' ಅಂದರೆ, ಅಂಗಸಹಿತವಾದ ಸರ್ವಕರ್ಮವು ಜ್ಞಾನರೂಪಫಲದಿಂದ ಸಫಲವಾಗುತ್ತದೆ. (4) ಸರ್ವಕರ್ಮಗಳಿಂದ ಧ್ಯಾನವು ಉತ್ತಮವು. ಧ್ಯಾನದಿಂದ ಅಪರೋಕ್ಷಜ್ಞಾನವು ಉತ್ತಮವು. ಪುರುಷಾರ್ಥವು ಪ್ರಸಿದ್ಧಿಯಾಗುವುದಕ್ಕಾಗಿ ಅಪರೋಕ್ಷಜ್ಞಾನಕ್ಕೆ ಸದೃಶವಾದುದು ಯಾವುದೂ ಇಲ್ಲ, ಎಂದು ಪ್ರವೃತ್ತದಲ್ಲಿದೆ. (5) ಪುರುಷಾರ್ಥಕ್ಕೆ ಸಾಧನವಾದ ಜ್ಞಾನದ್ದೆಶೆಯಿಂದ ಕರ್ಮವು ಅತ್ಯಂತ ಅಧಮವು. ('ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ' ಆದಕಾರಣ ಜ್ಞಾನಕ್ಕೆ ಉಪಾಯಭೂತವಾದ ಯೋಗಾನುಷ್ಠಾನರೂಪವಾದ ಸ್ಥಿತಿಯನ್ನು ಹೊಂದು. ಕರ್ಮವನ್ನು ಮಾಡುವ ವಿಷಯದಲ್ಲಿ ಫಲೇಚ್ಛೆಯೇ ಹೇತುವಾಗಿ ಉಳ್ಳವರು ದೀನರು. (6) ಎಲ್ಲಾ ಕರ್ಮಗಳ ಸಮುದಾಯವೂ ಕೂಡ ಶ್ರೀವಿಷ್ಣುವಿನ ಧ್ಯಾನದ ಲೇಶವನ್ನು ಹೊಂದಿದಂಥಾದ್ದಾಗುವುದಿಲ್ಲ, ಅಂತಹ ಧ್ಯಾನವು ಶ್ರೀಹರಿಯ ಜ್ಞಾನದ ಕೋಟಿಯ ಅಂಶಕ್ಕೂ ಪೂರ್ತಿಯಾಗುವುದಿಲ್ಲ, ಎಂದು ಕರ್ಮವಿವೇಕದಲ್ಲಿದೆ. (7) ಆ ಪರಮಾತ್ಮನನ್ನು ಹಿಂದೆ ಹೇಳಿದ ಪ್ರಕಾರ ತಿಳಿದವನು ಮುಕ್ತನಾಗುತ್ತಾನೆ. ಮುಕ್ತಿಗೆ ಬೇರೆ ಮಾರ್ಗವು ಇಲ್ಲ, ಎಂದು ಶ್ರುತಿಯು. (8) (ಐದನೇದ್ದನ್ನು ನಿರಾಕರಿಸುತ್ತಾರೆ) ವೇದಕ್ಕೆ ಕರ್ಮದಲ್ಲಿಯೇ ಅಂದರೆ, ಕರ್ಮವೇ ಕರ್ತವ್ಯವೆಂದು ಪ್ರತಿಪಾದಿಸಲ್ಪಡುತ್ತಿರಲು ನಿರಾಕಾಂಕ್ಷತ್ವವು ಬರುತ್ತದೆ. ಸಿದ್ಧಾರ್ಥದಲ್ಲಿ ಅಲ್ಲ, ಎಂದೂ ಅಲ್ಲ, (9) ಏಕೆಂದರೆ – ಸುಖಜ್ಞಾನಕ್ಕೇನೇ ಪ್ರಯೋಜನತ್ವ ವಿದ್ದುದರಿಂದ (ಅಂದರೆ, ಸುಖಾನುಭವ ಮೊದಲಾದುದೇ ಪ್ರಯೋಜನವು. ಪ್ರಯೋಜನಗಳ ಸಾಧನವನ್ನು ಹೊಂದುವುದೇ ಆಕಾಂಕ್ಷಾವನ್ನು ನಿವರ್ತಿಗೊಳಿಸುವುದು. ಸಿದ್ಧವಿಶೇಷಜ್ಞಾನವು ಪ್ರಯೋಜನಕ್ಕೆ ಸಾಧನವಾದದ್ದು.) ಶಬ್ದದಿಂದ ಬರುವ ಆಕಾಂಕ್ಷೆಯು ಪಿತೃಜೀವನಾದಿ ವಾಕ್ಯಗಳಲ್ಲಿ ಕಾರ್ಯವಿಲ್ಲದೇನೇ ಪರ್ಯವಸಾನವನ್ನು ಹೊಂದುತ್ತದೆ. (10) (6ನೇದ್ದನ್ನು ದೂಷಿಸುತ್ತಾರೆ.) ಹಿಂದೆ ಹೇಳಿದ ಪ್ರಮಾಣಗಳಿಂದ ಸಿದ್ಧಾರ್ಥಕ್ಕೇನೇ ಪ್ರಯೋಜನಸಾಧನತ್ವವು ಸಿದ್ಧವಾಯಿತು.

**ತಾತ್ಪರ್ಯ ॥** ಎಲ್ಲಾ ಅರ್ಥವಾದಗಳೂ ಪ್ರಮಾಣಾಂತರದಿಂದ ಪ್ರಾಪ್ತವಾದ ಅರ್ಥವುಳ್ಳವು ಗಳೆಂದು ನಿಯಮವಿಲ್ಲ, ಯಾವುವು ಪ್ರಮಾಣಾಂತರದಿಂದ ಸಿದ್ಧವಾದ ಅರ್ಥವುಳ್ಳವುಗಳೋ ಅವುಗಳಿಗೂ ಪ್ರಮಾಣಾಂತರದಿಂದ ಸಿದ್ಧವಾದ ಜ್ಞಾನವು ಪ್ರಯೋಜನಕ್ಕೆ ಸಾಧನವಾಗಿ ಅಪೇಕ್ಷಿಸಲ್ಪಟ್ಟ

ಪ್ರಯುಕ್ತ ಅನಧಿಗತಾರ್ಥತ್ವವಿಲ್ಲವೆನ್ನುವುದು ದೋಷಾಧಾಯಕವಾಗುವುದಿಲ್ಲ. ॥ 93 ॥

ಹೀಗೆ ಅರ್ಥವಾದಗಳಿಗೆ ವಚನವೃತ್ತಿಯಿಂದ ಸಿದ್ಧವಾಗತಕ್ಕ ಸ್ವಾರ್ಥದಲ್ಲಿ ಪ್ರಾಮಾಣ್ಯವನ್ನಂಗೀಕರಿಸಿದರೆ 'ಅಪಾಮ ಸೋಮಮಮೃತಾ ಅಭೂಮ' ಇತ್ಯಾದಿಗಳಿಗೂ ಅಂಗೀಕಾರವಿರಬೇಕಾಗುವುದು. 'ತಮೇವಂ ವಿದ್ವಾನಮೃತಃ' ಇತ್ಯಾದಿ ಶ್ರುತಿಗಳಿಂದ ವಿರುದ್ಧವಾದ ಪ್ರಯುಕ್ತ ಹಾಗೆ ಅಂಗೀಕರಿಸಲಿಕ್ಕೆ ಶಕ್ಯವಾಗುವುದಿಲ್ಲ. ಆದಕಾರಣ ವಾಚನಿಕವಾದ ಅರ್ಥವನ್ನು ಬಿಟ್ಟು ಸೋಮಪಾನವನ್ನು ಪ್ರಶಂಸೆ ಮಾಡುವ ವಿಷಯದಲ್ಲಿ ತಾತ್ಪರ್ಯವನ್ನು ಕಲ್ಪಿಸಬೇಕೆಂದರೆ-

**ಮೂಲ ॥ (೧) ಪ್ರಶಂಸಾದೀನಾಂ ಚ ತಾತ್ಪರ್ಯಂ ವಾಚನಿಕಾರ್ಥಾತ್ಯಾಗೇನೈವ ಕಥಿತಂ ಸ್ವಯಂ ಭಗವತಾ । (೨) ಓಂ ಭಾಕ್ತಂ ವಾನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ ॥ ಇತಿ ॥ (ಬ್ರ.ಸೂ.ಅಧ್ಯಾ.೩; ಪಾ.೧.ಸೂ.೭) (೩) ತಸ್ಮಾದ್ವಿರುದ್ಧವತ್ಪ್ರತೀಯಮಾನಾನಿ ಪ್ರಶಂಸಾದೀನಿ ಜ್ಞಾನ ಸಹಕಾರ್ಯಪೇಕ್ಷಯಾ ಯೋಜನೀಯಾನಿ ॥ ೯೪ ॥**

**ಅರ್ಥ** ॥ (1) ಪ್ರಶಂಸಾದಿಗಳಿಗೆ ತಾತ್ಪರ್ಯವು ವಾಚನಿಕಾರ್ಥವನ್ನು ಬಿಡದೇನೇ ಸಾಕ್ಷಾತ್ ಭಗವಂತನಿಂದ ಹೇಳಲ್ಪಟ್ಟಿದೆ. (2) ಯಾಗಾದಿಗಳನ್ನು ಮಾಡತತಕ್ಕ ಕರ್ಮಿಗಳಿಗೆ 'ಅಪಾಮ ಸೋಮಂ' ಶ್ರುತಿಯಿಂದ ಹೇಳಲ್ಪಟ್ಟ ಆಮುಷ್ಮಿಕ ಸುಖಾನುಭವ ರೂಪವಾದ ಅಮೃತತ್ವವು ಸ್ವಲ್ಪಕಾಲದಲ್ಲಿರತಕ್ಕದ್ದು. ಜ್ಞಾನದ್ವಾರಕವಾದುದು, ನಿತ್ಯಾಮೃತವಾದುದು, ಯಾಗಾದಿಗಳನ್ನು ಮಾಡುವವರಿಗೆ ಬ್ರಹ್ಮಜ್ಞಾನಿತ್ವವಿಲ್ಲದಿರುವುದರಿಂದ. ಏಕೆಂದರೆ- 'ಅಮೃತೋ ವಾವ ಸೋಮಪಃ' 'ಕರ್ಮಣಾ ಜ್ಞಾನಮಾತನೋತಿ' 'ಸ ಏನಮವಿದಿತಃ' ಇದು ಮೊದಲಾದ ಶ್ರುತಿಯು ಹಾಗೆಯೇ ತೋರಿಸುತ್ತದೆ. (3) ಆದಕಾರಣ ವಿರುದ್ಧಗಳಂತೆಯೇ ಪ್ರತೀತಗಳಾಗುವ ಪ್ರಶಂಸಾ ಮೊದಲಾದವುಗಳು ಜ್ಞಾನವು ಸಂಪೂರ್ಣ ಮೋಕ್ಷಕ್ಕೆ ಸಾಧನವಾದುದು ಕರ್ಮವು ಸಹಕಾರಿಯಾದುದು ಎಂಬ ಅರ್ಥದ ಅಭಿಪ್ರಾಯದಿಂದ ಕೂಡಿಸಬೇಕು.

**ತಾತ್ಪರ್ಯ** ॥ ಗುಣಗಳಿವೆ ಎಂದು ತಿಳಿಸಿಕೊಡತಕ್ಕ ವಾಕ್ಯವು ಪ್ರಶಂಸೆಯು. ದೋಷಗಳಿವೆ ಎಂದು ತಿಳಿಸಿಕೊಡತಕ್ಕ ವಾಕ್ಯವು ನಿಂದೆಯು. ಒಬ್ಬ ಕರ್ತನನ್ನು ನಿರ್ದೇಶಿಸಿ ಆತನ ಚರಿತ್ರೆಯನ್ನು ಹೇಳುವುದು ಪರಕೃತಿಯು. ಅಥವಾ ಮತ್ತೊಬ್ಬ ಮಹಾಪುರುಷನಿಂದ ಈ ಕರ್ಮವು ಮಾಡಲ್ಪಟ್ಟಿತೆಂದು ಪ್ರತಿಪಾದಿಸತಕ್ಕ ಅರ್ಥವಾದವು ಪರಕೃತಿಯು. ಅನೇಕ ಕರ್ತೃಗಳ ಚರಿತ್ರೆಯನ್ನು ಹೇಳುವುದು ಪುರಾಕಲ್ಪವು ॥ 94 ॥

ಈ ಪ್ರಕಾರ ಶ್ರುತಿಯಲ್ಲಿರುವ ಅರ್ಥವಾದಗಳ ವಿಷಯವನ್ನು ನಿರೂಪಿಸಿ ಪುರಾಣದಲ್ಲಿರುವ ವಾಕ್ಯಗಳ ವಿಷಯದಲ್ಲಿ ವಿಶೇಷವನ್ನು ಹೇಳುತ್ತಾರೆ-

**ಮೂಲ ॥ (೧) ಪುರಾಣಾದೀನಾಂ ತು ಶ್ರುತ್ಯಾದಿವಿರೋಧೇ ಗೌಣೋಪ್ಯರ್ಥೋ ಯುಜ್ಯತೇ । (೨) ಕುಹಕಂ ಚೇಂದ್ರಜಾಲಂ ಚ ವಿರುದ್ಧಾಚರಣಾನಿ ಚ । ದರ್ಶಯಿತ್ವಾ ಜನಂ ಸರ್ವಂ ಮೋಹಯಾಶು ಮಹೇಶ್ವರ ॥ ಇತ್ಯಾದಿ ವಾರಾಹೇ ॥ ೯೫ ॥**

**ಅರ್ಥ ॥** (1) ಪುರಾಣಾದಿಗಳಿಗಾದರೂ ಶ್ರುತ್ಯಾದಿಗಳಿಂದ ವಿರೋಧವಿದ್ದರೆ ಗೌಣವಾದ (ಅಮುಖ್ಯವಾದ) ಅರ್ಥವೂ ಯುಕ್ತವಾಗುತ್ತದೆ. ಕೆಲವು ಕಡೆ ಸರ್ವಥಾ ಅಪ್ರಾಮಾಣ್ಯವೂ ಇದೆ. (2)(ಅಪ್ರಾಮಾಣ್ಯವು ಹೇಗೆಂದರೆ ವಿಪ್ರಲಂಭಮೂಲಕವಾದುದರಿಂದ, ವಿಪ್ರಲಂಭಮೂಲಕತ್ವವು ಹೇಗೆಂದರೆ-) ಎಲೋ ಮಹೇಶ್ವರನೇ ಕುಹಕವು (ಆಕರ್ಷಣ ಮೊದಲಾದ ಆಶ್ಚರ್ಯವನ್ನು ಹುಟ್ಟಿಸತಕ್ಕುದಕ್ಕೆ ಸಾಧನವಾದುದು. ಅಂದರೆ- ಸಮೀಚೀನವಾದ ಶರೀರದಲ್ಲಿ ಭೂತಾದಿಗಳನ್ನಾಗಲೀ ಶವದಲ್ಲಿ ಜೀವವನ್ನಾಗಲೀ, ಆಕರ್ಷಣ ಮಾಡುವುದು ಇದು ಮೊದಲಾದ ಆಶ್ಚರ್ಯವನ್ನು ಮಾಡತಕ್ಕುದು. ಅಥವಾ ಮೋಹಕವು ಅದರ ಉಪಾಯವನ್ನು ತೋರಿಸಿಕೊಡುವುದು. ಎಂದು ಸಂಪ್ರದಾಯಾಭಿಜ್ಞರು.) ಆದಿಯಲ್ಲಿ ಕುಹಕ, ಇಂದ್ರಜಾಲ, ಹರಮೇಖಲಾ (ವಶೀಕರಣಾದಿಗಳ ಸಾಧನವನ್ನು ತೋರಿಸಿಕೊಡುವ ಗ್ರಂಥವಿಶೇಷವು) ಮೊದಲಾದ ದೃಷ್ಟಫಲವುಳ್ಳವುಗಳನ್ನು ತೋರಿಸಿ ಮೋಸಕ್ಕೆ ಒಳಗೊಂಡವರನ್ನು ಕುರಿತು ಆಮೇಲೆ ಪಾರತ್ರಿಕಗಳಾದ ವಿರುದ್ಧಾಚರಣ, ಭಸ್ಮಧಾರಣ, ಲಿಂಗಪೂಜಾದಿಗಳನ್ನು ಮಾಡಬೇಕೆಂದು ತೋರಿಸಿ ಶೀಘ್ರವಾಗಿ ಸರ್ವಜನರನ್ನೂ ಮೋಹಪಡಿಸು. ಇದು ಮೊದಲಾದುದು ವಾರಾಹದಲ್ಲಿದೆ. ॥ 95 ॥

ಪ್ರಜ್ಞಾತಾನುಷ್ಟುಪನ್ನು ಶಂಶನಮಾಡಿದಮೇಲೆ ಕರ್ತವ್ಯವನ್ನು ಬ್ರಾಹ್ಮಣವು ಹೇಳುತ್ತದೆ. 'ಉದ್ಯದ್ಬ್ರಧ್ನಸ್ಯ ವಿಷ್ಟಪಮಿತ್ಯುತ್ತಮಯಾ ಪರಿದಧಾತಿ ಸ್ವರ್ಗೋ ವೈ ಲೋಕೋ ಬ್ರಧ್ನಸ್ಯ ವಿಷ್ಟಪಂ ಸ್ವರ್ಗಮೇವ ತಂ ಲೋಕಂ ಯಜಮಾನಂ ಗಮಯತಿ' ಅಂದರೆ – 'ಉದ್ಯದ್ಬ್ರಧ್ನಸ್ಯ ವಿಷ್ಟಪಂ' ಎಂಬ ಋಕ್ಕನ್ನು ಶಸ್ತ್ರಕ್ಕೆ ಅಂತಿಮವನ್ನಾಗಿ ಮಾಡಿ ಅದರಿಂದ ಶಸ್ತ್ರವನ್ನು ಆಚ್ಛಾದನೆ ಮಾಡಬೇಕು. ಯಾವ ಕಾರಣದಿಂದ ಸ್ವರ್ಗಲೋಕ ಪ್ರಾಪ್ತಿಯು ಇದರಿಂದ ಪ್ರಾರ್ಥಿಸಲ್ಪಡುತ್ತದೋ, ಆದಕಾರಣ ಈ ಋಕ್ಕಿನಿಂದ ಆಚ್ಛಾದನವು ಯಜಮಾನನನ್ನು ಸ್ವರ್ಗಲೋಕವನ್ನೇ ಹೊಂದಿಸಿಕೊಡುತ್ತದೆ. ಎಂದು ಬ್ರಾಹ್ಮಣವು ಸ್ಪಷ್ಟವಾದ ಅರ್ಥವುಳ್ಳದ್ದಾದುದರಿಂದ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ-

**ಮಂ ॥ ಉದ್ಯದ್ಬ್ರಧ್ನಸ್ಯ ವಿಷ್ಟಪಂ ಗೃಹಮಿಂದ್ರಶ್ಚ ಗನ್ವಹಿ ।**
**ಮಧ್ವಃ ಪೀತ್ವಾ ಸಚೇವಹಿ ತ್ರಿಃ ಸಪ್ತ ಸಖ್ಯುಃ ಪದೇ ॥**
**ಇತಿ ತ್ರಿ ಪರಿದಧ್ಯಾತ್ ॥ ೮ ॥ ೫ ॥ ೮ ॥**

**ಮೂಲ ॥ ಬ್ರಧ್ನಸ್ಯ ಸೂರ್ಯಸ್ಯ ವಿಷ್ಟಪಂ ಸ್ವರ್ಗಮುದ್ಗಚ್ಛನ್ವಹೀಂದ್ರೋऽಹಂ ಚ ಯತ್ತದಿಂದ್ರ ಗೃಹಂ ಬ್ರಧ್ನಂ ವಿಷ್ಟಪಂ ಮಧ್ವಃ ಪೀತ್ವಾ ತತ್ರ ಸಚೇವ ಹಿ ಸುಖಮನುಭವಾವ । ಸಖ್ಯುರಿಂದ್ರಸ್ಯ ತ್ರಿಸಪ್ತಸ್ಥಾನೇಷು ॥ ೯೬ ॥**

**ಅರ್ಥ ॥** 'ಬ್ರಧ್ನಸ್ಯ' ಅಂದರೆ, ಸೂರ್ಯಸ್ಯ=ಸೂರ್ಯನ, ವಿಷ್ಟಪಂ=ಲೋಕವನ್ನು ಅಂದರೆ ಸ್ವರ್ಗಂ=ಸ್ವರ್ಗಲೋಕವನ್ನು, ಉದ್ಗನ್ವಹಿ=ಹೊರಟು ಹೋಗುವೆವು. ಇಂದ್ರಃ=ಇಂದ್ರನು, ಅಹಂ ಚ=ನಾನೂ ಕೂಡ, ಯತ್ ತತ್ ಬ್ರಧ್ನಂ ವಿಷ್ಟಪಂ ಇಂದ್ರಗೃಹಂ=ಯಾವುದೊಂದು ಸೂರ್ಯಲೋಕವಾದ ಇಂದ್ರನ ಗೃಹವನ್ನು, ಮಧ್ವಃ=ಅಮೃತವನ್ನು ಅಂದರೆ ಸೋಮವನ್ನು, ತತ್ರ=ಸ್ವರ್ಗದಲ್ಲಿ, 'ಸಖ್ಯುಃ' ಅಂದರೆ ಇಂದ್ರಸ್ಯ=ಇಂದ್ರನ, ತ್ರಿಸಪ್ತಸ್ಥಾನೇಷು=21 ಸ್ಥಾನಗಳಲ್ಲಿ 'ಸಚೇವಹಿ' ಅಂದರೆ ಸುಖಮನುಭವಾವ=ಸುಖವನ್ನನುಭವಿಸುವೆವು. ಇದರಿಂದಲೇ ಋಗರ್ಥವು (ಮಂತ್ರಾರ್ಥವು) ವ್ಯಕ್ತವಾಯಿತು. ॥ 96 ॥

ಈ ವಿಷಯದಲ್ಲಿ ಆಗಮಸಮ್ಮತಿಯನ್ನು ಹೇಳುತ್ತಾರೆ-

**ಮೂಲ ॥ ಏಕವಿಂಶತಿ ದಿವ್ಯಾನಿ ಸ್ಥಾನಾನಿ ದಿವಿ ಚಕ್ರಿಣಃ । ವಜ್ರಿಣೋ ವಾऽಪಿ ತದ್ಭಕ್ತೈರ್ಭುಜ್ಯಂತೇ ತಾನಿ ಯಾಜ್ಞಿಕೈಃ ॥ ಇತಿ ಪ್ರವೃತ್ತೇ ॥ ೯೭ ॥**

**ಅರ್ಥ ॥** ಸ್ವರ್ಗದಲ್ಲಿ ಚಕ್ರಧಾರಿಯಾದವನಿಗೆ ಅಥವಾ ವಜ್ರಧಾರಿಯಾದ ಇಂದ್ರನಿಗೆ 21 ದಿವ್ಯಗಳಾದ ಸ್ಥಾನಗಳಿವೆ. ಆತನ ಭಕ್ತರಾದ ಯಾಜ್ಞಿಕರಿಂದ ಆ ಸ್ಥಾನಗಳು ಅನುಭವಿಸಲ್ಪಡುತ್ತವೆ. ಎಂದು ಪ್ರವೃತ್ತದಲ್ಲಿದೆ. ॥ 97 ॥

**ಮಂ ॥ ಅಪಾಃ ಪೂರ್ವೇಷಾಂ ಹರಿವಃ ಸುತಾನಾಮಥೋ ಇದಂ ಸವನಂ ಕೇವಲಂ ತೇ । ಮಮದ್ಧಿ ಸೋಮಂ ಮಧುಮಂತಮಿಂದ್ರ ಸತ್ರಾ ವೃಷನ್ಜಠರ ಆವೃಷಸ್ವ ॥ ೨ ॥**

**ಅರ್ಥ ॥** ಮಂತ್ರಾರ್ಥವು ಮೂಲಾರ್ಥದಿಂದಲೇ ವ್ಯಕ್ತವಾಗುವುದು.

**ತಾತ್ಪರ್ಯ ॥** ಪೂರ್ವ ಪುರುಷರಿಂದ ಸವನತ್ರಯ ವಿಷಯಕವಾದ ಮತ್ತು ಇಂದ್ರ ವಿಷಯಕವಾದ 'ಅಪಾಃ ಪೂರ್ವೇಷಾಂ' ಎಂಬ ಋಕ್ಕಿನಿಂದ ಹೋಮದಿಂದ ಪ್ರಸನ್ನಗಳಾದ ಸವನತ್ರಯದಲ್ಲಿರುವ ಭಗವದ್ರೂಪಗಳಿಂದ ಇಂದ್ರನಿಂದಲೂ ಈ ಯಾಗವು ನಿರ್ಮಿಸಲ್ಪಟ್ಟಿದೆ. ಯಾವ ಷೋಳಶೀ ಕ್ರತುವೋ ಆದ ಪ್ರಯುಕ್ತ ಈಗಲೂ 'ಅಪಾಃ ಪೂರ್ವೇಷಾಂ' ಎಂಬ ಋಕ್ಕಿನಿಂದ ಯಾರೊಬ್ಬನೂ ಯಾಗ ಮಾಡಿದರೆ ಎಲ್ಲಾ ಯಾಗಗಳಲ್ಲಿರುವ ಭಗವದ್ರೂಪಗಳಿಂದಲೂ, ಇಂದ್ರನಿಂದಲೂ ಈ ಷೋಳಶೀ ಕ್ರತುವನ್ನು ನಿರ್ಮಿಸುತ್ತಾನೆ. ಎಲ್ಲಾ ಯಾಗಗಳಿಂದಲೂ ಅದರಲ್ಲಿ ಅಂತರ್ಗತಗಳಾದ ಭಗವದ್ರೂಪಗಳಿಂದಲೂ, ಇಂದ್ರನಿಂದಲೂ ನಿರ್ಮಿಸಲ್ಪಟ್ಟ ಷೋಳಶೀ ಕ್ರತುವಿನಿಂದ ಸಮೃದ್ಧನಾಗುತ್ತಾನೆ. ಕ್ರತು ನಿರ್ಮಾಣದಿಂದಲ್ಲ, ಯಾರು ತಿಳಿಯುತ್ತಾರೋ ಆತನು. ಭಗವಜ್ಞಾನವೇ ವಿವಕ್ಷಿತವಾಗಿದೆ, ಎಂದು ಬ್ರಾಹ್ಮಣದ ತಾತ್ಪರ್ಯವು ॥ 2 ॥

ಶಸ್ತ್ರವು ಸಮಾಪ್ತಿಯಾದ ಮೇಲೆ 'ಅಪಾಃ' ಇತ್ಯಾದಿ ಬ್ರಾಹ್ಮಣವು ಕರ್ತವ್ಯವನ್ನು ಪ್ರತಿಪಾದಿಸುತ್ತದೆ.

**ಮೂಲ ॥ (೧) ಪೂರ್ವಾನ್ಸುತಾನ್ಪ್ರಾತಃ ಸವನಗಾನ್ಸೋಮಾನಪಾಃ । (೨) ಹರೀನಿಂದ್ರಿಯಾಣಿ ವರ್ತಯತೀತಿ ಹರಿವಃ । ಹರಿಭಿರ್ವರ್ತತ ಇತಿ ವಾ । (೩) ಇದಂ ಮಾಧ್ಯಂದಿನಂ ಸವನಂ ಕೇವಲಂ ತೇ । (೪) ಅಥೋ ಇತ್ಯರ್ಥಾಂತರಂ । (೫) ಮಧುಮಂತಂ ಸೋಮಂ ಜಠರೇ ಆವೃಷಸ್ವ ಆಸಿಂಚ ಮಮದ್ಧಿ ಚ ಸತ್ರಾ ಅಸ್ಮತ್ಪಾತ್ರೇಣ ಸಹ । (೬) ಪೀತಶಬ್ದವತ್ ॥ ೯೮ ॥**

**ಅರ್ಥ ॥** (1) ಮೊದಲು ಹಿಂಡಲ್ಪಟ್ಟ ಪ್ರಾತಸ್ಸವನದಲ್ಲಿರುವ ಸೋಮಗಳನ್ನು ಕುಡಿದಿರುವಿ. (2) 'ಹರಿವಃ' ಅಂದರೆ ಇಂದ್ರಿಯಗಳನ್ನು ಇರಿಸುತ್ತಾನೆ, ಇಂದ್ರಿಯಗಳಿಂದ ಇರುತ್ತಾನೆ ಎಂದಾಗಲೀ. (3) ಈ ಮಾಧ್ಯಂದಿನ ಸವನವು ನಿನ್ನ ಸಂಬಂಧಿಕವು. ನಿನ್ನ ಸಂಬಂಧಿಕವಾಗಿರುವುದರಿಂದಲೇ ಕೇವಲವು. (4) 'ಅಥೋ' ಎಂಬ ಶಬ್ದವು ಅರ್ಥಾಂತರವನ್ನು ಹೇಳುತ್ತದೆ. ಅರ್ಥಾಂತರ ಸವನವು

ಕ್ರಮಪ್ರಾಪ್ತವಾದುದು ಮಾಧ್ಯಂದಿನವೇ. (5) ಮಧುಮಂತಂ=ಸ್ವಾದುರಸವುಳ್ಳ, ಸೋಮಂ= ಸೋಮರಸವನ್ನು, ಜಠರೇ=ಹೊಟ್ಟೆಯಲ್ಲಿ, ಆವೃಷಸ್ವ=ಸೇಚಿಸು, ಮಮದ್ಧಿ ಚ=ಮದವನ್ನು ಮಾಡು, 'ಸತ್ರಾ' ಅಂದರೆ, ಅಸ್ಮತ್ರಾಣೇನ ಸಹ=ನಮ್ಮ ರಕ್ಷಣೆಯಿಂದ ಕೂಡಿಕೊಂಡು. ಅಂದರೆ ನಮ್ಮನ್ನು ರಕ್ಷಿಸುತ್ತಾ (6) ಈ ಋಕ್ಕಿನಿಂದ ಯಜಮಾನನಿಗೆ ಫಲವನ್ನು ಹೇಳುವುದಕ್ಕಾಗಿ ಮೇಲಿನ ಬ್ರಾಹ್ಮಣವು. ಪ್ರಥಮ ಪಾದದ ಫಲವನ್ನು ಹೇಳುವುದಕ್ಕಾಗಿ ಪೀತವತ್ ಎಂದುಕ್ತವಾಗಿದೆ. ಪೀತ ಶಬ್ದದಂತೆಯೇ (ಎಲ್ಲಾ ಶಬ್ದಗಳೂ ಶಬ್ದರೂಪ ಅರ್ಥವುಳ್ಳವುಗಳು, ಅರ್ಥರೂಪ ಅರ್ಥವುಳ್ಳವುಗಳು. ಅದರಲ್ಲಿ ಪ್ರಕೃತ ಪೀತಶಬ್ದವು ಶಬ್ದರೂಪ ಅರ್ಥವುಳ್ಳದ್ದೆಂದಭಿಮತವಾಗಿದೆ. ಆದುದರಿಂದ 'ಪೀತವತ್' ಎನ್ನುವುದಕ್ಕೆ 'ಪೀತಶಬ್ದವತ್' ಎಂದು ವ್ಯಾಖ್ಯಾನಮಾಡಿದ್ದು ಯುಕ್ತವು ॥ 98 ॥

ಪೀತ ಶಬ್ದವು ಪಾನರೂಪ ಅರ್ಥವನ್ನು ಹೇಳುವುದು. ಆ ಪಾನವು ಪ್ರಾತಸ್ಸವನ ಮಾಧ್ಯಂಸವನ -ಸಾಯಂಸವನ ಈ ಮೂರರಲ್ಲಿಯೂ ಅನುಗತವಾಗಿರುವುದರಿಂದ ಪೀತಶಬ್ದವೂ ಸವನತ್ರಯಾನುಗತವೇ ಆದ ಪ್ರಯುಕ್ತ 'ಪೀತವದ್ವೈಪ್ರಾತಸ್ಸವನಂ' ಎಂದು ಮಾತ್ರ ಹೇಳಿದ್ದು ಹೇಗೆ ಕೂಡುತ್ತದೆಂದರೆ-

**ಮೂಲ ॥ (೧) ಅಪೂರ್ವಪಾನತ್ವಾತ್ತದೇವ ಪಾನಂ ಮುಖ್ಯಮಿತಿ ಪೀತ ಶಬ್ದಃ । (೨) ಇಂದ್ರಸ್ಯ ಕೇವಲತ್ವಾತ್ಕೇವಲಂ ಮಾಧ್ಯಂದಿನ ಸವನಂ । (೩) ಮಮದ್ಧೀತಿ ತೃತೀಯ ಸವನಂ । (೪) ತತ್ರ ಹಿ ಮದೋ ವಿಶೇಷತೋ ಭವತಿ ಪೂರ್ತೇಃ । (೫) ಇತಿ ಸವನತ್ರಯ ರೂಪತಾ ಷೋಳಶಿನಃ । (೬) ವೃಷಣ್ವತ್ ವೃಷ್ಣಃ ಇಂದ್ರಸ್ಯ ವಿಶೇಷತಃ ಪ್ರಿಯತ್ವಾತ್ । (೭) ಏವಂ ಚತೂರೂಪತಾ ಷೋಳಶಿನಃ । (೮) ರಾಧ್ನೋತಿ ಋದ್ಧೋ ಭವತಿ ॥ ೯೯ ॥**

**ಅರ್ಥ ॥** (1) ಪ್ರಾತಸ್ಸವನದಲ್ಲಿರತಕ್ಕ ಪಾನವೇ ಪ್ರಾಥಮಿಕಪಾನವಾಗಿರುವುದರಿಂದ ಮುಖ್ಯವು ಎಂಬ ಹೇತುವಿನಿಂದ ಪೀತಶಬ್ದವು ಪ್ರಾತಸ್ಸವನಕ್ಕೆ ಜ್ಞಾಪಕವಾಗುತ್ತದೆ. (ಮುಖ್ಯದಿಂದಲೇ ವ್ಯವಹಾರಗಳಾಗುತ್ತವೆ.) ಪ್ರಾತಸ್ಸವನದಲ್ಲಿರುವ ಭಗವತ್ಪ್ರಸಾದದಿಂದಲೇ ಈ ಯಾಗವನ್ನು ನಿರ್ಮಿಸುತ್ತಾನೆ. (2) ('ಅಸ್ಮಾಕಮಸ್ತು ಕೇವಲಃ' ಇತ್ಯಾದಿ ಪ್ರಯೋಗಗಳಿಂದ) ಇಂದ್ರನಿಗೆ ಕೇವಲ ಶಬ್ದದಿಂದ ವಾಚ್ಯತ್ವವಿದ್ದ ಪ್ರಯುಕ್ತ ಅವನದ್ದಾದ ಮಾಧ್ಯಂದಿನ ಸವನವು ಅಮುಖ್ಯವಾಗಿ ಕೇವಲವೆನ್ನಿಸುತ್ತದೆ. (ಅಂತೂ ಮಾಧ್ಯಂದಿನ ಸವನದೇವತಾ ಪ್ರಸಾದದಿಂದಲೇ ಈ ಯಾಗವನ್ನು ನಿರ್ಮಿಸುತ್ತಾನೆ.) (3) ಮದವುಳ್ಳ ತೃತೀಯ ಸವನವು, ಆ ಕಾರಣ ತೃತೀಯ ಸವನದೇವತಾ ಪ್ರಸಾದದಿಂದ ಯಾಗವನ್ನು ನಿರ್ಮಿಸುತ್ತಾನೆ. (4) ತೃತೀಯ ಸವನದಲ್ಲಿ ಮದವು ವಿಶೇಷಾಕಾರವಾಗಿ ಆಗುತ್ತದೆ. ಪರಿಸಮಾಪ್ತಿಯಾಗಿರುವುದರಿಂದ (5) ('ಪ್ರಾತಸ್ಸವನಾದೇವೈನಂ ಮಾಧ್ಯಂದಿನ ಸವನಾದೇವೈನಂ ತೃತೀಯಸವನಾದೇವೈನಂ' ಇವು ಮೊದಲಾದ ಮೂರು ವಾಕ್ಯಗಳ ತಾತ್ಪರ್ಯವನ್ನು ಹೇಳುತ್ತಾರೆ) ಈ ಪ್ರಕಾರ ಮೂರು ಸವನಗಳ ದೇವತೆಯನ್ನು ಪ್ರತಿಪಾದಿಸತಕ್ಕ ಮೂರು ಪಾದಗಳಿಂದ ಹೋಮವಾಗುವಾಗ ಷೋಳಶಿಗೆ ಸವನತ್ರಯ ರೂಪತ್ವವು ಅಂದರೆ, ಸವನತ್ರಯದ ದೇವತೆಗಳಿಂದ ನಿರ್ಮಿಸಲ್ಪಡುವಿಕೆ. (6)'ವೃಷಣ್ವತ್' ಇಂದ್ರನಿಗೆ ವಿಶೇಷಾಕಾರವಾಗಿ ಪ್ರಿಯನಾದುದರಿಂದ ತಥಾ ಚ ಈ ಪಾದವು ಇಂದ್ರನಿಗೆ ಪ್ರತಿಪಾದಕವು. ಷೋಳಶಿಯು ಅವನಿಗೆ ಪ್ರಿಯವಾದುದು. ಆದಕಾರಣ ಈ

ಪಾದದಿಂದ ಹೋಮದ್ದೆಶೆಯಿಂದ ಇಂದ್ರನ ಪ್ರಸಾದದಿಂದ ಷೋಳಶಿಯನ್ನು ನಿರ್ಮಿಸುತ್ತಾನೆ ಎಂದು ಹೇಳಿದ ಹಾಗೆ ಆಯಿತು. (7) ಹಿಂದೆ ಹೇಳಿದ ಪ್ರಕಾರ ಷೋಳಶಿಕ್ರತುವಿಗೆ ನಾಲ್ಕರಿಂದ ನಿರ್ಮಿಸಲ್ಪಡುವಿಕೆಯು. (8) ರಾಧ್ನೋತಿ ಅಂದರೆ ಸಮೃದ್ಧನಾಗುತ್ತಾನೆ ॥ 99 ॥

ಈ ಪ್ರಕಾರ 'ಅಥಾತಃ ಛಂದಾಂಸ್ಯೇವ' 'ಮಹಾನಾಮ್ನೀನಾಂ' ಎಂಬ ಎರಡು ಖಂಡಗಳಿಂದ ಹೇಳಲ್ಪಟ್ಟ ವಿಹೃತಪಕ್ಷದಲ್ಲಿ ಶಸ್ತ್ರವನ್ನು ಬುದ್ಧಿಯಲ್ಲಿ ನಿಲ್ಲಿಸುವುದಕ್ಕಾಗಿ ಸಂಕಲೀಕರಿಸಿ ತೋರಿಸುವುದಕ್ಕಾಗಿ ಪ್ರತಿಜ್ಞಾಮಾಡುತ್ತಾರೆ-

**ಮೂಲ ॥ (೧) ವಿಹೃತಪಕ್ಷೇ ತು । (೨) ಪಾದಾನ್ವ್ಯವಧಾಯಾರ್ಧರ್ಚಶಃ ಶಂಸೇತ್ । ಪೂರ್ವಾಸಾಂ ಪೂರ್ವಾಣಿ ಪದಾನಿ ॥ ೧೦೦ ॥**

**ಅರ್ಥ ॥** (1) ವಿಹರಣಪಕ್ಷದಲ್ಲಿ ಶಸ್ತ್ರವು ಹೇಳಲ್ಪಡುತ್ತದೆ. (2) (ಹೇಗೆಂದರೆ ಅದನ್ನು ಪ್ರತಿಪಾದಿಸತಕ್ಕ ಆಶ್ವಲಾಯನ ಸೂತ್ರವನ್ನೇ ಪಠನಮಾಡುತ್ತಾನೆ) ಕೆಲವು ಋಕ್ಕುಗಳ ಪಾದಗಳನ್ನು ಬೇರೆ ಋಕ್ಕುಗಳ ಪಾದಗಳಿಂದ ವ್ಯವಹಿತಗಳನ್ನಾಗಿ ಮಾಡಿ ಅನುಷ್ಟುಪಿನ ಅರ್ಧ ಋಕ್ಕುಗಳನ್ನಾಗಿ ಮಾಡಿ ಶಂಸನೆ ಮಾಡಬೇಕು. ಅದರಲ್ಲಿ ಪೂರ್ವದಲ್ಲಿ ನಿರ್ದೇಶಿಲ್ಪಡುವ ಋಕ್ಕುಗಳ ಪಾದಗಳನ್ನು ಪೂರ್ವಗಳನ್ನಾಗಿಯೇ ಮಾಡಬೇಕು. ಮೇಲೆ ನಿರ್ದೇಶಿಲ್ಪಡತಕ್ಕವುಗಳ ಪಾದಗಳನ್ನು ಉತ್ತರಗಳನ್ನಾಗಿಯೇ ಮಾಡಬೇಕು ॥ 100 ॥

ಹೀಗೆ ಪರಿಭಾಷೆಯನ್ನು ಹೇಳಿ ಸ್ಪಷ್ಟವಾಗಿ ನಿರೂಪಿಸುತ್ತಾರೆ-

**ಮೂಲ ॥ ಗಾಯತ್ರ್ಯಃ ಪಂಕ್ತಿಭಿಃ ಪಂಕ್ತೀನಾಂ ತು ದ್ವೇ ದ್ವೇ ಪದೇ ಶಿಷ್ಯೇತೇತಾಭ್ಯಾಂ ಪ್ರಣುಯಾತ್ ॥ ೧೦೧ ॥**

**ಅರ್ಥ ॥** 'ಆತ್ವಾ ವಹಂತು ಹರಯಃ' ಎಂದು ಮೂರು ಗಾಯತ್ರಿಗಳು. 'ಉಪೋಷು ಶೃಣು ಹಿ ಗಿರಃ' ಎನ್ನುವುದೊಂದು, 'ಸುಸಂದೃಶಂ ತ್ವಾ ವಯಂ' ಎನ್ನುವುದು ಎರಡು, ಹೀಗೆ 3 ಮೂರು ಪಂಕ್ತಿ ಛಂದಸ್ಸುಗಳಿಂದ ಕ್ರಮಾನುಸಾರವಾಗಿ ಪಾದಗಳು ವ್ಯವಹಿತಗಳಾಗಬೇಕು. 'ಆತ್ವಾ ವಹಂತು ಹರಯಃ' 'ಉಪೋಷು ಶೃಣು ಹಿ ಗಿರಃ' 'ವೃಷಣಂ ಸೋಮಪೀತಯೇ' 'ಮಘವನ್ಮಾತಥಾ ಇವ' ಇತ್ಯಾದಿ. ಅವುಗಳಲ್ಲಿ ಗಾಯತ್ರಿಗಳು ಎಂಟು ಅಕ್ಷರಗಳುಳ್ಳ ಮೂರು ಪಾದವುಳ್ಳವುಗಳು. ಪಂಕ್ತಿಗಳು ಎಂಟು ಅಕ್ಷರಗಳುಳ್ಳ ಐದು ಪಾದಗಳುಳ್ಳವುಗಳು. ಆದಕಾರಣ ಗಾಯತ್ರಿಯ ಮೂರು ಪಾದಗಳಿಗೆ ಪಂಕ್ತಿಯ ಆದ್ಯಪಾದಗಳ ಮೂರರಿಂದ ವ್ಯತಿಷಂಗವಾದರೆ ಮೂರು ಅನುಷ್ಟುಪಿನ ಅರ್ಧರ್ಚಗಳು ಆಗುತ್ತವೆ. ಪಂಕ್ತಿ ಛಂದಸ್ಸುಗಳ ಪ್ರತಿ ಋಕ್ಕಿನಲ್ಲಿ ಎರಡೆರಡು ಪಾದಗಳು ಉಳಿಯುತ್ತವೆ. ಇದ್ದಹಾಗೆ ಇರುವ ಅವುಗಳಿಂದ ಸ್ತೋತ್ರಮಾಡಬೇಕು. ಅದೊಂದು ಅನುಷ್ಟುಪಿನ ಅರ್ಧ ಋಕ್ಕುಗಳುಳ್ಳದ್ದು ಆಗುತ್ತದೆ. ॥ 101 ॥

**ಮೂಲ ॥ (೧) ಉಷ್ಣಿಹೋ ಬೃಹತೀಭಿಃ । (೨) ಉಷ್ಣಿಹಾಂ ತೂತ್ತಮಾನ್ಪಾದಾನ್ದ್ವೌ ದ್ವೌ ಕುರ್ಯಾತ್ । ಚತುರಕ್ಷರಮಾದ್ಯಂ । (೩) ದ್ವಿಪದಾಶ್ಚತುರ್ಧಾ ಕೃತ್ವಾ ಪ್ರಥಮಾಂ ತ್ರಿಷ್ಟುಭಾ । (೪) ಉತ್ತರಾ ಜಗತೀಭಿಃ । (೫)**

**ಉತ್ತಮಾಯಾಶ್ಚತುರ್ಥಮಕ್ಷರಮಂತ್ಯಂ ಪೂರ್ವಸ್ಯಾದ್ಯಮುತ್ತರಸ್ಯ। (೬)**
**ಅನುಷ್ಟುಭಮತಿ ಛಂದಸ್ಸ್ವವದಧ್ಯಾತ್ ॥ ೧೦೨ ॥**

**ಅರ್ಥ ॥** (1) 'ಯದಿಂದ್ರ ಪೃತನಾಜ್ಯೇ' ಎಂದ ಮೂರು ಉಷ್ಣಿಹ್ ಛಂದಸ್ಸುಳ್ಳವುಗಳು ಮೂರು ಪಾದಗಳುಳ್ಳವುಗಳು. 'ಅಯಂ ತೇ ಅಸ್ತು ಹರ್ಯತಃ' ಎಂಬ ಮೂರು, ನಾಲ್ಕು ಪಾದಗಳುಳ್ಳ ಬೃಹತೀಛಂದಸ್ಸುಳ್ಳ ಋಕ್ಕುಗಳಿಂದ ಕೂಡಿಸಲ್ಪಡಬೇಕು. (2) ಉಷ್ಣಿಹ್ ಛಂದಸ್ಸುಗಳ, ಮತ್ತು ಬೃಹತೀಛಂದಸ್ಸುಗಳ ಮೂರನೇ ಪಾದಗಳು ಹನ್ನೆರಡು ಅಕ್ಷರಗಳುಳ್ಳವುಗಳು. ಬೇರೆ ಪಾದಗಳು ಎಂಟು ಅಕ್ಷರಗಳುಳ್ಳವುಗಳು. ಅವುಗಳಲ್ಲಿ ಉಷ್ಣಿಹ್ ಛಂದಸ್ಸುಗಳ ಅಂತ್ಯಪಾದಗಳನ್ನು ಪ್ರತ್ಯೇಕವಾಗಿ ಎರಡೆರಡು ಪಾದಗಳನ್ನಾಗಿ ಮಾಡಬೇಕು. ಅವುಗಳ ಮಧ್ಯದಲ್ಲಿಯೂ ಒಂದನೇದ್ದನ್ನು ನಾಲ್ಕು ಅಕ್ಷರಗಳುಳ್ಳದ್ದನ್ನಾಗಿ ಮಾಡಬೇಕು. ಎರಡನೇದ್ದನ್ನು ಎಂಟು ಅಕ್ಷರಗಳುಳ್ಳದ್ದನ್ನಾಗಿಯೇ ಮಾಡಬೇಕು. (3) ನಾಲ್ಕು, ಎರಡು ಪಾದವುಳ್ಳವುಗಳು ಪ್ರತ್ಯೇಕವಾಗಿ ನಾಲ್ಕು ಪಾಲುಮಾಡಿ 'ಆಧೂರ್ಷ್ವ ಸ್ಮೈ' ಎಂದು ಒಂದನೇ ಋಕ್ಕನ್ನು ಇಪ್ಪತ್ತು ಅಕ್ಷರಗಳುಳ್ಳದ್ದನ್ನಾಗಿ ಎರಡು ಪಾದಗಳುಳ್ಳದ್ದನ್ನು 'ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣಃ' ಎಂದು ಹನ್ನೊಂದು ಅಕ್ಷರವುಳ್ಳ, ನಾಲ್ಕುಪಾದವುಳ್ಳ ತ್ರಿಷ್ಟುಪ್ ಛಂದಸ್ಸಿನಿಂದ ಕೂಡಿಸಬೇಕು. (4) 'ಏಷ ಬ್ರಹ್ಮ' ಎಂದು ಶಾಖಾಂತರದಲ್ಲಿರುವ ಮೇಲೆ ಇರುವ ಹದಿನಾರು ಅಕ್ಷರಗಳುಳ್ಳ ಮೂರು ಎರಡು ಪಾದವುಳ್ಳವುಗಳು ನಾಲ್ಕುಪ್ರಕಾರ ವಿಭಕ್ತಗಳು. 'ಪ್ರತೇಮಹೇ ವಿದಥೇ ಶಂಸಿಷಂ ಹರೀ' ಎಂಬ ಮೂರು ಹನ್ನೆರಡು ಅಕ್ಷರಗಳುಳ್ಳ, ನಾಲ್ಕು ಪಾದಗಳುಳ್ಳ ಜಗತೀ ಛಂದಸ್ಸುಗಳಿಂದ ಕೂಡಿಸಬೇಕು. (5) 'ತ್ವಾಮಿಚ್ಚ ವಸಸ್ಪತೇ' ಎಂಬ ಮೇಲೆ ಇರುವ ಎರಡು ಪಾದಗಳುಳ್ಳ ಋಕ್ಕಿಗೆ ಹದಿನೈದು ಅಕ್ಷರಗಳು ಇದ್ದುದರಿಂದ ನಾಲ್ಕು ಅಕ್ಷರಗಳುಳ್ಳ, ನಾಲ್ಕು ಪಾದಗಳನ್ನು ಸಂಪಾದನೆ ಮಾಡಲಿಕ್ಕೆ ಕೂಡದಿದ್ದರೂ ನಾಲ್ಕನೇ ಅಕ್ಷರವನ್ನು ಪೂರ್ವ ವಿಭಾಗದ ಅಂತ್ಯವಾದುದನ್ನು ಅಂದರೆ ತ್ವಾಮಿಚ್ಚವ' ಎಂದು ಉತ್ತರ ವಿಭಾಗದ ಮೊದಲನೇದ್ದನ್ನು ಅಂದರೆ– 'ವಸಸ್ಪತೇ' ಎಂದೂ ಮಾಡಬೇಕು. (6) 'ಪ್ರಚೇತನ ಪ್ರಚೇತಯ' ಇದು ಮೊದಲಾದ ಮಹಾನಾಮ್ನ್ಯುಪಸರ್ಗಗಳನ್ನು ಏಕೀಕರಿಸಿ ವ್ಯವಹಾರ ಮಾಡುವುದಕ್ಕಾಗಿ ಆಶ್ವಲಾಯನ ಸೂತ್ರದಿಂದ ಅನುಷ್ಟುಪ್ ಎಂಬ ಸಂಜ್ಞೆಯು ಮಾಡಲ್ಪಟ್ಟಿದೆ. ಆ ಅನುಷ್ಟುಪನ್ನು 'ತ್ರಿಕದ್ರುಕೇಷು ಮಹಿಷೋ ಯವಾಶಿರಂ' 'ಪ್ರೋಷ್ವಸ್ಮೈ ಪುರೋರಥಂ' ಎಂಬ ಅತಿ ಛಂದಸ್ಸುಗಳಲ್ಲಿ ಕೂಡಿಸಬೇಕು ॥ 102 ॥

**ಮೂಲ ॥ (೧) ದ್ವಿತೀಯ ತೃತೀಯಯೋಃ ಪಾದಯೋರವಸಾನೇ ಉಪದಧ್ಯಾತ್।**
**ಪ್ರಚೇತನೇತಿ ಪೂರ್ವಸ್ಯಾಂ । ಪ್ರಚೇತಯೇತ್ಯುತ್ತರಸ್ಯಾಂ । (೨)**
**ಉತ್ತರಾಸ್ವಿತರಾನ್ಪಾದಾನ್ಷಷ್ಠಾನ್ಕೃತ್ವಾ ಅನುಷ್ಟುಪ್‌ಕಾರಂ ಶಂಸೇತ್ ॥ ೧೦೩ ॥**

**ಅರ್ಥ ॥** (1) ಒಂದನೇ ತೃಚದಲ್ಲಿ ಎರಡನೇ ಮೂರನೇ ಋಕ್ಕುಗಳ ಮೂರನೇ ಪಾದಗಳಲ್ಲಿ ಅವಸಾನದಲ್ಲಿ ಇಡಬೇಕು. ಅದರಲ್ಲಿಯೂ ಮೊದಲಿನ ಎರಡನೇ ಋಕ್ಕಿನಲ್ಲಿ 'ಪ್ರಚೇತನ' ಎಂದೂ ಇಡಬೇಕು. ಮೇಲಿನ ಮೂರನೇ ಋಕ್ಕಿನಲ್ಲಿ 'ಪ್ರಚೇತಯ' ಎಂದು ಇಡಬೇಕು. (2) ಮೇಲೆ ಇರುವ 'ಪ್ರೋಷ್ವಸ್ಮೈ' ಇದು ಮೊದಲಾದ ಮೂರು ಋಕ್ಕುಗಳಲ್ಲಿ 'ಆಯಾಹಿ' ಇದು ಮೊದಲಾದ ಮೂರು ಪಾದಗಳನ್ನು ಸಂಖ್ಯಾನುಸಾರವಾಗಿ ಆರನೇದ್ದನ್ನು ಮಾಡಿ ಆಮೇಲೆ ಎಲ್ಲಾ ಋಕ್ಕುಗಳನ್ನು ಅನುಷ್ಟುಪ್ ಛಂದಸ್ಸುಗಳನ್ನಾಗಿ ಮಾಡಿ ಶಂಸನ ಮಾಡಬೇಕು ॥ 103 ॥

'ಪ್ರಪ್ರವಃ' ಇದು ಮೊದಲಾದವುಗಳು ಪ್ರಜ್ಞಾತಾನುಷ್ಟುಪ್‌ಗಳು ಎಂದು ಉದಾಹರಿಸಲ್ಪಡಲಿಲ್ಲ. 'ಅಪಾಃ ಪೂರ್ವೇಷಾಂ' ಎನ್ನುವುದರಿಂದ ಯೋಗವು ಹೇಳಲ್ಪಟ್ಟಿದೆ. ಅದು ಕೂಡಲಾರದು. ಅದು ತ್ರಿಷ್ಟುಪ್ ಛಂದಸ್ಸಾಗಿರುವುದರಿಂದ ಷೋಳಶೀ ಕ್ರತುವಿನಲ್ಲಿ ಪ್ರವೇಶವು ಕೂಡಲಾರದು ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಮಹಾನಾಮ್ನೀನಾಂ ಪಂಚಾಕ್ಷರಾನ್' ಇದು ಮೊದಲಾದ ಬ್ರಾಹ್ಮಣವು. ಅದರ ಅಕ್ಷರಾರ್ಥವು ಸ್ಪಷ್ಟವೇ ಎಂದರೆ, ಅದನ್ನನುವಾದ ಮಾಡಿ ಅಲ್ಲಿ ಹೇಳಿದ ಉಪಸರ್ಜನ ಸಂಯೋಜನಪ್ರಕಾರವನ್ನೇ ಆಶ್ವಲಾಯನ ಸೂತ್ರದಿಂದ ತೋರಿಸುತ್ತಾರೆ-

**ಮೂಲ ॥ ಮಹಾನಾಮ್ನೀನಾಂ ಪಂಚಾಕ್ಷರಾನುಪಸರ್ಗಾನುಪಸ್ಸೃಜತ್ಯೇಕಾದಶಾಕ್ಷರೇಷು ಪಾದೇಷು । ಏವಾ ಹ್ಯೇವಾ ಅಪಾಃ ಪೂರ್ವೇಷಾಂ ಹರಿವಃ ಸುತಾನಾಂ ಏವ ಹೀಂದ್ರನ್ ಅಥೋ ಇದಂ ಸವನಂ ಕೇವಲಂ ತೇ । ಏವಾ ಹಿ ಶಕ್ರೋ ಮಮದ್ಧಿ ಸೋಮಂ ಮಧುಮಂತಮಿಂದ್ರ ವಶೀ ಹಿ ಶಕ್ರಃ ಸತ್ರಾ ವೃಷನ್ ಜಠರ ಆವೃಷಸ್ವೇತಿ ॥ ೧೦೪ ॥**

**ಅರ್ಥ ॥** ಮಹಾನಾಮ್ನೀ ಋಕ್ಕುಗಳ ಐದು ಅಕ್ಷರಗಳುಳ್ಳ ಉಪಸರ್ಗಗಳನ್ನು ಹನ್ನೊಂದು ಅಕ್ಷರಗಳುಳ್ಳ ಪಾದಗಳಲ್ಲಿ ಕೂಡಿಸುತ್ತಾನೆ. 'ಏವಾ ಹ್ಯೇವಾ ಅಪಾಃ ಪೂರ್ವೇಷಾಂ ಹರಿವಸ್ಸುತಾನಾಂ ಏವಾ ಹೀಂದ್ರ ಅಥೋ ಇದಂ ಸವನಂ ಕೇವಲಂ ತೇ ಏವಾ ಹಿ ಶಕ್ರೋ ಮಮದ್ಧಿ ಸೋಮಂ ಮಧುಮಂತಮಿಂದ್ರ ವಶೀ ಹಿ ಶಕ್ರಃ ಸತ್ರಾ ವೃಷನ್ ಜಠರ ಆವೃಷಸ್ವೇತಿ' ॥ 104 ॥

'ಯ ಏವಂ ವೇದ' ಎಂದು ಯಾವ ಜ್ಞಾನವು ಹೇಳಲ್ಪಟ್ಟದೋ ಅದು ಭಗವದ್ವಿಷಯಕವೇ. ಜ್ಞಾನವಿಲ್ಲದೆ ಕರ್ಮವು ಸಫಲವಲ್ಲ, ಎಂದಭಿಪ್ರಾಯವುಳ್ಳವರಾಗಿ ನಿರೂಪಿಸುತ್ತಾರೆ-

**ಮೂಲ ॥ (೧) ಭಗವದ್ಭಕ್ತಿ ಜ್ಞಾನ-ವೈರಾಗ್ಯ ಪೂರ್ವಕಂ ಚ ಕರ್ಮ ಕರ್ತವ್ಯಂ । (೨) ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ । ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ ॥ ೧೦೫ ॥**

**ಅರ್ಥ ॥** (1) ಭಗವಂತನಲ್ಲಿ ಭಕ್ತಿ-ಜ್ಞಾನ-(ವಿಷಯಗಳಲ್ಲಿ)ವೈರಾಗ್ಯ ಪೂರ್ವಕವಾಗಿಯೇ ಕರ್ಮವನ್ನು ಮಾಡಬೇಕು. (2) ಏಕೆಂದರೆ- ಮೂಢರಾದವರು ಯಾಗ ತಟಾಕಾದಿ ನಿರ್ಮಾಣಗಳನ್ನು ಶ್ರೇಷ್ಠಗಳನ್ನಾಗಿ ತಿಳಿಯುವವರಾಗಿ ಬೇರೆ ಶ್ರೇಯಸ್ಸನ್ನು (ಬ್ರಹ್ಮನನ್ನು ಮೋಕ್ಷವನ್ನು) ತಿಳಿಯುವುದಿಲ್ಲ. ಅವರು ಸುಕೃತ ಲಭ್ಯವಾದ ಸ್ವರ್ಗಸ್ಥಳದಲ್ಲಿ ಫಲವನ್ನನುಭವಿಸಿ ಈ ಲೋಕವನ್ನು ಪ್ರವೇಶಿಸುತ್ತಾರೆ. ಕೆಲವರು ಅತಿ ಹೀನವಾದುದನ್ನು ಹೊಂದುತ್ತಾರೆ.

**ತಾತ್ಪರ್ಯ ॥** ''ದೇವೇಭ್ಯ ಉತ್ತಮಂ ವಿಷ್ಣುಂ ರಾಜವದ್ಯಸ್ತು ಮನ್ಯತೇ। ಯಾಜೀ ಸ ಮಾನುಷಂ ಯಾತಿ ಸಾಮ್ಯಹೀನತ್ವವಿತ್ತಮಃ'' ॥ ಹರಿಯು ಸರ್ವರಿಂದಲೂ ಉತ್ತಮನೆಂದು ತಿಳಿಯುವವರು ಈ ಲೋಕವನ್ನು ಪ್ರವೇಶಿಸುತ್ತಾರೆ. ಸಾಮ್ಯವನ್ನು ಹೀನತ್ವವನ್ನಾಗಲೀ ತಿಳಿಯುವವರು ಅತಿ ಹೀನವಾದ ತಮಸ್ಸನ್ನೇ ಹೊಂದುತ್ತಾರೆ. ॥ 105 ॥

**ಮೂಲ ॥ ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ ನ ಶೋಭತೇ ಜ್ಞಾನಮಲಂ ನಿರಂಜನಂ । ಕುತಃ ಪುನಃ ಶಶ್ವದಭದ್ರಮೀಶ್ವರೇ ನ ಚಾರ್ಪಿತಂ ಕರ್ಮ ಯದಪ್ಯಕಾರಣಂ ॥ ೧೦೬ ॥**

**ಅರ್ಥ ॥** ಮೋಕ್ಷಸಾಧನವಾದಾಗ್ಯೂ ಅಚ್ಯುತನ ಭಕ್ತಿಯಿಂದ ವಿರಹಿತವಾದ ವಿಷಯಾಸಕ್ತಿರೂಪ ದೋಷಗಳಿಲ್ಲದಿರುವ ಪರೋಕ್ಷಜ್ಞಾನವು ಶೋಭಿಸುವುದಿಲ್ಲ, ಯಾವಾಗಲೂ ಅಮಂಗಲನಾದ ಈಶ್ವರನ ಹೊರತು ಇತರರಲ್ಲಿ ಅರ್ಪಿತವಾದ ಕರ್ಮವು ಫಲೇಚ್ಛಾರೂಪ ಕಾರಣವಿಲ್ಲದಿದ್ದರೂ ಹೇಗೆ ಶೋಭಿಸೀತು? ಸರ್ವಥಾ ಶೋಭಿಸಲಾರದು ॥ 106 ॥

**ಮೂಲ ॥ (೧) ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ (ಗೀತಾ.ಅಧ್ಯಾ.೧೮ ಶ್ಲೋ.೪೬.) (೨) ತ್ರೈವಿದ್ಯಾ ಮಾಂ ಸೋಮಪಾಃ ಪೂತ ಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ । ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥ (ಗೀತಾ ಅಧ್ಯಾ.೯;ಶ್ಲೋ.೨೦.) (೩) ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮ ಚೇತಸಾ । ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ । (ಗೀತಾ ಅಧ್ಯಾ.೩; ಶ್ಲೋ.೩೦) (೪) ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ । ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥ ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ । ಸರ್ವಜ್ಞಾನ ವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ (ಗೀತಾ.ಅಧ್ಯಾ.೩;ಶ್ಲೋ೩೧.೩೨.) (೫) ತಪಸ್ವಿನೋ ದಾನಪರಾ ಯಶಸ್ವಿನೋ ಮನಸ್ವಿನೋ ಮಂತ್ರವಿದಃ ಸುಮಂಗಲಾಃ । ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ ತಸ್ಮೈ ಸುಭದ್ರಶ್ರವಸೇ ನಮೋನಮಃ ॥ ೧೦೭ ॥**

**ಅರ್ಥ ॥** (1) ಯಾವ ಶ್ರೀಹರಿಯಿಂದ ಪ್ರಾಣಿಗಳಿಗೆ ಚೇಷ್ಟೆಯು ಆಗುತ್ತದೋ, ಯಾವ ಶ್ರೀಹರಿಯಿಂದ ಚೇತನಾಚೇತನಾತ್ಮಕವಾದ ಜಗತ್ತು ವ್ಯಾಪ್ತವಾಗಿಯದೋ, ಅಂತಹ ಶ್ರೀಹರಿಯನ್ನು ಸ್ವವರ್ಣಾಶ್ರಮೋಚಿತ ಕರ್ಮದಿಂದ ಶಮದಮಾದಿಪೂರ್ವಕವಾಗಿ ಪೂಜಿಸಿ ಬ್ರಾಹ್ಮಣಾದಿಗಳು ಮೋಕ್ಷವನ್ನು ಹೊಂದುತ್ತಾರೆ. (2) ಋಗ್ಯಜುಸ್ಸಾಮಗಳೆಂಬ ಮೂರು ವಿದ್ಯೆಗಳುಳ್ಳವರು ನನ್ನನ್ನು ಯಾಗಗಳಿಂದ ಹೋಮಿಸಿ ಕೊನೆಗೆ ನನ್ನಲ್ಲಿ ಸಮರ್ಪಿಸಿ ಹುತಶೇಷವಾದ ಸೋಮರಸವನ್ನು ಪಾನಮಾಡುವವರಾಗಿಯೇ ಪಾಪರಹಿತರಾಗಿ ಸ್ವರ್ಗಮಾರ್ಗವನ್ನು ಕುರಿತು ನನ್ನನ್ನು ಪ್ರಾರ್ಥಿಸುತ್ತಾರೆ. ಅವರು ಪುಣ್ಯದಿಂದ ಸಿಗುವ ಸ್ವರ್ಗವನ್ನು ಹೊಂದಿ ಸ್ವರ್ಗದಲ್ಲಿ ದಿವ್ಯಗಳಾದ ಭೋಗಗಳನ್ನು ಉಣ್ಣುತ್ತಾರೆ. (3) ಸರ್ವೋತ್ತಮನಾದ ನನ್ನಲ್ಲಿ ಆಸಕ್ತವಾದ ಮನಸ್ಸಿನಿಂದ ವಿಷ್ಣುಭಕ್ತಿಜ್ಞಾನಾದಿಗಳು ಹೊರತು ಬೇರೆಕಡೆ ಇಚ್ಛಾಯಿಲ್ಲದಿರುವವನೂ ಸ್ವತಂತ್ರ ಕರ್ತನೆಂಬುವ ಅಭಿಮಾನರಹಿತನೂ ಆಗಿ

ಎಲ್ಲಾ ಕರ್ಮಗಳನ್ನು ನನ್ನಲ್ಲಿಯೇ ಸಮರ್ಪಿಸಿ ಅಂದರೆ ಕೃಷ್ಣನೇ ನನ್ನಲ್ಲಿದ್ದು ಸರ್ವಕರ್ಮಗಳನ್ನು ಮಾಡಿಸುತ್ತಾನೆಂದು ತಿಳಿದು ಸಮರ್ಪಿಸಿ ಶೋಕವನ್ನು ಬಿಟ್ಟವನಾಗಿ ಯುದ್ಧಮಾಡು. ಯಾವ ಮನುಷ್ಯರು ನನ್ನ ಮಾತಿನಲ್ಲಿ ಆಸ್ತಿಕ್ಯಬುದ್ಧಿಯುಳ್ಳವರಾಗಿ, ದೋಷದೃಷ್ಟಿಯನ್ನು ಮಾಡದಿದ್ದವರಾಗಿ ಕರ್ಮಾನುಷ್ಠಾನರೂಪವಾದ ನನ್ನ ಮತವನ್ನು ನಿತ್ಯದಲ್ಲಿಯೂ ಮಾಡುತ್ತಾರೋ, ಅವರೂ ನಿವೃತ್ತಕರ್ಮಗಳಿಂದ ಜ್ಞಾನದ್ವಾರಾ ಮುಕ್ತರಾಗುತ್ತಾರೆ. ಯಾರು ಈ ನನ್ನ ಅಭಿಪ್ರಾಯವನ್ನು ಕಷ್ಟಕರ್ಮವೆಂದು ದೋಷದೃಷ್ಟಿಯುಳ್ಳವರಾಗಿ ಮಾಡುವುದಿಲ್ಲವೋ ಅಂತಹ ವಿವೇಕಶೂನ್ಯರಾದ ತಿಳಿಯಲರ್ಹವಾದ ಸರ್ವ ಜ್ಞಾನವಿಷಯದಲ್ಲಿ ವಿಶೇಷಾಕಾರವಾಗಿ ಮಿಥ್ಯಾಜ್ಞಾನಿಗಳನ್ನು ನರಕಾದ್ಯನರ್ಥಭಾಗಿಗಳನ್ನಾಗಿ ತಿಳಿ. (5) ತಪಸ್ಸುಳ್ಳವರೂ ದಾನದಲ್ಲಿಯೇ ಆಸಕ್ತರೂ ಪ್ರಶಸ್ತ ಕೀರ್ತಿಯುಳ್ಳವರೂ ಪ್ರಶಸ್ತ ಮನಸ್ಸುಳ್ಳವರೂ ಮಂತ್ರಜ್ಞರೂ ತಪಸ್ಸು ಮೊದಲಾದವುಗಳಿಂದ ಬೇರೆ ಶುಭಕರ್ಮವುಳ್ಳವರೂ ಆದವರು ಯಾವ ಶ್ರೀಹರಿಯಲ್ಲಿ ತಪಸ್ಸು ಮೊದಲಾದವುಗಳಿಂದ ಸಮರ್ಪಣಮಾಡದೆ ಪುರುಷಾರ್ಥವನ್ನು ಹೊಂದುವುದಿಲ್ಲವೋ ಅಂತಹ ಅತಿಮಂಗಲಕೀರ್ತಿಯುಳ್ಳ ಶ್ರೀಹರಿಗೆ ನಮಸ್ಕಾರ, ನಮಸ್ಕಾರ ॥ 107 ॥

**ಮೂಲ ॥ (೧) ಏಷ ಉ ಏವ ದಾಶ್ವಾನ್ ಯ ಏವಂ ವೇದ । (೨) ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ । (೩) ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ । ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ॥ (ಗೀತಾ.ಅಧ್ಯಾ.೯.ಶ್ಲೋ.೧೧ ೧೨.) (೪) ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ । ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ ॥ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು । ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ (ಗೀತಾ.ಅಧ್ಯಾ.೧೮.ಶ್ಲೋ.೬೪.) (೫) ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಂ । ತಿಷ್ಠಮಾನಸ್ಯ ತದ್ವಿದ ಇತ್ಯಾದಿ ಶ್ರುತಿಸ್ಮೃತಿಭ್ಯಃ ॥ ೧೦೮ ॥**

**ಅರ್ಥ** ॥ (1) ಯಾರು ಹೀಗೆ ತಿಳಿಯುತ್ತಾನೋ ಈತನೇ ಯಜಮಾನನು, (2) ಯಾವುದನ್ನೇ ವಿದ್ಯೆಯಿಂದ ಆಸ್ತಿಕ್ಯಬುದ್ಧಿಯಿಂದ ಯೋಗ್ಯತೆಯಿಂದ ಮಾಡುತ್ತಾನೋ, ಅದೇ ಸಫಲವಾಗುತ್ತದೆ. (3) ಇಂತಹ ನನ್ನನ್ನು ತಾಮಸರು ಸದಾ ಇರುವ ಗುಣಪರಿಪೂರ್ಣವಾದ ಅತ್ಯುತ್ತಮವಾದ ನನ್ನ ನಿಜವಾದ ಧರ್ಮವನ್ನು ಧರ್ಮವನ್ನು ತಿಳಿಯದಿದ್ದವರಾಗಿ ನಿಕೃಷ್ಟವೆಂದು ತಿಳಿಯುತ್ತಾರೆ. ವ್ಯರ್ಥವಾದ ಆಶೆಯುಳ್ಳವರೂ ವ್ಯರ್ಥವಾದ ಯಜ್ಞಾದಿಕರ್ಮಗಳುಳ್ಳವರೂ ತತ್ವಜ್ಞಾನರಹಿತರೂ ವಿರುದ್ಧ ಮನಸ್ಸುಳ್ಳವರೂ ಅಸುರಸ್ವಭಾವವನ್ನು ಆಶ್ರಯಿಸಿದವರೂ ಆಗಿ ನನ್ನನ್ನು ಅವಮನೆಂದು ತಿಳಿಯುತ್ತಾರೆ. (4) ಸರ್ವಸಾಧನಗಳಲ್ಲಿ ಅತಿಗೋಪ್ಯವಾದ ನನ್ನ ಉತ್ತಮ ವಚನವನ್ನು ಕೇಳು. ನನಗೆ ಇಷ್ಟನಾಗಿರುತ್ತಿ. ನಿಶ್ಚಯವು. ಆದಪ್ರಯುಕ್ತ ನಿನಗೆ ಹಿತವನ್ನು ಹೇಳುವೆನು. (5) ಬ್ರಹ್ಮನು ವಿಜ್ಞಾನರೂಪನು

ಆನಂದರೂಪನು ಬ್ರಹ್ಮಜ್ಞಾನಿಯಾದ ನಿಷ್ಠಾವುಳ್ಳ ಯಜಮಾನನಿಗೆ ಮಿತ್ರನು, ಮುಖ್ಯಾಶ್ರಯನು, ಇದು ಮೊದಲಾದ ಶ್ರುತಿಸ್ಮೃತಿಗಳಿಂದ ಜ್ಞಾನಿಯಾದವನೇ ಫಲವನ್ನು ಹೊಂದುತ್ತಾನೆ. ।। 108 ।।

**ಮೂಲ ।। ನಮೋ ನಾರಾಯಣಾಯಾಜ ಭವ ಶಕ್ರೋಷ್ಣ ರುಜ್ ಮುಖ್ಯೈಃ ।**
**ಸದಾ ವಂದಿತ ಪಾದಾಯ ಶ್ರೀಪಾಯ ಪ್ರೇಯಸೇಽಧಿಕಂ ।। ೧೦೯ ।।**

**ಅರ್ಥ ।।** ಬ್ರಹ್ಮ ರುದ್ರ ಇಂದ್ರ ಸೂರ್ಯಾದಿದೇವತೆಗಳಿಂದ ಸದಾ ನಮಸ್ಕರಿಸಲ್ಪಟ್ಟ ಪಾದಕಮಲಗಳುಳ್ಳವನು ನನಗೆ ಅತಿಪ್ರಿಯನೂ ಆದ ಲಕ್ಷ್ಮೀಪತಿಯಾದ ನಾರಾಯಣನಿಗೋಸ್ಕರ ನಮಸ್ಕಾರವು ।। 109 ।।

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಃ ಕರ್ಮನಿರ್ಣಯಃ
ಸಂಪೂರ್ಣಃ ।। ಶ್ರೀಃ ।।
ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿಸಿದ ಕರ್ಮನಿರ್ಣಯವು
ಸಮಾಪ್ತವಾಯಿತು. ।।ಶ್ರೀಃ ।।

ಯತ್ಸಂಬಂಧೇನ ಕರ್ಮಾಣಿ ಫಲವಂತಿ ಭವಂತಿ ಹಿ ।
ಯಃ ಸರ್ವಕರ್ಮಣಾಂ ಕರ್ತಾ ತಸ್ಮೈ ಭಗವತೇ ನಮಃ ।।
ಯೋಽಂತಸ್ಥಿತ್ವಾ ಸರ್ವಕರ್ಮಕರ್ತಾ ಸ ಭಗವಾನ್ ವಿಭುಃ ।
ಪ್ರೀತೋಽಸ್ತ್ವನೇನ ಮಧ್ವೇಶೋ ರೂಪ್ಯಪೀಠಗತೋ ಹರಿಃ ।।
ತತ್ವೋದ್ಯೋತಸ್ತಥಾ ಕರ್ಮನಿರ್ಣಯಸ್ತತ್ವನಿರ್ಣಯಃ ।
ಕರ್ನಾಟವಾಚಾ ವ್ಯಾಖ್ಯಾತಾಸ್ತಂತ್ರಿನಾರಾಯಣೇನ ಹಿ ।।
ಸತಾಂ ನಿರ್ಮತ್ಸರಧಿಯಾಂ ಮೋದಸ್ತೋಮ ಪ್ರದಾಯಿನಃ ।
ಶ್ರೀಮಧ್ವಮತಿಪಾದಾಬ್ಜೇ ಜಯಂತು ಚಿರಮರ್ಪಿತಾಃ ।।
ಶ್ರೀರಾಮಂ ಹನುಮೇತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಂ ।
ಶ್ರೀವ್ಯಾಸಂ ಮಧ್ವಸಂಸೇವ್ಯಂ ಸಮಸ್ತಾಭೀಷ್ಟದಂ ಭಜೇ ।।

।।ಶ್ರೀಕೃಷ್ಣಾರ್ಪಣಮಸ್ತು ।।

॥ ಶ್ರೀಃ ॥

# ಸದಾಚಾರಸ್ಮೃತಿಯು

ಯತ್ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ ಯದ್ವಂದನಂ ಯತ್ಸ್ಮರಣಂ ಯದರ್ಹಣಂ ।
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥

ಶ್ರೀಮಂತಂ ವಿಠಲಂ ನತ್ವಾ ಪೂರ್ಣಬೋಧೇಷ್ಟ ದೈವತಂ ।
ನಾರಾಯಣಸ್ತತಾಂ ಪ್ರೀತ್ಯೈ ವ್ಯಾಕರೋತ್ಯದ್ಯ ಭಾಷಯಾ ॥

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

**ಮೂಲ ॥ ಯಸ್ಮಿನ್ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ॥**
**ನಿರಾಶೀರ್ನಿರ್ಮಮೋ ಯಾತಿ ಪರಂ ಜಯತಿ ಸೋಽಚ್ಯುತಃ ॥ ೧ ॥**

**ಅರ್ಥ ॥** (ಸಜ್ಜನವರ್ಗಃ=ಸಜ್ಜನರ ಸಮುದಾಯವು,) ಅಧ್ಯಾತ್ಮಚೇತಸಾ, ಅಧ್ಯಾತ್ಮ=ತನ್ನ ಶರೀರದಲ್ಲಿರುವ, ಶ್ರೀಹರಿಯನ್ನಧಿಕರಿಸಿರುವ, ಚೇತಸಾ=ಮನಸ್ಸಿನಿಂದ, ಅಥವಾ ಸರ್ವೋತ್ತಮನಾದ ಶ್ರೀಹರಿಯಲ್ಲಿಟ್ಟ ಮನಸ್ಸಿನಿಂದ, ಸರ್ವಾಣಿ=ಎಲ್ಲಾ (ಅಂಗಗಳಿಂದೊಡಗೂಡಿದ ನಿತ್ಯನೈಮಿತ್ತಿಕಗಳಾದ), ಕರ್ಮಾಣಿ=ಕರ್ಮಗಳನ್ನು, ನಿರಾಶೀಃ=ಹರಿಭಕ್ತ್ಯಾದಿಗಳಿಂದ ಬೇರೆಯಾದ ನಿಷಿದ್ಧಕರ್ಮಗಳಲ್ಲಿ ಆಶೆಯನ್ನು ತೊರೆದು, ನಿರ್ಮಮಃ=ತಮ್ಮದೆಂದಭಿಮಾನವನ್ನು ಬಿಟ್ಟದ್ದಾಗಿ, ಯಸ್ಮಿನ್=ಯಾವ ಶ್ರೀಹರಿಯಲ್ಲಿ, ಸಂನ್ಯಸ್ಯ=ಸಮರ್ಪಿಸಿ, ಪರಂ=ಸರ್ವೋತ್ತಮನಾದ ಶ್ರೀಹರಿಯನ್ನು, ಯಾತಿ=ಹೊಂದುತ್ತದೋ, ಸಃ=ಆ, ಅಚ್ಯುತಃ=ಸಕಲಗುಣಪರಿಪೂರ್ಣನೂ, ನಿರ್ದೋಷನೂ ಆದ ಹರಿಯು, ಜಯತಿ= ಸರ್ವೋತ್ಕೃಷ್ಟನಾಗಿರುತ್ತಾನೆ.

**ತಾತ್ಪರ್ಯ ॥** ಶ್ರೀಹರಿಯೇ ಎಲ್ಲಾ ವಸ್ತುಗಳಿಗೂ ಮುಖ್ಯ ಕರ್ತನು, ಶ್ರೀಹರಿಯ ಪ್ರೇರಣೆಯಿಂದಲೇ ಜೀವರು ಅಮುಖ್ಯವಾಗಿ ಕರ್ತೃಗಳಾಗುವರು. ನಿತ್ಯ, ನೈಮಿತ್ತಿಕ ಕರ್ಮಗಳೆಲ್ಲವೂ ಶ್ರೀಹರಿಗೆ ಪೂಜಾಸ್ವರೂಪಗಳು. ಇಂತಹ ಎಲ್ಲಾ ಕರ್ಮಗಳನ್ನು ಸಜ್ಜನರು ಭಗವಂತನಲ್ಲಿಯೇ ಸಮರ್ಪಿಸಿ ಕ್ರಮವಾಗಿ ತಂತಮಗೆ ಯೋಗ್ಯವಾದ ಪೂರ್ಣಜ್ಞಾನವನ್ನು ಹೊಂದಿ ಮುಕ್ತರಾಗುವರು. ಕಾರಣ ಸತ್ಕರ್ಮಗಳನ್ನು ಸಜ್ಜನರಿಗೆ ತಿಳಿಸುವುದಕ್ಕಾಗಿ ಶ್ರೀಮದಾಚಾರ್ಯರು ದೇವತಾಸ್ತುತಿರೂಪವಾದ ಮಂಗಲವನ್ನು ಮಾಡಿ ಸದಾಚಾರಸ್ಮೃತಿಯೆಂಬ ಗ್ರಂಥವನ್ನು ರಚಿಸಿದರು ॥ 1 ॥

**ಮೂಲ ॥ ಸ್ಮೃತ್ವಾ ವಿಷ್ಣುಂ★ (ಹರಿಂ) ಸಮುತ್ಥಾಯ ಕೃತಶೌಚೋ ಯಥಾ ವಿಧಿ ॥**
**ಧೌತದಂತಃ ಸಮಾಚಮ್ಯ ಸ್ನಾನಂ ಕುರ್ಯಾದ್ವಿಧಾನತಃ ॥ ೨ ॥**

---

★ ( ) ಈ ಆವರಣ ಚಿಹ್ನೆಯೊಳಗಿನ ಪಾಠವು ಶ್ರೀಮನ್ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರಾದ ಫಲಿಮಾರು ಮಠದ

**ಅರ್ಥ ॥** (ಸಜ್ಜನವರ್ಗಃ=ಸಜ್ಜನರ ಸಮುದಾಯವು) ಸಮುತ್ಥಾಯ=ಉಷಃಕಾಲದಲ್ಲಿ ಎಚ್ಚತ್ತು, ವಿಷ್ಣುಂ (ಹರಿಂ)=ಜಾಗ್ರದಾದ್ಯವಸ್ಥೆಗಳನ್ನು ಕೊಡುವ ಶ್ರೀಹರಿಯನ್ನು, ಸ್ಮೃತ್ವಾ=ಸ್ಮರಿಸಿ, ಸಮುತ್ಥಾಯ= ಶಯನದಿಂದ ಎದ್ದು, ಯಥಾವಿಧಿ=ವಿಧಿಯನ್ನನುಸರಿಸಿ, ಕೃತಶೌಚಃ=ಮಾಡಲ್ಪಟ್ಟ ಬಾಹ್ಯಾಭ್ಯಂತರ ಶುದ್ಧಿಯುಳ್ಳದ್ದಾಗಿ, ಧೌತದಂತಃ=ತೊಳೆದ ಹಲ್ಲುಗಳುಳ್ಳದ್ದಾಗಿ (ಹಲ್ಲುಜ್ಜಿ), ಸಮಾಚಮ್ಯ=ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಆಚಮನಮಾಡಿ, ವಿಧಾನತಃ=ವಿಧಿಯನ್ನನುಸರಿಸಿ, ಸ್ನಾನಂ=ಅವಗಾಹನಸ್ನಾನವನ್ನು, ಕುರ್ಯಾತ್ - ಮಾಡತಕ್ಕದ್ದು.

**ತಾತ್ಪರ್ಯ ॥** (1) ತಮ್ಮ ಹೃದ್ಗತನಾದ ಶ್ರೀಹರಿಯನ್ನು ಸ್ಮರಿಸುತ್ತಾ ಮಂಚದಿಂದ ಎದ್ದು ಆಚಮನಮಾಡಿ ಗಜೇಂದ್ರಮೋಕ್ಷ, ದಧಿವಾಮನಸ್ತೋತ್ರ ಮೊದಲಾದ ಸ್ತೋತ್ರಗಳಿಂದ ಶ್ರೀಹರಿಯನ್ನು ಧ್ಯಾನಿಸಬೇಕು. (2) ಆಮೇಲೆ ಶ್ರೀಹರಿಯ ಭಕ್ತರಾದ ರಮಾಬ್ರಹ್ಮಾದಿ ದೇವತೆಗಳನ್ನೂ, ಗುರುಗಳನ್ನೂ, ಸ್ತುತಿಸಬೇಕು. ಸಾಲಗ್ರಾಮ, ತುಳಸೀ, ಗೋವು, ಕನ್ನಡಿ, ಪತಿವ್ರತಾಸ್ತ್ರೀ ಮೊದಲಾದವರನ್ನು ನೋಡಬೇಕು. (3) ಗ್ರಾಮದಿಂದ ಹೊರಗೆ ಹೋಗಿ ಹುಲ್ಲುಗಳಿಂದ ನೆಲವನ್ನು ಮುಚ್ಚಿ ತಲೆಗೆ ವಸ್ತ್ರವನ್ನು ಸುತ್ತಿಕೊಂಡು ರಾತ್ರಿಗೆ ದಕ್ಷಿಣದಿಕ್ಕಿಗೆ ಅಭಿಮುಖವಾಗಿಯೂ ಹಗಲಿಗೆ ಉತ್ತರಾಭಿಮುಖವಾಗಿಯೂ ಮಲಮೂತ್ರೋತ್ಸರ್ಜನೆಗಳನ್ನು ಮಾಡಬೇಕು. (4) ಮಣ್ಣು ನೀರುಗಳಿಂದ ಕೈಕಾಲು ಮೊದಲಾದವುಗಳನ್ನು ತೊಳೆದುಕೊಳ್ಳಬೇಕು. (5) ವಿಧ್ಯುಕ್ತ ಪರ್ಣಾದಿ ಗಳಿಂದ ದಂತಧಾವನ ಮಾಡಬೇಕು. (6) ಶಾಸ್ತ್ರೋಕ್ತಪ್ರಕಾರ ಆಚಮನ ಮಾಡಬೇಕು. (7) ಭಾಗೀರಥ್ಯಾದಿಗಳಲ್ಲಿ ಸ್ನಾನಮಾಡಬೇಕು. 'ಮಂತ್ರಸ್ನಾನಂ ಮಲಸ್ನಾನಂ ಧ್ಯಾನಸ್ನಾನಂ ಚ ವಾರುಣಂ । ಪಂಚಮಂ ಚ ಜಲಸ್ನಾನಮಿತಿ ಪಂಚವಿಧಂ ಸ್ಮೃತಂ ॥' (1) ಮಂತ್ರಸ್ನಾನ,(2) ಮಲಸ್ನಾನ, (3) ಧ್ಯಾನಸ್ನಾನ, (4)ವಾರುಣಸ್ನಾನ, (5) ಜಲಸ್ನಾನ ಹೀಗೆ ಸ್ನಾನವು 5 ವಿಧವು. (2) 'ಪ್ರಥಮಂ ತ್ರಿರ್ನಿಮಜ್ಜ್ಯಾಪ್ಸು ಕರಾಭ್ಯಾಂ ಶೋಧಯೇತ್ತತಃ । ಸರ್ವಾಂಗಾನಿ ಚ ತ್ರಿಃಪಶ್ಚಾನ್ನಿಮಜ್ಜ್ಯಾಚಮ್ಯ ಭಕ್ತಿತಃ। ಮಲಸ್ನಾನಮಿದಂ ಪ್ರೋಕ್ತಂ ' ॥ ಪ್ರಥಮತಃ 3 ಆವರ್ತಿ ನೀರಿನಲ್ಲಿ ಮುಳುಗಿ ಕೈಗಳಿಂದ ಎಲ್ಲಾ ಅಂಗಗಳನ್ನು ಶೋಧಿಸಿ ಆಮೇಲೆ 3 ಆವರ್ತಿ ಮುಳುಗಿ ಆಚಮನ ಮಾಡಿ ಭಕ್ತಿಯಿಂದ ಭಗವದ್ಧ್ಯಾನವನ್ನು ಮಾಡಬೇಕು. ಇದು ಮಲಸ್ನಾನವೆನ್ನಿಸುತ್ತದೆ. 1 ''ಅಸ್ನಾಪ್ಯಶಕ್ತೌ ಕರ್ತವ್ಯಂ ಮಂತ್ರಸ್ನಾನಂ ದಿನೇದಿನೇ । ಸಂಧ್ಯೋಪಾಸನಕರ್ಮಾದಾವಧಿಕಾರಸ್ಯ ಸಿದ್ಧಯೇ ॥ ಆರ್ದ್ರವಸ್ತ್ರೇಣ ಸಂಮಾರ್ಜ್ಯ ಸರ್ವಗಾತ್ರಭವಂ ಮಲಂ । ಪೂರ್ವವಸ್ತ್ರಂ ಪರಿತ್ಯಜ್ಯ ಅನ್ಯದ್ಧೌತಂ ವಿಧಾರಯನ್ । ಆಚಮ್ಯ ಜಲಮಾಧಾಯ ಪಾತ್ರೇ ವಾಮಕರೇಽಥವಾ ॥ ಗಾಯತ್ರ್ಯಾ ವಾಽಥ ಮೂಲೇನ ತ್ರಿವಾರಮಭಿಮಂತ್ರಯೇತ್ । ತಜ್ಜಲಂ ಪ್ರೋಕ್ಷಯೇದ್ಗಾತ್ರೇ ದರ್ಭೈರ್ವಾ ತುಲಸೀದಲೈಃ'' ॥ ಯಾವ ರೀತಿಯಿಂದಲೂ ನೀರಿನಲ್ಲಿ ಸ್ನಾನಮಾಡಲಿಕ್ಕೆ ಶಕ್ತಿ ಇಲ್ಲದಿದ್ದರೆ ಸಂಧ್ಯಾವಂದನಾದಿಕರ್ಮಗಳಲ್ಲಿ ಅಧಿಕಾರಸಿದ್ಧಿಗಾಗಿ ನಿತ್ಯವೂ ಮಂತ್ರಸ್ನಾನ ಮಾಡಬೇಕು. ಒದ್ದೆಯಾದ ವಸ್ತ್ರದಿಂದ ಶರೀರದಲ್ಲಿದ್ದ ಕಶ್ಮಲಗಳನ್ನು ತೊಳೆದು ಮುಂಚಿನ ವಸ್ತ್ರವನ್ನು ಬಿಟ್ಟು ಬಿಳಿವಸ್ತ್ರವನ್ನು ಧರಿಸುತ್ತಾ ಆಚಮನಮಾಡಿ

---

**ಮೂಲಪುರುಷರಾದ ಹೃಷೀಕೇಶ ತೀರ್ಥರು ಸ್ವಹಸ್ತದಿಂದ ಬರೆದ ತಾಳಪತ್ರದ ತೌಳಲಿಪಿಯ ಸರ್ವ ಮೂಲಗ್ರಂಥದಲ್ಲೂ, ಶ್ರೀಸೋದಾ ವಾದಿರಾಜಮಠದ ಅತಿಪ್ರಾಚೀನ ತೌಳಲಿಪಿಯ ತಾಳಪತ್ರ ಪುಸ್ತಕದ ಸರ್ವಮೂಲಗ್ರಂಥದಲ್ಲೂ ಇದ್ದುದರಿಂದ ಈ ಪಾಠವೇ ಅತ್ಯಾದರಣೀಯವೆಂದು ನಾನು ಅಭಿಪ್ರಾಯಪಡುತ್ತೇನೆ.**

ಪಾತ್ರದಲ್ಲಿ ಅಥವಾ ಎಡಕೈಯಲ್ಲಿ ನೀರನ್ನು ಹಿಡಿದು ಗಾಯತ್ರೀ ಮೂಲಮಂತ್ರಾದಿಗಳಿಂದ 3 ಆವರ್ತಿ ಅಭಿಮಂತ್ರಿಸಿ ದರ್ಭೆ ಯಾ ತುಳಸೀದಳಗಳಿಂದ ಶರೀರಕ್ಕೆ ಪ್ರೋಕ್ಷಿಸಿಕೊಳ್ಳಬೇಕು. ಜಲಾಭಿಮಾನಿ ದೇವತಾದಿಗಳನ್ನು ಸ್ಮರಿಸಬೇಕು. 'ಆಪೋಹಿಷ್ಠಾ' ಇತ್ಯಾದಿ ಮಂತ್ರಗಳನ್ನು ಜಪಿಸಿ ಸಂಧ್ಯಾವಂದನಾದಿಕರ್ಮಗಳನ್ನು ಮಾಡಬೇಕು. ಇದೇ ಮಂತ್ರಸ್ನಾನವು. (3) ಯದಾಽಪಿ ತನ್ನ ಶಕ್ನೋತಿ ವೃದ್ಧೋ ವಾಽಪ್ಯಥವಾಽತುರಃ । ಶಯನೋಽಪಿ ಪ್ರಕುರ್ವೀತ ಧ್ಯಾನಸ್ನಾನಮತಂದ್ರಿತಃ ॥ ಉದ್ಯದಾದಿತ್ಯ ಸಂಕಾಶಂ ಪೀತನಿರ್ಮಲವಾಸಸಂ ॥ ಸರ್ವಾವಯವಸಂಯುಕ್ತಾಂ ಸರ್ವಾಭರಣಭೂಷಿತಾಂ । ಸರ್ವಲಕ್ಷಣಸಂಯುಕ್ತಾಂ ಮನ್ಮೂರ್ತಿಂ ಸ್ವೇಷ್ಟದೇವತಾಂ ॥ ಮಸ್ತಕೋಪರಿ ತಾಂ ಧ್ಯಾಯೇತ್ । ವೃದ್ಧನಾಗಲೀ, ರೋಗವುಳ್ಳವನಾಗಲೀ, ಮಂತ್ರಸ್ನಾನ ಮಾಡಲಿಕ್ಕೆ ಅಶಕ್ತನಾದರೆ ಮಲಗಿಕೊಂಡಾದರೂ ಧ್ಯಾನ ಸ್ನಾನಮಾಡಬೇಕು. ಉದಯಿಸಿಕೊಂಡುಬರುವ ಸೂರ್ಯನಂತೆ ಪ್ರಕಾಶಿಸುವವನೂ, ಪೀತಾಂಬರಧಾರಿಯೂ. ಸರ್ವಾಂಗಯುಕ್ತನೂ, ಕಿರೀಟಾದಿಗಳನ್ನು ಧರಿಸಿದವನೂ ಸರ್ವಲಕ್ಷಣಯುಕ್ತನೂ, ಆದ ತನ್ನ ಇಷ್ಟದೇವತೆಯಾದ ಭಗವಂತನ ಮೂರ್ತಿಯನ್ನು ಶಿರಸ್ಸಿನಮೇಲೆ ಧ್ಯಾನಿಸಬೇಕು. (4) 'ಅವಗಾಹಂ ತಂ ವಾರುಣಂ' । ನೀರಿನಲ್ಲಿ ಮುಳುಗಿ ಸ್ನಾನ ಮಾಡತಕ್ಕದ್ದಕ್ಕೆ ವಾರುಣಸ್ನಾನವೆಂದು ಹೆಸರು. (5) ಜಲಸ್ನಾನಮಥೋ ವಕ್ಷ್ಯೇಸಿದ್ಧ್ಯರ್ಥಂ ಸರ್ವಕರ್ಮಣಾಂ। ಗಂಗಾದಿಷು ಯಥಾಲಾಭಂ ಕೂಪಾದೌ ಸ್ನಾನಮಾಚರೇತ್। ಶುಚಿಃ ಕ್ಷಾಲಿತಪಾದಃ ಸನ್ ಧೌತಹಸ್ತೋ ದ್ವಿರಾಚಮೇತ್ । ಇತ್ಯಾದಿ. ಸರ್ವಕರ್ಮಗಳ ಅಧಿಕಾರಸಿದ್ಧಿಗಾಗಿ ಅನುಕೂಲವಾದರೆ ಗಂಗಾದಿಗಳಲ್ಲಿಯೂ ಅಥವಾ ಕೂಪಾದಿಗಳಲ್ಲಿ ಆಗಲೀ ಸ್ನಾನಮಾಡಬೇಕು. ಪರಿಶುದ್ಧನಾಗಿ ಸಂಕಲ್ಪಮಾಡಿ ನದ್ಯಭಿಮಾನಿದೇವತೆಗಳನ್ನು ಪ್ರಾರ್ಥಿಸಿ ಭಗವನ್ಮೂರ್ತಿಯನ್ನು ಧ್ಯಾನಿಸುತ್ತಾ ಸ್ನಾನಮಾಡಬೇಕು. ಬ್ರಹ್ಮಾದಿ ದೇವತೆಗಳಿಗೂ, ದ್ವೈಪಾಯನಾದಿ ಋಷಿಗಳಿಗೂ ಅಗ್ನಿಕವ್ಯವಾಹನಾದಿ ಪಿತೃಗಳಿಗೂ ತರ್ಪಣ ಕೊಡಬೇಕು. ಇದು ಜಲಸ್ನಾನವು ॥ 2 ॥

**ಮೂಲ ॥ ಉದ್ಧೃತೇತಿ ಮೃದಾಲಿಪ್ಯ ದ್ವಿಷಡಷ್ಟಷಡಕ್ಷರೈಃ ।**
**ತ್ರಿರ್ನಿಮಜ್ಜ್ಯಾಽಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಸ್ತತಃ (ಥಾ) ॥**
**ಮೃದಾಲಿಪ್ಯ ನಿಮಜ್ಯತ್ರಿಸ್ತ್ರಿರ್ಜಪೇದಘಮರ್ಷಣಂ ॥ ೩ ॥**

**ಅರ್ಥ ॥** ಉದ್ಧೃತೇತಿ='ಉದ್ಧೃತಾಸಿ ವರಾಹೇಣ' ಎಂಬುವ 3 ಋಕ್ಕುವುಳ್ಳ ಮಂತ್ರದಿಂದ, ಮೃದಾ=ತುಲಸೀ ಮೃತ್ತಿಕೆಯಿಂದ, ಆಲಿಪ್ಯ=ಶರೀರವನ್ನು ಲೇಪಿಸಿ, (3 ಆವರ್ತಿ ಸ್ನಾನಮಾಡಿ) ದ್ವಿಷಡಷ್ಟಷಡಕ್ಷರೈಃ, ದ್ವಿಷಟ್=ಎರಡಾವರ್ತಿ ಆರು, ಅಂದರೆ ಹನ್ನೆರಡು, ಅಷ್ಟ=ಎಂಟು, ಷಟ್=ಆರು, ಅಕ್ಷರೈಃ=ಅಕ್ಷರಗಳುಳ್ಳ ಮಂತ್ರಗಳಿಂದ ಅಂದರೆ ವಾಸುದೇವ ದ್ವಾದಶಾಕ್ಷರ ಮಂತ್ರದಿಂದಲೂ, ನಾರಾಯಣಾಷ್ಟಾಕ್ಷರ ಮಂತ್ರದಿಂದಲೂ, ವಿಷ್ಣುಷಡಕ್ಷರ ಮಂತ್ರದಿಂದಲೂ, ಕೃಷ್ಣಷಡಕ್ಷರ ಮಂತ್ರ ದಿಂದಲೂ, ತ್ರಿಃ=ಮೂರಾವರ್ತಿ, ನಿಮಜ್ಯ=ಸ್ನಾನಮಾಡಿ, (ಆಚಮನಮಾಡಿಕೊಂಡು) ಆಪ್ಯಸೂಕ್ತೇನ= 'ಆಪೋಹಿಷ್ಠಾ' ಎಂಬೀ ಮೂರು ಋಕ್ಕುಗಳಿಂದ, ಪ್ರೋಕ್ಷಯಿತ್ವಾ= ಶರೀರವನ್ನು ಪ್ರೋಕ್ಷಣೆಮಾಡಿ ಕೊಂಡು, ಪುನಃ=ಮತ್ತು, ತಥಾ=ಹಾಗೆಯೇ, ಮೃದಾ=ಮೃತ್ತಿಕೆಯಿಂದ, ಆಲಿಪ್ಯ=ಶರೀರವನ್ನು ಲೇಪಿಸಿ, ತ್ರಿಃ=ಮೂರಾವರ್ತಿ, ನಿಮಜ್ಯ=ಸ್ನಾನಮಾಡಿ, ಅಘಮರ್ಷಣಂ='ಋತಂ ಚ ಸತ್ಯಂ ಚ' ಎಂಬುವ 3 ಋಕ್ಕುಗಳುಳ್ಳ ಅಘಮರ್ಷಣಸೂಕ್ತವನ್ನು, ತ್ರಿಃ=ಮೂರಾವರ್ತಿ, ಜಪೇತ್=ಜಪಿಸಬೇಕು.

**ತಾತ್ಪರ್ಯ ॥** (1) 'ಉದ್ಧೃತಾಸಿ ವರಾಹೇಣ' ಎಂಬುವ ಮಂತ್ರದಿಂದ ಶರೀರಕ್ಕೆ ತುಳಸೀ ಮೃತ್ತಿಕೆಯನ್ನು ಲೇಪಿಸಿ ವಾಸುದೇವ ದ್ವಾದಶಾಕ್ಷರ ಮಂತ್ರ ಮೊದಲಾದವುಗಳಿಂದ ಸ್ನಾನಮಾಡಿ ಅಘಮರ್ಷಣ ಸೂಕ್ತಾದಿಗಳನ್ನು ಪಠನಮಾಡಬೇಕು. 2 'ಉದ್ಧೃತಾಸಿ' ಇತ್ಯಾದಿ ಮೂರು ಋಕ್ಕುಗಳು. ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ । ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥ 1 ॥ ಮೃತ್ತಿಕೇ ಬ್ರಹ್ಮದತ್ತಾಸಿ ಕಾಶ್ಯಪೇನಾಭಿಮಂತ್ರಿತೇ । ಮೃತ್ತಿಕೇ ದೇಹಿ ಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಂ ॥ 2 ॥ ಮೃತ್ತಿಕೇ ಪ್ರತಿಷ್ಠಿತಂ ಸರ್ವಂ ತನ್ಮೇ ನಿರ್ಣುದ ಮೃತ್ತಿಕೇ । ತ್ವಯಾ ಹತೇನ ಪಾಪೇನ ಗಚ್ಛಾಮಿ ಪರಮಾಂ ಗತಿಃ ॥ 3 ॥

**ಮೂಲ ॥ ಸ್ರಷ್ಟಾರಂ ಸರ್ವಲೋಕಾನಾಂ ಸ್ಮೃತ್ವಾ ನಾರಾಯಣಂ ಪರಂ ॥ ೪ ॥**

**ಯತಶ್ವಾಸೋ ನಿಮಗ್ನೋಽಪ್ಸು ಪ್ರಣವೇನೋತ್ಥಿತಸ್ತತಃ ।**
**ಸಿಂಚೇತ್ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್ ॥ ೫ ॥**

**ಅರ್ಥ ॥** ಯತಶ್ವಾಸಃ=ನಿಗ್ರಹಿಸಲ್ಪಟ್ಟ ಶ್ವಾಸವುಳ್ಳವನಾಗಿ (ಶ್ವಾಸನಿರೋಧ ರೂಪವಾದ ಪ್ರಾಣಾಯಾಮವನ್ನು ಮಾಡಿ), ಅಪ್ಸು=ನೀರಿನಲ್ಲಿ, ನಿಮಜ್ಯ=ಮುಳುಗಿಯೇ, ಅಂದರೆ ಸ್ನಾನಮಾಡಿ, ಸರ್ವಲೋಕಾನಾಂ=ಎಲ್ಲಾ ಲೋಕಗಳಿಗೂ, ಸ್ರಷ್ಟಾರಂ=ಸೃಷ್ಟಿಕರ್ತನೂ, ಪರಂ=ಸರ್ವೋತ್ತಮನೂ ಆದ, ನಾರಾಯಣಂ=ನಾರಾಯಣನನ್ನು, ಸ್ಮೃತ್ವಾ=ಸ್ಮರಿಸಿ, ತತಃ=ನೀರಿನಿಂದ, ಪ್ರಣವೇನ=ಓಂ ಎಂಬೀ ಪ್ರಣವಮಂತ್ರದಿಂದ, ಉತ್ಥಿತಃ=ಎದ್ದವನಾಗಿ, ಪುರುಷಸೂಕ್ತೇನ=ಪುರುಷಸೂಕ್ತದಿಂದ, ಸ್ವದೇಹಸ್ಥಂ= ತನ್ನ ಶರೀರದಲ್ಲಿರುವ, ಹರಿಂ=ಶ್ರೀಹರಿಯನ್ನು, ಸ್ಮರನ್=ಸ್ಮರಿಸಿದವನಾಗಿ, ಸಿಂಚೇತ್=ಪ್ರೋಕ್ಷಿಸಿ ಕೊಳ್ಳಬೇಕು.

**ತಾತ್ಪರ್ಯ ॥** ಪ್ರಾಣಾಯಾಮವನ್ನು ಮಾಡಿ 'ಋತಂ ಚ ಸತ್ಯಂ ಚ' ಇತ್ಯಾದಿ ಅಘಮರ್ಷಣ ಸೂಕ್ತಕ್ಕೆ ಅರ್ಥಭೂತನೂ, ಭೂಮಿ ಮೊದಲಾದ 7 ಲೋಕ, ಅತಲಾದಿ 7 ಲೋಕ ಸೂರ್ಯಚಂದ್ರ ಮೊದಲಾದ ಸರ್ವರನ್ನು ಸೃಷ್ಟಿಸಿದವನೂ, ಜಲಾಂತರ್ಗತನೂ ಆದ ಶೇಷಶಾಯಿಯಾದ ಶ್ರೀಹರಿ ಯನ್ನು ಧ್ಯಾನಿಸುತ್ತಾ ಓಂಕಾರವನ್ನುಚ್ಚರಿಸುತ್ತಾ ನೀರಿನಿಂದ ಎದ್ದು ಪುರುಷಸೂಕ್ತವನ್ನು ಪಠನಮಾಡಿ ಪುರುಷಸೂಕ್ತಕ್ಕೆ ಅರ್ಥಭೂತನೂ, ಚರಾಚರ ಜಗತ್ತನ್ನು ಸೃಷ್ಟಿಸಿದವನೂ ಆದ ಶರೀರದಲ್ಲಿರುವ ತುರ್ಯರೂಪಿಯಾದ ಶ್ರೀಹರಿಯನ್ನು ಶಂಖಮುದ್ರೆಯಿಂದ ಪ್ರೋಕ್ಷಿಸತಕ್ಕುದು ಅಂದರೆ ದೇಹಾಂತ-ರ್ಗತನಾದ ಶ್ರೀಹರಿಗೆ, ಎಂಬ ಭಾವನೆಯಿಂದ ಶರೀರವನ್ನು ಪ್ರೋಕ್ಷಿಸಿಕೊಳ್ಳಬೇಕು. ॥ 4-5 ॥

**ಮೂಲ ॥ ವಸಿತ್ವಾ ವಾಸ ಆಚಮ್ಯ ಪ್ರೋಕ್ಷ್ಯಾಚಮ್ಯ ಚ ಮಂತ್ರತಃ ॥**
**ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಂ ॥ ೬ ॥**

**ಮಂತ್ರತಃ ಪರಿವೃತ್ಯಾಥ ಸಮಾಚಮ್ಯ ಸುರಾದಿಕಾನ್ ॥**
**ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸೃತ್ಯ (ವಿಸ್ತೀರ್ಯ)ಚಾಂಜಸಾ ॥೭ ।**

**ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್ ।**
**ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ ॥ ೮ ॥**

**ಅರ್ಥ ॥** (ಸ್ನಾನಾನಂತರ ಮಯ್ಯೊರಸಿದ ಮೇಲೆ) ವಾಸಃ=ಒಣಗಿದ ವಸ್ತ್ರವನ್ನು, ವಸಿತ್ವಾ=ಪಂಚಕಚ್ಚ ಷಟ್ಟುಚ್ಚವಾಗಿ ಉಟ್ಟುಕೊಂಡು, ಆಚಮ್ಯ=ಆಚಮನಮಾಡಿ, (ಪೂರ್ವದಲ್ಲಿ ಧರಿಸಿದ್ದ ವಸ್ತ್ರವನ್ನು ತನ್ನ ಸಮೀಪದಲ್ಲಿಯೇ ಇಟ್ಟುಕೊಂಡು,) ಮಂತ್ರತಃ='ಶುಚೀವೋಹವ್ಯ' ಎಂಬುವ ಮಂತ್ರದಿಂದ, ಪ್ರೋಕ್ಷ್ಯ=(ಆಗ ಉಟ್ಟುಕೊಂಡ ವಸ್ತ್ರವನ್ನು) ಪ್ರೋಕ್ಷಿಸಿ, ಆಚಮ್ಯ=(ಊರ್ಧ್ವ ಪುಂಡ್ರಾದಿಗಳನ್ನು ಧರಿಸಿದ ಮೇಲೆ ಪುನಃ) ಆಚಮನಮಾಡಿ, (ಪ್ರಾಣಾಯಾಮವನ್ನೂ ಬೆಳಗಿನ ಸಂಧ್ಯಾವಂದನೆಯನ್ನೂ ಮಾಡುತ್ತೇನೆ ಎಂದು ಸಂಕಲ್ಪವನ್ನು ಮಾಡಿ, 'ಆಪೋಹಿಷ್ಠೇತ್ಯಾದಿ ಮಂತ್ರಗಳಿಂದ) ಪ್ರೋಕ್ಷ್ಯ=ಮಾರ್ಜನಮಾಡಿಕೊಂಡು, ಮಂತ್ರತಃ='ಸೂರ್ಯಶ್ಚ' ಇತ್ಯಾದಿ ಮಂತ್ರಗಳಿಂದ ನೀರನ್ನು ಅಭಿಮಂತ್ರಿಸಿ ಪ್ರಾಶನಮಾಡಿ, ಆಚಮ್ಯ=ಪುನಃ ನೀರನ್ನು ತೆಗೆದುಕೊಂಡು, ಮಂತ್ರತಃ=ತಂತಮ್ಮಶಾಖೆಯಲ್ಲಿ ಹೇಳಿದ 'ದಧಿಕ್ರಾವ್ಣೋ' ಇತ್ಯಾದಿ ಮಂತ್ರಗಳಿಂದ, ಪ್ರೋಕ್ಷ್ಯ=ಪುನಃ ಮಾರ್ಜನೆಮಾಡಿಕೊಂಡು, ಸೂರ್ಯಗತಂ=ಸೂರ್ಯಾಂತರ್ಗತನಾದ, ಹರಿಂ=ಶ್ರೀನಾರಾಯಣ ನನ್ನು, ಧ್ಯಾತ್ವಾ=ಧ್ಯಾನಿಸಿ, ಗಾಯತ್ರ್ಯಾ=ಗಾಯತ್ರೀ ಮಂತ್ರದಿಂದ, ಅಂಜಲಿಂ=ಅರ್ಘ್ಯವನ್ನು, ದತ್ವಾಚ=3 ಸಲ ಕೊಟ್ಟು, ಮಂತ್ರತಃ=ಗಾಯತ್ರೀ ಮಂತ್ರದಿಂದ, ಹರಿಂ=ಗಾಯತ್ರಿಗೆ ಅರ್ಥಭೂತನಾದ ಸೂರ್ಯಾಂತರ್ಗತನಾದ ಶ್ರೀಹರಿಯನ್ನು, ಧ್ಯಾತ್ವಾ=ಧ್ಯಾನಿಸಿ, ಮಂತ್ರತಃ='ಅಸಾವಾದಿತ್ಯೋ ಬ್ರಹ್ಮ' ಎಂಬುವ ಮಂತ್ರದಿಂದ, ಪರಿವೃತ್ಯ=ನೀರನ್ನು ಸುರಿಸಿಕೊಂಡು ತನ್ನನ್ನು ಪ್ರದಕ್ಷಿಣೀಕರಿಸಿ, ಅಥ=ಆಮೇಲೆ, ಸಮಾಚಮ್ಯ= 3 ಆವರ್ತಿ ಆಚಮನಮಾಡಿ, ಸುರಾದಿಕಾನ್=ಬ್ರಹ್ಮಾದಿ ದೇವತೆಗಳಿಗೆ ಕಾರಣಗಳಾದ ಕೇಶವಾದಿ ಭಗವನ್ಮೂರ್ತಿಗಳನ್ನೂ, ದೇವ ಋಷ್ಯಾದಿಗಳನ್ನೂ (ಧ್ಯಾನಿಸುತ್ತಾ), ತರ್ಪಯಿತ್ವಾ=ತರ್ಪಣಕೊಟ್ಟು, ವಾಸಃ=ಪೂರ್ವದಲ್ಲಿ ಧರಿಸಿದ್ದ ಒದ್ದೆಯಾದ ಸ್ನಾನವಸ್ತ್ರವನ್ನು (ಪ್ರೋಕ್ಷಿಸಿ), ನಿಪೀಡ್ಯ=ಸ್ಥಳದಲ್ಲಿ ಹಿಂಡಿ, ('ಯೇಕೇಚಾಸ್ಮತ್' ಎಂಬುವ ಮಂತ್ರದಿಂದ ವಸ್ತ್ರನಿಷ್ಪೀಡನೋದಕವನ್ನು ಪಿತೃಗಳಿಗೆ ಕೊಟ್ಟು,) ಅಥ=ಅಮೇಲೆ, ವಾಸಃ=ಆ ಬಟ್ಟೆಯನ್ನು, ವಿಸೃತ್ಯ (ವಿಸ್ತೀರ್ಯ)=ನೀರಿನಲ್ಲಿ ಚೆನ್ನಾಗಿ ಬಿಡಿಸಿ ತೊಳೆದು ಬಿಸಿಲಿನಲ್ಲಿ ಆರಿಸಿ, ಅಂಜಸಾ=ಚೆನ್ನಾಗಿ, ಅರ್ಕಮಂಡಲಗಂ=ಗಾಯತ್ರಿಗೆ ಅರ್ಥಭೂತನೂ, ಸೂರ್ಯಾಂತರ್ಗತನೂ ಆದ, ವಿಷ್ಣುಂ=ಶ್ರೀಹರಿ ಯನ್ನು, ('ಧ್ಯೇಯಃ ಸದಾ' ಎಂಬುವ ಮಂತ್ರದಿಂದ) ಧ್ಯಾತ್ವೈವ=ಧ್ಯಾನಿಸಿಯೇ, ಸಹಸ್ರಪರಮಾಂ= ಸಹಸ್ರಾವರ್ತಿಯೇ ಉತ್ತಮವಾಗಿ ಉಳ್ಳ, ಶತಮಧ್ಯಾಂ=ನೂರಾವರ್ತಿಯೇ ಮಧ್ಯಮವಾಗಿ ಉಳ್ಳ, ದಶಾವರಾಂ=ಹತ್ತಾವರ್ತಿಯೇ ಅಧಮವಾಗಿ ಉಳ್ಳ, ತ್ರಿಪದೀಂ ದೇವೀಂ=ಮೂರು ಪಾದ ಉಳ್ಳ ಗಾಯತ್ರಿಯನ್ನು, ಜಪೇತ್=ಮೆಲ್ಲಗೆ ಜಪಿಸತಕ್ಕುದು.

**ತಾತ್ಪರ್ಯ ॥** 'ಶುಚಿಸ್ಸಂಧ್ಯಾಮುಪಾಸೀತ ಕುರ್ಯಾದ್ದೇವರ್ಷಿತರ್ಪಣಂ। ತಿಷ್ಠನ್ನುದಯ ಪರ್ಯಂತಂ ಗಾಯತ್ರ್ಯಷ್ಟಶತಂ ಜಪೇತ್' ॥ ಎಂದು ವಿಷ್ಣುಧರ್ಮೋತ್ತರಾದಿಗಳಲ್ಲಿ ಹೇಳಿರುವುದ ರಿಂದ 'ಸುರಾದಿಕಾಂಸ್ತರ್ಪಯಿತ್ವಾ' ಎಂಬುವ ವಾಕ್ಯದಲ್ಲಿ 'ಸುರಾದಿಕಾನ್' ಎನ್ನುವುದಕ್ಕೆ ಸಂಧ್ಯಾಂಗ ದೇವ ಋಷ್ಯಾದಿಗಳನ್ನು ಎಂದರ್ಥವನ್ನೇ ಇಟ್ಟುಕೊಳ್ಳಬೇಕು. ಮತ್ತು 'ಅಜಪಿತ್ವಾ ತು ಗಾಯತ್ರೀಂ ಬ್ರಹ್ಮಯಜ್ಞಂ ಕರೋತಿ ಯಃ । ಸ ಬ್ರಹ್ಮಹಾ ಸಮುದ್ದಿಷ್ಟಃ ಸರ್ವಕರ್ಮಸು ಗರ್ಹಿತಃ' ॥ ಗಾಯತ್ರಿಯನ್ನು ಜಪಿಸದೆ ಬ್ರಹ್ಮ ಯಜ್ಞವನ್ನು ಮಾಡಿದರೆ ಮಹಾಪ್ರತ್ಯವಾಯವೂ ಶ್ರುತವಾದುದರಿಂದ ಬ್ರಹ್ಮಯಜ್ಞವನ್ನು ವೈಶ್ವದೇವದಿಂದ ಮೊದಲು ಯಾ ಮೇಲೆ ಮಧ್ಯಾಹ್ನಕಾಲದಲ್ಲಿ ಮಾಡಬೇಕು. 'ಸ್ನಾನಂ ಕುರ್ಯಾದ್ವಿಧಾನತಃ' ಎಂಬುವದನ್ನಾರಂಭಿಸಿ 'ವಾಸೋವಿಸೃತ್ಯ ಚಾಂಜಸಾ' ಎಂಬ ಪರ್ಯಂತ

ಪ್ರಾತರ್ಮಾಧ್ಯಾಹ್ನಿಕ ಕರ್ಮಗಳನ್ನು ಸಂಕ್ಷೇಪದಿಂದ ನಿರೂಪಿಸಿದರು. ತರ್ಪಯಿತ್ವಾ=ಮಾಧ್ಯಾಹ್ನಿಕ ಸಂಧ್ಯಾವಂದನೆಯ ಅರ್ಘ್ಯಪ್ರದಾನ ತದಂಗ ಜಪತರ್ಪಣಗಳನ್ನು ಮಾಡಿ, ಅಥ=ಆಮೇಲೆ ಮಾಡಲಿಕ್ಕೆ ವಿಹಿತವಾದ ಬ್ರಹ್ಮಯಜ್ಞ ತರ್ಪಣಗಳನ್ನು ಮಾಡಿದ ಮೇಲೆ, ನಿಪೀಡ್ಯ=ವಾಸೋದಕವನ್ನು ಕೊಟ್ಟು, ಅಂತೂ ಪ್ರಾತಃಸ್ನಾನಾನಂತರದಲ್ಲಿಯೂ ಮಧ್ಯಾಹ್ನದಲ್ಲಿಯೂ ತರ್ಪಣ ಕೊಟ್ಟಮೇಲೆಯೂ ಪಿತೃಗಳ ತೃಪ್ತಿಗಾಗಿ ವಸ್ತ್ರನಿಷ್ಪೀಡನವನ್ನು ಮಾಡಬೇಕು. ಸೂರ್ಯೋಪಸ್ಥಾನಕ್ಕಿಂತ ಮೊದಲು ಬ್ರಹ್ಮಯಜ್ಞವನ್ನು ಮಾಡಲೇಬಾರದು ॥ 6-7-8 ॥

**ಮೂಲ ॥ ಆಸೂರ್ಯದರ್ಶನಾತ್ತಿಷ್ಠೇತ್ತತಸ್ತೂಪವಿಶೇತ ವಾ ।**
**ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುತ್ತರಾಂ ಸ ದಿವಾಕರಾಂ ॥**
**ಉತ್ತರಾಮುಪವಿಶ್ಯೈವ ವಾಗ್ಯತಃ ಸರ್ವದಾ ಜಪೇತ್ ॥ ೯ ॥**

**ಅರ್ಥ ॥** ಆಸೂರ್ಯದರ್ಶನಾತ್=ಸೂರ್ಯನು ಕಾಣುವ ತನಕ (ಗಾಯತ್ರೀಜಪವನ್ನು ಮಾಡುತ್ತಾ), ತಿಷ್ಠೇತ್=ನಿಂತುಕೊಳ್ಳಲೇಬೇಕು, ತತಸ್ತು=ಸೂರ್ಯದರ್ಶನವಾದ ಮೇಲೆ, ಉಪ-ವಿಶೇತ ವಾ=ಕೂತುಕೊಳ್ಳಬಹುದು. ತಿಷ್ಠೇತ ವಾ=ನಿಂತುಕೊಳ್ಳಲೂಬಹುದು, ಪೂರ್ವಾಂ=ಪ್ರಾತಃ ಕಾಲದಲ್ಲಿ ಮಾಡತಕ್ಕ, ಸಂಧ್ಯಾಂ=ಸಂಧ್ಯಾಕರ್ಮವನ್ನು, ಸನಕ್ಷತ್ರಾಂ=ನಕ್ಷತ್ರಸಹಿತವಾದುದನ್ನಾಗಿ ವಾಗ್ಯತಃ=ಮಾತನಾಡದೆ, ಜಪೇತ್=ಜಪಿಸಬೇಕು. (ನಕ್ಷತ್ರಗಳು ತೋರಿಕೊಂಡಿರುವಾಗಲೇ ಆರಂಭಿಸಿ ಜಪಿಸಬೇಕು.) ಉತ್ತರಾಂ=ಪ್ರಾತಃಕಾಲಿಕ ಸಂಧ್ಯಾಕ್ಕಿಂತ ಮೇಲೆ ಮಾಡತಕ್ಕ ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು, ಸದಿವಾಕರಾಂ=ಸಮಾನ ಸೂರ್ಯನು ಉಳ್ಳದ್ದನ್ನಾಗಿ, (ಅಂದರೆ ದ್ವಾದಶ್ಯಾದಿಗಳಲ್ಲಿ ಸೂರ್ಯೋದಯವಾದ ಮೇಲೆಯೂ, ಪ್ರತಿನಿತ್ಯ ಮಧ್ಯಾಹ್ನಕಾಲದಲ್ಲಿಯೂ) ಮಾಡಬೇಕು. ಉತ್ತರಾಂ=ಸಾಯಂಕಾಲಿಕ ಸಂಧ್ಯಾವಂದನೆಯನ್ನು, ಸದಿವಾಕರಾಂ=ಸೂರ್ಯ ಸಹಿತವಾದುದನ್ನಾಗಿಯೇ, (ಸೂರ್ಯನಿರುವಾಗಲೇ ಪ್ರಾರಂಭಿಸಬೇಕು.) ಉತ್ತರಾಂ=ಪ್ರಾತಃ ಕಾಲಕ್ಕಿಂತ ಮೇಲಿನ ಕಾಲದಲ್ಲಿ ಜಪಿಸಲಿಕ್ಕೆ ಯೋಗ್ಯವಾದ ಮಾಧ್ಯಾಹ್ನಿಕ ಸಾಯಂ ಜಪಗಳನ್ನು, ಉಪವಿಶ್ಯೈವ=ಕೂತುಕೊಂಡೇ, ಜಪೇತ್=ಜಪಿಸತಕ್ಕದು. ಸರ್ವದಾ=ಯಾವಾಗಲೂ, ಉತ್ತರಾಂ= ಸಾಯಂ ಸಂಧ್ಯಾವಂದನೆಯನ್ನು, ಉಪವಿಶ್ಯೈವ=ಕೂತುಕೊಂಡೇ, (ಮಾಡಬೇಕು, ನಿಂತುಕೊಂಡು ಮಾಡಬಾರದು.) ಸದಿವಾಕರಾಂ=ಸೂರ್ಯನಿಂದ ಕೂಡಿದ, ಉತ್ತರಾಂ=ಸಾಯಂ ಸಂಧ್ಯಾವಂದನೆ ಯನ್ನು, ಸರ್ವದಾ=ಜಪಮಾಡುವ ಕಾಲದಲ್ಲಿ, ವಾಗ್ಯತಃ=ವಾಜ್ ನಿಯಮವುಳ್ಳವನಾಗಿ, ಜಪೇತ್=ಜಪಿಸಬೇಕು.

**ತಾತ್ಪರ್ಯ ॥** ಪ್ರಾತಃಕಾಲದಲ್ಲಿ ನಕ್ಷತ್ರಗಳು ಕಾಣಿಸುತ್ತಿರುವಾಗಲೇ ಗಾಯತ್ರಿಯನ್ನು ಜಪಿಸಬೇಕು. ಸೂರ್ಯದೇವರು ನಮಗೆ ಕಾಣುವ ತನಕ ನಿಂತುಕೊಂಡೇ ಜಪಿಸಬೇಕು. ಆಮೇಲೆ ಕೂತುಕೊಂಡೂ ಜಪಿಸಬಹುದು. ನಿಂತುಕೊಂಡೂ ಜಪಿಸಬಹುದು. ಸಾಯಂಕಾಲಿಕ ಸಂಧ್ಯಾವಂದನೆ ಯನ್ನೂ, ಮಾಧ್ಯಾಹ್ನಿಕಜಪವನ್ನೂ ಕೂತುಕೊಂಡೇ ಮಾಡಬೇಕು. ಸೂರ್ಯನು ಕಾಣಿಸುತ್ತಾ ಇರುವಾಗಲೇ ಸಾಯಂಕಾಲಿಕ ಸಂಧ್ಯಾವಂದನೆಯನ್ನು ಪ್ರಾರಂಭಿಸತಕ್ಕದು. ಯಾವಾಗಲೂ ಮೌನಿಯಾಗಿಯೇ ಜಪಿಸತಕ್ಕದು. ॥ 9 ॥

ಮೂಲ ॥ ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।
ಕೇಯೂರವಾನ್ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥ ೧೦ ॥

**ಅರ್ಥ** ॥ ಸವಿತೃಮಂಡಲ ಮಧ್ಯವರ್ತೀ=ಸೂರ್ಯಮಂಡಲದ (ರಥದ) ಮಧ್ಯದಲ್ಲಿರುವವನೂ, ಸರಸಿಜಾಸನ ಸನ್ನಿವಿಷ್ಟಃ=ಕಮಲಾಸನದಲ್ಲಿ ಕೂತಿದ್ದವನೂ, ಕೇಯೂರವಾನ್=ತೋಳುಸರಿಗೆ ಉಳ್ಳವನೂ, ಮಕರಕುಂಡಲವಾನ್=ಕಿವಿಯಲ್ಲಿ ಮಕರಕುಂಡಲವೆಂಬ ಆಭರಣವುಳ್ಳವನೂ, ಕಿರೀಟೀ=ಕಿರೀಟವುಳ್ಳವನೂ, ಹಾರೀ=ಮುತ್ತಿನ ಸರವುಳ್ಳವನೂ, ಹಿರಣ್ಮಯವಪುಃ=ಆನಂದಮಯವಾದ ಶರೀರವುಳ್ಳವನೂ, ಧೃತಶಂಖಚಕ್ರಃ=ಶಂಖಚಕ್ರಗಳನ್ನು ಧರಿಸಿದವನೂ ಆದ, ನಾರಾಯಣಃ=ಶ್ರೀನಾರಾಯಣನು, ಸದಾ=ಯಾವಾಗಲೂ, ಅಂದರೆ ಕಾಲತ್ರಯದ ಗಾಯತ್ರೀ ಜಪಗಳಲ್ಲಿಯೂ, ಧ್ಯೇಯಃ=ಧ್ಯಾನಿಸಲ್ಪಡಬೇಕು.

**ತಾತ್ಪರ್ಯ** ॥ ಹೃದಯದಲ್ಲಿರತಕ್ಕ 8 ದಲವುಳ್ಳ ಕಮಲದಲ್ಲಿರುವ ರತ್ನಖಚಿತವಾದ ಸಿಂಹಾಸನದಲ್ಲಿ ಅನಂತಾನಂತ ಸೂರ್ಯರಂತೆ ಪ್ರಕಾಶಿಸುತ್ತಿರುವ, ಶಂಖಚಕ್ರಾದ್ಯಾಯುಧಗಳನ್ನು ಧರಿಸಿದ ಶ್ರೀನಾರಾಯಣನನ್ನೇ ಸೂರ್ಯಾಂತರ್ಗತನನ್ನಾಗಿ ಗಾಯತ್ರಿಯಿಂದ ಧ್ಯಾನಿಸಬೇಕು ॥ 10 ॥

ಮೂಲ ॥ ಗಾಯತ್ರ್ಯಾತ್ರಿ(ಸ್ತ್ರಿ) ಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್ ।
ಪ್ರಣಮ್ಯ ದೇವಾನ್ವಿಪ್ರಾಂಶ್ಚ ಗುರೂಂಶ್ಚ ಹರಿಪಾರ್ಷದಾನ್ ॥ ೧೧ ॥

ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ನೇವಾರ್ಚಯೇದ್ಧರಿಂ ।
(ಸ್ಮೃತ್ವಾ ಸರ್ವೋತ್ತಮಂ ವಿಷ್ಣುಂ ಸ್ವಾಧ್ಯಾಯೇನಾರ್ಚಯೇದ್ಧರಿಂ) ।
ಧ್ಯಾನಪ್ರವಚನಾಭ್ಯಾಂ ಚ(ವಾ) ಯಥಾಯೋಗ್ಯಮುಪಾಸನಂ ॥ ೧೨ ॥

ಅ ॥ (ಸಂಧ್ಯಾಗಾಯತ್ರಿಯನ್ನು ಜಪಿಸಿದ ಮೇಲೆ) ಹರಿಪಾರ್ಷದಾನ್=ಶ್ರೀವಿಷ್ಣುವಿನ ಭಕ್ತರಾದುದರಿಂದ ಆತನ ಭಕ್ತಿ ಮೊದಲಾದ ಗುಣಯುಕ್ತರಾದ ಇಂದ್ರಾದ್ಯಷ್ಟದಿಕ್ಪಾಲಕರನ್ನೂ, ದೇವಾನ್=ಬ್ರಹ್ಮವಿಷ್ಣ್ವಾದಿ ದೇವತೆಗಳನ್ನೂ, ಗುರೂಂಶ್ಚ=ಜ್ಞಾನೋಪದೇಶಕರಾದವರನ್ನೂ, ತಂದೆತಾಯಿಗಳನ್ನೂ, ವಿಪ್ರಾಂಶ್ಚ=ಬ್ರಾಹ್ಮಣರನ್ನೂ, ಪ್ರಣಮ್ಯ=ನಮಸ್ಕರಿಸಿ, ಗಾಯತ್ರ್ಯಾಃ=ಗಾಯತ್ರೀ ಜಪಕ್ಕಿಂತ, ತ್ರಿಗುಣಂ=ಮೂರು ಪಾಲು ಹೆಚ್ಚಿಗೆ, ಅಷ್ಟಾಕ್ಷರಂ=ನಾರಾಯಣಾಷ್ಟಾಕ್ಷರ ಮಂತ್ರವನ್ನು, ವಿಷ್ಣುಂ=ಶ್ರೀಪರಮಾತ್ಮನನ್ನು, ಧ್ಯಾಯನ್='ಉದ್ಯದ್ಭಾಸ್ವತ್ಸಮಾಭಾಸಃ' ಎಂದು ಹೇಳಿದ ಪ್ರಕಾರ ಧ್ಯಾನಿಸುವವನಾಗಿಯೇ, ಜಪೇತ್=ಮೆಲ್ಲಗೆ ಜಪಿಸಬೇಕು. (ಹೀಗೆಯೇ ಅಷ್ಟ ಮಹಾಮಂತ್ರಗಳನ್ನೂ, 'ಧನ್ವಂತರ್ಯಾದಿ ಮಂತ್ರಗಳನ್ನೂ, ಜಪಿಸಿ ಕೃಷ್ಣಾರ್ಪಣ ಬಿಡಬೇಕು.) ಏವಂ=ಹೀಗೆಯೇ ಎಲ್ಲಾ ಕಡೆಗಳಲ್ಲಿಯೂ, ಸರ್ವೋತ್ತಮಂ=ರಮಾಬ್ರಹ್ಮಾದ್ಯುತ್ತಮನಾದ, ವಿಷ್ಣುಂ=ಶ್ರೀಪರಮಾತ್ಮನನ್ನು, ಧ್ಯಾಯನ್ನೇವ=ಧ್ಯಾನಿಸುವವನಾಗಿಯೇ, ಹರಿಂ=ಶ್ರೀಪರಮಾತ್ಮನನ್ನು, ಅರ್ಚಯೇತ್=ಪೂಜಿಸಬೇಕು. (ಸರ್ವೋತ್ತಮನಾದ ಶ್ರೀಹರಿಯನ್ನು, ಸ್ಮೃತ್ವಾ=ಸ್ಮರಿಸಿಕೊಂಡೇ, ಸ್ವಾಧ್ಯಾಯೇನ=ವೇದಾಧ್ಯಯನ ಪೂರ್ವಕವಾಗಿ, ಶ್ರೀಹರಿಯನ್ನು ಪೂಜಿಸಬೇಕು.) ಅಥವಾ=ಜಪಾನಂತರದಲ್ಲಿ ನಿರ್ಮಾಲ್ಯವಿಸರ್ಜನ

ಮೊದಲಾದ ಪ್ರಾತಃಕಾಲಿಕ ಪೂಜೆಯನ್ನು ಹೇಳುತ್ತಾರೆ- ಪ್ರಣಮ್ಯ='ನಾರಾಯಣಂ ಸುರಗುರುಂ' ಇತ್ಯಾದಿಗಳಿಂದ ಶ್ರೀಹರಿಗೆ ನಮಸ್ಕರಿಸಿ, ದೇವಾನ್=ಜಯಾದಿ ದ್ವಾರದೇವತೆಗಳನ್ನು, ಪ್ರಣಮ್ಯ= ನಮಸ್ಕರಿಸಿ (ಕೂತುಕೊಂಡು) ವಿಪ್ರಾನ್=ಬ್ರಾಹ್ಮಣರನ್ನು, ಗುರೂಂಶ್ಚ=ಗುರುಗಳನ್ನು ಹರಿಪಾರ್ಷದಾನ್=ಶ್ರೀಹರಿಯ ಪರಿವಾರರಾದ ತತ್ವನ್ಯಾಸ, ಮಾತೃಕಾನ್ಯಾಸ, ದೇವತೆಗಳನ್ನೂ ಪ್ರಣಮ್ಯ=ನಮಸ್ಕರಿಸಿ, ಏವಂ=ಅಷ್ಟಾಕ್ಷರ ಧ್ಯಾನ ಶ್ಲೋಕದ ರೀತಿಯಾಗಿ, ಸರ್ವೋತ್ತಮಂ ವಿಷ್ಣುಂ= ಸರ್ವೋತ್ತಮನಾದ ಶ್ರೀಹರಿಯನ್ನು, ಧ್ಯಾಯನ್=ಚಿಂತಿಸುತ್ತಾ, (ನೂರೆಂಟಾವರ್ತಿ ಅಷ್ಟಾಕ್ಷರವನ್ನು ಜಪಿಸುತ್ತಾ ಬ್ರಹ್ಮಪಾರಸ್ತೋತ್ರಾದಿಗಳಿಂದ ನಿರ್ಮಾಲ್ಯವಿಸರ್ಜನೆಮಾಡಿ, ಕಲಶದಲ್ಲಿ ಅಜಾದಿ ದೇವತೆ ಗಳನ್ನು ಆವಾಹನೆಮಾಡಿ, ಪುರುಷಸೂಕ್ತಗಳಿಂದ ಅಭಿಷೇಕ ಮಾಡಿ, ನೈವೇದ್ಯವನ್ನೂ ಸಮರ್ಪಿಸಿ ಏಕಾರತಿಮಾಡಿ) ಹರಿಂ=ಹರಿಯನ್ನು, ಅರ್ಚಯೇತ್=ಪೂಜಿಸಬೇಕು. (ಸರ್ವೋತ್ತಮನಾದ ಶ್ರೀಹರಿಯನ್ನು, ಸ್ಮೃತ್ವಾ=ಸ್ಮರಿಸಿಕೊಂಡೇ, ಸ್ವಾಧ್ಯಾಯೇನ=ವೇದಾಧ್ಯಯನಪೂರ್ವಕವಾಗಿ, ಶ್ರೀಹರಿ ಯನ್ನು ಪೂಜಿಸಬೇಕು.) (ಪ್ರಾತಃಕಾಲಿಕ ಹೋಮವನ್ನೂ ಇದರಿಂದಲೇ ಹೇಳುತ್ತಾರೆ-) ಪ್ರಣಮ್ಯ=ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ ನಮಸ್ಕರಿಸಿ, ಗುರೂನ್=(ಎಡಭಾಗದಲ್ಲಿ) ವಾಯುದೇವರನ್ನೂ, ದೇವಾನ್=(ಬಲಭಾಗದಲ್ಲಿ) ಬ್ರಹ್ಮ ವಿಷ್ಣು ಮಹೇಶ್ವರರನ್ನೂ, ವಿಪ್ರಾಂಶ್ಚ=ಸನಕ ಸನಂದನ ಮೊದಲಾದ ಬ್ರಾಹ್ಮಣರನ್ನೂ, ಪ್ರಣಮ್ಯ=ನಮಸ್ಕರಿಸಿ, ಹರಿಪಾರ್ಷದಾನ್=ಸೂರ್ಯಾದಿ ದೇವತೆಗಳನ್ನೂ, ಪೀಠಾವರಣ ದೇವತೆಗಳನ್ನೂ, ಪ್ರಣಮ್ಯ=ಭಗವದ್ಭಕ್ತರೆಂಬ ಬುದ್ಧಿಯಿಂದ ಸ್ಮರಿಸಿ, ಸರ್ವೋತ್ತಮಂ ವಿಷ್ಣುಂ=ಸರ್ವೋತ್ತಮನಾದ ಶ್ರೀಹರಿಯನ್ನು, ಧ್ಯಾಯನ್ನೇವ=ಪ್ರಾಣಾಂತರ್ಗತನೆಂದು ಧ್ಯಾನಿಸುವವನಾಗಿಯೇ, ಹರಿಂ=ಕ್ಷತ್ರಿಯನಾಶಕನಾದ ಪರಶುರಾಮರೂಪಿಯಾದ ಶ್ರೀಪರಮಾತ್ಮನನ್ನು, ಅರ್ಚಯೇತ್=ಔಪಾಸನಾದಿಗಳಿಂದ ಧ್ಯಾನಿಸಬೇಕು. (ಅಥವಾ ಇದರಿಂದಲೇ ಶಾಸ್ತ್ರಾಭ್ಯಾಸವನ್ನೂ ನಿರೂಪಿಸುತ್ತಾರೆ.) ದೇವಾನ್=ವಾಸುದೇವನನ್ನು, ವಿಪ್ರಾಂಶ್ಚ=ಆದಿಗುರುಗಳಾದ ವೇದವ್ಯಾಸರನ್ನೂ, ಗುರೂಂಶ್ಚ=ಮೂಲಗುರುಗಳಾದ ಶ್ರೀಮನ್ಮಧ್ವಾಚಾರ್ಯರನ್ನೂ, ಹರಿಪಾರ್ಷದಾನ್=ಶ್ರೀಹರಿಯ ಭೃತ್ಯರಾದ ವಿದ್ಯಾಭಿಮಾನಿಗಳಾದ ಸರಸ್ವತ್ಯಾದಿ ದೇವತೆಗಳನ್ನೂ, ಗುರೂಂಶ್ಚ=ಉಪದೇಶಕರನ್ನೂ, ಪ್ರಣಮ್ಯ=ಸಾಷ್ಟಾಂಗ ನಮಸ್ಕರಿಸಿ, ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ನೇವ ಹರಿಂ (ಹಿಂದಿನಂತೆ ಅರ್ಥವು). ಅರ್ಚಯೇತ್=ವೇದಾಂತಶಾಸ್ತ್ರಗಳನ್ನು ಅಭ್ಯಾಸಮಾಡಬೇಕು. ಹೀಗೆ, ಧ್ಯಾನಪ್ರವಚನಾಭ್ಯಾಂ ಚ (ವಾ)=ಧ್ಯಾನಪ್ರವಚನಗಳಿಂದ, ಯಥಾಯೋಗ್ಯಂ=ಯೋಗ್ಯತಾನುಸಾರ ವಾಗಿ, ಉಪಾಸನಂ=ಉಪಾಸನವನ್ನು, ಕುರ್ಯಾತ್=ಮಾಡಬೇಕು.

**ತಾತ್ಪರ್ಯ ॥** ಗಾಯತ್ರಿಯನ್ನು ಜಪಿಸಿದಮೇಲೆ ಆ ಜಪವನ್ನು ಶ್ರೀಕೃಷ್ಣನಿಗೆ ಸಮರ್ಪಿಸಿ ಆಮೇಲೆ ನಿಂತುಕೊಂಡು ಸೂರ್ಯಾಂತರ್ಗತನಾದ ಶ್ರೀಹರಿಯನ್ನು ಪ್ರಾರ್ಥಿಸಿ ದಿಗ್ದೇವತೆಗಳಿಗೆ ನಮಸ್ಕರಿಸ ಬೇಕು. ಆಮೇಲೆ ಗಾಯತ್ರಿಗಿಂತ ಮೂರುಮಡಿ ಅಷ್ಟಾಕ್ಷರ ಮಂತ್ರವನ್ನು ಜಪಿಸಿ ಶ್ರೀಕೃಷ್ಣನಿಗೆ ಸಮರ್ಪಿಸಬೇಕು. 1. ಪೂರ್ವದಿಕ್ಕಿಗೆ ಸಪತ್ನೀಕರಾದ ಇಂದ್ರಾಗ್ನಿಗಳು, 2. ದಕ್ಷಿಣದಿಕ್ಕಿಗೆ ಸಪತ್ನೀಕರಾದ ಯಮ ನಿರ್ಋತಿಗಳು. 3. ಪಶ್ಚಿಮದಿಕ್ಕಿಗೆ ಸಪತ್ನೀಕರಾದ ವರುಣವಾಯುಗಳು. 4. ಉತ್ತರದಿಕ್ಕಿಗೆ ಸಪತ್ನೀಕರಾದ ಸೋಮ ಈಶರು, 5. ಮೇಲುಭಾಗಕ್ಕೆ ಸಪತ್ನೀಕರಾದ ಮನ್ಮಥ ಗರುಡ ವಾಯು ಚತುರ್ಮುಖರು. 6. ಅಧೋಭಾಗಕ್ಕೆ ಸಪತ್ನೀಕರಾದ ಶೇಷಮಿತ್ರರು ವಾ ಮನ್ಮಥಶೇಷರು. ಹೀಗೆ ದೇವಾದಿಗಳಿಗೆ ನಮಸ್ಕರಿಸಿ ಮನೋವಾಕ್ಕಾಯ ಕರ್ಮಗಳಿಂದ ಪ್ರಾತಃಕಾಲದಲ್ಲಿ ಶ್ರೀಹರಿಗೆ ಪೂಜಿಸಬೇಕು. ॥ 11 - 12 ॥

**ಮೂಲ ॥ (ಧ್ಯಾನ ಪ್ರವಚನಾಭ್ಯಾಂ ಚ (ವಾ) ಯಥಾಯೋಗ್ಯಮುಪಾಸನಂ ।**
**ಧರ್ಮೇಣೇಜ್ಯಾಸಾಧನಾನಿ ಸಾಧಯಿತ್ವಾ ವಿಧಾನತಃ ॥**
**ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ ॥ ೧೩ ॥**

**ಅರ್ಥ ॥** ಧ್ಯಾನಪ್ರವಚನಾಭ್ಯಾಂ ಚ, ಧ್ಯಾನ=ಹಿಂದೆ ಹೇಳಿದ ಪ್ರಕಾರ ಸರ್ವರಲ್ಲಿಯೂ ವಿಷ್ಣುಧ್ಯಾನವು, ಯಾ ಬ್ರಹ್ಮಾಂಡದಲ್ಲಿ ವ್ಯಾಪ್ತವಾದ ವಿರಾಡ್ ಮೂರ್ತಿಯ ಧ್ಯಾನವು, ಯಾ ತನಗೆ ಅಭೀಷ್ಟವಾದ ದೇವತಾಪ್ರಣಾಮವು, ಪ್ರವಚನಾಭ್ಯಾಂ ಚ=ವೇದಶಾಸ್ತ್ರಾದಿಗಳ ಅಧ್ಯಯನ ಅಧ್ಯಾಪನಾದಿ ರೂಪಪ್ರವಚನವೂ ಇವುಗಳಿಂದ, ಯಥಾಯೋಗ್ಯಂ=ತಂತಮ್ಮ ಶಕ್ತ್ಯನುಸಾರವಾಗಿ, ಉಪಾಸನಂ=ಶ್ರೀಹರಿಯ ಸೇವೆಯನ್ನು ಮಾಡಬೇಕು. ಧರ್ಮೇಣ=ಯಾಜನ ಸತ್ಪ್ರತಿಗ್ರಹ ಮೊದಲಾದ ಧರ್ಮದಿಂದ ಅಥವಾ ವಿಧಿವಿಹಿತವಾದ ವೃತ್ತಿಯಿಂದಲೂ, ಇಜ್ಯಾಸಾಧನಾನಿ=ಪಂಚಮಹಾಯಜ್ಞ, ದೇವಪೂಜಾ ಸಾಧನಗಳಾದ ದ್ರವ್ಯ, ಧಾನ್ಯ, ಫಲ ಪುಷ್ಪ ಶಾಕಾದಿಗಳನ್ನು, ಸಾಧಯಿತ್ವಾ=ಸಂಪಾದಿಸಿ, ವಿಧಾನತಃ=ವಿಧ್ಯನುಸಾರವಾಗಿ ಶೌಚಾಚಮನವನ್ನು ಮಾಡಿ, ಸ್ನಾತ್ವಾ=ಸಮಂತ್ರಕವಾಗಿ ಮೃತ್ತಿಕೆಯನ್ನು ಲೇಪಿಸಿ, ಮಾಧ್ಯಾಹ್ನಿಕ ಸ್ನಾನಮಾಡಿ, ವೇದತಂತ್ರೋಕ್ತ ಮಾರ್ಗತಃ=ಋಗಾದಿ ವೇದಗಳು, ಪಂಚರಾತ್ರಾದಿಗಳೂ ಇವುಗಳಲ್ಲಿ ಹೇಳಿದ ಮಾರ್ಗದಿಂದ (ಷೋಡಶೋಪಚಾರಗಳಿಂದ) ವಿಷ್ಣುಂ=ಶ್ರೀಹರಿಯನ್ನು, ಸಂಪೂಜಯೇತ್=ಪೂಜಿಸತಕ್ಕದು.

**ತಾತ್ಪರ್ಯ ॥** 'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸ ಸ್ವರೂಪಿಣೀ । ಧ್ಯಾನರೂಪಾ ಪರಾಚೈವ ತದಂಗಂ ಧಾರಣಾದಿಕಂ' ॥ ಉಪಾಸನವು 1 ಶಾಸ್ತ್ರಾಭ್ಯಾಸಸ್ವರೂಪವಾದುದು, 2 ಧ್ಯಾನರೂಪವಾದುದು, ಹೀಗೆ 2 ವಿಧವು. ಶಾಸ್ತ್ರಾಭ್ಯಾಸವು ಅತ್ಯಾವಶ್ಯಕವು ॥ 13 ॥

''ವಸಿತ್ವಾವಾಸ ಆಚಮ್ಯ– ನಿಷ್ಪೀಡ್ಯಾಥವಾಸಃ'' ಎಂಬುವ ತನಕ ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನೂ ಹೇಳಿದರು. ಮಾಧ್ಯಾಹ್ನಿಕ ಸ್ನಾನಾನಂತರದಲ್ಲಿ ವಾಸಃ=ವಸ್ತ್ರವನ್ನು, ವಸಿತ್ವಾ=ಉಟ್ಟುಕೊಂಡು, ಆಚಮ್ಯ=ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ, ಪ್ರೋಕ್ಷ್ಯ=ಆಪ್ಯಸೂಕ್ತಗಳಿಂದ ಪ್ರೋಕ್ಷಿಸಿಕೊಂಡು, ಮಂತ್ರತಃ='ಆಪಃ ಪುನಂತು' ಇತ್ಯಾದಿ ಮಂತ್ರಗಳಿಂದ, ಆಚಮ್ಯ=ನೀರನ್ನು ಪ್ರಾಶನಮಾಡಿ, ಗಾಯತ್ರ್ಯಾ=ಸಪ್ತವ್ಯಾಹೃತಿಗಾಯತ್ರಿಯಿಂದಲೂ, (ಹಂಸಾದಿ ಮಂತ್ರಗಳಿಂದಲೂ) ಅಂಜಲಿಂ=ಅಂಜಲಿಗಳನ್ನು, ದತ್ವಾ=ಕೊಟ್ಟು, ಸೂರ್ಯಗತಂ=ಸವಿತೃಮಂಡಲಾಂತರ್ಗತನಾದ, ಹರಿಂ=ಮಂದೇಹಾಖ್ಯ ಅಸುರನಾಶಕನಾದ ನಾರಾಯಣನನ್ನು, ಧ್ಯಾತ್ವಾ=ಧ್ಯಾನಿಸಿ, ಅಥ=ಅರ್ಘ್ಯ ಪ್ರದಾನಾನಂತರದಲ್ಲಿ, ಮಂತ್ರತಃ='ಅಸಾವಾದಿತ್ಯೋ ಬ್ರಹ್ಮ' ಎಂಬುವ ಮಂತ್ರದಿಂದ, ಪರಿವೃತ್ಯ= ಆತ್ಮಾಂತರ್ಯಾಮಿಯನ್ನು ಪ್ರದಕ್ಷಿಣೆ ಮಾಡಿ (ಗಾಯತ್ರಿಯನ್ನು ಜಪಿಸಿ) ಸಮಾಚಮ್ಯ=ಆಚಮನ ಮಾಡಿ, (ಸಮೀಪಿಸಬೇಕು) ಅಥ=ಮಾಧ್ಯಾಹ್ನಿಕಾನಂತರದಲ್ಲಿ, (ಬ್ರಹ್ಮಯಜ್ಞವನ್ನು ಮಾಡಿ) ಸುರಾದಿಕಾನ್=ದೇವತೆಗಳೇ ಮೊದಲಾದ ಋಷ್ಯಾದಿಗಳನ್ನೂ, ಪಿತ್ರಾದಿಗಳನ್ನೂ, ತರ್ಪಯಿತ್ವಾ- ವಾಸಃ – ನಿಷ್ಪೀಡ್ಯ=ವಾಸೋದಕವನ್ನು ಕೊಟ್ಟು, (ವಿಷ್ಣುವಿಗೆ ಅರ್ಪಿಸಬೇಕು) ॥ 6–7–13 ॥

**ಮೂಲ ॥ ವೈಶ್ವದೇವಂ ಬಲಿಂ ಚೈವ**
**ಕುರ್ಯಾನ್ನಿತ್ಯಂ (ಕಾರ್ಯಂ ನಿತ್ಯಂ) ತದರ್ಪಣಂ ।**

**ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಂ ।**
**ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್**
**ಪರಸ್ಮೈ ಸನ್ನಿವೇದಯೇತ್ (ಯತ್ಪರಸ್ಮೈ ನಿವೇದಯೇತ್) ॥ ೧೪ ॥**

**ಅರ್ಥ ॥** ನಿತ್ಯಂ=ಪ್ರತಿದಿವಸದಲ್ಲಿಯೂ, ವೈಶ್ವದೇವಂ=ವೈಶ್ವದೇವವನ್ನೂ, ಬಲಿಂ ಚೈವ= ಬಲಿಹರಣಾದಿಯನ್ನೂ (ಮಾಡಿ), ತದರ್ಪಣಂ=ವಿಷ್ಣುವಿಗೇನೇ ಸಮರ್ಪಣೆಯನ್ನು, ಕುರ್ಯಾತ್ (ಕಾರ್ಯಂ)=ಮಾಡಬೇಕು. ಇಷ್ಟಂ=ಅಭೀಷ್ಟವಾದ ಪ್ರಯಾಜ ಮೊದಲಾದುದನ್ನೂ ಅಥವಾ ಪೂಜಾದಿಗಳನ್ನೂ, ದತ್ತಂ=ದಾನವನ್ನೂ, ಹುತಂ=ಔಪಾಸನಾದಿಗಳನ್ನೂ, ಜಪ್ತಂ=ಗಾಯತ್ರಿ ಮೊದಲಾದ ಮಂತ್ರಗಳಿಂದ ಜಪಿಸಲ್ಪಟ್ಟದ್ದನ್ನು, ಪೂರ್ತಂ=ಕೂಪ ತಟಕಾರಾಮಾದಿಗಳನ್ನೂ, ಯಚ್ಚ= ಯಾವುದು, ಆತ್ಮನಃ=ತನಗೆ, ಪ್ರಿಯಂ=ಭೋಗ್ಯವಾದ ಅನ್ನಪಾನಾದಿಯೋ, (ಅವೆಲ್ಲವನ್ನೂ) ಪ್ರಿಯಾನ್=ಪ್ರೀತಿ ವಿಷಯಗಳಾದ, ದಾರಾನ್=ಹೆಂಡತಿಯನ್ನೂ, ಸುತಾನ್=ಮಕ್ಕಳನ್ನೂ, ಪ್ರಾಣಾನ್= ಪ್ರಾಣಗಳನ್ನೂ, ಪರಸ್ಮೈ=ಸರ್ವೋತ್ಕೃಷ್ಟನಾದ ಶ್ರೀಪರಮಾತ್ಮನಿಗೋಸ್ಕರ, (ಯತ್=ಯಾವುದು ಯಾವುದು ಇದೆಯೋ ಅವೆಲ್ಲವನ್ನು) ಸನ್ನಿವೇದಯೇತ್=ಭಕ್ತಿಜ್ಞಾನಪೂರ್ವಕವಾಗಿ ಸಮರ್ಪಿಸಬೇಕು.

**ತಾತ್ಪರ್ಯ ॥** ವೈಶ್ವದೇವಾದಿಗಳನ್ನು ಮಾಡಿ ತಾವು ಮಾಡಿದ ಯಜ್ಞ ಮೊದಲಾದುದನ್ನು ವಿಷ್ಣುವಿಗೇನೇ ಸಮರ್ಪಿಸಬೇಕು. ಎಲೋ ಶ್ರೀಹರಿಯೇ ಎಲ್ಲವೂ ನಿನ್ನದ್ದೇ ಆಗಿರುತ್ತದೆ, ನನ್ನದು ಯಾವುದೂ ಇಲ್ಲ, ಎಂಬೀ ಜ್ಞಾನವು ನಿವೇದನವು, ''ಆಸನಾದ್ಯನುಯಾಗಾಂತಮರ್ಚನಂ ಯನ್ಮಯಾ ಕೃತಂ । ಭೋಗಹೀನಂ ಕ್ರಿಯಾಹೀನಂ ಮಂತ್ರಹೀನಮಭಕ್ತಿಕಂ । ತತ್ಸರ್ವಂ ಕ್ಷಮ್ಯತಾಂ ದೇವ ದೀನಂ ಮಾಮಾತ್ಮಸಾತ್ಕುರು ॥ ಇತಿ ಸ್ತೋತ್ರೇಣ ದೇವೇಶಂ ಸ್ತುತ್ವಾ ಮಧುನಿಘಾತಿನಂ । ಯಾಗಾವಸಾನ ಸಮಯೇ ದೇವದೇವಸ್ಯ ಚಕ್ರಿಣಃ । ನಿತ್ಯಂ ಕಿಂಕರಭಾವೇನ ಸ್ವಾತ್ಮಾನಂ ವಿನಿವೇದಯೇತ್ ॥'' ಆಸನವನ್ನಾರಂಭಿಸಿ ಅನುಯಾಗಪರ್ಯಂತ ಯಾವುದೊಂದು ಪೂಜೆಯು ಮಾಡಲ್ಪಟ್ಟಿತೋ, ಭೋಗರಹಿತವಾದುದು, ಕ್ರಿಯಾರಹಿತವಾದುದು, ಮಂತ್ರವಿರಹಿತವಾದುದು, ಭಕ್ತಿವಿರಹಿತವಾದುದು ಅವೆಲ್ಲವನ್ನೂ ಕ್ಷಮಿಸಬೇಕು. ದೀನನಾದ ನನಗೆ ಪ್ರತ್ಯಕ್ಷನಾಗು. ಹೀಗೆ ಸ್ತೋತ್ರದಿಂದ ಶ್ರೀಹರಿಯನ್ನು ಸ್ತೋತ್ರಮಾಡಿ ಯಾಗವು ಸಮಾಪ್ತಿಯಾಗುವ ಕಾಲದಲ್ಲಿ ಶ್ರೀಕೃಷ್ಣನಿಗೆ ನಿತ್ಯದಲ್ಲಿಯೂ ಕಿಂಕರಭಾವದಿಂದ ತನ್ನನ್ನು ನಿವೇದನ ಮಾಡಬೇಕು ॥ 14 ॥

**ಮೂಲ ॥ ಭುಕ್ತಶೇಷಂ ಭಗವತೋ ಬೃತ್ಯಾತಿಥಿಪುರಸ್ಸರಃ ।**
**ಭುಂಜೀತ ಹೃದ್ಗತಂ ವಿಷ್ಣುಂ**
**ಸ್ಮರಂಸ್ತದ್ಗತ (ದ್ಯೋಗ) ಮಾನಸಃ ॥ ೧೫ ॥**

**ಅರ್ಥ ॥** ಭೃತ್ಯಾತಿಥಿಪುರಸ್ಸರಃ, ಭೃತ್ಯ=ಅನ್ನಾದಿಗಳಿಂದ ಪೋಷ್ಯರಾದವರು, ಅತಿಥಿ= ಅತಿಥಿಯು, ಪುರಸ್ಸರಃ=ಮುಖ್ಯನಾಗಿ ಉಳ್ಳವನಾಗಿ, ಅಥವಾ ವಿಷ್ಣುವಿನ ದಾಸರಾದ ಅತಿಥಿಗಳಿಗೆ ಕೊಟ್ಟು, ಹೃದ್ಗತಂ=ಹೃದಯದಲ್ಲಿರತಕ್ಕ, ವಿಷ್ಣುಂ=ಶ್ರೀಹರಿಯನ್ನು, ಸ್ಮರನ್=ಸ್ಮರಿಸುವವನಾಗಿ, ತದ್ಗತ (ದ್ಯೋಗ) ಮಾನಸಃ=ಆ ಹರಿಯಲ್ಲಿಯೇ ಇರತಕ್ಕ ಮನಸ್ಸುಳ್ಳವನಾಗಿ, ಭಗವತಃ=ಶ್ರೀಹರಿಯ, ಭುಕ್ತಶೇಷಂ=ಭೋಗಿಸಿ ಅವಶಿಷ್ಟವಾದುದನ್ನೇ ಅಥವಾ ಸ್ನಾನಧಾರಣಾದಿ ರೂಪದಿಂದುಪ ಭೋಗಿಸಲ್ಪಟ್ಟ ತೀರ್ಥ=ನಿರ್ಮಾಲ್ಯ-ಅಂಗಾರಾದಿಗಳ ಶೇಷವನ್ನು, ಭುಂಜೀತ=ಭೋಗಿಸತಕ್ಕುದು.

**ತಾತ್ಪರ್ಯ ॥** ಅತಿಥಿಯನ್ನು ಪ್ರಧಾನೀಕರಿಸಿ ಭೃತ್ಯರಿಂದೊಡಗೂಡಿ ಶ್ರೀಹರಿಯನ್ನು ಸ್ಮರಿಸುತ್ತಾ ಭೋಜನ ಸಮಾಪ್ತಿಪರ್ಯಂತವೂ ಹರಿಯನ್ನೇ ಧ್ಯಾನಿಸುತ್ತಾ ಭುಕ್ತಶೇಷವನ್ನೇ ತಾನು ಭೋಜನ ಮಾಡಬೇಕು. ಶ್ರೀಹರಿಯು ಸಂಕರ್ಷಣ ಪ್ರದ್ಯುಮ್ನ ರೂಪದಿಂದ ಹೃದಯದಲ್ಲಿದ್ದು ಅಪ್ರಾಕೃತವಾದ ರಸವನ್ನು ಅನುಭವಿಸುತ್ತಾನೆ. ''ಪರಲೋಕೇಪ್ಸುನಾ ಕಿಂಚಿದ್ದೀಯತೇ ಯದ್ಧನಾದಿಕಂ । ಸಹ ಬಂಧುಭಿಃ । ಕವಲೇ ಕವಲೇ ಕುರ್ವನ್ ಗೋವಿಂದಸ್ಯಾನುಕೀರ್ತನಂ । ನಿತ್ಯೋಪವಾಸೀ ವಿಜ್ಞೇಯೋ ಭುಂಜಾನಶ್ಚ ದ್ವಿಜೋತ್ತಮಃ ॥'' ಪರಲೋಕವನ್ನು ಇಚ್ಛಿಸಿ ಯಾವ ಧನಾದಿಗಳು ಕೊಡಲ್ಪಡುತ್ತವೋ, ಅವುಗಳನ್ನು ಸದ್ಬ್ರಾಹ್ಮಣರಿಗೇನೇ ಮುಕ್ತಿರೂಪ ಪಲವನ್ನು ಇಚ್ಛಿಸುವವರು ದಾನಮಾಡಬೇಕು. ಭೃತ್ಯರಿಂದಲೂ ಬಂಧುಗಳಿಂದಲೂ ಕೂಡಿಕೊಂಡೇ ಭೋಜಿಸಬೇಕು. ಬ್ರಾಹ್ಮಣೋತ್ತಮನು ಪ್ರತಿಕವಲಕ್ಕೂ ಗೋವಿಂದನನ್ನು ಸ್ಮರಿಸುತ್ತಾ ಭೋಜಿಸಿದಾಗ್ಯೂ ನಿತ್ಯೋಪ ವಾಸಿಯೆಂದೇ ತಿಳಿಯಬೇಕು ॥ 15 ॥

**ಮೂಲ ॥ ಆಚಮ್ಯ ಮೂಲಮಂತ್ರೇಣ**
**ಕೋಷ್ಠಂ ಸ (ಸ್ವ) ಮಭಿಮಂತ್ರಯೇತ್ ॥೧೬॥**

**ವೇದಶಾಸ್ತ್ರ ವಿನೋದೇನ ಪ್ರೀಣಯನ್ಪುರುಷೋತ್ತಮಂ ।**
**ಅಹಃ ಶೇಷಂ ನಯೇತ್ಸಂಧ್ಯಾಮುಪಾಸೀತಾಥ ಪೂರ್ವವತ್ ॥ ೧೭ ॥**

**ಅರ್ಥ ॥** (ಭೋಜನಾನಂತರದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು) ಆಚಮ್ಯ=ಆಚಮನ ಮಾಡಿ, ಸ್ವಂ=ತನ್ನದಾದ, ಕೋಷ್ಠಂ=ಉದರವನ್ನು,. ಮೂಲಮಂತ್ರೇಣ='ಓಂ' ಎಂಬುವ ಪ್ರಣವದಿಂದ, ಅಭಿಮಂತ್ರಯೇತ್=ಜಪಿಸಬೇಕು. ಅಥ=ಆಮೇಲೆ, ವೇದ=ಋಗಾದಿ ವೇದಗಳೂ, ಶಾಸ್ತ್ರ=ಬ್ರಹ್ಮಮೀಮಾಂಸಾದಿ ಶಾಸ ಗಳೂ ಇವುಗಳ, ವಿನೋದೇನ=ಅಧ್ಯಯನ ಅಧ್ಯಾಪನ ಮೊದಲಾದ ವಿಚಾರದಿಂದ ಅಥವಾ ವೈಷ್ಣವರಾದ ಮಹಾನುಭಾವರ ವಾರ್ತಾದಿಗಳಿಂದ, ಪುರುಷೋತ್ತಮಂ=ಕ್ಷರಾಕ್ಷರಪುರುಷಶ್ರೇಷ್ಠನಾದ ಶ್ರೀಹರಿಯನ್ನು, ಪ್ರೀಣಯನ್=ಸಂತೋಷೀಕರಿಸು ವವನಾಗಿ, ಅಹಃ ಶೇಷಂ=ಅವಶಿಷ್ಟವಾದ ಹಗಲನ್ನು, ನಯೇತ್=ಕಳೆಯಬೇಕು. (ಕ್ಷಣಕಾಲದಲ್ಲಿಯೂ ಆಯುಸ್ಸನ್ನು ವ್ಯರ್ಥಮಾಡಬಾರದು.) ಅಥ=ಆಮೇಲೆ ಸೂರ್ಯಾಸ್ತಮಯಕಾಲದಲ್ಲಿ, ಪೂರ್ವವತ್= ಪ್ರಾತಃಸಂಧ್ಯಾವಂದನದಂತೆಯೇ, ಸಂಧ್ಯಾಂ=ಸಂಧ್ಯಾವಂದನೆಯನ್ನು, ಉಪಾಸೀತ=ಮಾಡಬೇಕು. ॥ 16 ॥ 17 ॥

**ಮೂಲ ॥ ಯಾಮಾತ್ರರತ ಏವಾಥ**
**ಸ್ವಪೇದ್ಧ್ಯಾಯೇನ್ಜನಾರ್ದನಂ (ದ್ಧ್ಯಾತ್ವಾ ಜನಾರ್ದನಂ) ।**
**ಅಂತರಾಲೇ ತತೋ ಬುಧ್ವಾ (ತಥೋದ್ಬುದ್ಧಃ )**
**ಸ್ಮರೇತ ಬಹುಶೋ ಹರಿಂ ॥ ೧೮ ॥**

**ಅರ್ಥ ॥** ಅಥ=ಸಾಯಂಕಾಲದಲ್ಲಿ ಔಪಾಸನಮಾಡಿದ ಮೇಲೆ, (ಯಾಮಪರ್ಯಂತ ವೇದಶಾಸ್ತ್ರಗಳ ವ್ಯಾಖ್ಯಾನಾದಿಗಳಿಂದ) ಜನಾರ್ದನಂ=ದುಷ್ಟಜನಸಂಹಾರಕನೂ. ಶಿಷ್ಟಜನಪರಿಪಾಲ ಕನೂ, ಜನನಾದಿ ದೋಷರಹಿತನೂ ಆದ ಶ್ರೀಹರಿಯನ್ನು, ಧ್ಯಾಯನ್ನೇವ=ಸ್ಮರಿಸುವವನಾಗಿಯೇ,

ಯಾಮಾತ್=2 ಜಾಮದಿಂದ, ಪರತ ಏವ=ಮೇಲೆ, ಸ್ವಪೇತ್=ನಿದ್ರಿಸಬೇಕು. (2 ಜಾಮಗಳಿಗಿಂತ ಮೊದಲು ನಿದ್ರೆ ಮಾಡಬಾರದು) (ತಥಾ=ಹಾಗೆಯೇ) ಅಂತರಾಲೇ=ಸ್ವಾಪದ ಮಧ್ಯಕಾಲದಲ್ಲಿ, ಬುಧ್ವಾ=ಪ್ರಯತ್ನದಿಂದ ಎಚ್ಚರಿಕೆಯನ್ನು ಸಂಪಾದಿಸಿ, (ಉದ್ಬುದ್ಧಃ=ಪ್ರಯತ್ನದಿಂದ ಎಚ್ಚರಿಕೆಯನ್ನು ಹೊಂದಿದವನಾಗಿ) ಬಹುಶಃ=ಅನೇಕಾವರ್ತಿ, ಹರಿಂ=ಸರ್ವ ಆಪತ್ಪರಿಹಾರಕನೂ ಸೃಷ್ಟ್ಯಾದಿಕರ್ತನೂ ಇಷ್ಟಪ್ರದನೂ ಸಂಸಾರಮೋಚಕನೂ ಆದ ಶ್ರೀಹರಿಯನ್ನು, ಸ್ಮರೇತ=ಗುಣಗಳನ್ನು ಸಂಕೀರ್ತನ ಮಾಡುತ್ತಾ ಚಿಂತಿಸಬೇಕು. ॥ 18 ॥

ತಾನು ಮಾಡಿದ ಆಹ್ನಿಕ ಮೊದಲಾದ ಸರ್ವ ಕರ್ಮಗಳನ್ನು ಶ್ರೀಹರಿಗೇನೇ ಸಮರ್ಪಿಸಬೇಕು. ಎಂದಭಿಪ್ರಾಯದಿಂದ ಅದೇ ಅಭಿಪ್ರಾಯವುಳ್ಳ ಭಾಗವತ ಶ್ಲೋಕವನ್ನು ಹೇಳುತ್ತಾರೆ-

**ಮೂಲ ॥ ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾನುಸೃತಃ ಸ್ವಭಾವಂ ।**
**ಕರೋಮಿ (ಕರೋತಿ) ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯೇತ್ತತ್ ॥ ೧೯ ॥**

**ಅರ್ಥ ॥** ಇತಿ=ಈ ಪ್ರಕಾರ ಪ್ರಾತಃಕಾಲವನ್ನಾರಂಭಿಸಿ ಜಾಮರಾತ್ರಿಪರ್ಯಂತ, ಕಾಯೇನ= ಶರೀರದಿಂದ, ಯತ್=ಯಾವುದೊಂದು ಶಾಸ್ತ್ರದಲ್ಲಿ ವಿಹಿತವಾದ ನಮಸ್ಕಾರ ಶಾಲಗ್ರಾಮಾರ್ಚನಾದಿಗಳನ್ನು, ಕರೋಮಿ=ಮಾಡುತ್ತೇನೋ (ಕರೋತಿ=ಮಾಡುತ್ತಾನೋ,) ವಾಚಾ=ಮಾತಿನಿಂದ, (ಸ್ತೋತ್ರಾದಿಗಳು ಮಾಡಲ್ಪಡುತ್ತವೋ) ಮನಸಾ=ಮನಸ್ಸಿನಿಂದ, (ಧ್ಯಾನಾದಿಗಳು ಮಾಡಲ್ಪಡುತ್ತವೋ) ಇಂದ್ರಿಯೈರ್ವಾ=10 ಇಂದ್ರಿಯಗಳಿಂದ (ಶ್ರವಣ ದರ್ಶನಾದಿಗಳು ಮಾಡಲ್ಪಡುತ್ತವೋ) ಬುದ್ಧ್ಯಾ=ಕಾರ್ಯಾಕಾರ್ಯಾದಿ ವಿವೇಕಜ್ಞಾನದಿಂದ, ಆತ್ಮನಾ ವಾ=ಜೀವಸ್ವಭಾವಾದಿಗಳಿಂವಾಗಲೀ, ಸ್ವಭಾವಂ=ಸ್ವತಂತ್ರ ಪದಾರ್ಥನಾದ ಶ್ರೀಹರಿಯನ್ನು, ಅನುಸೃತಃ ಸನ್=ಅನುಸರಿಸಿದವನಾಗಿ, ಯತ್ ಯತ್=ಯಾವುದಾವುದನ್ನು, ಕರೋತಿ=ಮಾಡುತ್ತಾನೋ, ತತ್ ಸಕಲಂ =ಆ ಎಲ್ಲವನ್ನೂ, ಪರಸ್ಮೈ= ಸರ್ವೋತ್ತಮನಾದ, ನಾರಾಯಣಾಯ=ನಾರಾಯಣನಿಗೋಸ್ಕರ, ಸಮರ್ಪಯೇತ್=ಸಮರ್ಪಿಸತಕ್ಕದು.

**ತಾತ್ಪರ್ಯ ॥** ಎಲ್ಲಾ ಕರ್ಮಗಳೂ, ಶ್ರೀಹರಿಯ ಪ್ರೇರಣೆಯಿಂದಲೇ ಮಾಡಲ್ಪಟ್ಟಿವೆ, ಆತನ ಪ್ರೀತಿಗೇನೇ, ಆಗಲಿ ಎಂಬುವ ಬುದ್ಧಿಯಿಂದ ಶ್ರೀಹರಿಗೇನೇ ಸಮರ್ಪಿಸಬೇಕು.॥ 19 ॥

ಶ್ರೀಹರಿಯೇ ಸರ್ವೋತ್ತಮನು, ಸ್ವತಂತ್ರನು. ಇತರವೆಲ್ಲವೂ ಆತನ ಅಧೀನವು. ಕಾರಣ ಭಕ್ತ್ಯಾದಿ ಪೂರ್ವಕವಾಗಿ ಆತನ ಪ್ರೀತಿಗೋಸ್ಕರ ತಮಗೆ ವಿಹಿತವಾದ ಕರ್ಮವನ್ನು ಮಾಡಬೇಕು. ಬೇರೆ ಕರ್ಮ ಮಾಡಬಾರದು. ಎಂದು ಈ ಗ್ರಂಥದಲ್ಲಿ ಅಭಿಮತವಾದ ಅರ್ಥದಲ್ಲಿ ಗೀತಾವಾಕ್ಯಗಳನ್ನು ಪಠನ ಮಾಡುತ್ತಾರೆ.

**ಮೂಲ ॥ ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೨೦ ॥**

**ಅರ್ಥ ||** ಲೋಕೇ=ಜಗತ್ತಿನಲ್ಲಿ, ನಿಯಮ್ಯವರ್ಗದಲ್ಲಿ, (ಶಾಸ್ತ್ರದಿಂದ ವಿಚಾರಮಾಡಲು) ಕ್ಷರಶ್ಚ ಅಕ್ಷರಶ್ಚ=ಕ್ಷರ ಅಕ್ಷರರೆಂದು, ದ್ವಾವೇವ=ಇಬ್ಬರೇ, ಇಮೌ=ಪ್ರಮಾಣಪ್ರಸಿದ್ಧರಾದ, ಪುರುಷೌ= ಚೇತನರು, ಸರ್ವಾಣಿ ಭೂತಾನಿ=ಚೇತನರಾದ ಎಲ್ಲಾ ಬ್ರಹ್ಮಾದಿಗಳು, ಕ್ಷರಾ=ಶರೀರನಾಶವಿರುವುದ ರಿಂದ ಕ್ಷರರೆನ್ನಿಸಿಕೊಳ್ಳುತ್ತಾರೆ. ಕೂಟಸ್ಥ=ಶರೀರನಾಶವಿಲ್ಲದಿರುವುದರಿಂದ ವಿಕಾರರಹಿತರಾದ ಮಹಾಲಕ್ಷ್ಮೀದೇವಿಯು, ಅಕ್ಷರಃ=ಅಕ್ಷರಳು ಎಂದು, ಉಚ್ಯತೇ=ಹೇಳಲ್ಪಡುತ್ತಾಳೆ.

**ಮೂಲ || ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ || ೨೧ ||**

**ಅರ್ಥ ||** ಉತ್ತಮಃ=ಸರ್ವೋತ್ತಮನಾದ, ಪುರುಷಸ್ತು=ಗುಣಪರಿಪೂರ್ಣನಾದವನಾದರೂ, ಅನ್ಯಃ=ಕ್ಷರಾಕ್ಷರ ಪುರುಷರಿಂದಿತರನು, ಪರಮಾತ್ಮೇತಿ=ಪರಮಾತ್ಮನೆಂದು, ಉದಾಹೃತಃ=ಹೇಳಲ್ಪಡು ತ್ತಾನೆ. ಯಃ=ಯಾವಾತನು, ಲೋಕತ್ರಯಂ=ಮೂರು ಲೋಕಗಳನ್ನು, ಆವಿಶ್ಯ=ಪ್ರವೇಶಿಸಿ, ಬಿಭರ್ತಿ= ಧಾರಣ-ಪೋಷಣಗಳನ್ನು ಮಾಡುತ್ತಾನೋ, (ಸರ್ವಕ್ಕೂ ಆಧಾರನಾದುದರಿಂದ ಸರ್ವರಿಂದಲೂ ಉತ್ತಮನು) ಅವ್ಯಯಃ=ನಾಶವಿಲ್ಲದಿರುವವನು, ಈಶ್ವರಃ=ಸರ್ವಸಮರ್ಥನು. || 21 ||

**ಮೂಲ || ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ**
**(ಯಸ್ಮಾತ್ಕ್ಷರಮತೀತೋಽಸಾವಕ್ಷರಾಚ್ಚೋತ್ತಮೋ ಹರಿಃ) ।**
**ಅತೋಽಸ್ಮಿ (ಅತೋ ಹಿ) ಲೋಕೇ ವೇದೇ ಚ**
**ಪ್ರಥಿತಃ ಪುರುಷೋತ್ತಮಃ || ೨೨ ||**

**ಅರ್ಥ ||** ಅಹಂ=ನಾನು (ಕೃಷ್ಣನು), ಯಸ್ಮಾತ್=ಯಾವ ಕಾರಣದಿಂದ, ಕ್ಷರಂ ಚ=ಬ್ರಹ್ಮಾದಿ ಸರ್ವಭೂತಗಳನ್ನೂ, ಅತೀತಃ=ಅತಿಕ್ರಮಿಸಿದವನು, ಅಕ್ಷರಾದಪಿ=ಲಕ್ಷ್ಮೀದೇವಿಯಿಂದಲೂ, ಉತ್ತಮಃ=ಉತ್ಕೃಷ್ಟನು, ಅತಃ=ಆದಕಾರಣ, ಲೋಕೇ=ಪೌರುಷೇಯ ಗ್ರಂಥಗಳಲ್ಲಿ, ವೇದೇ ಚ= ವೇದದಲ್ಲಿಯೂ, ಪುರುಷೋತ್ತಮಃ=ಪುರುಷೋತ್ತಮನೆಂದು, ಪ್ರಥಿತಃ=ಪ್ರಸಿದ್ಧನು, ಅಸ್ಮಿ=ಆಗಿರು ತ್ತೇನೆ, (ಹಿ=ಶ್ರುತ್ಯಾದಿಪ್ರಸಿದ್ಧವು) || 22 ||

**ಮೂಲ || ಯೋ ಮಾ (ಯಸ್ತ) ಮೇವಮಸಂಮೂಢೋ**
**ಜಾನಾತಿ ಪುರುಷೋತ್ತಮಂ ।**
**ಸ ಸರ್ವವಿದ್ಭಜತಿ ಮಾಂ (ತಂ)**
**ಸರ್ವಭಾವೇನ ಭಾರತ (ಸರ್ವದಾ) || ೨೩ ||**

**ಅರ್ಥ ||** ಅಸಂಮೂಢಃ=ಇದು (ಪುರುಷೋತ್ತಮನೆಂಬುವುದು) ಔಪಚಾರಿಕವೆಂದು ಅಜ್ಞಾನವಿಲ್ಲದ, ಯಃ=ಯಾವ ಭಕ್ತನು, ಮಾಂ=ನನ್ನನ್ನು, (ತಂ=ಆ ಕೃಷ್ಣನನ್ನು) ಏವಂ=ಹೀಗೆ, (ರಮಾ ಬ್ರಹ್ಮಾದಿಗಳಿಗೆ ಆಶ್ರಯನಾಗಿರುತ್ತಾನೆ. ಇದು ಮೊದಲಾದ ಹಿಂದೆ ಹೇಳಿದ ಪ್ರಕಾರ) ಪುರುಷೋತ್ತಮಂ=ಕ್ಷರಾಕ್ಷರ ಪುರುಷರಿಂದ ಶ್ರೇಷ್ಠನನ್ನಾಗಿ, ಜಾನಾತಿ=ತಿಳಿಯುತ್ತಾನೋ, ಸಃ=ಆ ಭಕ್ತನು, ಸರ್ವವಿತ್=ಸರ್ವಜ್ಞನು, (ಆತನೇ ಎಲ್ಲಾ ಶಾಸ್ತ್ರಗಳ ಮುಖ್ಯಾರ್ಥಜ್ಞಾನವುಳ್ಳವನು)

ಸಃ=ಆತನೇ, ಭಾರತ=ಎಲೈ ಅರ್ಜುನನೇ, (ಸರ್ವದಾ=ಯಾವಾಗಲೂ,) ಸರ್ವಭಾವೇನ=ಸರ್ವ ಪ್ರಕಾರದಿಂದ, (ದೇಶಕಾಲಾದಿಗಳಲ್ಲಿಯೂ,) ಅಥವಾ ಸರ್ವಭಾವೇನ=ಪೂರ್ಣತೆಯಿಂದ, ಸರ್ವ ವಸ್ತುಗಳ ಸತ್ತಾದಿಗಳೂ ಶ್ರೀಹರಿಯ ಅಧೀನಗಳಾದುದರಿಂದ ಸರ್ವಶಬ್ದವಾಚ್ಯನು. ಇತ್ಯಾದಿ ಪ್ರಕಾರದಿಂದ, ಮಾಂ=ನನ್ನನ್ನು (ತಂ=ಆ ಶ್ರೀಕೃಷ್ಣನನ್ನೇ) ಭಜತಿ=ಹೊಂದುತ್ತಾನೆ. II 23 II

**ಮೂಲ II ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ I**
**(ಇತಿ ಗುಹ್ಯತಮಂ ಶಾಸ್ತ್ರಮಿದಂ ತೇನೋಕ್ತಮೇವ ಚ )**
**ಏತದ್ಬುಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ (ನಿತ್ಯದಾ ) II ೨೪ II**

**ಅರ್ಥ II** ಅನಘ=ಪಾಪರಹಿತನಾದ, ಭಾರತ=ಭರತವಂಶದಲ್ಲಿ ಹುಟ್ಟಿದ ಅರ್ಜುನನೇ, ಮಯಾ=ನನ್ನಿಂದ, ಇತಿ=ಇಷ್ಟರವರೇಗೆ ಹೇಳಿದ, ಇದಂ=ಈ ಪ್ರಮೇಯವು, ಗುಹ್ಯತಮಂ= ಅತಿಗೋಪ್ಯವಾದುದು, ಶಾಸ್ತ್ರಂ=ಶಿಕ್ಷಣೀಯವಾದುದು, ಉಕ್ತಂ=ನಿನಗೆ ಹೇಳಲ್ಪಟ್ಟಿತು. (ಇದಂ=ಈ ಪ್ರಮೇಯವು, ತೇನ=ಶ್ರೀಕೃಷ್ಣನಿಂದ, ಉಕ್ತಮೇವ ಚ=ಉಪದಿಷ್ಟವಾದುದೇ ಸರಿ.) ಏತತ್=ಈ ನಾನು ಹೇಳಿದುದನ್ನು, ಬುಧ್ವಾ=ಪರೋಕ್ಷವಾಗಿ ತಿಳಿದುಕೊಂಡು, (ನಿತ್ಯದಾ=ಯಾವಾಗಲೂ) ಬುದ್ಧಿಮಾನ್= ಅಪರೋಕ್ಷ ಜ್ಞಾನಿಯಾಗಿಯೂ, ಕೃತಕೃತ್ಯಶ್ಚ=ಮುಕ್ತನೂ ಕೂಡ, ಸ್ಯಾತ್=ಆಗುವವನು. II 24 II

'ಇಷ್ಟವರೆಗೆ ಶ್ರೀಹರಿಯು ಸರ್ವೋತ್ತಮನು' ಇದು ಮೊದಲಾದ ಜ್ಞಾನವು ಪುರುಷಾರ್ಥಕ್ಕೆ ಕಾರಣವಾದುದರಿಂದ ಈ ಸರ್ವೋತ್ತಮತ್ವ ಜ್ಞಾನವನ್ನು ಅವಶ್ಯವಾಗಿ ಸಂಪಾದಿಸಬೇಕು ಎಂದುಕ್ತ ವಾಯಿತು. ಶ್ರೀಹರಿಯು ಸರ್ವೋತ್ತಮನೆಂಬುವುದನ್ನು ತಾರತಮ್ಯಜ್ಞಾನಪೂರ್ವಕವಾಗಿಯೇ ತಿಳಿಯಬೇಕೆಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ.

**ಮೂಲ II ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ I**
**ಬ್ರಹ್ಮಾ ಮಾ (ತ)ಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ II**
**(ನ ಹರಿಃ (ನ ಚಾಯಂ) ಕಿಂಚಿದಾಶ್ರಿತಃ) II ೨೫ II**

**ಅರ್ಥ II** (ಋಷ್ಯಾದಿಗಳು ಇಂದ್ರಾದಿದೇವತೆಗಳನ್ನಾಶ್ರಯಿಸಿರುತ್ತಾರೆ) ದೇವಾಃ=ಇಂದ್ರಾದಿ ದೇವತೆಗಳು, ರುದ್ರಂ=ರುದ್ರನನ್ನು, ಸಮಾಶ್ರಿತಾಃ=ಚೆನ್ನಾಗಿ ಆಶ್ರಯಿಸಿರುತ್ತಾರೆ, ರುದ್ರಃ=ರುದ್ರನು, ಬ್ರಹ್ಮಾಣಂ=ಚತುರ್ಮುಖನನ್ನೂ,, ಆಶ್ರಿತಃ=ಆಶ್ರಯಿಸಿರುತ್ತಾನೆ, ಬ್ರಹ್ಮಾ=ಚತುರ್ಮುಖನು, ಮಾಂ= ಲಕ್ಷ್ಮೀದೇವಿಯನ್ನು, ಆಶ್ರಿತಃ=ಆಶ್ರಯಿಸಿರುತ್ತಾನೆ, (ಸಾ=ಆ ಲಕ್ಷ್ಮೀದೇವಿಯು,)ಮಾಂ=ನನ್ನನ್ನು, (ತಂ= ಶ್ರೀಕೃಷ್ಣನನ್ನು) (ಆಶ್ರಯಿಸಿರುತ್ತಾಳೆ.) ಅಹಂ=ನಾನು, (ಕೃಷ್ಣನು), ನಿತ್ಯಂ=ಯಾವಾಗಲೂ, ಕಂಚಿತ್=ಯಾರನ್ನು, ನ ಉಪಾಶ್ರಿತಃ=ಆಶ್ರಯಿಸಿದವನಲ್ಲ, (ಸರ್ವ ಸ್ವತಂತ್ರನಾಗಿಯೇ ಇರುತ್ತೇನೆ.) (ಹರಿಃ=ಶ್ರೀಹರಿಯು, ಕಿಂಚಿತ್=ಯಾವುದನ್ನು, ನಾಶ್ರಿತಃ=ಆಶ್ರಯಿಸುವುದಿಲ್ಲ.)

**ತಾತ್ಪರ್ಯ II** ಇದೇ ಮೊದಲಾದ ಪ್ರಮಾಣಗಳಲ್ಲಿ ಹೇಳಿದ ಪ್ರಕಾರ ತಾರತಮ್ಯ ಜ್ಞಾನವನ್ನು ಸಂಪಾದಿಸಿಯೇ ಹರಿಯು ಸರ್ವೋತ್ತಮನೆಂದು ತಿಳಿಯಬೇಕು. II 25 II

ತಮಗೆ ಯೋಗ್ಯವಾದ ವೃತ್ತಿಯಿಂದ ಭಕ್ತ್ಯಾದಿಪೂರ್ವಕವಾಗಿ ಶ್ರೀಹರಿಯನ್ನು ಆರಾಧಿಸು

ವುದೇ ಮುಖ್ಯವಾದ ಧರ್ಮವು. ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮವು, ಎಂಬುವಲ್ಲಿ ಪ್ರಮಾಣಭೂತವಾದ ಗೀತಾವಾಕ್ಯವನ್ನು ಹೇಳುತ್ತಾರೆ.

**ಮೂಲ ॥ ಯೇ ಮೇ ಮತ (ಯೇ ತನ್ಮತ) ಮಿದಂ ನಿತ್ಯಮನುತಿಷ್ಠಂತಿ**
**ಮಾನವಾಃ (ಸರ್ವದಾ) । ಶ್ರದ್ಧಾವಂತೋಽನಸೂಯಂತೋ**
**ಮುಚ್ಯಂತೇ ತೇಽಪಿ ಕರ್ಮಭಿಃ (ಸಂಸೃತೇರ್ಭಯಾತ್) ॥ ೨೬ ॥**

**ಅರ್ಥ ॥** ('ಮಯಿ ಸರ್ವಾಣಿ ಕರ್ಮಾಣಿ ಸನ್ನಸ್ಯಾಧ್ಯಾತ್ಮಚೇತಸಾ । ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ' ॥ ಎಂದು ಹಿಂದಿನ ಶ್ಲೋಕದಲ್ಲಿ ಕೃಷ್ಣನು ತಾನು ಸರ್ವೋತ್ತಮ ನಾದುದರಿಂದ ತನ್ನಲ್ಲಿಯೇ ಮನಸ್ಸನ್ನು ಇಟ್ಟು ನಿರಹಂಕಾರಿಯೂ ನಿಷ್ಕಾಮನೂ ಆಗಿ ಸರ್ವಕರ್ಮ ಗಳನ್ನು ತನ್ನಲ್ಲಿಯೇ ಸಮರ್ಪಿಸಬೇಕೆಂದು ಹೇಳಿರುತ್ತಾನೆ.) ಇದಂ=ಈ ( ಹಿಂದೆ ಹೇಳಿದ) ಮೇ=ನನ್ನ, ಮತಂ=ಅಭಿಪ್ರಾಯವನ್ನು, (ತನ್ಮತಂ=ಶ್ರೀಕೃಷ್ಣನ ಅಭಿಪ್ರಾಯವನ್ನು), ಯೇ ಮಾನವಾಃ= ಯಾವ ಮನುಷ್ಯರು, ಶ್ರದ್ಧಾವಂತಃ=ಆಸ್ತಿಕ್ಯಬುದ್ಧಿಯುಳ್ಳವರಾಗಿ, ಅನಸೂಯಂತಃ=ಅಸೂಯಾದಿ ದೋಷರಹಿತರಾಗಿ, ನಿತ್ಯಂ ಅನುತಿಷ್ಠಂತಿ=ನಾನು ಹೇಳಿದ ಪ್ರಕಾರ ನನಗೆ ಸಮ್ಮತವಾದ ಕರ್ಮವನ್ನು ಯಾವಾಗಲೂ ಮಾಡುತ್ತಾರೋ, ತೇಽಪಿ=ಅವರೂ ಕೂಡ, ಕರ್ಮಭಿಃ=ತಾವು ಮಾಡಿದ ತಮಗೆ ವಿಹಿತಗಳಾದ ಕರ್ಮಗಳಿಂದ, (ಜ್ಞಾನವನ್ನು ಹೊಂದಿ) (ಸಂಸೃತೇಃ=ಸಂಸಾರದ, ಭಯಾತ್= ಭೀತಿಯಿಂದ) ಮುಚ್ಯಂತೇ=ಬಿಡುಗಡೆಯನ್ನು ಹೊಂದುತ್ತಾರೆ. (ಜ್ಞಾನಿಗಳು ಮುಕ್ತರಾಗುತ್ತಾರೆ ಎಂಬುವುದು ಸುತರಾಂ ಸಿದ್ಧವು) ॥ 26 ॥

**ಮೂಲ ॥ ಯೇ ತ್ವೇತದಭ್ಯಸೂಯಂತೋ**
**ನಾನುತಿಷ್ಠಂತಿ ಮೇ ಮತಂ (ತನ್ಮತಂ) । ಸರ್ವಜ್ಞಾನವಿಮೂಢಾಂಸ್ತಾ-**
**ನ್ವಿದ್ಧಿ ನಷ್ಟಾ (ನ್ವಿದ್ಯಾನ್ನಷ್ಟಾ) ನಚೇತಸಃ ॥ ೨೭ ॥**

**ಅರ್ಥ ॥** ಯೇ ತು=ಯಾವ ಮನುಷ್ಯರು, ಅಭ್ಯಸೂಯಂತಃ=ಅಸೂಯಾದಿ ದೋಷಯುಕ್ತ ರಾಗಿ, ಏತತ್=ಹಿಂದೆ ಹೇಳಿದ, ಮೇ ಮತಂ=ನನಗೆ ಸಮ್ಮತವಾದ ಕರ್ಮವನ್ನು, (ತನ್ಮತಂ=ಆ ಶ್ರೀಕೃಷ್ಣನಿಗೆ ಸಮ್ಮತವಾದ ಕರ್ಮವನ್ನು) ನಾನುತಿಷ್ಠಂತಿ=ಆಚರಿಸುವುದಿಲ್ಲವೋ, ತಾನ್=ಅಂತಹ ವರನ್ನು, ಅಚೇತಸಃ=ಅವಿವೇಕಿಗಳನ್ನಾಗಿಯೂ, ಸರ್ವಜ್ಞಾನವಿಮೂಢಾನ್=ಎಲ್ಲಾ ಜ್ಞಾನವಿಷಯ ಗಳಲ್ಲಿಯೂ ಮಿಥ್ಯಾಜ್ಞಾನವುಳ್ಳವರನ್ನಾಗಿಯೂ, ನಷ್ಟಾನ್=ನರಕಕ್ಕೆ, ಯೋಗ್ಯರನ್ನಾಗಿಯೂ, ವಿದ್ಧಿ=ತಿಳಿ (ವಿದ್ಯಾತ್=ತಿಳಿಯತಕ್ಕುದು.) ॥ 27 ॥

ವಿಷ್ಣುಭಕ್ತ್ಯಾದಿಗಳು ಸಜ್ಜನರ ಸ್ವಭಾವವು. ದ್ವೇಷಾದಿಗಳು ದುರ್ಜನರ ಸ್ವಭಾವವು. ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ.

**ಮೂಲ ॥ ದ್ವೌ ಭೂತ(ದ್ವಾವೇವ) ಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ವಿಷ್ಣುಭಕ್ತಿಪರೋ ದೈವೋ ವಿಪರೀತಸ್ತಥಾಽಸುರಃ ॥ ೨೮ ॥**

ಅ ॥ ಅಸ್ಮಿನ್ ಲೋಕೇ=ಈ ಲೋಕದಲ್ಲಿ, ದೈವಃ ಆಸುರ ಏವ ಚ=ದೈವ ಆಸುರಗಳೆಂಬ,

ದ್ವೌ=ಎರಡೇ, ಭೂತಸರ್ಗೌ=ಚೇತನಗಳ ಸ್ವಭಾವಗಳು, (ದ್ವಾವೇವ ಸರ್ಗೌ=ಎರಡೇ ಸ್ವಭಾವಗಳು) ದೈವಃ=ಮುಕ್ತಿಯೋಗ್ಯರಾದ ಸಜ್ಜನರು, ವಿಷ್ಣುಭಕ್ತಿಪರಃ=ಶ್ರೀಹರಿಯಲ್ಲಿ ಭಕ್ತಿಯುಕ್ತರು, ತಥಾ=ಹಾಗೆಯೇ, ಆಸುರಃ=ಮುಕ್ತ್ಯಯೋಗ್ಯ ದುರ್ಜನರು, ವಿಪರೀತಃ=ವಿಷ್ಣುವಿನಲ್ಲಿ ದ್ವೇಷಯುಕ್ತರು. ॥28॥

ಶಾಸ್ತ್ರದಲ್ಲಿ ವಿಹಿತವಾದುದೆಲ್ಲವನ್ನು ಶ್ರೀಹರಿಯನ್ನು ಸ್ಮರಿಸಿಕೊಂಡೇ ಮಾಡಬೇಕು ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ-

**ಮೂಲ ॥ ಸ್ಮರ್ತವ್ಯಃ ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತುಚಿತ್ ।**
**ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥ ೨೯ ॥**

**ಅರ್ಥ ॥** ವಿಷ್ಣುಃ=ಶ್ರೀಪರಮಾತ್ಮನು, ಸತತಂ=ಅಶುಚ್ಯಾದಿಗಳಲ್ಲಿಯೂ, ಅಥವಾ ಯಾವಾಗಲೂ, (ಪ್ರಾತರಾದಿ ವಿಹಿತಕರ್ಮಕಾಲದಲ್ಲೂ) ಸ್ಮರ್ತವ್ಯಃ=ಸ್ಮರಣಾರ್ಹನು, ಜಾತುಚಿತ್=ಯಾವಾಗಲೂ, ನ ವಿಸ್ಮರ್ತವ್ಯಃ ವಿಸ್ಮರಣೀಯನಾಗಬಾರದು. (ಏಕೆಂದರೆ) ಸರ್ವೇ=ಸಮಸ್ತಗಳಾದ, ವಿಧಿನಿಷೇಧಾಃ ವಿಧಿ=‘ಅಹರಹಃ ಸಂಧ್ಯಾಮುಪಾಸೀತ’ ಇದು ಮೊದಲಾದ ವಿಧಿಗಳು, ನಿಷೇಧಾಃ=‘ನ ಸುರಾಂ ಪಿಬೇತ್’ ಇದು ಮೊದಲಾದ ನಿಷೇಧಗಳೂ, ಏತಯೋರೇವ=ವಿಷ್ಣುವಿನ ಸ್ಮರಣೆ ವಿಸ್ಮರಣೆಗಳ, ಕಿಂಕರಾಃ=ಪರಿವಾರಗಳು.

**ತಾತ್ಪರ್ಯ ॥** ‘ದೇವತಾ ಋಷಿನಾಮಾನಿ ನಾಶುಚಿಃ ಪರಿಕೀರ್ತಯೇತ್ । ವಿಷ್ಣೋರ್ದಿವ್ಯಾನಿ ನಾಮಾನಿ ಸರ್ವದಾ ಪರಿಕೀರ್ತಯೇತ್ ॥’ ಎಂಬ ಸ್ಮೃತಿಯಿಂದ ಅಶುಚಿಯಾಗಿರುವಾಗಲೂ ಶ್ರೀಹರಿಯನ್ನು ಸ್ಮರಿಸುತ್ತಿರಬೇಕು. ವಿಧಿಗಳೆಲ್ಲವೂ ವಿಷ್ಣುವಿನ ಸ್ಮರಣೆಯ ಸೇವಕಗಳು. ನಿಷೇಧಗಳು ವಿಸ್ಮರಣೆಯ ಸೇವಕಗಳು. ಅಂದರೆ ವಿಧಿನಿಷೇಧಗಳು ಸ್ಮರಣ ವಿಸ್ಮರಣ ಯುಕ್ತಗಳಾಗಿಯೇ ಫಲವನ್ನು ಕೊಡುತ್ತವೆ. ಇಲ್ಲವಾದರೆ ಕೊಡಲಾರವು. ಭೃತ್ಯರಿಗೆ ಫಲವನ್ನು ಕೊಡುವುದರಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದ ಹರಿಸ್ಮರಣ ಯುಕ್ತವಾಗಿಯೇ ವಿಹಿತವಾದುದನ್ನು ಮಾಡಬೇಕು. ಪ್ರಾತಃಕಾಲದಲ್ಲಿ ನಾರಾಯಣನನ್ನೂ, ಶೌಚಕಾಲದಲ್ಲಿ ಕೇಶವನನ್ನೂ, ಹಲ್ಲುಗಳನ್ನು ತೊಳೆದುಕೊಳ್ಳುವಾಗ ಎಂಟುಭುಜವುಳ್ಳ ಶ್ರೀಹರಿಯನ್ನೂ, ಮುಖಪ್ರಕ್ಷಾಳನ ಮಾಡುವಾಗ ಮಾಧವನನ್ನೂ ಸ್ಮರಿಸಬೇಕು. ಇತ್ಯಾದಿ ರೀತಿಯನ್ನು ಪಂಚರಾತ್ರಾಗಮದಲ್ಲಿ ಹೇಳಿದ ರೀತಿಯಾಗಿ ತಿಳಿಯಬೇಕು. ॥ 29 ॥

ಹರಿಭಕ್ತಿಪೂರ್ವಕವಾಗಿ ಮಾಡಲ್ಪಟ್ಟದ್ದೇ ಧರ್ಮವು, ಬೇರೆಯಲ್ಲ ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ-

**ಮೂಲ ॥ ಧರ್ಮೋ ಭವತ್ಯಧರ್ಮೋಽಪಿ**
**ಕೃತೋ ಭಕ್ತೈಸ್ತವಾಚ್ಯುತ (ರಮೇಶಿತುಃ) ।**
**ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇ ॥ ೩೦ ॥**

**ಅರ್ಥ ॥** ಅಚ್ಯುತ=ಅಚ್ಯುತನೇ, ತವ=ನಿನ್ನ, (ರಮೇಶಿತುಃ=ಲಕ್ಷ್ಮೀಪತಿಯ) ಭಕ್ತೈಃ=ಭಕ್ತರಿಂದ, ಕೃತಃ=ಪ್ರಮಾದಾದಿಗಳಿಂದ ಮಾಡಲ್ಪಟ್ಟದ್ದು, ಅಧರ್ಮೋಽಪಿ=ಅಧರ್ಮದಂತೆ ತೋರಿದರೂ, ಧರ್ಮಃ=ಧರ್ಮಕ್ಕೆ ಕಾರಣವಾದುದು, ಭವತಿ=ಆಗುತ್ತದೆ. ಹರೇ=ಶ್ರೀಹರಿಯೇ, ನ ಭಕ್ತೈಃ=ಭಕ್ತಿವಿರಹಿತರಿಂದ, ಕೃತಃ=ಮಾಡಲ್ಪಟ್ಟದ್ದು ಧರ್ಮೋಽಪಿ=ಸ್ಮೃತ್ಯಾದಿಗಳಿಂದ ವಿಹಿತವಾದಾಗ್ಯೂ,

ಪಾಪಂ=(ಭಕ್ತಿಯಿಲ್ಲದಿರುವುದರಿಂದ) ಪಾಪಫಲವುಳ್ಳದ್ದು (ಪಾಪಕ್ಕೆ ಕಾರಣವು), ಭವತಿ=ಆಗುತ್ತದೆ. ॥ 30 ॥

ಮುಕ್ತಿಯನ್ನು ಪಡೆಯಬೇಕೆಂದಿಚ್ಛಿಸುವವನು ಹರಿಭಕ್ತಿಪೂರ್ವಕವಾಗಿಯೇ ವಿಹಿತವಾದುದೆಲ್ಲವನ್ನೂ ಮಾಡಬೇಕು ಎಂಬುವ ವಿಷಯದಲ್ಲಿ ಶ್ರೀಕೃಷ್ಣನ ನುಡಿಯನ್ನೇ ಹೇಳುತ್ತಾರೆ-

**ಮೂಲ ॥ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**★(ತನ್ಮನಾ ಭವ ತದ್ಭಕ್ತೋ ತದ್ಯಾಜೀ ತನ್ನಮಸ್ಕ್ರಿಯಃ ) ॥**
**ನಿತ್ಯಂ ಭವೇಚ್ಚ ಮ (ತ) ನ್ನಿಷ್ಠೋ**
**ಬುಭೂಷುಃ ಪುರುಷಸ್ತಥಾ (ತಃ) ॥ ೩೧ ॥**

**ಅರ್ಥ ॥** ಬುಭೂಷುಃ=ಮತ್ತೂ ಮತ್ತು ತಿಳಿಯಲಿಚ್ಛಿಸುವ, ಪುರುಷಃ=ಅಧಿಕಾರಿಯಾದ ನೀನು, ಮನ್ಮನಾಃ=ನನ್ನಲ್ಲಿಯೇ ಇರತಕ್ಕ ಮನಸ್ಸುಳ್ಳವನು, ಭವ=ಆಗು, ತಥಾ=ಹಾಗೆ, ಮದ್ಭಕ್ತಃ=ನನ್ನಲ್ಲಿ ಭಕ್ತಿಯುಳ್ಳವನು, ಮದ್ಯಾಜೀ=ನನ್ನ ವಿಷಯಕವಾದ ಯಾಗವುಳ್ಳವನೂ ಆಗಿ, ಮಾಂ=ನನ್ನನ್ನೇ, ನಮಸ್ಕುರು=ನಮಸ್ಕಾರ ಮಾಡು, ನಿತ್ಯಂ=ನಿರಂತರದಲ್ಲಿಯೂ, ಮನ್ನಿಷ್ಠಃ=ನನ್ನಲ್ಲಿಯೇ ಆಸಕ್ತನೂ, (ತನ್ನಿಷ್ಠಃ=ಆತನಲ್ಲಿಯೇ ಆಸಕ್ತನಾಗಿ) ಭವೇತ್=ಆಗತಕ್ಕದ್ದು (ತನ್ಮನಾಃ=ಆ ಶ್ರೀಕೃಷ್ಣನಲ್ಲಿಯೇ ಆಸಕ್ತವಾದ ಮನಸ್ಸುಳ್ಳವನೂ. ತದ್ಭಕ್ತಃ=ಆತನಲ್ಲಿಯೇ ಭಕ್ತಿಯುಳ್ಳವನೂ, ತದ್ಯಾಜೀ=ಕೃಷ್ಣವಿಷಯಕವಾದ ಯಾಗವುಳ್ಳವನೂ, ತನ್ನಮಸ್ಕ್ರಿಯಃ=ಆತನ ನಮಸ್ಕಾರವುಳ್ಳವನೂ ಆಗಬೇಕು. ॥ 31 ॥

ತಾನು ಹೇಳಿದ ಸದಾಚಾರ ವಿಷಯದಲ್ಲಿ ಅಧಿಕಾರಿಗಳನ್ನು ನಿರೂಪಿಸುತ್ತಾರೆ-

**ಮೂಲ ॥ ಏಷ ನಿತ್ಯಃ ಸದಾ (ಮಾ) ಚಾರೋ ಗೃಹಿಣೋ ವನಿನಸ್ತಥಾ ।**
**ವೈಶ್ವದೇವಂ ಬಲಿಂ ದಂತಧಾವನಂ ಚಾಪ್ಯೃತೇ ವಟೋಃ ॥ ೩೨ ॥**

**ಅರ್ಥ ॥** ಏಷಃ=ಈ (ಹಿಂದೆ ಹೇಳಲ್ಪಟ್ಟ) ಸದಾ=ಯಾವಾಗಲೂ, ಮಾಡಲ್ಪಡತಕ್ಕ, ಆಚಾರಃ (ಸಮಾಚಾರಃ)=ಶೌಚ ಆಚಮನ ಸ್ನಾನ ಮೊದಲಾದ ಭುಕ್ತಿ ಸ್ವಾಪ ಪರ್ಯಂತವಾದ ಕರ್ಮಸಮುದಾಯವು, ಗೃಹಿಣಃ=ಗೃಹಸ್ಥಾಶ್ರಮಿಗೂ, ತಥಾ=ಹಾಗೆ, ವನಿನಃ=ವಾನಪ್ರಸ್ಥನಿಗೂ, ನಿತ್ಯಃ=ನಿಯಮದಿಂದ ಮಾಡತಕ್ಕುದು. (ಏಷಾಂ=ಈ ಸದಾಚಾರಗಳ ಮಧ್ಯದಲ್ಲಿ) ವೈಶ್ವದೇವಂ=ವೈಶ್ವದೇವಾಖ್ಯ ಕರ್ಮವನ್ನು, ಬಲಿಂ=ಬಲಿಹರಣಾಖ್ಯ ಕರ್ಮವನ್ನು, ದಂತಧಾವನಂ ಚ=ಧಾವನವನ್ನೂ ಕೂಡ, ಋತೇ=ಹೊರತು, (ಬೇರೆ ಎಲ್ಲವೂ) ವಟೋರಪಿ=ಬ್ರಹ್ಮಚಾರಿಗೂ ಕೂಡ, ನಿತ್ಯಃ=ನಿಯಮದಿಂದ ಮಾಡತಕ್ಕುದು.

**ತಾತ್ಪರ್ಯ ॥** ಸ್ನಾನ, ಸಂಧ್ಯಾವಂದನ, ಜಪ, ಪೂಜಾ, ಭೋಜನ, ಶಾಸ್ತ್ರಾಭ್ಯಾಸ, ಭಗವದ್ಧ್ಯಾನ ಮೊದಲಾದ ಕರ್ಮಗಳೆಲ್ಲವನ್ನೂ ನಿರಂತರದಲ್ಲಿಯೂ ಬ್ರಹ್ಮಚಾರಿಯೂ ಮಾಡಲೇಬೇಕು ॥ 32 ॥

---

★ ( ) ಈ ಆವರಕ ಚಿಹ್ನೆಯೊಳಗಿನ ಮೂಲಕೋಶದ ಪಾಠಗಳನ್ನು ನೋಡುವಾಗ "ಗೀತೆಯಲ್ಲಿ (ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಉಪದೇಶಕೊಟ್ಟಂತೆಯೇ" ಸದಾಚಾರಸ್ಮೃತಿಯಲ್ಲಿ ಶ್ರೀಮದಾಚಾರ್ಯರೇ ಸಜ್ಜನರನ್ನು ಸಂಬೋಧಿಸಿ ಉಪದೇಶಕೊಟ್ಟದ್ದೆಂದು ಊಹಿಸಬೇಕಾಗುತ್ತದೆ.

**ಮೂಲ ॥ ಏವಮೇವ ಯತೇಃ ಸ್ವೀಯವಿತ್ತೇನ ತು ವಿನಾ ಸದಾ ।**
**ಮೂಲಮಂತ್ರೈಃ ಸದಾ ಸ್ನಾನಂ ವಿಷ್ಣೋರೇವ ಚ ತರ್ಪಣಂ ॥ ೩೩ ॥**

**ಅರ್ಥ ॥** ಯತೇಃ=ನಾಲ್ಕುವಿಧ ಸನ್ಯಾಸಿಗಳಿಗೂ, ಸ್ವೀಯವಿತ್ತೇನ ತು=ಸ್ವಾರ್ಜಿತವಾದ ದ್ರವ್ಯವನ್ನು, ವಿನೈವ=ಹೊರತೇ, ಏವಂ=ಹೀಗೆ (ಬ್ರಹ್ಮಚಾರಿಯಂತೆ ವೈಶ್ವದೇವ ಬಲಿಹರಣಗಳನ್ನು ಹೊರತು) (ಪರರು ಕೊಟ್ಟ ದ್ರವ್ಯದಿಂದ ದಂತಧಾವನ, ದೇವಪೂಜೆ ಮೊದಲಾದುದೆಲ್ಲವನ್ನೂ), ಸದಾ=ಯಾವಾಗಲೂ (ಮಾಡತಕ್ಕದ್ದು) ಮೂಲಮಂತ್ರೈಃ=ಪ್ರಣವ ಅಷ್ಟಾಕ್ಷರ ಮೊದಲಾದ ಮೂಲಮಂತ್ರಗಳಿಂದ, ಸದಾ=ಯಾವಾಗಲೂ, ಸ್ನಾನಂ=ಸ್ನಾನವನ್ನೂ, ವಿಷ್ಣೋರೇವ=ಶ್ರೀಹರಿಗೇನೇ, ತರ್ಪಣಂ ಚ=ತರ್ಪಣವನ್ನೂ ಕೂಡ, (ಮಾಡತಕ್ಕುದು.) ॥ 33 ॥

**ಮೂಲ ॥ ವಿಶೇಷೋ ನಿಷ್ಕ್ರಿಯಯತೇರಜಲಾಂಜಲಿನಾ (ತಾ) ತಥಾ ।**
**ತರ್ಪಣಂ ತು ಹರೇರೇವ ಯತೇರನ್ಯಸ್ಯ ಚೋದಿತಂ ॥ ೩೪ ॥**

**ಅರ್ಥ ॥** ನಿಷ್ಕ್ರಿಯಯತೇಃ, ನಿಷ್ಕ್ರಿಯಃ=ಕ್ರಿಯಾಭಾವವು, (ಅಂದರೆ ಔಪಾಸನ ವೈಶ್ವದೇವಾದಿಗಳ ಇಲ್ಲದಿರುವಿಕೆಯು) ಯತೇಃ=ನಿಯಮವೂ (ಅಂದರೆ ಅಸಕೃಜ್ಜಲಪಾನ ದಿವಾಸ್ವಾಪ ಮೈಥುನಾದಿಗಳಿಲ್ಲದಿರುವುದು) ಇವುಗಳುಳ್ಳ ಪರಮಹಂಸನಿಗೆ ಏಕಾದಶೀ, ಶ್ರವಣದ್ವಾದಶೀ, ಜನ್ಮಾಷ್ಟಮಿಗಳೆಂಬ ಶ್ರೀಹರಿಯೇ ದೇವತೆಯಾಗಿ ಉಳ್ಳ ದಿನತ್ರಯಕ್ಕೆ, ವಿಶೇಷಃ=(ಪ್ರಾತರಾದ್ಯುಕ್ತ ಆಚಾರಗಳಲ್ಲಿ) ವಿಶೇಷವದೆ. ಅಥವಾ) ನಿಷ್ಕ್ರಿಯಯತೇಃ=ಪರಮಹಂಸನಿಗೆ, ವಿಶೇಷಃ=ವಿಶೇಷವಿದೆ. ಅಂಜಲಾಂಜಲಿತಾ=ಸ್ನಾನಾದ್ಯಂಗವಾದ ದೇವ ಋಷ್ಯಾದಿಗಳ ತರ್ಪಣವಿಲ್ಲದಿರುವುದೊಂದು ವಿಶೇಷವು, ತರ್ಪಣಂ ತು=ತರ್ಪಣವಾದರೂ, ಹರೇರೇವ=ಶ್ರೀಹರಿಗೇನೆ, ಅಂದರೆ ಜಪಾದಿಗಳಲ್ಲಿ ಹರಿದೇವತಾಕಮಂತ್ರದಿಂದ ಶ್ರೀಹರಿಯನ್ನುದ್ದೇಶಿಸಿಯೇ ಮಾಡಬೇಕು. ಇತರರನ್ನುದ್ದೇಶಿಸಿ ಮಾಡ ಬಾರದು. ತಥಾ= ಹಾಗೆಯೇ, ಗಂಧ ಪುಷ್ಪಾದಿಗಳನ್ನೂ ಶ್ರೀಹರಿಗೇನೇ ಸಮರ್ಪಿಸಬೇಕು. ಅನ್ಯದೇವತೆಗಳಿಗೆ ಸಮರ್ಪಿಸಬಾರದು. (ಯತೇಃ=ಸನ್ಯಾಸಿಗಳಿಗೆ, ಅನ್ಯತ್ರ=ದಿನತ್ರಯಾದಿಂದಿತರ ಗಳಾದ ಜಯಂತಿ ಮೊದಲಾದ ಪರ್ವತಿಥಿಗಳಲ್ಲಿ, ಉದಿತಂ ಚ=(ಆಯಾಯ ದಿನದಲ್ಲಿ ವಾಸಿಷ್ಠಾದಿಗಳಲ್ಲಿ) ಹೇಳಿದ್ದೆಲ್ಲವನ್ನೂ ಮಾಡಬೇಕು. ಅಥವಾ) ಅನ್ಯಸ್ಯ=ಪರಮಹಂಸನಿಂದಿತರರಾದ, ಯತೇಃ=ಹಂಸಾದಿಗಳಿಗೆ, (ಕುಟೀಚಕ ಬಹೂದಕರಿಗೆ) ಉದಿತಂಚ=ಹೇಳಿದ್ದೆಲ್ಲವನ್ನು ಮಾಡಬೇಕು. ಅಂದರೆ ಕುಟೀಚಕಾದಿಗಳಿಗೆ ಸ್ನಾನಾಂಗ ತರ್ಪಣ, ದೇವರ್ಷಿ ಪಿತೃ ತರ್ಪಣಗಳೂ ವಿಹಿತಗಳೇ ಆಗಿವೆ. ಅಥವಾ ಗೃಹಸ್ಥಾಶ್ರಮಿಗಳಿಗೆ ಇವೆಲ್ಲವೂ ವಿಹಿತಗಳೇ ಆಗಿವೆ. ॥ 34 ॥

ಬ್ರಹ್ಮಚಾರಿಗೆ ವಿಶೇಷವನ್ನು ನಿರೂಪಿಸುತ್ತಾ ಸರ್ವ ವರ್ಣಾಶ್ರಮಗಳಿಗೂ ಸಾಧಾರಣಗಳಾದ ನಿಯಮಗಳನ್ನು ಹೇಳುತ್ತಾರೆ-

**ಮೂಲ ॥ ಸಮಿದ್ಧೋಮೋ ವಟೋಶ್ಚೈವ ಸ್ಮೃತ್ವಾ ವಿಷ್ಣುಂ ಹುತಾಶನೇ ।**
**ಸರ್ವವರ್ಣಾಶ್ರಮೈರ್ವಿಷ್ಣುರೇಕ ಏವೇಜ್ಯತೇ ಸದಾ ॥ ೩೫ ॥**
**ರಮಾಬ್ರಹ್ಮಾದಯಸ್ತಸ್ಯ ಪರಿವಾರತ ಏವ ತು ॥ ೩೬ ॥**

**ಅರ್ಥ ॥** ವಟೋಶ್ಚ=ಬ್ರಹ್ಮಚಾರಿಗೂ ಕೂಡ, ಹುತಾಶನೇ=ಅಗ್ನ್ಯಧಿಕರಣದಲ್ಲಿ, ವಿಷ್ಣುಂ=

ಪ್ರಾಣಾಂತರ್ಗತ ಪರಶುರಾಮನನ್ನು, ಸ್ಮೃತ್ವಾ ಏವ=ಸ್ಮರಿಸಿಕೊಂಡೇ, ಸಮಿದ್ಧೋಮಃ=ಅಗ್ನಿಕಾರ್ಯವು, (ಮಾಡತಕ್ಕುದು) ಸರ್ವವರ್ಣಾಶ್ರಮ್ಯೈಃ=ನಾಲ್ಕು ವರ್ಣಗಳಿಂದಲೂ, ನಾಲ್ಕು ಆಶ್ರಮಗಳಿಂದಲೂ, ವಿಷ್ಣುಃ=ಶ್ರೀಪರಮಾತ್ಮನು, ಏಕ ಏವ=ಒಬ್ಬನೇ, ಸದಾ=ಯಾವಾಗಲೂ, ಇಜ್ಯತೇ=ಪೂಜಿಸಲ್ಪಡುತ್ತಾನೆ, ರಮಾಬ್ರಹ್ಮಾದಯಃ, ರಮಾ=ಲಕ್ಷ್ಮೀದೇವಿಯು, ಬ್ರಹ್ಮಾ=ಚತುರ್ಮುಖನು ಇವರೇನೇ, ಆದಯಃ=ಮೊದಲಾದ ಋಷ್ಯಾದಿಗಳು, ತಸ್ಯ ತು=ಆ ವಿಷ್ಣುವಿನ, ಪರಿವಾರತ ಏವ= ಪರಿವಾರತನದಿಂದಲೇ, ಆತನ ಭೃತ್ಯಭಕ್ತತ್ವಾದಿಗಳಿಂದಲೇ (ಯಾವಾಗಲೂ ಪೂಜಿಸಲ್ಪಡಬೇಕು. ಅವರೇ ಸ್ವತಂತ್ರರೆಂದು ಪೂಜಿಸಲ್ಪಡಬಾರದು.) ಅಥವಾ ಅವಟೋಶ್ಚ=ವಟುವಿನಿಂದಿತರರಾದ ಸ್ತ್ರೀಯರಿಗೂ, ಹುತ=ಅನುಯಾಗಾದಿ ಶಿಷ್ಟವಾದ ಅನ್ನವೇ, ಅಶನೇ=ಭೋಜನವಾಗಿ ಉಳ್ಳ ತನ್ನ ಗಂಡನಲ್ಲಿ, ವಿಷ್ಣುಂ=ಶ್ರೀಪರಮಾತ್ಮನನ್ನು (ಫಲಪ್ರದನೆಂದಾಲೋಚಿಸಿ ಅವನಿಂದ ಮುಂಚೆ ಎದ್ದು ಆತನಿಗೆ ನಮಸ್ಕರಿಸಿ) ಸ್ಮೃತ್ವಾ=(ಆತನಲ್ಲಿದ್ದ ಹರಿಯನ್ನು) ಸ್ಮರಿಸಿಯೇ, (ಶಾಸ್ತ್ರೋಕ್ತ ಪ್ರಕಾರ ಗೃಹಕೃತ್ಯಗಳನ್ನು ಮಾಡಿ ಆಮೇಲೆ) ಹುತಾಶನೇ=ಅಗ್ನಿಯಲ್ಲಿ, ವಿಷ್ಣುಂ=ಪ್ರಾಣಾಂತರ್ಗತ ಪರಶು ರಾಮನನ್ನು, ಸ್ಮೃತ್ವಾ=ಸ್ಮರಿಸಿ, ಸಮಿದ್ಧೋಮಃ=ಶಾಸ್ತ್ರೋಕ್ತ ಪ್ರಕಾರ ಕಟ್ಟಿಗೆಗಳಿಂದ ಹೋಮಮಾಡ ಬೇಕು. (ಅಂದರೆ ಅದರಿಂದ ಪಾಕಾದಿಗಳನ್ನು ಮಾಡಿ) ಹುತಾಶನೇ=ಪರಮಾತ್ಮನಲ್ಲಿ (ಸಮರ್ಪಿಸಿ) ಹುತಾಶನೇ=ಗಂಡನಲ್ಲಿ, ವಿಷ್ಣುಂ=ಶ್ರೀಹರಿಯನ್ನು, ಸ್ಮೃತ್ವೈವ=ಸ್ಮರಿಸಿಯೇ (ಸಂತೋಷಿಸತಕ್ಕುದು) ಸರ್ವವರ್ಣ=ಬ್ರಾಹ್ಮಣಾದಿರೂಪರಾದ ಸ್ತ್ರೀಪುರುಷರು, ಆಶ್ರಮ್ಯೈಃ=ಬ್ರಹ್ಮಚರ್ಯಾದ್ಯಾಶ್ರಮದಲ್ಲಿದ್ದ ರಿಂದ, ವಿಷ್ಣುಃ=ಶ್ರೀಹರಿಯು, ಏಕ ಏವ=ಒಬ್ಬನೇ, ಸದಾ=ಯಾವಾಗಲೂ, ಇಜ್ಯತೇ= ಪೂಜಿಸಲ್ಪಡು ತ್ತಾನೆ.

**ತಾತ್ಪರ್ಯ ||** ರಮಾದಿಗಳನ್ನು ಭಗವಂತನ ಪರಿವಾರರು ಭೃತ್ಯರೆಂದೇ ತಿಳಿದು ಪೂಜಿಸಬೇಕು. ಅವರನ್ನು ಸ್ವತಂತ್ರರೆಂದು ಪೂಜಿಸಿದರೆ ಪೂಜಿಸಿದವರ ಯಜ್ಞದಾನಾದಿ ಸರ್ವಕ್ರಿಯೆಗಳು ನಿಷ್ಫಲ ಗಳಾಗುತ್ತವೆ. ಈ ಪದ್ಯದಿಂದಲೇ ಸ್ತ್ರೀಯರ ಧರ್ಮವನ್ನು ಹೇಳಿದಂತೆಯೇ ಆಯಿತು. || 35 || 36 ||

ಹರಿಸ್ಮರಣ ಪೂರ್ವಕವಾಗಿಯೇ ಸರ್ವಕರ್ಮಗಳನ್ನು ಮಾಡಬೇಕೆಂದು ಹೇಳಲ್ಪಟ್ಟಿತು. ಅಂತಹ ಸ್ಮರಣವೇ ಮಹಾಫಲವುಳ್ಳದ್ದೆಂದೂ, ಪರಮ ಮುಖ್ಯವೆಂದೂ ತಿಳಿಸಿಕೊಡುವುದಕ್ಕೋಸ್ಕರ ಸ್ಮರಣೀಯನಾದ ಶ್ರೀಹರಿಯ ಗುಣಗಳ ಸಮುದಾಯವನ್ನು ತಿಳುಹಿಸಿಕೊಡುವ ಗೀತಾವಾಕ್ಯವನ್ನು ಹೇಳುತ್ತಾರೆ-

**ಮೂಲ || ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂ ಸಮನುಸ್ಮರೇದ್ಯಃ (ತ್ತಂ)**
**ಸರ್ವಸ್ಯ ಧಾತಾರಮಚಿಂತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್ || ೩೭ ||**

**ಅರ್ಥ ||** ಯಃ=ಯಾವ ಅಧಿಕಾರಿಯು, ಕವಿಂ=ಸರ್ವಜ್ಞನೂ, ಪುರಾಣಂ=ಪುರಾತನನೂ, ಅನುಶಾಸಿತಾರಂ=ರಮಾಬ್ರಹ್ಮಾದಿಗಳಿಗೆ ಶಿಕ್ಷಕನೂ, ಅಣೋಃ=ಪರಮಾಣುವಿನಿಂದಲೂ, ಅಣೀಯಾಂಸಂ=ಅತ್ಯಂತ ಸೂಕ್ಷ್ಮನೂ ಅಂದರೆ ಅಣುವಿನ ಒಳಗೂ ಇರುವವನು, ಸರ್ವಸ್ಯ=ರಮಾದಿ

ಸರ್ವಜಗತ್ತಿಗೆ, ಧಾತಾರಂ=ಧಾರಣಪೋಷಣಗಳನ್ನು ಮಾಡುವವನು, ಅಚಿಂತ್ಯರೂಪಂ= ಆಲೋಚಿಸಲಿಕ್ಕೆ ಅಶಕ್ಯಗಳಾದ ರೂಪಗಳುಳ್ಳವನು, (ಅಂದರೆ ಸಂಪೂರ್ಣವಾಗಿ ವಾಕ್ಮನಸ್ಸುಗಳಿಗೆ ಅಗೋಚರನೂ), ಆದಿತ್ಯವರ್ಣಂ= ಉದಯಿಸುತ್ತಿರುವ ಸೂರ್ಯನಂತೆ ವರ್ಣವುಳ್ಳ, ತಮಸಃ= ಅಜ್ಞಾನದಿಂದ, ಅಥವಾ ಪ್ರಕೃತಿಯಿಂದ ಯಾ ಮೃತ್ಯುವಿನಿಂದ, ಪರಸ್ತಾತ್=ಅತಿಕ್ರಮಿಸಿದ (ತದ್ಬಂಧ ರಹಿತನೂ), ಅಥವಾ ಅಪ್ರಾಕೃತದೇಹವುಳ್ಳವನೂ ಆದ ವಿಷ್ಣುವನ್ನೂ, ಅನುಸ್ಮರೇತ್=ಯಾವಾಗಲೂ ಸ್ಮರಿಸುತ್ತಾನೋ, (ಆ ವಿಷ್ಣುಭಕ್ತನು ವಿಷ್ಣುವನ್ನು ಹೊಂದುತ್ತಾನೆ.) ॥ 37 ॥

**ಮೂಲ ॥ ವೇದಾಹಮೇತಂ ಪುರುಷಂ ಮಹಾಂತಂ**
**ಆದಿತ್ಯವರ್ಣಂ ತಮಸಸ್ತು ಪಾರೇ ।**
**ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ**
**ನಾಮಾನಿ ಕೃತ್ವಾಽಭಿವದನ್ಯದಾ (ಆ) ಸ್ತೇ ॥ ೩೮ ॥**

**ಅರ್ಥ ॥** ಯತ್ ಧೀರಃ=ಬುದ್ಧ್ಯಾದಿಗಳಲ್ಲಿದ್ದು ಕ್ರೀಡಿಸುತ್ತಿರುವ ಯಾವ ಶ್ರೀಹರಿಯು, ಸರ್ವಾಣಿ ರೂಪಾಣಿ=ಬ್ರಹ್ಮಾದಿ ಮಹದಾದಿ ಚೇತನಾಚೇತನ ಸ್ವರೂಪಗಳಾದ ವಸ್ತುಗಳನ್ನು, ವಿಚಿತ್ಯ=ಚೆನ್ನಾಗಿ ಸೃಷ್ಟಿಸಿ, ನಾಮಾನಿ=ನಾಮಧೇಯಗಳನ್ನು, ಕೃತ್ವಾ=ವೇದಾದಿಗಳ ದ್ವಾರಾ ಕೊಟ್ಟು, ಅಭಿವದನ್=ಆಯಾಯ ಪದಾರ್ಥವನ್ನು ಆಯಾ ಹೆಸರಿನಿಂದ ವ್ಯವಹರಿಸುವವನಾಗಿ, ಆಸ್ತೇ= ಇದ್ದಾನೋ, ತಂ ಏತಂ=ಆ ಈ, ಆದಿತ್ಯವರ್ಣಂ=ಸೂರ್ಯನಂತೆ ವರ್ಣವುಳ್ಳ, ತಮಸಃ= ಪ್ರಕೃತ್ಯಾದಿಗಳಿಂದ, ಪಾರೇ ತು=ದೂರದಲ್ಲಿಯೇ ಇರುವವನು, ಮಹಾಂತಂ=ಸರ್ವೋತ್ತಮನು, ಪುರುಷಂ=ಪೂರ್ಣ ಷಡ್ಗುಣನೂ ಆದ ನಾರಾಯಣನನ್ನೂ, ಅಹಂ=ನಾನು (ವೇದಪುರುಷನು, ಯಾ ಚತುರ್ಮುಖನು) ವೇದ=ತಿಳಿಯುತ್ತೇನೆ. ॥ 38 ॥

**ಮೂಲ ॥ ಧಾತಾ ಪುರಸ್ತಾದ್ಯಮುದಾಜಹಾರ**
**ಶಕ್ರಃ ಪ್ರವಿದ್ವಾನ್ಪ್ರದಿಶಶ್ಚತಸ್ರಃ**
**ತಮೇವಂ ವಿದ್ವಾನಮೃತ ಇಹ ಭವತಿ**
**ನಾನ್ಯಃ ಪಂಥಾ ಅಯನಾಯ ವಿದ್ಯತೇ ॥**
**ತಮೇವಂ ವಿದಿತ್ವಾಽತಿಮೃತ್ಯುಮೇತಿ**
**ನಾನ್ಯಃ ಪಂಥಾ ವಿದ್ಯತೇಽಯನಾಯ ॥ ೩೯ ॥**

**ಅರ್ಥ ॥** ಧಾತಾ=ಚತುರ್ಮುಖನು, ಪುರಸ್ತಾತ್=ಪೂರ್ವಕಾಲದಲ್ಲಿದ್ದ , ಯಂ= ಯಾವ ಪುರುಷನನ್ನು, ಉದಾಜಹಾರ=ಉತ್ಕೃಷ್ಟನೆಂದು ವ್ಯವಹರಿಸಿದನೋ, ತಥಾ=ಹಾಗೆ, ಚತಸ್ರಃ ದಿಶಃ= ನಾಲ್ಕು ದಿಕ್ಕುಗಳಲ್ಲಿದ್ದ ಪದಾರ್ಥಗಳನ್ನು, ಪ್ರವಿದ್ವಾನ್=ಚೆನ್ನಾಗಿ ತಿಳಿದಿದ್ದಾನೆ. ಪ್ರವಿದ್ವಾನ್=ಚೆನ್ನಾಗಿ ತಿಳಿದ, ಶಕ್ರ=ದೇವೇಂದ್ರನೂ, ಯಂ=ಯಾವ ವಿಷ್ಣುವನ್ನು, ಉದಾಜಹಾರ=ಉತ್ಕೃಷ್ಟನೆಂದು ವ್ಯವಹರಿಸಿದನೋ, ಅಥವಾ ಧಾತಾ=ಚತುರ್ಮುಖನು, ಯಂ=ಯಾವ ದೇವೇಂದ್ರನನ್ನು, ಉದಾಜಹಾರ=ಉಪದೇಶಿಸಿದನೋ, ಶಕ್ರಃ =ಆ ಇಂದ್ರನೂ ಕೂಡ, ಚತಸ್ರಃ ಪ್ರದಿಶಃ=ನಾಲ್ಕು ದಿಕ್ಕುಗಳಲ್ಲಿದ್ದ ಪ್ರಾಣಿಗಳನ್ನು, ಉದಾಜಹಾರ=ಉಪದೇಶಿಸಿದನು, ತಂ=ಆ ವಿಷ್ಣುವನ್ನು,

ಏವಂ=ಪೂರ್ವೋಕ್ತ ಪ್ರಕಾರ, ವಿದ್ವಾನ್=ತಿಳಿದ ಅಧಿಕಾರಿಯು, ಇಹ=ಅಧಿಕಾರಿ ವರ್ಗದಲ್ಲಿ ಅಮೃತಃ=ಮುಕ್ತನು, ಭವತಿ=ಆಗುತ್ತಾನೆ. ಅಯನಾಯ=ಮೋಕ್ಷಗೋಸ್ಕರ, ಅನ್ಯಃ=ಜ್ಞಾನದಿಂದ ಇತರವಾದ, ಪಂಥಾಃ=ಮಾರ್ಗವು, ನ ವಿದ್ಯತೇ=ಇರುವುದಿಲ್ಲ, (ಭಗವಜ್ಜ್ಞಾನವನ್ನು ಬಿಟ್ಟು ಇತರ ಯಾವ ಕರ್ಮವೂ ಮುಕ್ತಿಗೆ ಕಾರಣವಾಗಲಾರದು.) ತಂ=ಆ ಪರಮಾತ್ಮನನ್ನು, ಏವಂ=ಪೂರ್ವೋಕ್ತ ಪ್ರಕಾರ, ವಿದಿತ್ವಾ=ತಿಳಿದು, ಅತಿಮೃತ್ಯುಂ=ಸಂಸಾರ ಮೃತ್ಯುವನ್ನತಿಕ್ರಮಿಸಿ, ಏತಿ=ಮುಕ್ತಿಯನ್ನು ಹೊಂದುತ್ತಾನೆ, ಅನ್ಯಃ ಪಂಥಾಃ ಅಯನಾಯ ನ ವಿದ್ಯತೇ ..... ।। 39 ।।

ತಾನು ಮಾಡಿದ ಗ್ರಂಥದಲ್ಲಿ, ಅಧಿಕಾರಿಗಳು ಶೀಘ್ರದಲ್ಲಿ ಪ್ರವೃತ್ತಿಮಾಡುವುದಕ್ಕಾಗಿ ತನಗೆ ಇತರರಿಗಿಂತ ವಿಶೇಷವನ್ನು ಪರಮಾಪ್ತತ್ವವನ್ನೂ ತೋರಿಸುತ್ತಾ ಗ್ರಂಥಕ್ಕೆ ಸ್ವಕಪೋಲಕಲ್ಪಿತತ್ವ ಸಂಶಯವನ್ನು ಪರಿಹರಿಸುತ್ತಾರೆ-

**ಮೂಲ ।। ಆನಂದತೀರ್ಥ ಮುನಿನಾ ವ್ಯಾಸವಾಕ್ಯಸಮುದ್ಧೃತಿಃ ।**
**ಸದಾಚಾರಸ್ಯ ವಿಷಯೇ ಕೃತಾ ಸಂಕ್ಷೇಪತಃ ಶುಭಾ ।। ೪೦ ।।**

**ಅರ್ಥ ।।** ಆನಂದತೀರ್ಥಮುನಿನಾ=ಆನಂದತೀರ್ಥರೆಂಬ ಮುನಿಗಳಿಂದ, ಸದಾಚಾರಸ್ಯ= ಪ್ರಾತರಾದಿ ಸದಾಚಾರದ, ವಿಷಯೇ=ಇತಿ ಕರ್ತವ್ಯತಾ ವಿಷಯದಲ್ಲಿ, ವ್ಯಾಸವಾಕ್ಯಸಮುದ್ಧೃತಿಃ= ಗೀತಾದಿ ರೂಪಗಳಾದ ವ್ಯಾಸವಾಕ್ಯಗಳ ಉದಾಹರಣವು, ಸಂಕ್ಷೇಪತಃ=ಶಬ್ದ ಸಂಕ್ಷೇಪದಿಂದಲೇ, ಕೃತಾ=ಮಾಡಲ್ಪಟ್ಟಿತು. ಶುಭಾ=ಮುಕ್ತಿ ಮೊದಲಾದ ಪಲವನ್ನು ಕೊಡತಕ್ಕುದು.

**ತಾತ್ಪರ್ಯ ।।** ಸದಾಚಾರದ ವಿಷಯದಲ್ಲಿ ಶಬ್ದತಃ ಸಂಕ್ಷಿಪ್ತವಾಗಿಯೂ ಬಹ್ವರ್ಥಗರ್ಭಿತ ವಾಗಿಯೂ ಇರುವ ಗ್ರಂಥವನ್ನು ನಿರ್ಮಿಸುವವರಾದರು. ಐಹಿಕ, ಆಮುಷ್ಮಿಕವೆಂದು ಶುಭಫಲವು 2 ವಿಧವು. ಇವೆರಡು ಈ ಗ್ರಂಥಗಳಲ್ಲಿ ಹೇಳಿದಂತೆ ಸದಾಚಾರವನ್ನು ಅನುಷ್ಠಾನ ಮಾಡುವವರಿಗೆ ದೊರೆಯುವುವು ಎಂಬುವುದು ನಿಶ್ಚಯವು. ।। 40 ।।

**ಮೂಲ ।। ಅಶೇಷಕಲ್ಯಾಣಗುಣನಿತ್ಯಾನುಭವಸತ್ತನುಃ ।**
**ಅಶೇಷದೋಷರಹಿತಃ ಪ್ರೀಯತಾಂ ಪುರುಷೋತ್ತಮಃ ।। ೪೧ ।।**

**ಅರ್ಥ ।।** ಅಶೇಷಕಲ್ಯಾಣಗುಣನಿತ್ಯಾನುಭವಸತ್ತನುಃ,ಅಶೇಷ=ಸಮಸ್ತಗಳಾದ, ಕಲ್ಯಾಣ= ಮಂಗಳಗಳಾದ, ಗುಣ=ಜ್ಞಾನಾನಂದಾದಿಗುಣಗಳ, ನಿತ್ಯಾನುಭವ=ಭೋಗರೂಪವಾದ, ಸತ್= ನಿರ್ದುಷ್ಟವಾದ, ತನುಃ=ಶರೀರವುಳ್ಳ, ಅಶೇಷದೋಷರಹಿತಃ=ದುಃಖ ಅಜ್ಞಾನ ಮೊದಲಾದ ಸರ್ವ ದೋಷಗಳಿಂದಲೂ ರಹಿತನಾದ, ಪುರುಷೋತ್ತಮಃ=ನಾರಾಯಣನು, ಪ್ರೀಯತಾಂ= ಸಂತುಷ್ಟನಾಗಲಿ.

**ತಾತ್ಪರ್ಯ ।।** ಉತ್ತಮಾಧಿಕಾರಿಗಳಿಗೆ ಶ್ರೀಹರಿಯ ಪ್ರೀತಿಯೇ ಪರಮಪುರುಷಾರ್ಥವಾಗಿಯದೆ ।।41।।

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಾ ಶ್ರೀಸದಾಚಾರಸ್ಮೃತಿಃ ಸಮಾಪ್ತಾ ।।**
**ಹೀಗೆ ಶ್ರೀಮದಾಚಾರ್ಯರಿಂದ ನಿರ್ಮಿಸಲ್ಪಟ್ಟ ಸದಾಚಾರಸ್ಮೃತಿಯು ಸಮಾಪ್ತವಾಯಿತು. ।। ಶ್ರೀಃ ।।**

